ಶ್ರೀರಸ್ತು.

ಶಿವಮಸ್ತು.

ಶ್ರೀಗುರುಶಂಭುಲಿಂಗಾಯನಮಃ.

ಶ್ರೀಮದಖಿಲನಿಗಮಾಗಮಸಾರತರಸಕಲ
ಸಿದ್ಧಾಂತರಹಸ್ಯಪ್ರತಿಪಾದಕವಾಗಿರುವಂತೆ
ನಿಜಗುಣಶಿವಯೋಗೀಂದ್ರವಿರಚಿತವಾದ

# ವಿವೇಕಚಿಂತಾಮಣಿ

ಯೆಂಬ ವೇದಾಂತಗ್ರಂಥವು.

ಪಂಡಿತರಿಂದ ಪರಿಷ್ಕರಿಸಲ್ಪಟ್ಟ



( ಪ್ರಥಮಮುದ್ರಣ )

ಬೆಂಗಳೂರು ಸಿಟಿ, ಚಿಕ್ಕಪೇಟೆ ಬುಕ್ಕುಡಿಪೋ,

ಎಂ. ಆರ್. ವೆಂಕಟಾಚಲಂಶೆಟ್ಟರ

ಸ್ವಕೀಯ

ರಾಧಾಮಾಧವ ವಿಲಾಸ ಮುದ್ರಾಕ್ಷರಶಾಲೆಯಲ್ಲಿ

ಮುದ್ರಿಸಿ ಪ್ರಕಟಿಸಲ್ಪಟ್ಟಿತು.

ಬೆಂಗಳೂರು ಸಿಟಿ.

1909

ಶ್ರೀರಸ್ತು.



# ವಿಷಯಾನುಕ್ರಮಣಿಕೆ.

## ಚತುರ್ಥ ಪ್ರಕರಣಂ

*ದಶಮಪ್ರಕರಣಂ*



ಗ್ರಂಥರಚನನಿಬಂಧನ.
ವಿಷಯಾನುಕ್ರಮಣಿಕೆ,
ಸಂಪೂರ್ಣವಾದುದು.





ಶ್ರೀರಸ್ತು.

# ವಿವೇಕಚಿಂತಾಮಣಿ

## ಪ್ರಾರಂಭವು.

ಪದ್ಯ ॥ಶ್ರೀಮದನೇಕಲೋಕಹಿತಮಾಗಿರೆವೇದಪುರಾಣಶಾಸ್ತ್ರದೊಳ್। ನೇಮಿಸಿತೂರ್ಪವಿಶ್ವವಿಷಯಂಗಳ ಸಂಸ್ಥಿತಿಯಂವಿವೇಕಚಿಂ । ತಾಮಣಿಯೆಂದುಸಲ್ವಪೆಸರಿಟ್ಟು ಮಹಾಕವಿತಾಪ್ರಬಂಧಮಂ । ಪ್ರೇಮದಿಪೇಳ್ವೆನಾನಿದನೆನೀನೊಲಿದಾಲಿಸು ಶಂಭುಲಿಂಗವೆ ॥ ಶ್ರೀಮದನೇಕಭುವನ ಭವನಾರಂಭಮೂಲಸ್ತಂಭರೂಪ ಶಂಭುಲಿಂಗವಾದಿಯಾಗಿ ನಿರಾಭಾರಿ ದೇಶಿಕೋತ್ತಮಪರ್ಯಂತ ಮಹಾಗುರು ಪರಂಪರೆಗೆ ಮನೋವಾಕ್ಕಾಯಂಗಳಿಂದಭಿವಂದಿಸಿ ಮತ್ತಮಾನಮಸ್ಕಾಲಕ್ಷಣ ಮಂಗಳಾಚರಣಕ್ಕೆ ನಿರ್ವಿಘ್ನದಿಂ ಪ್ರಕರಣ ಪರಿಸಮಾಪ್ತಿ। ಶಿಷ್ಯಪ್ರಶಿಷ್ಯಪ್ರವಾಹಪ್ರವರ್ತನೆ । ಕೇಳ್ವರಚಿತ್ತಸ್ವಸ್ಥತೆಗಳೆಂಬ ಫಲತ್ರಯ ಸಿದ್ಧಮೆಂದು ನಿರ್ಧರಿಸಿ ಬಳಿಕ ಅನಾದಿಶುದ್ಧಚಿದ್ರೂಪ ನಪ್ಪುದರಿಂ ಸರ್ವೋತ್ಕರ್ಷನಾಗಿ ಸರ್ವಜ್ಞತ್ವ ಸರ್ವಕರ್ತೃತ್ವ ಸಹಿತನಾದ ಪರಮೇಶ್ವರಪ್ರಣೀತತ್ವದಿಂ ಪರಮಪ್ರಮಾಣಮೆನಿಸಿದಾಗ ಮಾಮ್ನಾಯ ಸಮ್ಮತದಿಂ ಮತ್ತಮಾಪ್ರಭೆಯುಮೇ ಮೂಲಮಾದೆ ಸ್ಮೃತಿಪುರಾಣೇತಿಹಾಸ ಪುರಾಣೋಕ್ತಿಗಳನು ಸಾರದಿಂ ದನುಭವಿಗಳಹುದೆನಿಪ್ಪಂತೆಸ್ವಕಪೋಲಕಲ್ಪಿತ ಮಲ್ಲದಸಾರತರಮಾದ ಸತ್ಯಾರ್ಥಂಗಳನೆಸಂಗ್ರಹಿಸಿ ಮುನುಳ್ಳ ಮಣಿಪುಂಜಮಂ ರಂಜಿನಂಗೈದು ತರಪರಿತಾಸರಂಗೊಳಿಸಿ ನವೀನ ಕಂಠಾ ಭರಣಮೆನಿಸುವಂತೆ ಮುಮುಕ್ಷು ಜನಂಗಳೀಜಗತ್ತಿನ ಸ್ಥಿತಿಗತಿಗಳಾವಪ್ರಕಾರ ದಿಂದಿಹವೆಂದರಿಸಿ ಬಳಲದಭಿವ್ಯಕ್ತಮಾಗಿಲ್ಲಿಯೆ ಸಲೀಲೆಯಿಂದರಿತು ಕೃತಾರ್ಥರಾಗಲೆಂದು ನಿಜಗುಣಶಿವ ಯೋಗಿಬಿಳುಗನ್ನಡಮಾದ ವಚನರಚನೆಗಳಿಂ ವಿವೇಕಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದನದೆಂತೆಂದೊಡೆ ॥ ಪ್ರಥಮದಲ್ಲಿ ಚಕ್ಷುರಾದಿಬಾಹ್ಯೇಂದ್ರಿಯಗೋಚರಮಾಗಿ ತೋರುವೀ ಜಗತ್ತೆಲ್ಲಂ ಪೃಥು ಬುಧ್ನೋದರಾಕಾರದಿಸಾವಯವಮಪ್ಪುದರಿಂ ಘಟದಂತೆ ಕಾರ್ಯಮಹದಾಗಿ ಕುಲಾಲನಂತೆ ನಿಮಿತ್ತಕಾರಣನಾದೀಶ್ವರನಿಂ ಚಕ್ರದಂಡಾದಿಕದಂತೆಪುಸ್ತ್ಯಾಪ್ರಣ್ಯಾರೂಪಕರ್ಣನೆಂಬ

ಸಹಕಾರಿಕಾರಣದಿಂ ವ್ಯಾಪ್ತಿಕೆಯಂತೆ ಬಿಂದುಮಾಯೆಯೆಂಬ ಶುದ್ಧಾಶುದ್ಧವಾದ ಮಾದಾನಕಾರಣದಿಂ ಗಮನಾಗಮನ ಸುಖದುಃಖಾದ್ಯನೇಕ ವ್ಯವಹಾರಭೇದದಿಂ ಭಿನ್ನರಾದಾತ್ಮರಭೋಗಮೋಕ್ಷಾರ್ಥವಾಗಿ ಜನಿಸುಂಪರಿಯಲ್ಪೇಳ್ಕುಂ ॥ ಬಳಿಕಲ್ಲಿಪ್ರಕೃತಿಪರಮಾಣುಕಾಲಕರ್ಮಾದಿಗಳೆ ಜಗತ್ಕರ್ತೃಗಳಪ್ಪ ವಿಶ್ವೇಶ್ವರನಲ್ಲಿಂದೊಡಂ ಪ್ರಕೃತಿಮೊದಲಾದವೆಲ್ಲ ಜಡರೂಪಗಳಾಗಿಚೈತನ್ಯಾಧಿಷ್ಠಾನವಿಲ್ಲದೆ ತಾವೆ ಜಗನ್ನಿರ್ಮಾಣ ಕರ್ತೃಗಳಲ್ಲವೆಂಬುವದೇಸಿದ್ಧಮಕ್ಕು ॥ ಬಳಿಕಂತಾದೊಡೆಚೇತನನಾದ ಜೀವನೇ ಜಗತ್ಕರ್ತೃವಾಗಲೆಂದೊಡಾತಂಗೆ ಕಿಂಚಿಜ್ಞತ್ವಅದೃಷ್ಟಪರತಂತ್ರತ್ವ ಅನೀಶ್ವರತ್ವಾದಿ ದೋಷಗಳುಂಟಾಗಿ ಜಗತ್ತುಗಳಂಸೃಜಿಸಲು ಯೋಗ್ಯವೆಂಬಾಲೋಚನೆಯಲ್ಲಿ ಬೇಗೆಸಮರ್ಥನಪ್ಪಂ ॥ ಮತ್ತೇನೆಂದೊಡೆಪಾರಿಶೇಷನ್ಯಾಯದಿಂ ಪರಮೇಶ್ವರನೇ ಜಗತ್ಕರ್ತೃವೆಂದು ನಿಶ್ಚಿತಮಕ್ಕುಂ ॥ ಬಳಿಕಜಗದ್ರೂಪಮಹಾಕಾರ್ಯವಾದೊಡೆ ರಥದಂತೆ ಬಹುಕರ್ತೃಗಳುಳ್ಳದ್ದೆನಲಾ ರಥವು ಆಚಾರ್ಯನಾಮೋರ್ವನಸೂತ್ರದಿಂದಲೆ ಅಹುದಾಗಿಯುಂ ಬೇರೆ ಬೇರೆ ಬಲತನದಭಿಮಾನದಿಂ ತಂಮ ತಮ್ಮಸಪೋಷಿಸಿಕೊಳ್ಳಲುಳ್ಳನೇಕ ಕರ್ತೃಗಳಿಂದೊಂದು ಕಾರ್ಯವನುವಾಗದಾಗಿಯುಂಜಗದೀಶ್ವನೋರ್ವನಾಗವೇಳ್ಕು॥

—*ಈಶ್ವರನ ಗುಣಾವಳಿ.*—

ಬಳಿಕೆಲ್ಲ ಕಾಲದಲ್ಲಯೂ ಲ್ಲಯೆತಾವಿನಲ್ಲಿಯು ಕಾರ್ಯೋದಯಮುಂಟಾಗಿಕರ್ತೃವಾದೀಶ್ವರಂಗೆ ನಿತ್ಯತ್ವವ್ಯಾಪಕತ್ವಂಗಳುಂ- ಆಪಕಾರ್ಯವೂ ಅರಿವುಶಿರವದಮರ್ದನಿಂದಾಗದಾಗಿ ಕರ್ತೃವಾದೀಶ್ವರಂಗೆಸರ್ವಜ್ಞತ್ವ ಸರ್ವಶಕ್ತತ್ವಂಗಳುಂ-ಕಾಲವೆಂತಮರ್ತವಾಗಿ ಪಲ್ಲವಕಸುಮಾದಿ ಸಾಧಕಮಪ್ಪುದಂತು ಸಕಲಕಾರ್ಯೋತ್ಪಾದಕನಾದೀಶ್ವರಂಗೆ ನಿಷ್ಕಳಂಕತ್ವಮುಂ- ಸರ್ವಾತ್ಮರಹೃದಯದೊಳಂತರ್ಯಾಮಿಯಾಗಿಯುಂ ಹೊರಗೆ ಶ್ರುತಿಸ್ಮೃತಿರೂಪವಾದಾಜ್ಞೆಯಿಂದಲುನಿಯಾಮಕಮಪ್ಪುದರಿಂದೀಶ್ವರಂಗೆ ಸ್ವಾಮಿರಕತ್ವಮುಂ-ಎಂದುಲೋಕದಲ್ಲಿ ಕುಲಾಲಾದಿಕರ್ತೃವಿನಿಂಬನ್ನವಾದ ಘಟಾದಿಗಳ್ನಿಯಾಮಿಸಿಕೊಳ್ಳುತ್ತಿರಲು ಅನನ್ಯಮಾದ ಶರೀರಾದಿಗಳೆ ನಿಯಾಮಿಸಿ ಕೊಳುತಿರ್ಪನಾಗಿ ವಿಶ್ವವೆಲ್ಲಂ ವಿಶ್ವೇಶ್ವರನಿನ್ನಿಯಮ್ಯವೆಂಬ ಶ್ರುತಿಯುಂಟಾಗೀಶ್ವರಂಗೆ ಸರ್ವಾತ್ಮಕತ್ವಮುಂ। ಅದ್ವಿತೀಯನಪ್ಪುದರಿಂ ಬೇರೆಕರ್ತೃಗಳಿಲ್ಲನಾಗೀಶ್ವರಂಗೆಸರ್ವಸ್ವತಂತ್ರತ್ವಮುಂ । ಜೀವರಕರ್ಮಾನುಗುಣ್ಯವಾಗಿಸಿ ಸುಖದುಃಖವನೀವುದರಿಂ ದೀಶ್ವರಂಗೆ ರಾಗಾದಿದ್ವೇಷವಿರಹಿತತ್ವ

ಮುಂ । ಈಶ್ವರನಿಂಸೃಷ್ಟಮಾದಪ್ರ್ಯೋಮಾದಿವಿಶ್ವಮುಂ ಬೇರೊಂದುಪ್ರ ಕಾರವಾಗಿ ಮಾಡಲಾರುಂ ಸಮರ್ಥರಲ್ಲದರಿಂದೀಶ್ವರಂಗೆ ಸರ್ವೇಶ್ವರತ್ವ ಮುಂಸುಸ್ಥಿತಮಕ್ಕುಂ॥

—* ಪ್ರಮಾಣಶಾಸ್ತ್ರಗಳು. *—

ಅನಂತರದೊಳಾಪರಮೇಶ್ವರ ನಿರ್ಮಿತಮಾದ ಚೇತನಾಚೇತನ ರೂಪಜಗತ್ತಿನಲ್ಲಿ ಭೋಗಮೋಕ್ಷಾರ್ಥವಾಗಿ ಬೇರೆಬೇರೆ ಪ್ರವರ್ತಿಸುತಿರ್ದವಾದಿಗಳಭಿಮತವಾದಶಾಸ್ತ್ರಂಗಳಾವಾವವೆಂದೊಡೆ-ಮೊದಲು ಮುಖ್ಯಪ್ರಮಾಣವಾದಋಗ್ವೇದ ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬವೆಸ್ವಯಂಭುವೆಂದೀಶ್ವರಪ್ರಣೀತವೆಂದು ಪೇಳಿಸಿಕೊಳ್ಳುತಿರ್ದ ನಾಲ್ಕುವೇದಂಗಳವುಗಳಲ್ಲಿ॥

—* ವೇದಪ್ರಭೇದಗಳು. *—

ಋಗ್ವೇದವಿಪ್ಪತ್ತೊಂದುಭೇದವಾಗಿಹುದು-ಯಜುರ್ವೇದವುಹನ್ನೊಂದುಭೇದವಾಗಿಹುದು- ಸಾಮವೇದವುಸಾವಿರಭೇದವಾಗಿಹುದು-ಅಥರ್ವಣವೇದವು ನವಭೇದವಾಗಿರ್ಕ್ಕುಂ॥

* ವೇದವಾಕ್ಯಸ್ವರೂಪ. *

ಮತ್ತಮಾವೇದಂಗಳಾದೊಡೆ- ವಿಧಿವಾದ, ಅರ್ಥವಾದ, ಮಂತ್ರವಾದ, ನಾಮಧೇಯಂಗಳೆಂಬ ನಾಲ್ಕುಭೇದದಿಂ ಸಮಸ್ತಧರ್ಮಂಗಳಂಬೋಧಿಸುವವುಗಳಲ್ಲಿ ರಾಜಾಜ್ಞೆಯಂತೆ ಪುರುಷರ್ಗ್ಗಳಂನಿಷೇಧ ಧರ್ಮದಿಂತಿರುಗಿಸಿಧರ್ಮವೇಮಾಡಲ್ವೇಕ್ಕೆದೆಂಬುವದೇ ವಿಧಿವಾದ ವೆನಿಸುವದು॥ ವಂದಿಗಳಂತೆ ಅತಿಶಯಾರ್ಥವುಂ ಕೊಂಡಾಡಿ ಉತ್ಸಾಹಿಪುದೇ ಅರ್ಥವಾದವೆನಿಸುವದು ॥ ಆಚಾರ್ಯನಂತೆ ಮಾಡಲ್ವೇಕ್ಕೆದಂತೋರ್ಪುದೇ ಮಂತ್ರವಾದವೆನಿಸುವದು ॥ ಜನನೀಜನಕರಂತೆಯಾಗಾದಿಗಳಿಗೆಪೆಸರಂಪೇಳ್ವುದೇನಾಮಧೇಯಮಕ್ಕುಂ॥

—* ವೇದಾಂಗಗಳು. *—

ಮತ್ತಮಾವೇದಕ್ಕೆ ಪಾದ-ಹಸ್ತ, ಮುಖ, ಘ್ರಾಣ, ನೇತ್ರ, ಶ್ರೋತ್ರಂಗಳಾದಕ್ರಮದಿಂ ಛಂದಸ್ಸು, ಕಲ್ಪ, ವ್ಯಾಕರಣ, ಶಿಕ್ಷೆ, ಜ್ಯೋತಿಷನಿರುಕ್ತಿಗಳೆಂಬವೆಷಡಂಗಂಗಳವುಗಳಲ್ಲಿಛಂದಸ್ಸೇ ಮಂತ್ರಾದಿಗಳಿಗೆ ತ್ರಿಷ್ಟುಪ್ಪು ಮೊದಲಾದ ಛಂದಸ್ಸುಗಳಿಂದಕ್ಷರದ ಗಣನೆಗಳಂಮಾಡುವದು- ಕಲ್ಪವೇ, ಆಶ್ವಲಾಯನಿಯ್ಯ ಬೋಧಾಯನಿಯ್ಯ ಆಪಸ್ತಂಬಿಯ್ಯಾದಿಸೂತ್ರರೂಪದಿಂ ಯಜ್ಞಪ್ರಯೋಗಾದಿಗಳಂ ಕಲ್ಪಿಸುವದು- ವ್ಯಾಕರಣವೇ ವೈದೀಕಶಬ್ದಸಿ

ದ್ಧಿಯಂ ಸಮರ್ಥಿಸುವದು- ಶಿಕ್ಷೆಯೇ ಉದಾತ್ತಾನುದಾತ್ತಸ್ವರಿತ ಪ್ರಚ ಯಂಗಳೆಂಬಚತುರ್ವಿಧಸ್ವರಕರಣ ಪೂರ್ವಕವಾದ ಪದಪಾಠಕ್ರಮದಿಂವೇ ದಾಧ್ಯಯನಾದಿಕವ ಶಿಕ್ಷಿಸುವದು- ಜ್ಯೋತಿಷವೇ ಲಗ್ನತಿಥಿ- ನಕ್ಷತ್ರ ಯೋಗ ಕರಣಾದಿಗಳಿಂ ವೈದಿಕಕರ್ಮಂಗಳಿಗೆ ಕಾಲಂಗಳಂತಿಳಿಪುದು-ನಿರು ಕ್ತಿಯೇ ವೈದಿಕಶಬ್ದನಿರ್ವಚನಮಂನಿಯಮಿಸು ತಿರ್ಕುಂ ||

## * ಉಪಾಂಗಗಳು. *

ಬಳಿಕ ಮೀಮಾಂಸ ನ್ಯಾಯ ಪುರಾಣ ಸ್ಮೃತಿಗಳೆಂಬ ನಾಲ್ಕುವೇ ದಗಳಿಗೆ ಉಪಾಂಗಂಗಳವುಗಳ ಲಕ್ಷಣಂಗಳು ಮುಂದೆಪೇಳಲ್ಪಡು ತ್ತಿರ್ಕುಂ||

## —* ಉಪವೇದಗಳು. *—

ಬಳಿಕ ಆಯುರ್ವೇದ- ಅರ್ಥವೇದಧನುರ್ವೇದಗಾಂಧರ್ವವೇದಂಗಳೆಂಬವೇ ಉಪವೇದ ಚತುರ್ವಿಧಂಗಳವುಗಳಲ್ಲಿ ಆಯುರ್ವೇದವೇ ವ್ಯಾಧಿನಿದಾನ ವ್ಯಾ ಧಿಚಿನ್ಹೆಮಂತ್ರೌಷಧ ಚಿಕಿತ್ಸೆಗಳಿಂದ ಆಯುರಾರೋಗ್ಯಾದಿಗಳಿಂ ತೋರಿ ಸುವದು ಅರ್ಥವೇದವೇ ದಕ್ಷಿಣೆ ಆಜ್ಯ ಚರು ಉಪಕಾರಾದಿಗಳಿಂ ಸಂಪಾ ದಿಪುದರಿಂ ಧರ್ಮಾದಿಚತುರ್ವರ್ಗ ಸಾಧನಮಾಗಿಹುದು ಧನುರ್ವೇದವು ಶತ್ರು ಜಯಾರ್ಥಮಾಗಿಯೇ ಮಂತ್ರಾಸ್ತ್ರಪ್ರಯೋಗಾದಿಗಳಿಂ ಕಲ್ಪಿಸುವದು ಗಾಂಧರ್ವವೇದವು ಸಾಮವೇದಾದಿಗಳಲ್ಲಿ ಸರಿಗಮಪಧನಿಯೆಂಬ ಸಪ್ತಸ್ವರ ಗೀತ ಪ್ರಬಂಧಂಗಳಂಸಂಭಾವಿಸುತಿರ್ಕುಂ||

## —* ಉಪನಿಷತ್ತು. *—

ಬಳಿಕ ಶ್ರೀರುದ್ರ, ಬೃಹದಾರಣ್ಯ, ಶ್ವೇತಾಶ್ವತರ, ಕೈವಲ್ಯ, ಕಾಲಾಗ್ನಿ ರುದ್ರ, ಕಠವಲ್ಲೀ, ಕಾತ್ಯಾಯನ-ಬ್ರಹ್ಮ, ನಾರಾಯಣ, ಹಂಸ, ಪರಮಹಂ ಸ, ಬಾಷ್ಕಳ, ಬ್ರಹ್ಮಬಿಂದು ಅರುಣ, ಅಮೃತಬಿಂದು, ಚರ್ಚೆ, ಪಂಚ ಬ್ರಹ್ಮ, ಜಾಬಾಲ, ತೇಜೋಬಿಂದು, ವಾಜಸನೇಯ, ಬೋಧಾಯನೀಯ ಅಶ್ವಲಾಯನೀಯ, ಮೈತ್ರಾಯಣೀಯ' ಸಾಂಖ್ಯಾಯಣೀಯ, ಭಾಗು ರಾಯಣೀಯ, ಶೌನಕೀಯ- ಶಿವಸಂಕಲ್ಪಶ್ರವಣ, ಈಶಾವಾಸ್ಯ, ತಳವ ಕಾರ, ನಿರಾಲಂಬ, ತೈತ್ತಿರೀಯ-ಛಾಂದೋಗ್ಯ ಕೌಷೀತಕೀ ಮಾಂಡೂ ಕ್ಯ ಮುದ್ಗಲ ಮುಂಡಕವೆಂಬ ಮೊದಲಾದದೆ ಶತೋಪನಿಷತ್ತು ಗಳವುಗ ಳಲ್ಲಿ ಜ್ಞಾನಾಂಗ ಮಾದ ಭಸ್ಮರುದ್ರಾಕ್ಷಾದಿಗಳಿಂ ಬ್ರಹ್ಮಜ್ಞಾನಾದಿಕ ಮಂ ವಿವರಿಸುತಿರ್ಕುಂ||

—* ಸ್ಮೃತಿಗಳು. *—

ಬಳಿಕ ಮನುಸ್ಮೃತಿ-ಅತ್ರಿಸ್ಮೃತಿ- ಹರಿತಸ್ಮೃತಿ ವಿಷ್ಣುಸ್ಮೃತಿ ಯಾಜ್ಞವಲ್ಕ್ಯಸ್ಮೃತಿ, ಉಶನಸ್ಮೃತಿ, ಆಂಗೀರಸಸ್ಮೃತಿ. ಯಮಸ್ಮೃತಿ, ಆಪಸ್ತಂಬಸ್ಮೃತಿ, ಸಂವರ್ತ್ತಸ್ಮೃತಿ ಕಾತ್ಯಾಯನಸ್ಮೃತಿ, ಬೃಹಸ್ಪತಿಸ್ಮೃತಿ, ಪರಾಶರಸ್ಮೃತಿ, ವ್ಯಾಸಸ್ಮೃತಿ, ಶಂಖಲಿಖಿತಸ್ಮೃತಿ, ದಕ್ಷಸ್ಮೃತಿ, ಗೌತಮಸ್ಮೃತಿ, ಶಾತಾತಪಸ್ಮೃತಿ' ವಶಿಷ್ಠಸ್ಮೃತಿಗಳೆಂಬವೆ, ಆಯಾಯನಾಮಧೇಯ ಮುಳ್ಳವರಿಂದುಕ್ತ ವಾದಹತೊಂಭತ್ತುಧರ್ಮಶಾಸ್ತ್ರಗಳವ್ರಗಳೊಳಗೆಕೃತಯುಗದಲ್ಲಿ ಮನುಸ್ಮೃತಿ ಧರ್ಮವೇಮುಖ್ಯವಾಗಿಹುದು-ತ್ರೇತಾಯುಗದಲ್ಲಿ ಗೌತಮಸ್ಮೃತಿ ಧರ್ಮವೇಮುಖ್ಯವಾಗಿಹುದು ದ್ವಾಪರಯುಗದಲ್ಲಿಶಂಖಲಿಖಿತಸ್ಮೃತಿ ಧರ್ಮವೇಮುಖ್ಯವಾಗಿಹುದು ಕಲಿಯುಗದಲ್ಲಿ ಪರಾಶರಸ್ಮೃತಿ ಧರ್ಮವೇಮುಖ್ಯವಾಗಿಹುದು-ಸ್ಮೃತಿಗಳಲ್ಲಿಜಾತಿ, ವರ್ಣ, ಆಶ್ರಮಾಚಾರಂಗಳಂ ದಾಯವಿಭಾಗಾದಿ ಹದಿನೆಂಟುವ್ಯವಹಾರಗಳಭೇದಂಗಳಂ ಮಹಾ ಪಾತಕಾದಿಗಳಿಗೆ ಪ್ರಾಯಶ್ಚಿತ್ತಂಗಳಂ ವಿಧಿಸುವದರೊಳಗೆ । ಕರ್ಮ್ಮಕನ್ನಡಿಗ ಆಂಧ್ರದ್ರಾವಿಡರೆಂಬವರ ನಾಲ್ಕು ಜಾತಿಗಳು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೇ ನಾಲ್ಕು ವರ್ಣಂಗಳವರಲ್ಲಿ ॥

—* ಷೋಡಶಕರ್ಮಾದಿಗಳು. *—

ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ ಚೌಲ, ಉಪನಯನ, ಉಪಾಕರ್ಮ, ಉತ್ಸರ್ಜನ, ವೇದವ್ರತ, ಗೌದಾನಿಕಸ್ನಾತಕ, ವಿವಾಹ, ಸ್ಮಾರ್ತಾಗ್ನಿಹೋತ್ರ, ಔರ್ಧ್ವದೇಹಿಕಗಳೆಂಬ ಷೋಡಶಕರ್ಮಗಳೊಡನೆಯು, ಯಜನ, ಯಾಜನ, ಅಧ್ಯಯನ, ಅಧ್ಯಾಪನ ದಾನ, ಪ್ರತಿಗ್ರಹಗಳೆಂಬ ಷಟ್ಕರ್ಮಂಗಳೊಡನೆಯುಂ ಶಿವಭಕ್ತ್ಯಾದಿಗಳೊಡನೆಯುಂ ಕೂಡಿದಾತನೆಬ್ರಾಹ್ಮಣನಪ್ಪಂ ॥

—* ಕ್ಷತ್ರಿಯಕರ್ಮ. *—

ಬಳಿಕ ಪ್ರಜಾಪಾಲನ, ಯಜನ, ಅಧ್ಯಯನ, ದುಷ್ಟಮೃಗಪಕ್ಷಿಶತ್ರುಸಂಹಾರ, ಅನ್ನದಾನ, ವಸ್ತ್ರದಾನ ಕನ್ಯಾದಾನ, ಹಿರಣ್ಯದಾನ, ಗೋದಾನ, ಉಭಯಮುಖೀ ಗೋದಾನ, ಮಹಿಷೀದಾನ, ಅಶ್ವದಾನ, ಶ್ವೇತಾಶ್ವದಾನ ಕಾಳಮುಖೀದಾನ, ಮಹಾಮೇರುದಾನ, ಕಲ್ಪವೃಕ್ಷದಾನ ವಿದ್ಯಾದಾನಾದಿ ಮಹಾದಾನ, ತದ್ದಾನಾರ್ಥವಾಗಿ ದೇಶಕಾಲಪಾತ್ರ ಪರೀಕ್ಷಿಸಿ ವಿಷ್ಣುಭಕ್ತ್ಯಾದಿಕರ್ಮಯುಕ್ತನಾದಾತನೇಕ್ಷತ್ರಿಯನಪ್ಪಂ ॥

—* ವೈಶ್ಯಧರ್ಮ. *—

ಬಳಿಕ ಮೂರನೆಯ ಕುಲಜನಾಗಿ ವಿಪ್ರಕ್ಷತ್ರಸೇವೆಗಳಿಂ ಕೃಷಿಗೋಪಶ್ವಾದಿವಾಣಿಜ್ಯದೊಳ್ ಯಜೋಪವೀತಕರಣ ರಾಜ್ಯೋಪಕರಣ, ಕ್ರಯವಿಕ್ರಯಾದಿ ವ್ಯವಹಾರಸಾಧಕಮಾಗಿಗಣನಾದಿ ಕೌಶಲಮುಂ ಪದಾರ್ಥಗಳ ಸ್ವರೂಪಪರೀಕ್ಷಾದಿಗಳಂತಿಳಿದು ಬಡ್ಡಿದಳ್ಳಾಳಿಲಾಭ ಮುಂತಾದವುಗಳಿಂ ಧರ್ಮವಾಗಿ ಧನಮಂಪಡದು ದಾನಾದಿ ಪುಣ್ಯಕರ್ಮಗಳಿಂ ಸೂರ್ಯಾದಿ ಪೂಜೆಗಳಂಮಾಳ್ಪನೇ ವೈಶ್ಯನಕ್ಕುಂ ॥

—* ಶೂದ್ರಧರ್ಮ. *—

ಬಳಿಕ ಬ್ರಾಹ್ಮಣಾದಿ ವರ್ಣತ್ರಯಕ್ಕೆ ಪರಿಚರ್ಯಾಪರನಾಗಿ ವಿಪ್ರಾನುಗ್ರಹ ಕ್ಷತ್ರಿಯರಕ್ಷಣೆ ವೈಶ್ಯಸಹಾಯಗಳಿಂ ಸಕಲ ದೇವತಾಭಕ್ತ್ಯಾದಿಯುಕ್ತನಾಗಿ ವಿನೀತನಪ್ಪವನೇ ಶೂದ್ರನಕ್ಕುಂ ॥

—* ಗಣಿತಸಂಜ್ಞೆ. *—

ಬಳಿಕ ಪ್ರಥಮಸ್ಥಾನ, ದ್ವಿತೀಯಸ್ಥಾನ, ತೃತೀಯಸ್ಥಾನ, ಚತುರ್ಥಸ್ಥಾನ, ಪಂಚಮಸ್ಥಾನ, ವೆಂಬೀಮೇರೆ ಮೂವತ್ತಾರುಸ್ಥಾನ ಪರ್ಯಂತರಂ ಕ್ರಮದಿಂದವಕೆ, ಯಕ್ಕಂ ದಹಂ, ಶತಂ, ಸಾವಿರ, ದಸಾವಿರ, ಲಕ್ಷ, ದಹಲಕ್ಷ, ಕೋಟಿ, ದಹಕೋಟಿ, ಶತಕೋಟಿ, ಅರ್ಬುದ, ಖರ್ವ, ಮಹಾಖರ್ವ, ಪದ್ಮ, ಮಹಾಪದ್ಮ ಕ್ಷೋಣಿ, ಮಹಾಕ್ಷೋಣಿ, ಶಂಖ, ಕ್ಷಿತಿ, ಮಹಾಕ್ಷಿತಿ, ಕ್ಷೋಭ, ಮಹಾಕ್ಷೋಭ, ನಿಧಿ, ಮಹಾನಿಧಿ, ಸಾಗರ, ಮಹಾಸಾಗರ, ಹರಿ, ಮಹಾಹರಿ, ಶಂಖೆ, ಮಹಾಶಂಖೆ, ಫಣಿ, ಮಹಾಫಣಿ, ಕ್ರಮ, ಮಹಾಕ್ರಮ, ವೆಂಬವೀವೃತ್ತಪಡನೆಗಳು, ಬಳಿಕ, ಏಕರೂಪಭೂಮಿಸಂಜ್ಞೆ, ಚಂದ್ರಸಂಜ್ಞೆ,ಮೊದಲಾದುವು ಒಂದಕ್ಕೆ ಬೇರೆಪೆಸರು, ಬಳಿಕದ್ವೌ, ದ್ವಿ, ದ್ವಿತಿಯ, ಯುಗ್ಮ, ಯುಗಳ, ಯುಂ, ಉಭಯ ಬಾಹು ಪಾದ ಪಕ್ಷ, ನಯನಸಂಜ್ಞೆ ಮೊದಲಾದವೆ ಎರಡಕ್ಕೆಬೇರೆನಾಮಂಗಳು, ತ್ರಿತಯ ತ್ರಿ-ತ್ರಯ,ಹರನಯನ, ಅಗ್ನಿ, ಪುರ, ವರ್ಗಗುಣಾದಿಗಳೀ, ಮೂರಕ್ಕೆಪೆಸರು, ಚತ್ವಾರಿ, ಚತು, ಚೌ. ಕಷಾಯ, ವೇದ, ವರ್ಣ, ಆಶ್ರಮ'ಸಮುದ್ರಸಂಜ್ಞಾಮೊದಲಾದವೇ,ನಾಲ್ಕರಪೆಸರು, ಪಂಚ, ಹರವಕ್ತ್ರ, ವ್ರತ ಇಂದ್ರಿಯ, ಬಾಣ, ವಿಷಯ, ಪಾಂಡವ, ಭೂತಾದಿಗಳೀ, ಅಯಿದಕ್ಕೆಪೆಸರು:ಷಟ್, ಬಿಯತು, ರಸ, ಸ್ಕಂದಮುಖ, ವೇದಾಂಗ, ಕರ್ಮ, ದರ್ಶನ, ಅರ್ಥಾದಿಗಳೆ, ಆರಕ್ಕೆಪೆಸರು, ಸಪ್ತ, ಮುನಿ, ಗಿರಿ- ರಾಜ್ಯಾಂಗ- ತುರಗ- ಧಾತು-

ಸಭುಂಗ ಸರ್ಪ, ಸಾಗರಸಂಜ್ಞೆಮೊದಲಾದವೇ' ಏಳಕ್ಕೆಪೆಸರು' ಅಷ್ಟ-ವ ಸು- ದಿಗ್ಗಜ' ಮದ- ಕರ್ಮ್ಮದಿಗಳೇ ಎಂಟಕ್ಕೆ ಪೆಸರು ನವ- ರಂಧ್ರನಿಧಿ.ರಸ ಗ್ರಹ- ರತ್ನ- ಭಕ್ತಿಗಳೇ-ಒಂಭತಕ್ಕೆ ಪೆಸರು ಬಿಂದು. ಶೂನ್ಯ ನಾ ಸ್ತಿ ಅನುಸ್ವಾರ ಗಗನಪೂರ್ಣ್ಣಸಂಜ್ಞೆಮೊದಲಾದವೇಸೊನ್ನೆಯಪೆಸರು ಸಕಲ ಸಂಖ್ಯಾ ಸಂಜ್ಞೆ ಗಳನರಿತು ಹೆಚ್ಚುಕಳೆದು ಗಣಿತಾದಿಗಳಂಗುಣಿಸಿಕಮು ಕಾದಿ ಸಮಸ್ತವಸ್ತುಂಗಳಂ ಪ್ರಮಾಣಿಸುವಲೆಖ್ಖ ಬರಹ- ಕ್ರಯ. ಬಡ್ಡಿ ವಟ್ಟ ಚಿನ್ನದಬಣ್ಣ ಪವಳದಕಣಜ ಮಣಿಗಳಬಿಳಾಕ. ರತ್ನಗಳಸೂತ್ರಪರೀ ಕ್ಷೆ. ವಜ್ರಮಂಜಾಡಿ ಪಚ್ಚೆಯರತಿ ಮೊದಲಾದವಂಬೇರೆಬೇರೆಲಕ್ಷಿಸಿ ವ್ಯವ ಹರಿಸಲುಪಯುಕ್ತಮಕ್ಕುಂ॥ * *

—* ತೂಕದ ಪ್ರಮಾಣ *—

ಬಳಕ ಹತ್ತುಣತಾಕ ಮೊಂದು ಗದ್ಯಾಣ ಅದುನಾಲ್ಕಾಗ ಲೊಂದು ಕರ್ಷ. ಅದು ನಾಲ್ಕಾಗದ ಲೊಂದು ಹಲ ಅದು ಇಪ್ಪತ್ತಾಗಲು ವಂದು ಬಿಸಿಗೆ ಇದು ಅಯಿದಾಗಲು ಒಂದುತೊಲೆ ಆತೊಲೆ ಇಪ್ಪತ್ತಾಗಲುವಂದು ಭಾರ ಆಭಾರಹತ್ತಾಗ ಲೊಂದುಅಚಿತವಹುದೆಂದು ಕರ್ಪೂರಾದಿಕದತೂಕ ಮಂ ಪ್ರಮಾಣಿಸಿ ಬಳಕ ಒಂದು ಸೊಲಿಗೆಯೊನಿಕುಂಜ ಅದು ನಾಲ್ಕಾಗ ಲೊಂದು ಕುಡಬ ಅದುನಾಲ್ಕಾಗ ಲೊಂದು ಪ್ರಸ್ಥ ಆಪ್ರಸ್ಥ ಎರಡಾಗೆವಹ ಅದೆರಡಾಗಲು ಒಂದು ಆಢಕ ಅದುನಾಲ್ಕಾಗೆ ಒಂದತಿದ್ರೋಣ ಅದು ಅಯಿ ದಾಗಲು ಒಂದುಖಾರ್ಯೆಯಹುದೆಂದು ಧಾನ್ಯಾದಿಗಳಳತೆಗಳಗುಪಯು ಕ್ತ ಮಕ್ಕುಂ॥

* ಹದಿನೆಂಟುಪುರಾಣ. *

ಅನಂತರದಲ್ಲಿ ಬ್ರಹ್ಮಪುರಾಣಪದ್ಮಪುರಾಣ ವೈಷ್ಣವಪುರಾಣಶೈವಪುರಾಣ ಭಾಗವಪುರಾಣ ನಾರದೀಯಪುರಾಣ ಮಾರ್ಕ್ಕಂಡೇಯಪುರಾಣ ಆಗ್ನೇಯಪು ರಾಣಭವಿಷ್ಯತ್ಪುರಾಣ ಬ್ರಹ್ಮವೈವರ್ತಪುರಾಣಲೈಂಗಪುರಾಣವರಾಹಪುರಾ ಣಸ್ಕಾಂದಪುರಾಣ ವಾಮನಪುರಾಣ ಕೂರ್ಮ ಪುರಾಣ ಮತ್ಸ್ಯಪುರಾಣಗಾರುಡ ಪುರಾಣ ಬ್ರಹ್ಮಾಂಡಪುರಾಣವೆಂಬವೇ ಶಿವಪ್ರಸಾದದಿಂ ಋಷಿಶ್ವರೋಕ್ತ ಮಾದ ವೇದದನಷ್ಟಶಾಖಾರ್ಥ ಪ್ರತಿಪಾದಕಮಪ್ಪ ನಾಲ್ಕುಲಕ್ಷಗ್ರಂಥ ಸಂಖ್ಯೆ ಯುಳ್ಳ ಹದಿನೆಂಟು ಮೂಲ ಪುರಾಣಂಗಳವುಗಳೊಳಗೆ ಸ್ಕಾಂದ ಶೈವ. ಲೈಂಗಕೂರ್ಮ ವಾಮನ ವರಾಹ ಭವಿಷ್ಯತ್ತು ಮತ್ಸ್ಯ ಮಾರ್ಕಂಡೇಯ ಬ್ರಹ್ಮಾಂಡವೆಂಬ ಹತ್ತೀಶಿವಪುರಾಣಂಗಳು ನಾರದೀಯಭಾಗವತ ಗಾರುಡ

ವಿಷ್ಣುಪುರಾಣವೆಂಬ ನಾಲ್ಕು ವಿಷ್ಣುಪುರಾಣಗಳು॥ ಬ್ರಹ್ಮಪದ್ಮವೆರಡು ಬ್ರಹ್ಮಪುರಾಣಗಳು ಬ್ರಹ್ಮವೈವರ್ತವೊಂದೇ ಸೂರ್ಯಪುರಾಣವಹುದು ಆಗ್ನೇಯವೆಂಬವೊಂದೇ ಅಗ್ನಿಪುರಾಣವಹುದು ॥ದೇವತೆಗಳತಾರತಮ್ಯವೆ ನೀಪುರಾಣಂಗಳಕುಂದು ಹೆಚ್ಚುಗಳಿಂದಲೇ ನಿಶ್ಚಯಿಸಲ್ಪಡುಗುಂ॥ ಮತ್ತಮಾಪುರಾಣಂಗಳಲ್ಲಿಸರ್ಗ ಪ್ರತಿಸರ್ಗ ವಂಶ ಮನ್ವಂತರ ವಂಶಾನುಚರಿತಂಗಳೆಂಬ ಪಂಚಲಕ್ಷಣಂಗಳುಸಮಸ್ತವೈದಿಕತಾಂತ್ರಿಕಧರ್ಮಂಗಳುಂವಿತಿತಂಗಳಕ್ಕುಂ॥

—* ಉಪಪುರಾಣಂಗಳು. *—

ಬಳಿಕ -ಪುರಾಣಂಗಳಗೆ- ಸನತ್ಕುಮಾರಪುರಾಣ .ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ ದೂರ್ವಾಸಪುರಾಣ ನಾರದೀಯಪುರಾಣ ಕಪಿಲಪುರಾಣ ಮಾನವಪುರಾಣಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠ ಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವ ಪುರಾಣ ವೆಂಬವೇ ಆಯಾನಾಮಧೇಯಮುಳ್ಳನರಿಂ- ನಿರೂಪಿತಮಪ್ಪ ೧೮ ಉಪಪುರಾಣಂಗಳು -ಅವುಗಳಲ್ಲಿ ವೈದಿಕ ಧರ್ಮಾಧಿಕಮೇಪ್ರತಿಪಾದ್ಯಮಕ್ಕುಂ ॥

—* ಇ ತಿ ಹಾ ಸ *—

ಬಳಿಕ ಭಾರತ ರಾಮಾಯಣ ವೆಂಬೆರಡೇವ್ಯಾಸವಾಲ್ಮೀಕಿಗಳಿಂ ಪ್ರಣೀತಮಾದಿತಿಹಾಸಂಗಳು ಅವುಗಳಲ್ಲಿ ಸತ್ವಾದಿಗುಣವಿಭೇದಂಗಳಿಂ ತ್ರಿದೇವತಾ ಲಕ್ಷಣಂಗಳಿಂ ದೇವದಾನವಾದಿ ಜನನಕ್ರಮಂಗಳಿಂ ಯುಧಿಷ್ಠಿರ ರಾಮಚಂದ್ರಾದಿ ರಾಜವೃತ್ತಾಂತಂಗಳಿಂ ವೈದಿಕಧರ್ಮಾದಿಗಳಿಂ ಧೃಢೀಕರಿಸುತಿರ್ಕುಂ ॥

—* ಚಾರ್ವಾಕಶಾಸ್ತ್ರ .*—

ಅನಂತರದಲ್ಲಿ ಬೃಹಸ್ಪತಿ ಅರ್ಹತ. ಸುಗತರೆಂಬವರಿಂ ಕ್ರಮದಿಂ ಪೇಳಲ್ಪಟ್ಟ ಚಾರ್ವಾಕ – ತಂತ್ರವೇ ಪೃಥಿವ್ಯಾದಿಚತುರ್ಭೂತ ವಿಕಾರಮಾದಜಗತ್ತಿನಲ್ಲಿಸುಖವೇಸ್ವರ್ಗದುಃಖವೇ ನರಕವಲ್ಲದೆಬೇರೆಸ್ವರ್ಗನರಕಂಗಳಿಲ್ಲವೆಂದು ಪೇಳುವದು ಜೈನವೇಸಿದ್ಧಬದ್ಧ ನಾರಕಿಗಳು ಎಂಬ ಪುರುಷತ್ರಯ ಲಕ್ಷಣಂಗಳಿಂ ಬಡ್ಡೀಶ ಬಡಾಮರೇಶ್ವರ ಜ್ವಾಲನಿಕಲ್ಪ ಪದ್ಮಾವತಿಕಲ್ಪ ಶಾರದಾಕಲ್ಪ ಕುಕ್ಕುಟ ನಾಥಾದಿಕಲ್ಪಂಗಳಿಂಮಂತ್ರೌಷಧಾದಿಪ್ರಯೋಕ್ತೃಗಳಾದ ಪರಮಸಿದ್ಧರುಗಳಿಂ ಲೂನಕೇಶ ದಿಗಂಬರಪಾಣಿಪಾತ್ರಿಮಯೂರಪಿಂಛ ಪಂಚಮಲಧಾರಣಾದಿಗಳಿಂ ಹುಸಿ ಕಳವು ಪರದಾರ ಅತಿ

ಕಾಂಕ್ಷೆ ಹಿಂಸೆಗಳಿಲ್ಲದ ಪಂಚಾಣುವ್ರತಂಗಳಂಮದುಮಲಾಂಡುಮೊದಲಾದ ನಿಷಿದ್ಧದ್ರವ್ಯಂಗಳಂ ಬಿಟ್ಟು ತಪ್ತಶಿಲಾಶಯನಾದಿಗಳಿಂ ದುಗ್ರತಪವನಾಚರಿಸುವಮುನಿವೃತಿಗಳಂ ಹೇಮಚಂದ್ರನಾಗಚಂದ್ರ-ನೇಮಿಚಂದ್ರ-ಮೇಘಚಂದ್ರ-ಮಾಘಚಂದ್ರ-ಅರ್ಹತ-ಆದಿನಾಥಅಗ್ಗಳ, ಪಾರ್ಶ್ವನಾಥ, ಸೌಗತ, ಶೃತಿಕೀರ್ತಿ, ಶ್ರೀಮತಿ, ಕಾಮರಹಿತ, ಮುನಿಸ್ವಾಮಿಗಳೆಂಬ, ಚತುರ್ದಶ, ತೀರ್ಥಕರಚರಿತ್ರಗಳು, ಸ್ಯಾದಸ್ತಿ, ಸ್ಯಾನ್ನಾಸ್ತಿ ಎಂಬವು ಮೊದಲಾದ ಸಪ್ತಭಂಗಿಗಳಂ। ಜೀವ-ಸಜೀವ-ನಿರ್ಜೀವ, ನಿರ್ಜರ, ಆಶ್ರವು, ಬಂಧಮೋಕ್ಷವೆಂಬ ಸಪ್ತಪದಾರ್ಥಗಳಂ-ಪ್ರತಿಪಾದಿಸುವದು.

— ಬೌದ್ಧ. —

ಬೌದ್ಧವೇ ಭೂಮಧ್ಯಾದಿ ಬುದ್ಧಿಕಡೆಯಾದ ತ್ರಯೋವಿಂಶತಿ ತತ್ವಾತ್ಮಕ ಪ್ರಪಂಚವೆಲ್ಲಂ ದೀಪಜ್ವಾಲೆಗಳಂತೆ ಕ್ಷಣಿಕವೆಂದುಪ್ರತಿಪಾದಿಸುತ್ತದೆ ಸೌತ್ರಾಂತಿಕ ವೈಭಾಷಿಕಮಹಾಯಾನಕ ಸಂಸ್ಕೃತವೆಂದು ನಾಲ್ಕುತರನಾಗಿರ್ಕುಂ॥

— ಕೌಳಯಾಮಳ. —

ಬಳಿಕ। ಸತ್ಯನಾಥ, ಸಲೋಕನಾಥ, ಆದಿನಾಥ, ಅನಾದಿನಾಥ, ಅಕುಳಿತನಾಥ, ಮಾತಂಗನಾಥ. ಮಚ್ಛಂದ್ರನಾಥ ಘಟಿಯಂತ್ರನಾಥ, ಗೋರಕ್ಷನಾಥರೆಂಬನವನಾಥ ಸಿದ್ಧರಿಂಕಲ್ಪಿತಮಾದ । ಕೌಳಯಾಮಳಾದಿಗಳೇ ಹಿಂಸಾಮೈಥುನಾದಿ ನಿಷಿದ್ಧಕರ್ಮಂಗಳುಳ್ಳ ಶಾಸ್ತ್ರೇತರಂಗಳವುಗಳಲ್ಲಿ ಅಭಿಚಾರಕರ್ಮಜನಿತವ್ಯಾಧ್ಯಾದಿದ್ವಾರದಿಂ ಅಕಾಲಮೃತಿ ರೂಪಮರಣವೆಂಬ ಸುಪ್ತಿವಿಷಮೂರ್ಛೆ ಅದೃಶ್ಯಕರಣ ಲಕ್ಷಣಮೋಹನವೆಂಬ। ಅಗ್ನಿಸ್ತಂಭ ಜಲಸ್ತಂಭ ಇಂದ್ರಿಯಸ್ತಂಭ ಖಡ್ಗಸ್ತಂಭ ಜಿಹ್ವಾಸ್ತಂಭ ಗತಿಸ್ತಂಭಾದಿರೂಪಸ್ತಂಭವೆಂಬ ಪೂರ್ವಸುಖಾಶ್ರಯ ನಿರಸನಾತ್ಮ ಕೋಚ್ಚಾಟನವೆಂಬ ವಸ್ತ್ರಾಭರಣ ವಾಹನವನಿತಾದಿವಸ್ತುನಿಜಸ್ಥಾನಾಗತಿಲಕ್ಷಣಾಕರ್ಷಣವೆಂಬ। ಪ್ರಾಣಸ್ನೇಹಿತಾನ್ಯೋನ್ಯ ವಿರೋಧಕರಣಾತ್ಮಕ ವಿದ್ವೇಷಣವೆಂಬ। ಷಟ್ಕರ್ಮಗಳಂ ರಾಜವಶ್ಯ ಜನವಶ್ಯ ಸ್ತ್ರೀವಶ್ಯಂಗಳಂ ಜ್ವರಭೂತಗ್ರಹಾವೇಶಂಗಳಂ। ಪಾದುಕಾಸಿದ್ಧಿ ಅಂಜನಸಿದ್ಧಿ, ಘುಟಿಕಾಸಿದ್ಧಿ,ಮೂಲಿಕಾಸಿದ್ಧಿ, ರಸವಾದ ಸಿದ್ಧ್ಯಾದಿಗಳಂ ಸಾಧಿಸುತಿರ್ಕುಂ.

— ಶಾಕ್ತೇಯಪಾಂಚರಾತ್ರಗಳು —

ಬಳಿಕ ಶಕ್ತಿತತ್ವನಾಸಿ ಯಾದೋವರ್ತ್ಮನಿಂ।ವಾಸುದೇವನಿಂ।ಕ್ರಮ

ದಿಂದುಕ್ತವಾದ ಶಾಕ್ತೇಯವು ಜಡಾಜಡಪ್ರಪಂಚವೆಲ್ಲವಂ ಶಕ್ತಿಪರಿಣಾಮ ವೆಂಬುದುಮೊದಲಾದವಂವಿಸ್ತರಿಸುವದು। ಪಾಂಚರಾತ್ರವು ಪೃಥಿವ್ಯಾದಿಪ್ರಾಣಸಾಂತವಾದಚತುರ್ವಿಂಶತಿತತ್ವಂಗಳಂ ಮೇಲೆ ಗುಣಪುರುಷತತ್ವಾತ್ಮಕ ವಾಸುದೇವನಿಂಜಗದ್ಧಿತಾರ್ಥವಾಗಿ ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ಕೃಷ್ಣರೆಂಬ ಚತುರ್ವ್ಯೂಹಗಳ ಉತ್ಪತ್ತಿಮೊದಲಾದವುಗಳಂ ಸಂಪಾದಿಸುತಿರ್ಕುಂ ॥

— ಸಾಧಾರಣ ಶಾಸ್ತ್ರಪಂಚಕ. —

ಬಳಿಕ ಲೌಕಿಕ ವೈದಿಕ ಅಧ್ಯಾತ್ಮಿಕ ಅತಿಮಾರ್ಗಿಕ ಮಂತ್ರಗಳೆಂಬಪಂಚವಿಧಶಾಸ್ತ್ರಂಗಳು ಕ್ರಮದಿಂ ಪೇಳಲ್ಪಡುವವು.

— ಲೌಕಿಕ ಶಾಸ್ತ್ರ. —

ಲೌಕಿಕಶಾಸ್ತ್ರವು ಧನ್ವಂತರಿಪ್ರಮುಖರಿಂದುಕ್ತವಾದ ಆಯುರ್ವೇದ ದಂಡನೀತಿ ಶಿಲ್ಪ ಮೊದಲಾದವುಗಳಂ ಸಾಧಾರಣವಾಗಿ ದೃಷ್ಟಫಲಂಗಳಂ ಸಿದ್ಧರಿಸುತಿಪ್ಪುದು॥

— ವೈದಿಕಶಾಸ್ತ್ರ. —

ಬಳಿಕ ಜೈಮಿನಿ ಅಕ್ಷಪಾದ ಕಣಾದರೆಂಬ ಋಷೀಶ್ವರರಿಂ ಕ್ರಮದಿಂದುಕ್ತವಾದ ಪೂರ್ವಮೀಮಾಂಸನ್ಯಾಯ ವೈಶೇಷಿಕಗಳೆಂಬ ದೃಷ್ಟಾದೃಷ್ಟ ಫಲಂಗಳುಳ್ಳವೇ ವೈದಿಕಶಾಸ್ತ್ರತ್ರಯಮೆನಿಸುವದು.

— ಪೂರ್ವಮೀಮಾಂಸೆ. —

ಅವರೊಳ್ ಪೂರ್ವಮೀಮಾಂಸೆಯು ತಾತ್ಪರ್ಯನಿರ್ಣಾಯಕವಾದ ಉಪಕ್ರಮಾದಿಷಡ್ವಿಧಲಿಂಗಗಳಂ ವೇದವಾಕ್ಯವಿಚಾರ ಪೂರ್ವಕವಾಗಿ ಜ್ಯೋತಿಷ್ಟೋಮಾದಿ ಯಾಗಪ್ರಮುಖ ವಿಧಾನಕ್ರಮವಂ ನಿರ್ವಹಿಸುವದರಿಂ ಕರ್ಮಕಾಂಡಮೆನಿಸುವದು.

— ವೈದಿಕನ್ಯಾಯಶಾಸ್ತ್ರ. —

ಗೌತಮೋಕ್ತನ್ಯಾಯವು। ಪ್ರಮಾಣ, ಪ್ರಮೇಯ,ಸಂಶಯ,ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ. ವಾದ,ಜಲ್ಪ ವಿತಂಡಾ, ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲೀಪ್ರಪಂಚಕ್ಕೆ। ಪರಮೇಶ್ವರ । ಕರ್ತೃಕತೆಯಂ ನಿಶ್ಚಯಿಸುವದು.

— ವೈದಿಕ ವೈಶೇಷಿಕಶಾಸ್ತ್ರ. —

ಕಾಣಾದನೆಂಬ | ವೈಶೇಷಿಕಶಾಸ್ತ್ರವೇ, ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳೆಂಬ ಪದಾರ್ಥ ಸಪ್ತಕಮಂ ಪ್ರತಿಪಾದಿಸುವದರಿಂ ಪ್ರಪಂಚಸ್ವರೂಪಮಂ ವಿವರಿಸಿ ವಿಭಾಗಿಸುತಿರ್ಕುಂ.

— ಅಧ್ಯಾತ್ಮ ಶಾಸ್ತ್ರತ್ರಯ. —

ಬಳಿಕ | ಕಪಿಲ ಪತಂಜಲ ವ್ಯಾಸರೆಂಬ ಮುನಿಗಳಿಂ ಕ್ರಮದಿಂ-ನಿರೂಪಿತಗಳಾದ- ಸಾಂಖ್ಯ ಪಾತಂಜಲ ವೇದಾಂತಗಳೆಂಬ | ಸಾಂಖ್ಯಸೂತ್ರ | ಯೋಗಸೂತ್ರ ಬ್ರಹ್ಮಸೂತ್ರತ್ರಯವೇ ಸಭಾಷ್ಯಪ್ರಕರಣ | ಟೀಕಾಪರಿಷ್ಕೃತವಾಗಿ-ಸ್ವಾತ್ಮಜ್ಞಾನಫಲೀಭೂತಮೋಕ್ಷ ಪ್ರತಿಪಾದಕವಾಗಿರುವದರಿಂದ ಅಧ್ಯಾತ್ಮಶಾಸ್ತ್ರತ್ರಯಮೆನಿಸುವದು.

— ಸಾಂಖ್ಯಶಾಸ್ತ್ರ. —

ಸಾಂಖ್ಯವು ನಿತ್ಯನಿರ್ಲಿಪ್ತಾತ್ಮಸನ್ನಿಧಾನದಿಂ ಗುಣತ್ರಯಾತ್ಮಕಪ್ರಕೃತಿ ಕರ್ತೃಕ ಮಹದಾದಿಪಂಚವಿಂಶತಿ ತತ್ವಾತ್ಮಕ ಪ್ರಪಂಚವಾಗಿ ವ್ಯವಹರಿಸುವದೇ ಸಂಸಾರಬಂಧವೆಂಬುದರಿಂ | ಸತ್ವಾದಿಗುಣತ್ರಯಾನುಕ್ರಮದಿಂ| ಶ್ಲೇಷ್ಮಪ್ರಕೃತಿ ಪಿತ್ತಪ್ರಕೃತಿ ವಾತಪ್ರಕೃತಿಗಳುಳ್ಳ | ಶಾಂತ ಕ್ರೋಧ ಮೂಢತಾದಿಪ್ರಧಾನರಾದ| ಉತ್ತಮ, ಮಧ್ಯಮ, ಅಧಮ ಪುರುಷತ್ರಯದವರ್ಣರೀತಿ ಮೊದಲಾದವುಗಳಂ ಭಾವಿಸುವದು.

ಪಾತಂಜಲ ಶಾಸ್ತ್ರಂ.

ಪಾತಂಜಲವು | ಯಮಾದ್ಯಷ್ಟಾಂಗ ಯೋಗಸಾಧನದಿಂ | ಮನೋನಿಶ್ಚಲತೆಯಂ | ನಿಶ್ಚಲಪರಿಪಕ್ವಾಂತಃಕರಣಂಗೆ | ಮೋಕ್ಷಸಿದ್ಧಿಯಂ | ಬೋಧಿಸಿಸಾಧಿಸುವದು.

— ಉತ್ತರಮೀಮಾಂಸೆ. —

ಉತ್ತರಮೀಮಾಂಸೆಯು | ಸರ್ವೋಪನಿಷದರ್ಥ | ಪ್ರತಿಪಾದಕವಾದವೇದಾಂತಶಾಸ್ತ್ರವೆಂತಲೂ | ಬ್ರಹ್ಮವಿದ್ಯೆಯೆಂತಲೂ| ಪಾರಂಪರ್ಯಪ್ರಸಿದ್ಧವಾಗಿ ದ್ವೈಷ್ಟತಪ್ರಪಂಚಕ್ಕೆ | ಮಿಥ್ಯಾತ್ವವಂ ಸಾಧಿಸುವದರಿಂ | ದ್ವೈತಭಾವೋಪಲಕ್ಷಿತ | ಬ್ರಹ್ಮಾತ್ಮೈಕ್ಯಮಂ ಉಪದೇಶಿಪ್ಪುದಾಗಿಜ್ಞಾನಿಗಳಿಗಭಿಮತವಾಗಿರ್ಕುಂ.

— ಅಧ್ಯಾತ್ಮಮತಭೇದ. —

ಭಾಸ್ಕರೀಯ | ಮಾಯಾವಾದ ಶಬ್ದಬ್ರಹ್ಮವಾದ ಕ್ರೀಡಾಬ್ರಹ್ಮವಾ

ದವೆಂದು ಸಾಮಾನ್ಯತಃ ನಾಲ್ಕುತೆರನಾಗಿಯುಂ, ಅನಿರ್ವಚನೀಯಖ್ಯಾತಿ ಮುಂತಾದತತ್ತದನುಭವಗಳಂ । ಸಂವಳಿತವಾಗಿಯುಂ । ಪ್ರಚುರಗೊಂಡಿರ್ಪುದು.

— ಅತಿಮಾರ್ಗಿಕಶಾಸ್ತ್ರ. —

ಬಳಿಕ । ಮಾಯಾತತ್ವ, ವಿದ್ಯಾತತ್ವ ಕಾಲತತ್ವತ್ರಿವಾದಿಗಳಾದರುದ್ರರಿಂ ವಿರಚಿತಂಗಳಾದ । ಪಾಶುಪತ-ಕಾಪಾಲಿಕ-ಮಹಾವ್ರತಂಗಳೆಂಬವೇ-ಅತಿಮಾರ್ಗಿಕ ಶಾಸ್ತ್ರತ್ರಯಮಾಗಿರ್ಪುದು । ಅದರೊಳ್-ಪಾಶುಪತವು-ಮಾಯಾಕರ್ಮನಾಮಕ ಪಾಶದ್ವಯಾದಿಗಳಂ। ನಿರ್ವಹಿಸುವದು ಕಾಪಾಲಿಕವು । ನರಕಪಾಲಭಿಕ್ಷಾಟನಾದಿಗಳಂ । ವರ್ಣಿಸುವದು। ಮಹಾವ್ರತವು । ಅಸ್ಥಿಧಾರಣಾದಿಗಳಂ ವಿವರಿಪ್ಪುದು.

— ಮಾಂತ್ರಿಕಶಾಸ್ತ್ರ.—

ಬಳಿಕ । ಪರಶಿವಪ್ರಣೀತಮಾದಮಾಂತ್ರವೇ । ಮೋಕ್ಷಾಂಗವಾದಕ್ರಿಚರ್ಯೆ-ಯೋಗ-ಜ್ಞಾನಾದಿಗಳಂ ಪ್ರಮಾಣಿಸುತಿರ್ಕುಂ.

— ಆತ್ಮಪ್ರತಿಪಾದನೆ. —

ಮತ್ತಮಾಸಮಸ್ತಮತಾಂತರಂಗಳಲ್ಲಿ ಪೇಳುವಾತ್ಮಸ್ವರೂಪವೆಂತೆನೆ ದೇಹವೇ ಆತ್ಮಸ್ವರೂಪವೆಂಬರು- ಚಾರ್ವಾಕರು-ಇಂದ್ರಿಯಂಗಳೇ-ಆತ್ಮನೆಂಬರು ಚಾರ್ವಾಕೈಕದೇಶಿಗಳು ಪ್ರಾಣವೇ ಆತ್ಮನೆಂಬರು ಸೌಗತರು-ದೇಹಾದಿವಿಲಕ್ಷಣನಾದಾತ್ಮನು ದೇಹಪರಿಮಿತನಾಗಿ ಸಂಕೋಚ ವಿಕಾಸಧರ್ಮಯುಕ್ತನೆಂಬರು ಜೈನರಲ್ಲಿ ಬುದ್ಧಿಯೇ ಆತ್ಮನೆಂಬರು ಬೌದ್ಧರು-ಆನಂದಮಾತ್ರವಂ ಆತ್ಮನೆಂಬರು ಕೌಳ ಯಾಮಳ ಶಾಕ್ತೇಯರುಗಳು-ಆತ್ಮನು ನಾಡೀಮಧ್ಯಗತನಾಗಿ ಅಣುಪರಿಮಾಣನೆಂಬರು ಪಾಂಚರಾತ್ರರು-ಆತ್ಮಮದೇಹಪುತ್ರಾದಿರೂಪನೆಂಬರು ಲೌಕಿಕರು ಆತ್ಮನುಸ್ವತಃ ಪ್ರಮಾಣಜ್ಞಾನಸಮೇತನೆಂಬರುಮೀಮಾಂಸಕಭೇದವಾದಭಾಟ್ಟ-ಪ್ರಾಭಾಕರರುಗಳು ಆತ್ಮನು ಗಗನದಂತೆ ಪರಮಮಹತ್ಪರಿಮಾಣನಾಗಿ ಪಾಷಾಣದಂತೆ ಜಡರೂಪನಾದೊಡಂ ಮನಸ್ಸಂಯೋಗಾದಿ ಬುಧ್ಯಾದಿಂಕಿಂಚಿದ್ಧರ್ಮಯುಕ್ತನೆಂಬರು ನೈಯಾಯಿಕವೈಶೇಷಿಕರುಗಳು-ಆತ್ಮನುಅಸಂಗಚಿನ್ಮಾತ್ರನೆಂಬರು ಸಾಂಖ್ಯಪಾತಂಜಲರುಗಳು-ಆತ್ಮನುಜ್ಞಪ್ತಿಸತ್ತಾಮಾತ್ರ-ಶುದ್ಧಾದ್ವಿತೀಯನೆಂಬರು ವೇದಾಂತಿಗಳು-ಆತ್ಮನು-ನಿತ್ಯವ್ಯಾಪಕಚೈತನ್ಯರೂಪನೆಂಬರು ಪಾಶುಪತ-ಕಾಪಾಲಿಕ-ಮಹಾವ್ರತರುಗಳು-

ಆತ್ಮನು ನಿತ್ಯವ್ಯಾಪಕಜ್ಞಾನ-ಕ್ರಿಯಾರೂಪನೆಂಬರು ಮಾತ್ರಸಂಜ್ಞಾಕಸಿದ್ಧಾಂತಿಗಳೆಂದು ಪೃಥಕ್ಕರಿಸಲ್ಪೇಳ್ಕುಂ.

— ಮೋಕ್ಷಪ್ರತಿಪಾದನೆ —

ಮತ್ತಮಾಸಕಲವಾದಿಗಳಿಂ|ಪ್ರತಿಪಾದಿಸಲ್ಪಟ್ಟಮೋಕ್ಷಮೆಂತಸೆ|ಮತ್ತರಣಾವೇ । ಮೋಕ್ಷವೆಂಬರು । ಚಾರ್ವಾಕರು ಅಲೌಕಿಕಾಕಾಶಮಧ್ಯದೊಳು ರೋತ್ತರಗಮನವೇಮೋಕ್ಷವೆಂಬರುಜೈನರು।ಸುಖದುಃಖಾದಿಗಳಸೋಂಕಿಲ್ಲದಶುದ್ಧಬುದ್ಧಿಸಂಸಕ್ತಿಯೇ ಮೋಕ್ಷವೆಂಬರುಬೌದ್ಧರು । ಆಕಾಶಗಮನಾದಿ ಸಿದ್ಧಿಪ್ರಾಪ್ತಿಯೇ ಮೋಕ್ಷವೆಂಬರು ಕೌಳಯಾಮಳರುಗಳು । ಆನಂದ। ಪ್ರಾಪ್ತಿಯೇ ಮೋಕ್ಷವೆಂಬರುಶಾಕ್ತೇಯರು । ವಾಸುದೇವಾತ್ಮಕಪ್ರಕೃತಿಯಲ್ಲಿ ಸ್ವರೂಪಹಾನಿಇಲ್ಲದಡಗಿಹದೇಮೋಕ್ಷವೆಂಬರುಪಾಂಚರಾತ್ರರು । ಇಹಪರಂಗಳಲ್ಲಿಪುತ್ರಭಾರ್ಯಾದಿಗಳೊಡಗೂಡಿ ವ್ಯಾಧ್ಯಾದಿದುಃಖವಿಲ್ಲದೆ ಸುಖದಿಂದಿಹುದೇಮೋಕ್ಷವೆಂಬುವರುಲೌಕಿಕರು । ಸ್ವರ್ಗಾದಿಪದಪ್ರಾಪ್ತಿಯೇ ಮೋಕ್ಷವೆಂಬುವರುಪೂರ್ವಮೀಮಾಂಸಕರು॥ ಆತ, ಶರೀರ, ಇಂದ್ರಿಯಾದಿಕವೆಂಬಇಪ್ಪತ್ತೊಂದುದುಃಖಗಳ ಅತ್ಯಂತನಾಶದಿಂ ಪಾಷಾಣಪ್ರಾಯನಾಗಿಹುದೇ ಮೋಕ್ಷವೆಂಬುವರುನ್ಯಾಯವೈಶೇಷಿಕರುಗಳು। ಪ್ರಕೃತಿಪುರುಷವಿವೇಕದಿಂದ ಅವಿದ್ಯಾನಾಶವೇ ಮೋಕ್ಷವೆಂಬುವರುಸಾಂಖ್ಯರು । ಯೋಗಾಭ್ಯಾಸಬಲದಿಂ ಮನೋಲಯದ್ವಾರದಿಂದ ಅಜ್ಞಾನನಪಳಿವುದೇ ಮೋಕ್ಷವೆಂಬುವರುಪಾತಂಜಲರು । ಚಿನ್ಮಾತ್ರಬ್ರಹ್ಮಾತ್ಮಕತ್ವಜ್ಞಾನದಿಂವ್ಯಾವಹಾರಿಕವಾದ್ವೈತಬಂಧನಿವೃತ್ತಿಯೇಮೋಕ್ಷವೆಂಬುವರುವೇದಾಂತಿಗಳು । ಮಹಾಹೇಶ್ವರತ್ವದಿಂದೀಶ್ವರತ್ವವನನ್ಯಗ್ರಿತನ್ಮಾತ್ಮಸುಜ್ಞಪ್ತಿಮಾತ್ರನಾಗಿರ್ಪುದೇಮೋಕ್ಷವೆಂಬುವರುಪಾಶುಪತರು । ಕರ್ತೃತ್ವಾಭಿಮಾನವೇ ಸಂಸಾರವಪ್ಪುದರಿಂದವನುಳಿದುಜ್ಞಪ್ತಿಮಾತ್ರದಿಂದಿರ್ಪುದೇಮೋಕ್ಷವೆಂಬುವರು ಕಾಪಾಲಿಕಮಾಹಾವ್ರತರುಗಳು । ಆತ್ಮಂಗೆಷಡಧ್ವಾತೀತಶಿವಸಮಾನತ್ವವೇಮೋಕ್ಷಮೆಂಬುವರುಸಿದ್ಧಾಂತಿಗಳೆಂದುವಿವೇಕಿಸಬೇಳ್ಕುಂ॥

— ಮತಾಂತರಭೇದ. —

ಬಳಿಕ-ವಾದಿಗಳಲ್ಲಿ, ಚಾರ್ವಾಕ, ಜೈನ, ಬೌದ್ಧ. ಮೀಮಾಂಸಕ, ಸಾಂಖ್ಯ, ರೆಂಬರೈವರೇ ನಿರೀಶ್ವರವಾದಿಗಳು । ಮಿಕ್ಕವರೆಲ್ಲರೂ ಸೇಶ್ವರವಾದಿಗಳು। ವೇದಾಂತಿಯೋರ್ವನೇ ಅಭೇದವಾದಿಯೆಂಬ॥

— ಚತುರ್ದಶ ವಿದ್ಯೆಗಳು. —

ಬಳಿಕಿಂತುಪೇಳ್ದ ಸಕಲ ಶಾಸ್ತ್ರಗಳೊಳಗೆ, ವೇದಗಳು ನಾಲ್ಕು ವೇದಾಂಗಗಳಾರು, ನ್ಯಾಯಮೀಮಾಂಸೆಗಳೆರಡು ಸ್ಮೃತಿಪುರಾಣಗಳೆರಡುಂ ಕೂಡಿ ಹದಿನಾಲ್ಕು ವಿದ್ಯೆಗಳೆನ್ನಿಸಿಕೊಳ್ಳುತಿರ್ಕುಂ॥

—* ಸೂತ್ರವಿಚಾರ. *—

ಮತವಾ ಚತುರ್ದಶವಿದ್ಯೆಗಳೊಳಗೆ ಮೀಮಾಂಸೆಯೆಂಬುವದೀವಿಗೆ ವಿಶೇಷವಾಗಿ ಇಪ್ಪತ್ತಧ್ಯಾಯಮೆನಿಸಿ ಕರ್ಮಾರ್ಥ ಪ್ರತಿಪಾದಕತ್ವದಿಂ ದ್ವಿಭಾಗವಾಗಿಹುದದರೊಳಗೆ ಮೊದಲನೆಯ ಭಾಗವೇ ಜೈಮಿನಿಸೂತ್ರರೂಪವದಿಂ ದ್ವಾದಶಾಧ್ಯಾಯಮೆನಿಸಿ ಕರ್ಮಕರ್ತೃ ಪ್ರತಿಪಾದಕವಾಗಿ ಲೋಕವೇದಾಧಿಕಗಣಮೆಂಬುವದು ಮೊದಲಾದಸಹಸ್ರಾಧಿಕರಣಾತ್ಮಕಶಾಸ್ತ್ರನ್ಯಾಯದಿಂ ಪೂರ್ವಮೀಮಾಂಸೆ ಯೆನ್ನಿಸಿಕೊಂಬುವದಾ ಜೈಮಿನಿಸೂತ್ರಕ್ಕೆ ಶಾಬರಮೆಂಬ ಭಾಷ್ಯಮಾಡಲ್ಪಟ್ಟಿತು। ಮತ್ತಮಾ ಮೀಮಾಂಸಾ ಶಾಸ್ತ್ರಕ್ಕೆ ಭಟ್ಟಾಚಾರ್ಯರಿಂ ವಾರ್ತಿಕರೂಪವಾಗಿ ಭಾಟ್ಟವೆಂಬುವದೊಂದು ಮತಾಂತರ ರಚಿತವಾಯಿತು। ಬಳಿಕ ಭಟ್ಟಾಚಾರ್ಯರಶಿಷ್ಯನಾದ ಪ್ರಭಾಕರಗುರುಸಿಂದಾ ಶಾಬರ ಭಾಷ್ಯಕ್ಕೆ ವ್ಯಾಖ್ಯಾನರೂಪವಾಗಿ ಪ್ರಭಾಕರವೆಂಬುವದೊಂದು ಮತಾಂತರಪೇಳಲ್ಪಟ್ಟಿತು। ಬಳಿಕೆರಡನೆಯ ಭಾಗವೇ ಬ್ರಹ್ಮಾರ್ಥ ಪ್ರತಿಪಾದಕತ್ವದಿಂ ದುತ್ತರ ಮೀಮಾಂಸೆಯೆನ್ನಿಸಿಕೊಂಡು ವ್ಯಾಸಸೂತ್ರ ರೂಪದಿಂ ದೆಂಟಧ್ಯಾಯಮಾಗಿಹುದದರೊಳಗೆ ಪೂರ್ವದನಾಲ್ಕಧ್ಯಾಯಮೇ ದೇವಕಾಂಡಮೆನಿಸಿಕೊಂಬುವದದರಲ್ಲಿ ಮಂತ್ರವಾದದಂತೆ ದೇವತಾದಿಲಕ್ಷಣವೇ ಬಲಭದ್ರರಾಮಸಿಂ ಪ್ರತಿಪಾದಿಸಲ್ಪಟ್ಟಿತು। ಬಳಿಕುತ್ತರವಾದ ನಾಲ್ಕಧ್ಯಾಯಮೇ ಬ್ರಹ್ಮಕಾಂಡಮೆನಿಸಿಕೊಂಬುವದಾ ಸೂತ್ರಕ್ಕೆ ವ್ಯಾಸತಾತ್ಪರ್ಯಾನುಸಾರ ಬ್ರಹ್ಮಾತ್ಮೈಕ್ಯ ಪ್ರತಿಪಾದಕವಾಗಿ ಶಂಕರಗುರು ಭಗವತ್ಪಾದಾಚಾರ್ಯರಿಂದ ಅಧ್ಯಾಸಭಾಗ ಪೂರ್ವಕವಾಗಿ ವೇದಾಂತಭಾಷ್ಯಂಗೈಯಲ್ಪಟ್ಟಿತು। ಬಳಿಕಾ ಭಾಷ್ಯಕ್ಕೆ ಟೀಕಾರೂಪವಾಗಿ ವಿವರಣಾಚಾರ್ಯರಿಂ ವಿವರಣಮಾಡಲ್ಪಟ್ಟಿತು ಮತ್ತಮಾ ಶಂಕರಭಾಷ್ಯಕ್ಕೆ ವೃತ್ತಿ। ಪಂಚಪಾದಿಕೆ, ರಾಮಾನಂದೀಯ, ಬ್ರಹ್ಮವಿದ್ಯಾಭರಣ. ಮುಂತಾದ ಅನೇಕವ್ಯಾಖ್ಯಾನಗಳು. ತಚ್ಛಿಷ್ಯರಿಂ ರಚಿಸಲ್ಪಟ್ಟವಾ ಶಂಕರಭಾಷ್ಯಕ್ಕೆ ತಾತ್ಪರ್ಯಬೋಧಕವಾಗಿ ವಾಚಸ್ಪತಿಮಿಶ್ರರಿಂ ಭಾಮತಿಯೆಂಬ ವ್ಯಾಖ್ಯಾನ ಮಾಡಲ್ಪಟ್ಟಿತ್ತದಕಲ್ಪತರುವೆಂಬ ವ್ಯಾಖ್ಯಾನದಕೆ ಕಾಂಸ್ಯುಭಪಂಬಿಕ್ಷ ಈಮೇರೆ. ಸಿದ್ಧಾಂತಿತವಾದ

ಗ್ರಂಥಜಾತವೇ ವೇದಾಂತಶಾಸ್ತ್ರಮೆನ್ನಿಸಿಕೊಳ್ಳುತಿರ್ಕುಂ॥

—* ವೇದಾಂತವಿಷಯಕ್ರಮ, *

ಅನಂತರಮೀಳಾ ವೇದಾಂತಶಾಸ್ತ್ರದರ್ಥವಿಸ್ತಾರಮೆಂತೆಂದೊಡೆ ಆಶೀರ್ವಾದ ನಮಸ್ಕಾರ-ವಸ್ತುನಿರ್ದೇಶವೆಂಬವೀಶಾಸ್ತ್ರಾರಂಭದಲ್ಲಿ ಮಾಳ್ಪ ಮಂಗಳಾಚರಣ ತ್ರಯಮಾಗಿರ್ಕುಂ॥

— ಸೂತ್ರಲಕ್ಷಣ. —

ಬಳಿಕ ಸರ್ವೋತ್ಕೃಷ್ಟಾರ್ಥನಿರ್ಣಯಕಮಾಗಿ ಶ್ರುತಿಲಿಂಗಾದಿಷಾರದಾರ್ಢ್ಯಪೂರ್ವಪಾಠ್ಯಾದಿದೋಷರಹಿತತ್ವದಿಂ ಬಹ್ವರ್ಥಸೂಚಕಮಪ್ಪಂತೆ ಮಿತಾಕ್ಷರಮಾಗಿ ವಿಶ್ವಾಚಾರ್ಯರಿಂ ರಚಿಸಲ್ಪಟ್ಟ ವಾಕ್ಯಜಾತವೇ ಸೂತ್ರಮಾಗಿರ್ಪುವು ॥

— ಭಾಷ್ಯಲಕ್ಷಣ. —

ಮತ್ತಮಾಸೂತ್ರಕ್ಕೆ ಸೂತ್ರಾನು ಕಾರಿಗಳಾದವಗಳಿಂದ ವಿರುದ್ಧಮಾಗಿಲಿಂಗಷಟ್ಕದಿಂದರ್ಥಮೆಂವಿವರಿಸುವಸ್ವಪದವರ್ಣನೆಯಿಂ ದೊಡಗೂಡಿಪ್ಪುದೇ ಭಾಷ್ಯಮೆನಿಕ್ಕುಂ ॥

— ಅಧಿಕರಣಲಕ್ಷಣ. —

ಮತ್ತಮಾಭಾಷ್ಯದೊಳ್-ವಿಷಯ ಸಂಶಯ ಪೂರ್ವಪಕ್ಷ ಸಿದ್ಧಾಂತ-ಸಂಗತಿಗಳೆಂಬಪಂಚಾವಯವಂಗಳಿಂ ದೊಡಗೂಡಿದ ನ್ಯಾಯವೇ ಅಧಿಕರಣಮಾಗಿಹುದು ॥

— ವ್ಯಾಖ್ಯಾನಲಕ್ಷಣ. —

ಮತ್ತಮೆಾಮೂಲಗ್ರಂಥಸ್ಥಮಾದಪದಪದಾರ್ಥವಾಕ್ಯಯೋಜನೆಪ್ರಶ್ನೆ ಪರಿಹಾರಗಳೆಂಬವೇ ವ್ಯಾಖ್ಯಾನಪಂಚಲಕ್ಷಣಂಗಳು ॥

— ಅನ್ವಯಲಕ್ಷಣ. —

ಬಳಿಕಾವ್ಯಾಖ್ಯಾನಾದಿಗಳಲ್ಲಿ, ವಿಶೇಷಣ, ವಿಶೇಷ್ಯ, ಕರ್ತೃ, ಕರ್ಮ, ಕ್ರಿಯೆಗಳಸಂಬಂಧವೇ ಅನ್ವಯಪಂಚಲಕ್ಷಣಂಗಳು ॥

— ಅನುಬಂಧಚತುಷ್ಟಯ. —

ಬಳಿಕ ಶಾಸ್ತ್ರದೊಳ್- ವಿಷಯ-ಸಂಬಂಧ-ಪ್ರಯೋಜನ-ಅಧಿಕಾರಿಗಳೆಂಬವೇ- ಅನುಬಂಧಚತುಷ್ಟಯಮಾಗಿಪ್ಪುದದರೊಳು ಜೀವಬ್ರಹ್ಮೈಕ್ಯವೇಶಾಸ್ತ್ರಕ್ಕೆ ವಿಷಯಮೆನಿಸುವದು-ಬ್ರಹ್ಮ ಶಾಸ್ತ್ರಂಗಳಿಗೆ ಪ್ರತಿಪಾದ್ಯ ಪ್ರತಿಪಾದಕಭಾವವೇ ಸಂಬಂಧಮೆನಿಸುವುದು ಸಕಲದುಃಖನಿವೃತ್ತ್ಯಭಿನ್ನ

ಮಾದಸ್ವಸ್ವರೂಪಾವಸ್ಥಾನನಿತ್ಯಾನಂದಾತ್ಮಕ ಮೋಕ್ಷವೇಪ್ರಯೋಜನ ವೆನಿಸುವದು ॥

— ಅಧಿಕಾರಿಲಕ್ಷಣ. —

ಮತ್ತೀವೇದಾಂತಶ್ರವಣಮನನ ನಿಧಿಧ್ಯಾಸನಗಳಿಗೆ ಧರ್ಮಜಿಜ್ಞಾಸಾ ಪೂರ್ವಕಮಾಗಿ ಕರ್ಮಕಾಂಡಸಿದ್ಧನಾದಸಭ್ರೋತ್ರಿಯನೇ ಅಧಿಕಾರಿಯೆಂ ದುಪೇಳೊಡಂಬ್ರಹ್ಮಜ್ಞಾನಸಾಧ್ಯಮಾ ದಮೋಕ್ಷವುಜಾತ್ಯಾದಿನಿರ್ಬಂಧಗಳಿ ಲ್ಲದೇ ಪರಿಪರಿಕ್ವಾಂತಃಕರಣೈಕಲಭ್ಯವಾಗಿರುವದರಿಂಸಾಧನಚತುಷ್ಟಯ ಸಂಪನ್ನನಾದವನೇಬ್ರಹ್ಮವಿದ್ಯೆಗೆಅಧಿಕಾರಿಯೆಂದುಸಿಧಾಂತಿತಮಾಗಿರ್ಕುಂ॥

— ಸಾಧನಚತುಷ್ಟಯ. —

ಬಳಿಕ ನಿತ್ಯಾನಿತ್ಯವಸ್ತು ವಿವೇಕ ಇಹಮುತ್ರಾರ್ಥ ಫಲಭೋಗವಿರಾಗ ಶಮಾದಿಷಟ್ಕಸಂಪತ್ತಿ ಮುಮುಕ್ಷುತ್ವವೆಂಬವೆಸಾಧನಚತುಷ್ಟಯಮಾ ಗಿರ್ಪುದದರೊಳ್ ಸಚ್ಚಿದಾನಂದರೂಪನಾದಆತ್ಮನೊರ್ವನೇನಿತ್ಯನು। ಅ ನ್ಯತಜಡದುಃಖಾತ್ಮಕಮಾದದ್ವೈತಪ್ರಪಂಚವೆಲ್ಲಮಿಥ್ಯೆಯೆಂದು ವಿಚಾರಪ ರೀಕ್ಷೆಗಳಿಂದದೃಢತರವಾಗಿ ತಿಳಿವುದೇ ನಿತ್ಯಾನಿತ್ಯವಸ್ತುವಿವೇಕವೆನಿಸುವದು ಇಹಪರಂಗಳಲ್ಲಿ ಸ್ರಕ್ಚಂದನ ಧನವನಿತಾದಿವಿಷಯಂಗಳೆಲ್ಲಂಕರ್ಮಜನ್ಯಮ ಪ್ಪುದರಿಂದ ಅನಿತ್ಯಮಾಗಿಯುಂ ಸಂಪಾದಿಸುವಾದಿ ಭೋಗಿಸುವಂಶ್ಯಂಗಳ ಲ್ಲಿ ವಿಚಾರಿಸಲು ಕಷ್ಟಸಾಧ್ಯಮಾಗಿರುವದರಿಂವೈರಸ್ಯಕಾರಣಮಾಗಿಯುಂ ಅರಿಷಡ್ವರ್ಗ ಸನ್ನಿಹಿತಮಾಗಿ ಜ್ಞಾನಪ್ರತಿಬಂಧಕಮಾಗಿರುವದರಿಂ ನಿ ತ್ಯಾನಂದಪದಪ್ರತಿಬಂಧಕವಾಗಿ ಸಂಸೃತಿಯು ದುಃಖರೂಪವೆ, ದರಿತು, ಶ್ವಾವಾಂತಾಶನಮಾತ್ರ ಪುರೀಷದಂತೆ ಭೋಗದೊಳ್ ಮನವೆಳಸದೆಸ ನ್ಯಾಸಿಯಾಗಿಹುದೇ ಇಹಾಮುತ್ರಾರ್ಥಫಲಭೋಗವಿರಾಗವೆಂಬಸಾಧನ ವೆನಿಸುವದು ಅದರೊಳು ಅಂತಃಕರಣನಿಗ್ರಹವೇಶಮುಪಕ್ಕುಂ ಬಾಹ್ಯಕರ ಣನಿಗ್ರಹವೇದಮುವಕ್ಕುಂಪ್ರಾರಬ್ಧಸಿದ್ಧಮಾದ ತಾಪತ್ರಯಶೀತೋಷ್ಣಾ ದಿದುಃಖಂಗಳಂ ಸೈರಿಪುದೇತಿತಿಕ್ಷೆಯಕ್ಕುಂ॥ಕಾಮಕ್ರೋಧಾದಿಕಲುಷಮಾ ಗದೆ ಸಾತ್ವಿಕಮಾದಚಿತ್ತಸ್ಥೈರ್ಯವೇಸಮಾಧಾನವಾಗಿರುವುದುಗುರುವೇ ದಾಂತವಾಕ್ಯಂಗಳೊಳು ದೃಢತರವಾದವಿಶ್ವಾಸವೆಶ್ರದ್ಧೆಯೆನಿಸುವದು ಪರ ಮೇಶ್ವರನೊಳಗಾರಾಧ್ಯತ್ವತನ್ನೊಳಗಾರಾಧಕತ್ವ ಗುರುವಿನೊಳುಸೇವ್ಯ ತ್ವತನ್ನೊಳು ಸೇವಕತ್ವ ವೇದಾಂತಶಾಸ್ತ್ರದೊಳ್ ಶಾಸನತ್ವ ತನ್ನೊ ಳುಶಾಸ್ಯತ್ವವೀಮೇರೆ ನಂಬಿರುವದೇ ಭಕ್ತಿಯೆನಿಸುವದು. ತುಂಬಿದಮನೆ

ಯುಂಕೆಚ್ಚಿಂದಾವರಿಸಿಯುರಿಗೊಳಲೊಳಗಿಪ್ಪ ಕುಟುಂಬಿಗನುನುಡದಿವುಕ್ಕಳು ಮೊದಲಾದವಂಬಿಟ್ಟು ತಾನುಳಿದೋಡುವಂತೆ. ಜನನಮರಣ ದುಃಖ ಪ್ರವಾಹ ರೂಪವಾದಸಂಸಾರತಾಪವಂ ಸಹಿಸಲಾರದೆ ಮೋಕ್ಷವಂ ಕಾಂಕ್ಷಿಸಿಸರ್ವಸನ್ಯಸ್ತ ನಾಗುವದೇ ಮುಮುಕ್ಷುತ್ವವೆಂಬ ಮುಖ್ಯಸಾಧನವೆಂದಿರುವದು॥

— ಗುರುಲಕ್ಷಣ. —

ಬಳಿಕ ವಿಧವದಧೀತ ವೇದಾಂತನಿಷ್ಠಾಪರನಾಗಿ ಶರಣಾಗತನಾದಶಿಷ್ಯಂಗೆಮರಳಿಸಂಶಯಮಂಕುರಿಸದಂತೆ ತತ್ವೋಪದೇಶವಂಗೈದು ಅಜ್ಞಾನವಂ ಪರಿಹರಿಸುವನೇ ಗುರುವೆಂದೆನ್ನಿಸಿಕೊಳ್ಳುವನು.

— ಗುರುಸೇವಾಲಕ್ಷಣ. —

ಬಳಿಕ ಸಾಧನಸಂಪನ್ನ। ನಾದಧಿಕಾರಿಯುಮಾಳ್ಪ। ಸದ್ಗುರುಸೇವೆಯಾವದೊಡೆ। ಆಪ್ತ। ಅಂಗ। ಸ್ಥಾನ। ಸದ್ಭಾವವೆಂದು। ನಾಲ್ಕುತೆರನಾಗಿಹದದರಲ್ಲಿ। ಗುರುವಿಗೆ। ಅನುಕೂಲ। ವೃತ್ತಿಯೇ। ಆಪ್ತವೆನಿಸುವದು।ಗುರುಪಾದಪ್ರಕ್ಷಾಳನಾದಿಕವೇ। ಅಂಗವೆನಿಸುವದು। ಗುರುವಿನಗೃಹಕ್ಷೇತ್ರರಕ್ಷಣಾದಿ। ಕವೇಸ್ಥಾನವೆನಿಸುವದು। ಗುರುವೇಸಾಕ್ಷಾತ್ಪರಮೇಶ್ವರ। ನೆಂಬ ವಿಶ್ವಾಸವೇ। ಸದ್ಭಾವವೆನಿಸುವದು.

— ಅಧಿಕಾರಿಪ್ರಭೇದ. —

ಬಳಿಕ ಕರ್ಮಕಾಂಡಿ-ಭಕ್ತಿಕಾಂಡಿ-ಜ್ಞಾನಕಾಂಡಿಯೆಂಬವರೇ। ಮೂವ್ವರಧಿಕಾರಿಗಳುಂಟವರಲ್ಲಿ-ದೇಹಗೃಹಕೃತ್ಯಾದಿ। ಗಳಲ್ಲಿ-ಕ್ರಮದಿಂನಾನು। ನನ್ನದೆಂಬಹಂಕಾರ-ಮಮಕಾರಗಳುಳ್ಳಾತನೇ। ಕರ್ಮಕಾಂಡಿಯೆನಿಸುವನು। ಸಕಲಕ್ರಿಯೆಗಳ। ನೀಶ್ವರಾರ್ಪಣಂ। ಗೈವಾತನೇ। ಭಕ್ತಿಕಾಂಡಿಯೆನಿಸುವನು-ಸರ್ವಕರ್ಮಸಾಕ್ಷಿಕನುತಾನೆಂಬಾತನೇ।ಜ್ಞಾನಕಾಂಡಿಯಪ್ಪಂ

— ಪಂಚಾಧಿಕಾರಿಗಳು. —

ಬಳಿಕ। ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢರೆಂದು। ಉತ್ತರೋತ್ತರ ವಿಶಿಷ್ಟವಾದಅಧಿಕಾರಿ-ಪಂಚವಿಧಂಗಳಲ್ಲಿ-ಮೂಢತನದಿಂ। ತನ್ನಜಾತಿಮಾತ್ರದಕರ್ಮನಿಡಿದ-ಶತಜನ್ಮದಿಂ। ಮುಕ್ತಿನಪ್ರಾಪ್ತನೇ। ಕರ್ಮಿಯೆನಿಸುವನು-ಜಗತ್ಸತ್ಯವೆಂದುತಿಳಿದು। ಬಾಹ್ಯಕರ್ಮನಿಷ್ಠನಾಗಿ ಮೂರುಜನ್ಮಗಳಿಂ ಮುಕ್ತಿನಪ್ರಾಪ್ತನೇ। ಮುಮುಕ್ಷುವೆನಿಸುವನು।ಸ್ವಪ್ನದಂತೆಪ್ರಪಂಚವೆಲ್ಲಂ। ಮಿಥ್ಯಯೆಂದಭ್ಯಂತರದಲ್ಲಿ।ಧ್ಯಾನ್ಯಾದಿಕರ್ಮಯುಕ್ತ

ನಾಗಿ-ಜನ್ಮದ್ವಯದಿಂ। ಮುಕ್ತನಪ್ಪವನೇ। ಅಭ್ಯಾಸಿಯೆನಿಸುವನು। ವ್ಯವಹಾರವೆಲ್ಲವನುಪೇಕ್ಷಿಸಿ। ವಿವೇಕತತ್ಪರನಾಗಿ ಏಕಜನ್ಮದಿಂಮುಕ್ತನಪ್ಪಾತನೇ। ಅನುಭವಿಯೆನಿಸುವನು। ವಿಶ್ವವಿಸ್ಮೃತಿರ್ತೋರೆಪೇಸಾತ್ವಜ್ಞಾನದಿಂ। ಸದ್ಯೋಮುಕ್ತನಪ್ಪಾತನೇ। ಆರೂಢನಪ್ಪಂ॥

— ಪುನರಧಿಕಾರಿತ್ರಯ. —

ಬಳಿಕ ಜಗತ್ತೆಂಬಕಮಲವಲ್ಲರಿಯ ಮೂಲವಾವುದೆಂಬವಿಚಾರಮುಖದಿಂ ಶ್ರೀಗುರುವನೈದಿ ಬ್ರಹ್ಮಜ್ಞಾನಿಯಾಗಿ ಮೋಕ್ಷಮುಂಬಡೆವಾತನೋರ್ವನು। ದೇಹಾದಿಗಳ ನಶ್ವರತ್ವಮಂಕಂಡು ಭೋಗಾಪೇಕ್ಷೆದೊರದು ಶ್ರೀಗುರುವನೈದಿತತ್ವಜ್ಞಾನಿಯಾಗಿ ಮೋಕ್ಷಂಬಡೆವಾತನೋರ್ವನು । ಒಬ್ಬಾನೊಬ್ಬಶ್ರೀಗುರುತನ್ನಶಿಷ್ಯಂಗುಪದೇಶಮಂಗೈದೆಂದುದಂಕೇಳತಾವನ್ಮಾತ್ರದಿಂತಾನಕಸ್ಮಾತ್ ಜ್ಞಾನಿಯಾಗಿ ನಿರ್ವಾಣಂಬಡೆವಾತನೊರ್ವನು। ಇಂತುವಿವೇಕವಿರಕ್ತಿದೈವಗತಿಗಳಿಂ ಮುಕ್ತರಾಗುವರೇ ಬೇರೆಮುವ್ವರಧಿಕಾರಿಗಳಕ್ಕುಂ.

— ಅಷ್ಟಗುರುಲಕ್ಷಣ. —

ಮತ್ತಮಾಶ್ರೀಗುರುವೆ ಸಾಧಕಮಾದ ಶಿಷ್ಯರಧಿಕಾರಭೇದದಿಂ ಬೋಧಕಗುರು, ವೇದಕಗುರು, ನಿಷಿದ್ಧಗುರು, ಕಾಮ್ಯಗುರು, ಸೂಚಕಗುರು, ವಾಚಕಗುರು, ಕಾರಣಗುರು, ವಿಹಿತಗುರು ವೆಂದೆಂಟುತೆರನಾಗಿರ್ಪರವರಲ್ಲಿ ಶಾಸ್ತ್ರಶಬ್ದಾರ್ಥಂಗಳನ್ನೇ ಬೋಧಿಸುವಾತನು ಬೋಧಕಗುರು । ತತ್ವದರ್ಶಕನೇವೇದಕಗುರು। ವಶ್ಯಾಕರ್ಷಣಾದಿಗಳಿಂ ಇಹಲೋಕದಲ್ಲಿ ಸುಖಮಂಪರಲೋಕದಲ್ಲಿ ದುಃಖಂಗಳನೀವಾತನೇನಿಷಿದ್ಧಗುರು। ಪುಣ್ಯಕರ್ಮೋಪದೇಶದಿಂದಿಹಪರಂಗಳಲ್ಲಿಸುಖಪ್ರದಾತನೇಕಾಮ್ಯಗುರು।ವಿವೇಕಮುಖದಿಂ ಶಮದಮಾದಿ ಷಡ್ಗುಣಪ್ರದನೇಸೂಚಕಗುರುವಿಷಯಂಗಳ ಮಿಥ್ಯಾತ್ವದರ್ಶನದಿಂ ಪಾತ್ಮಾನುರಾಗಪ್ರದನೇವಾಚಕಗುರು ! ಶಿವಜೀವೈಕ್ಯಜ್ಞಾನಪ್ರದನೇಕಾರಣಗುರು । ಸಂಶಯನಿರಸನದ್ವಾರದಿಂ ನಿತ್ಯಮುಕ್ತಿಪ್ರದನೇ ವಿಹಿತಗುರುವಕ್ಕುಂ.

— ಶಿಷ್ಯೋಪಸನ್ನತಿ. —

ಮತ್ತಮಾಸದ್ಗುರುಸಚ್ಛಿಷ್ಯರಮಧ್ಯದೊಳಾವನೋರ್ವಧಿಕಾರಿಯು ತಾಪತ್ರಯಾಗ್ನಿಯಿಂಬೆಂದು ವ್ಯಾಕುಲಚಿತ್ತನಾಗಿ। ನಾನಾರು ? ಯೆನಗೀ ಸಂಸಾರವೇನು ಕಾರಣದಿಂಬಂದಿತು । ಇದಾರಮುಖದಿಂ ನಿವೃತ್ತಿಯಹು

ದೆಂದು ವಿಚಾರಿಸಿನೋಡಿ ಪತ್ರಪುಷ್ಪಫಲ ಸಮಿದಾದ್ಯುಪಹಾರಪಾಣಿಯಾಗಿವಿದ್ಯಾವಿನಯವೈರಾಗ್ಯಗಳೊಡನೆ ಷಡ್ಗುಣೈಶ್ವರ್ಯಸಂಪನ್ನನಾದ ಶ್ರೋತ್ರಿಯಬ್ರಹ್ಮನಿಷ್ಠಸದ್ಗುರುವನ್ನೈದಿ।ಚೈತನ್ಯಂಶಾಶ್ವತಂಶಾಂತಮೆಂಬುದುಮೊದಲಾದಮಂತ್ರಾಷ್ಟಕಪಠನಪೂರ್ವಕವಾಗಿ। ಪದದ್ವಯ। ಭುಜದ್ವಯ। ಹಸ್ತದ್ವಯ। ವಕ್ಷೋಲಲಾಟಂಗಳೆಂಬಷ್ಟಾಂಗವಂನೆಲನೋಂಕುವಂತೆ ಪ್ರಣುತನಾಗಿ। ಬಳಿಕೆದ್ದು ಭಕ್ತಿಭಾವದಿಂಕರಕಮಲಂಗಳಂಮುಗಿದು ಕಿಂಕರಭಾವಮುಕ್ಕೈನಿಕ್ಕು। ಕಾರುಣ್ಯಾಂಬುಧೇ। ಕೂರ್ಮೆಯಿಂಕೊಂಡಾಡಿ। ಜ್ಞಾನವೈರಾಗ್ಯಕೀರ್ತಿ ಶ್ರೀಬಲೈಶ್ವರ್ಯಗಳೆಂಬ ಷಡ್ಗುಣಸಮಗ್ರತೆಯಿಂ ಭಗವಂತನಾದೆಲೆ ಸದ್ಗುರುವೇ। ಆಯಾಸಮಿಲ್ಲದಾವ ತೆರದಿಂದನಗೀ ಭವಬಂಧನಮಂ ಬಿಡಿಸುವವೆಂದು ಬಿನ್ನಹಮಂಗೈಯುವದೇ ಶಿಷ್ಯನವಿಧಿವದುಪಸನ್ನತ್ವಮಕ್ಕುಂ.

— ಉಪದೇಶಕ್ರಮ. —

ಮತ್ತಮಾಉಪಸನ್ನ ನಾದಶಿಷ್ಯನ ಅಧಿಕಾರವಂಪರೀಕ್ಷಿಸಿ ಕೃಪಾಕಟಾಕ್ಷದಿಂದೀಕ್ಷಿಸಿ ಅಂಜದಿರೆಂದಭಯಹಸ್ತಮಂ ಶಿಷ್ಯಮಸ್ತಕದೊಳಿಟ್ಟು ಶ್ರುತಿಯುಕ್ತ್ಯನುಭವಗಳಿಂದಾತನ ದೇಹಾದ್ಯಾತ್ಮಬುದ್ಧಿಯಂನೆರಗಳಿದುನೀನೇ ಪರಬ್ರಹ್ಮವೆಂದುಳ್ಳ ಪರಮಾರ್ಥತತ್ವಮನರುಹಿಪುದೇ ಶ್ರೀಗುರುವಿನುಪದೇಶಮಕ್ಕುಂ.

— ಬೋಧಪ್ರಕಾಶ. —

ಮತ್ತಮಾಉಪದೇಶಕ್ರಮದಲ್ಲಿ ಉದ್ದೇಶಲಕ್ಷಣಪರೀಕ್ಷೆಗಳೆಂಬವೇ ಬೋಧಪ್ರಕಾರತ್ರಯ ಮಪ್ಪುದದರೊಳುತಾನುಸಮರ್ಥಿಸಲಿಷ್ಟವಾದವಸ್ತುವಂನಾಮಮಾತ್ರದಿಂ ಸಂಕೀರ್ತಿಪುದೇ ಉದ್ದೇಶವೆನಿಸುವದು। ಗಂಗೆದೊಗಲುಳ್ಳವೇಗೋವೆಂಬಂತೆ ಬಳಿಕಾವಸ್ತುವಿನ ಅಸಾಧಾರಣಧರ್ಮಮಂ ಪೇಳ್ವುದೇಲಕ್ಷಣಮೆನಿಸುವದು। ಬಳಿಕ ಲಕ್ಷಿತವಾದ ವಸ್ತುವಿಂಗಾ ಲಕ್ಷಣಮುಂಟೋ ಇಲ್ಲವೋಎಂದು ವಿಪ್ರತಿಪತ್ತಿಪೂರ್ವಕವಾಗಿ ವಿಚಾರವಂಗೈಯುವದೇ ಪರೀಕ್ಷೆಯಕ್ಕುಂ.

— ಪ್ರಮಾಣಲಕ್ಷಣ. —

ಬಳಿಕ ಪ್ರಮೆಯೆಂಬುವ ಯಥಾರ್ಥಜ್ಞಾನಕ್ಕೆ ಕಾರಣಗಳಾದ ಈಶ್ವರಾದೃಷ್ಟಕಾಲಕರ್ತೃಕಾರಣಾದಿಗಳೊಳು ಜ್ಞಾನೋತ್ಪತ್ತಿ ವ್ಯಾಪಾರಾಶ್ರಯಮಾದ ಅಸಾಧಾರಣಹೇತುವೆ ಪ್ರಮಾಣವೆನ್ನಿಸಿಕೊಂಬುವದು.

— ಪ್ರಮಾಣವಿಭಾಗ. —

ಬಳಿಕ ಪ್ರತ್ಯಕ್ಷಪ್ರಮಾಣ, ಅನುಮಾನಪ್ರಮಾಣ, ಆಗಮಪ್ರಮಾಣ, ಅರ್ಥಾಪತ್ತಿಪ್ರಮಾಣ, ಉಪಮಾನಪ್ರಮಾಣ, ಅನುಪಲಬ್ಧಿಪ್ರಮಾಣ-ಸಂಭವಪ್ರಮಾಣ, ಐತಿಹ್ಯಪ್ರಮಾಣವೆಂಬವೇ ವಸ್ತುಸಿದ್ಧಿಗಪ್ಪಪ್ರಮಾಣಂಗಳವುಗಳಲ್ಲಿ ಘಟಾದಿದರ್ಶನವೆಂಬ ಸಾಕ್ಷಾತ್ಕಾರಕ್ಕೆ ಮುಖ್ಯಕಾರಣಾಗಳಾದಚಕ್ಷುರಾದಿಗಳೇ ಪ್ರತ್ಯಕ್ಷಪ್ರಮಾಣವೆನಿಸುವದು। ಅಗ್ನಿಮತ್ವಜ್ಞಾನಸಂಪಾದಕವಾದ ಧೂಮವತ್ವಜ್ಞಾನವೇ ಅನುಮಾನಪ್ರಮಾಣಮಕ್ಕುಂ। ಬಳಿಕ ಆ ಯನುಮಾನ ಪ್ರಮಾಣಕ್ಕೆ। ಪ್ರತಿಜ್ಞೆ। ಹೇತುದೃಷ್ಟಾಂತಗಳೆಂಬ ಅಂಗತ್ರಯಮುಂಟದರೊಳಾಪದ ಪ್ರತಿ ಪ್ರತ್ಯರ್ಥಮಾಗಿ ಪ್ರಯೋಗಿಸುವಾಗ ಪರ್ವತವಗ್ನಿವುಳ್ಳದ್ದೆರಬುವದೇ ಪ್ರತಿಜ್ಞಾವಾಕ್ಯವು ಧೂಮವುಂಟಃದಕಾರಣವೆಂಬುವದೇಹೇತು। ಮಹಾನಸದಂತೆ। ಯೆಂಬುದೇ ಸಪಕ್ಷದೃಷ್ಟಾಂತ। ಮತ್ತಿದಕೆ ನಿಗಮನಾದ್ಯಂಗಗಳುಂ ಸವ್ಯಭಿಚಾರ ವಿರುದ್ಧ ಸತ್ಪ್ರತಿಪಕ್ಷ ಅಸಿದ್ಧ ಬಾಧೆಗಳೆಂಬ ಹೇತ್ವಾಭಾಸದೋಷಗಳಿಲ್ಲದಿರುವಿಕೆಯುಂ। ಅನುಕೂಲತರ್ಕವ್ಯಾಪ್ತ್ಯಾದಿಗಳಿರುವಿಕೆಯುಂ।ಪ್ರಾಮಾಣ್ಯಕ್ಕೆ ಪರಂಪರಾಸಾಧಕಗಳಾಗಿರುವವು। ಬಳಿಕಯಥಾರ್ಥವಂಪೇಳ್ವ ಪರಮೇಶ್ವರನುಜಗತ್ತಿನಜೀವಕೋಟಿಗೆ ಆಪ್ತನಾಗಿರುವದರಿಂವೇದಗಳುಂ ತನ್ಮೂಲಕದಿಂ ಸ್ಮೃತಿಪುರಾಣೇತಿಹಾಸಗಳುಂ ಲೋಕದೊಳುಯಥಾದೃಷ್ಟಾರ್ಥವಾದಿಗಳಾದ ಸತ್ಪುರುಷರು-ಕತ್ತದಾಪ್ತರಾಗಿರುವದರಿಂತದುಕ್ತಿಗಳುಂ ನದೀತೀರಾದಿಗಳಲ್ಲಿರುವ ಫಲಾದಿಪರೋಕ್ಷಾರ್ಥಜ್ಞಾಪಕಗಳಾಗಿರುವದರಿಂದಆಗಮ ಪ್ರಮಾಣವೆನಿಸುತಿರ್ಕ್ಕುಂ॥ ಇದಕೆ ಪದ ಪದಾರ್ಥ ಅನ್ವಯ ಆಕಾಂಕ್ಷೆ ಯೋಗ್ಯತೆ ಸಾಹಚರ್ಯ ತಾತ್ಪರ್ಯಜ್ಞಾನಮುಂತಾದವುಗಳುಸಹಕಾರಿಕಾರಣಗಳಾಗಿರ್ಕ್ಕುಂ॥ ಪಗಲುಂಣದ ದೇವದತ್ತನದೇಹದಪೀನತ್ವಮಂಕಂಡು ದೃಷ್ಟಮಾದ ಪೀನತ್ವದಿಂತತ್ಕಾರಣಮಾದರಾತ್ರಿಭೋಜನಮಂ ಕಲ್ಪಿಸುವದೇದೃಷ್ಟಾಂತಾರ್ಥಾಪತ್ತಿಯಕ್ಕುಂಬದುಕಿದ ದೇವದತ್ತನಂ ಗೃಹದೊಳಗಿಲ್ಲವೆಂಬೊಡೆ ಕೇಳೀಶ್ರುತಮಾದ ವಚನದಿಂಸ್ಥಾನಾಂತರದೊಳಿರ್ಪನೆಂದುತಿಳುವುದೇಶ್ರುತಾರ್ಥಾಪತ್ತಿಯುನಿಸುವದು।ಇಂತೀಯೆರಡುಬಗೆಯಾದ ಅರ್ಥಾಪತ್ತಿಗೂ ಅನ್ವಯವ್ಯತಿರೇಕಾದಿನಿಶ್ಚಯಗಳೇ ಸಹಕಾರಿಕಾರಣಗಳಾಗಿರ್ಕ್ಕುಂ। ಗವಯಪದಾರ್ಥವನರಿಯದವಂಗೆ ಗೋಸದೃಶಮಂ ಬಾಪ್ತವಾಕ್ಯಶ್ರವಣಾನಂತರದಲ್ಲಿ ವನವನ್ನೈದಲು ಸಾಗ್ನಶ್ಯಾದಿಗಳಿಂತದ್ವಿಷ

ಯೆಂಕ ಜ್ಞಾನಸಿದ್ಧಿಯೇ ಉಪಮಾನ ಪ್ರಮಾಣಮಪ್ಪುದು । ಸಾಕ್ಷಾತ್ಕಾರಾಭಾವರೂಪ್ಪಮಾದ ಅನುಪಲಬ್ಧಿಪ್ರಮಾಣದ ದೆಸೆಯಿಂದಿ ಭೂತಳದೊಳು ಘಟವಿಲ್ಲವೆನಲ್ಕೆ ಘಟಾಭಾವ ಜ್ಞಾನಮುಂಟಾಗುವದುಂ । ತನ್ನ ಮುರತುವಿಕ್ಕ ವಂಬತ್ತು ಮಂದಿಯುಂ ಲೆಕ್ಕಿಸುವಂಗೆ ದಶಮಸ್ತ್ವಮಸಿಯೆಂಬ ವಾಕ್ಯದಿಂದ ಹತ್ತನೆಯವನಾದ ಸ್ವಜ್ಞಪ್ತಿ ಯುಂಟಾಗುವದುಂ ಅನುಪಲಬ್ಧಿಪ್ರಮಾಣ ಮೆನಿಸುವದು । ಸಹಸ್ರ ಸಂಖ್ಯಾತದೊಳುಶತಸಂಖ್ಯಾತ ಮುಂಟೆಂಬುದೇ ಸಂಭವಪ್ರಮಾಣಮಕ್ಕು । ಈ ವಟವೃಕ್ಷದೊಳು ಯಕ್ಷ ನಿಪ್ಪನೆಂಬ ಲೋಕವಾರ್ತೆಯಿಂದ ಯಕ್ಷ ವಿಷಯ ಜ್ಞಾನವೇ ಐತಿಹ್ಯ ಪ್ರಮಾಣಮಕ್ಕುಂ । ಮತ್ತಮೀಪ್ರತ್ಯಕ್ಷಾದಿ ಪ್ರಮಾಣಗಳೊಳು ಧ್ರುವಾದಿವಿಷಯದೇಶಗಳೊಳ್ ಪಸರಿಸಿತತ್ತದಾಕಾರದಿಂ ಪರಿಣಮಿಪಅಂತಃಕರಣ ವೃತ್ತ್ಯಾದಿವೈಚಿತ್ರ್ಯಗಳುಂ ತತ್ತದಧಿಷ್ಠಾನೋಪಾಧ್ಯಾದಿಗಳುಂ ಸಂಪ್ರದಾಯಾರ್ಥ್ಯಯನಮನನಾದ್ಯನುಭವವೇದ್ಯಗಳಾಗಿರ್ಕುಂ। ಬಳಿಕಪ್ರಮಾಣಂಗಳಲ್ಲಿ ಚಾರ್ವಾಕರಿಗೆ ಪ್ರತ್ಯಕ್ಷಪ್ರಮಾಣಮೊಂದು । ಜೈನಬೌದ್ಧವೈಶೇಷಿಕರ್ಗೆ ಅನುಮಾನ ಪ್ರಮಾಣಮುಂಕೂಡಿದೆರಡು । ಸಾಂಖ್ಯರ್ಗೆ ಆಗಮಮುಂಕೂಡಿದೆಮೂರು । ನ್ಯಾಯೈಕದೇಶಿಗಳಿಗೆ ಉಪಮಾನಂಕೂಡಿನಾಲ್ಕು । ಪ್ರಾಭಾಕರರಿಗೆ ಅರ್ಥಾಪತ್ತಿಯೊಡಗೂಡಿಪೈದು । ಭಾಟ್ಟವೇದಾಂತಿಗಳಿಗೆ ಅನುಪಲಬ್ಧಿಯೆಂಬ ಅಭಾವದೊಡಗೂಡಿದಾರು। ಪೌರಾಣಿಕರಿಗೆಸಂಭವೈತಿಹ್ಯಂಗ ಳೊಡಗೂಡಿಯೆಂಟು। ಪ್ರಮಾಣಗಳಾಗಿರುವವೆಂದು ವಿವೇಕಿಸಲ್ಪೇಳ್ಕುಂ ॥

### —* ಪದಾರ್ಥವಿವೇಕ. *—

ಬಳಿಕ-ಪಾರಮಾರ್ಥಿಕ-ವ್ಯಾವಹಾರಿಕ- ಪ್ರಾತಿಭಾಸಿಕ-ತುಚ್ಛವೆಂದು ಪದಾರ್ಥಗಳು ನಾಲ್ಕಾಗಿ ತಿಯಲಕ್ಕುಮವುಗಳೊಳು ಶುದ್ಧಶಿವಚೈತನ್ಯಮೊಂದೇಪಾರಮಾರ್ಥಿಕಮಾಗಿರ್ಪುದು । ಗಗನಾದಿಪ್ರಪಂಚಮೆಲ್ಲಮುಂ ವ್ಯಾವಹಾರಿಕಮಾಗಿರ್ಪುದು । ರಜ್ಜುಭುಜಂಗಶುಕ್ತಿಕಾರಜತ ಮರುಮರೀಚಿಕಾದಿಗಳೇ ಪ್ರಾತಿಭಾಸಿಕಗಳಕ್ಕುಂ । ವಂಧ್ಯಾಪುತ್ರಶಶವಿಷಾಣಾದಿಗಳೇ ಅಸತ್ತಾದತುಚ್ಛಮೆಂದು ತಿಳಿಯಲಪ್ಪುದು ॥

### —* ಪದಾರ್ಥದ್ವಯ. *—

ಮತ್ತಮಾಪದಾರ್ಥಮೆಲ್ಲಮುಂಶಿವಶಕ್ತಿಗಳೆಂತಲುಂ। ಬ್ರಹ್ಮಮಾಯೆಗಳೆಂತಲುಂ । ಸತ್ಯಮಿಥ್ಯೆಗಳೆಂತಡುಂ । ದ್ವಿಧಾವಿಭಾಗಿಸಿ ಪೇಳ್ಕುಂ ॥

—* ದೃಗ್ದೃಶ್ಯವಿವೇಕ. *—

ಬಳಿಕವೃಕ್ಷೆಂದೊಡೆ। ಸಂಯುಕ್ತಿಕವೃಷ್ಟಾಂತೋಪಪನ್ನವಾದ ವಿಚಾರದಿಂಪ್ರಾಮಾಣಿಕವಾಗಿ। ತಾತ್ವಿಕಾರ್ಥಮಂವಿಚಾರಿಸಿ ತಿಳವುದದೆಂತೆಂದೊಡೆ। ದೃಶ್ಯವಾದಪ್ರಪಂಚದೊಳು। ಸಜಾತೀಯಭೇದ। ವಿಜಾತೀಯಭೇದ ಮೆಂದು। ತ್ರಿವಿಧಭೇದಂಗಳಿಪ್ಪವದಕೆದೃಷ್ಟಾಂತವೆಂತನೆ ಲೋಕದೊಳೊಂದಾನೊಂದುವೃಕ್ಷವು ತನ್ನೊಳು ಬೇರೆ ಬೇರೆತೋರ್ಪ। ಪತ್ರ ಪುಷ್ಪ ಫಲಾದಿಗಳಿಂ ಭಿನ್ನವಾಗಿರುವದರಿಂದದು ಸ್ವಗತಭೇದವೆನಿಸುವದು।ತನ್ನಂತೆ ಬೇರೊಂದುವೃಕ್ಷವು ಬೇರೆಯಾಗಿರುವದರಿಂದದು ಸ್ವಜಾತೀಯಭೇದ ವೆನಿಸುವದು। ತನಗಿಂತಲೂವಿಲಕ್ಷಣವಾದ ಪಾಷಾಣಾದಿಕವು ಬೇರ್ಪಟ್ಟಿರುವದರಿಂದದು ವಿಜಾತೀಯಭೇದವಾಗಿರ್ಪದು ॥

—* ಭೇದನಿರಾಕರಣ. *—

ಬಳಿಕ- ಭೇದಮಾತ್ರವು ಕಾಲ್ಪನಿಕವಾಗಿರುವದುರಿಂದುಕ್ತಭೇದತ್ರಯ ಮದ್ವೈತಬ್ರಹ್ಮವಾದ। ಶುದ್ಧಚೈತನ್ಯದೊಳಗೆಂತು ವಿಲ್ಲವೆಂದಃದೃಕ್ಕಿನಿಂ ನಿರಾಕರಿಸಲಕ್ಕುಮೆಂತನೆ ಸದ್ರೂಪವಾದ ಬ್ರಹ್ಮವು। ಗಗನದಂತೆನಿರವಯವಮಪ್ಪುದರಿಂ। ಸತ್ತಿಗೆಬೇರೊಂದುಸತ್ತೆಯಿಲ್ಲವಾಗಿಯುಂ। ಮಾತ್ತ ಮಾಸದ್ವಸ್ತುವು ಅಖಂಡವಾಗಿಯುಂ ಅಸದೃಶವಾಗಿಯುಂ ಅದ್ವಿತೀಯ ಮಾಗಿಯುಂ ಶ್ರುತಿಗುರುವಾಕ್ಯಸದ್ಯುಕ್ತ್ಯನುಭವಗಳಿಂ। ಸಿದ್ಧಾಂತವಾಹುದಾಗಿ। ಬ್ರಹ್ಮದೊಳುಭೇದಮಾತ್ರಪ್ರಸಕ್ತಿಯಿಲ್ಲಮಕ್ಕುಂ। ಜಗತ್ಕಾರಣವಾದ ಮಾಯೆಯುಂಟಾಗಿ ವಿಜಾತೀಯಭೇದಮಿಪ್ಪುದನೆ ಲೋಕದಲ್ಲಿ ಚಿತ್ರಕನಿಂ ಚಿತ್ರಶಕ್ತಿಗೆ ಬೇರೆತೋರ್ಕೆಯಿಲ್ಲದಂತೆ। ಸನ್ಮಾತ್ರಬ್ರಹ್ಮದತ್ತಣಿ ಬ್ರಹ್ಮಾನತಿರಿಕ್ತಸತ್ತಾಕವಾದಮಾಯೆಗೆ ವಿಲಕ್ಷಣತ್ವಮೇಯಿಲ್ಲವಾಗಿ ಬ್ರಹ್ಮಕ್ಕೆ ವಿಜಾತೀಯ ಭೇದಮುಂಯಿಲ್ಲವೆಂದುಸಿದ್ಧಮಕ್ಕುಂ॥

—* ಸಿದ್ಧಾಂತಶ್ರುತಿ. *—

ಬಳಿಕೀಯರ್ಥದಲ್ಲಿ। ಏಕಮೇವಾದ್ವಿತೀಯಂಬ್ರಹ್ಮ। ಎಂಬಪ್ರಬಲತರಸಿದ್ಧಾಂತಶ್ರುತಿವಾಕ್ಯದ। ಏಕಂ, ಏವ, ಅದ್ವಿತೀಯಂ। ಎಂಬ ಪದತ್ರಯಕ್ಕೆ ಜೀವಬ್ರಹ್ಮೈಕ್ಯಅವಧಾರಣೆ। ದ್ವೈತನಿಷೇಧಗಳೆಂಬ ಅರ್ಥತ್ರಯಮಪ್ಪದರಿಂದ। ಕ್ರಮದಿಂದವೇ। ಬ್ರಹ್ಮದಲ್ಲಿಸ್ವಗತ। ಸ್ವಜಾತೀಯ। ವಿಜಾತೀಯ ಭೇದಂಗಳಿಲ್ಲ ವೆಂಬುವದಕೆ ಪ್ರಮಾಣಗಳಕ್ಕುಂ ॥

—* ಅಧ್ಯಾರೋಪವಿವೇಕ. *—

ಬಳಿಕ ಅಧ್ಯಾರೋಪ ಅಪವಾದವೆಂಬವೇ- ಕಲ್ಪಿತದ್ವಯಿವಪ್ಪುದದರಲ್ಲಿ ಉಕ್ತ-ರಜ್ಜು-ಶುಕ್ತಿ- ಸ್ಥಾಣ್ವಾದಿಗಳಲ್ಲಿ ಕ್ರಮದಿಂದಿಲ್ಲದ ಅಹಿ ರಜಿತಚೋರಾದಿಗಳಂ। ಕಲ್ಪಿಸುವಂತೆ। ಸದ್ರೂಪವಪ್ಪಾದಬ್ರಹ್ಮದಲ್ಲಿಲ್ಲದ । ಮಾಯಾಪ್ರಪಂಚವಕಲ್ಪನೆಯೇ। ಅಧ್ಯಾರೋಪವೆನಿಸುವದು ॥

—* ಅಪವಾದವಿವೇಕ. *—

ಬಳಿಕ ಅಹಿಯಲ್ಲರಜ್ಜುವೇಇದು। ರಜಿತವಲ್ಲಶುಕ್ತಿಯೇಇದು । ಚೋರನಲ್ಲಸ್ಥಾಣುವೇಯೆಂಬಂತೆ । ವಿಚಾರಮುಖದಿಂ । ಪ್ರಪಂಚವೆಲ್ಲಂಮಿಥ್ಯೆಬ್ರಹ್ಮವೇಸತ್ಯವೆಂಬುದೇ ಅಪವಾದವಕ್ಕುಂ ॥

—* ಬ್ರಹ್ಮಲಕ್ಷಣವಿವೇಕ. *—

ಬಳಿಕ ಅತದ್ವ್ಯಾವೃತ್ತಿಲಕ್ಷಣ।ಸ್ವರೂಪಲಕ್ಷಣವೆಂಬವೇ। ದೃಗ್ರೂಪವಪ್ಪಾದ। ವಸ್ತುವಿನಸಾಕ್ಷಾತ್ಕಾರಕ್ಕು ಪಾಯತ್ರಮಪ್ಪುದದರಲ್ಲಿ। ದೇಹಾದ್ಯನಾತ್ಮವರ್ಗವುಂ ಯುಕ್ತಿಯಿಂನೇತಿಗಳಿಂದುಳಿದಾತ್ಮನ ನರುಹಿಪ್ಪುದೇ।ಅತದ್ವ್ಯಾವೃತ್ತಿಲಕ್ಷಣವೆನಿಸುವದು । ಶಾಖಾಗ್ರದಲ್ಲಿ ಚಂದ್ರನಿಪ್ಪನೆಂಬಂತೆಭೂತಾದಿಜಗತ್ಕಾರಣತ್ವ ದಿಂದಾತ್ಮನನರುಹಿಪ್ಪುದೇ ತಟಸ್ಥಲಕ್ಷಣವೆನಿಸುವದು। ಪ್ರಕೃಷ್ಟಪ್ರಕಾಶರೂಪನೇ ಸೂರ್ಯನೆಂಬಂತೆ ಆತ್ಮನ ನಿಜವರುಹಿಪ್ಪುದೇಸ್ವರೂಪಲಕ್ಷಣವಕ್ಕುಂ ॥

—* ಪಂಚಲಕ್ಷಣೀವಿವೇಕ. *—

ಬಳಿಕ ಸತ್ತು ಚಿತ್ತು ಆನಂದನಿತ್ಯ ಪರಿಪೂರ್ಣವೆಂಬವೇ ಆತ್ಮನಪಂಚಸ್ವರೂಪಲಕ್ಷಣಂಗಳವುಗಳಲ್ಲಿ। ಅರಿವೆನು। ಅರಿಯೆನು. ಅರಿತೆನು। ಯೆಂಬಲ್ಲಿಯುಂ। ಕಾಮಾದಿವೃತ್ತಿಗಳು। ತೋರುವಲ್ಲಿ।ತೋರದಿಹಲ್ಲಿಯುಂ। ಜಾಗ್ರದಾದ್ಯವಸ್ಥೆಗಳಲ್ಲಿಯುಂ। ತನಗೊಂದುಬಾಧೆಯಿಲ್ಲದೆ। ಉಂಟೆನಿಪ್ಪುದೇ। ಸದ್ರೂಪವಕ್ಕುಂ। ಸರ್ವಾವಸ್ಥೆಗಳಲ್ಲಿಯವಿಷಯಂಗಳನೆಡೆ ವಿಡಿನಿಡಿದಿಟ್ಟು ಅರಿವುದೇಚಿದ್ರೂಪವಕ್ಕುಂ। ಪರಮಪ್ರೀತಿಗೆವಿಷಯವಹತನವೆಆನಂದರೂಪವಕ್ಕುಂ ॥ ಸತತೋದಿತವಾಗಿಪ್ಪುದೇ ನಿತ್ಯರೂಪವಕ್ಕು ॥ ಸಸ್ವಾರ್ಥಸಾಧಕ ಮಪ್ಪುದರಿಂ ಸ್ವಬಾಧಿತ್ವವೇ ಪೂರ್ಣರೂಪವಕ್ಕುಂ ॥

— ಆನಂದವಿಚಾರ. —

ಬಳಿಕಿಲ್ಲಿ ಸಚ್ಚಿದಾನಂದಂಗಳಾತ್ಮಸ್ವರೂಪವಪ್ಪಾಗೆ। ಸದ್ರೂಪಚಿದ್ರೂಪಗಳಂತೆ। ಸರ್ವಬುದ್ಧಿವೃತ್ತಿಗಳಲ್ಲಿಯುಂ। ಆನಂದಸ್ವರೂಪಕ್ಕಭಿ ವ್ಯಕ್ತಿಯುಂಟಾಗಬೇಕದಿಲ್ಲಾಗಿ। ಆನಂದಮಾತ್ರ ಸ್ವರೂಪವಲ್ಲೆಂದೊಡದಕ್ಕೆ । ಉ

ಷ್ಣಪ್ರಕಾಶರೂಪವಾದದೀಪದಪ್ರಕಾಶವೇಗೃಹದಲ್ಲಿವ್ಯಾಪಿಸಲು ಉಷ್ಣಪುವ್ಯಾಪ್ತವಾಗದು। ಉದಕದಲ್ಲಿಉಷ್ಣವೇಪ್ರಕಟವಹುದು। ಕಾಂತಿಗೆ ಪ್ರಕಟತ್ವಯಾಗದು । ಕಾಷ್ಠದಲ್ಲಿಉಷ್ಣ ಕಾಂತಿನೆಂಬೆರಡಕ್ಕೆಯುಂತೋರ್ಕೆಯುಪ್ಪಂತೆ । ಪಾಷಾಣಾದಿಗಳಲ್ಲಿ ಬ್ರಹ್ಮಸದ್ರೂಪಕ್ಕಭಿವ್ಯಕ್ತಿಯ್ಯೈಸೆ। ಚಿದಾನಂದಗಳಿ ಗಭಿವ್ಯಕ್ತಿಘಟಿಸದು । ಬುದ್ಧಿಯತಮೋಗುಣದಿಂದ । ಅಜ್ಞಾನಮಯವಾದ ಮೂಢವೃತ್ತಿಯಲ್ಲಿಯುಂ । ರಜೋಗುಣದಿಂದ ರಾಗಮಯವಾದ ಘೋರವೃತ್ತಿಯಲ್ಲಿಯುಂ। ಸಚ್ಚಿದ್ರೂಪಗಳೆರಡಕ್ಕೆ ಸ್ಪಷ್ಟತೆಯಿಲ್ಲದೆ । ಆನಂದರೂಪಕ್ಕೆ ಸ್ಪಷ್ಟತೆದೊರಕೊಳ್ಳದು। ಸತ್ವಗುಣದಿಂವೈರಾಗ್ಯಮಯವಾದ ಶಾಂತಿವೃತ್ತಿಯಲ್ಲಿ । ಸಚ್ಚಿದಾನಂದವೆಂಬರೂಪತ್ರಯಕ್ಕಂ ಸ್ಫುರಣಮಪ್ಪುದದರಿಂದಾನಂದ ವಾತ್ಮಸ್ವರೂಪಮಕ್ಕುಂ ॥

— ಸತ್ತಾಸ್ವರೂಪವಿವೇಕ. —

ಬಳಿಕ ಕ್ರಮದಿಂಪೇಳದ ಪಂಚಸ್ವರೂಪಂಗಳಿಗುಪಾಧಿಭೇಧಮೆಂತನೆ। ವ್ಯಾವಹಾರಿಕಸತ್ತೆಯು । ಪ್ರಾತಿಭಾಸಿಕಸತ್ತೆಯು । ಪಾರಮಾರ್ಥಿಕ ಸತ್ತೆಯೆಂದು ಸತ್ತಾತ್ರಯಮದರಲ್ಲಿ ಜಾಗ್ರದವಸ್ಥೆಯೊಳು । ಘಟಾದಿಗಳ ಸತ್ತೆಯು। ವಿದೇಹ ಕೈವಲ್ಯಪರ್ಯಂತ. ಮಧ್ಯೆ ಸುಷುಪ್ತಿ ಮೂರ್ಛೆಮೊದಲಾದವಸ್ಥೆಗಳಲ್ಲಿತೋರದಿದ್ದು । ಬಳಿಕೆಚ್ಚತ್ತು ನೋಡಿದೊಡೆ ಮೊದಲಿನಂತೆ ತೋರುತ್ತಿಹುದಾಗಿ ವ್ಯಾವಹಾರಿಕಸತ್ತೆಯೆನಿಸುವದು । ಶುಕ್ತಿಕಾರಜತದ ಕನಸಿನ ವಿಷಯಾದಿಗಳಸತ್ತೆಯೇತೋರುವಕಾಲದಲ್ಲಿ ಅಲ್ಲದೆಯಚ್ಚತ್ತುಮರಳಿಕಾಂಬ ಸ್ವಪ್ನದೊಳಗುಂಇಲ್ಲವಾಗಿ। ಪ್ರಾತಿಭಾಸಿಕಸತ್ತೆಯೆನಿಸುವದು। ಸಮಸ್ತಕಲ್ಪನೆ ಗಧಿಷ್ಠಾನವಾಗಿತೋರದಡಗದಬ್ರಹ್ಮಸತ್ತೆಯೇ ಪಾರಮಾರ್ಥಿಕಸತ್ತೆಯಕ್ಕುಂ ॥

— ಚಿದ್ರೂಪೋಪಾಧಿಭೇದ. —

ಮತ್ತಂ, ಜೀವ, ಈಶ್ವರ, ಕೂಟಸ್ಥ' ಬ್ರಹ್ಮವೆಂಬವೆ ಚಿತ್ತಿನಚತುರ್ವಿಧಭೇದಂಗಳವಕ್ಕೆ । ಘಟಜಲದಲ್ಲಿ ಪ್ರತಿಬಿಂಬಿಸಿರ್ದ ಸಾಭ್ರನಕ್ಷತ್ರಾಕಾಶ। ಮೇಘಾಂಶತುಷಾರಜಲದಲ್ಲಿ ಪ್ರತಿಬಿಂಬಿಸಿರ್ದನಿಮಿತ್ತಾಕಾಶ । ಘಟಾವಚ್ಛಿನ್ನಾಕಾಶವೆಂಬವೇ ಕ್ರಮದಿಂದ್ರೃಷ್ಟಾಂತಚತುಷ್ಟಯಮಕ್ಕುಂ ॥

— ಆನಂದಪೋಪಾದಿಭೇದ. —

ಮತ್ತಂ ವಿಷಯಾನಂದ ಬ್ರಹ್ಮಾನಂದ ವಾಸನಾನಂದ ಮುಖ್ಯಾನಂದ ನಿಜಾನಂದ ಆತ್ಮಾನಂದ ಅದ್ವೈತಾನಂದವಿದ್ಯಾನಂದವೆಂಬವೇ ಆನಂದದ

ಪ್ರಭೇದಂಗಳವುಗಳಲ್ಲಿ। ವನಿತಾದಿ ವಿಷಯಲಾಭವಾದಲ್ಲಿ ತೋರ್ಪುದೇ ವಿಷಯಾನಂದವೆನಿಸುವದು। ನಿದ್ರೆಯೊಳು ತೋರ್ಪುದೇ ಬ್ರಹ್ಮಾನಂದವೆನಿಸುವದು। ನಿದ್ರೆತಿಳಿದ ಕ್ಷಣದಲ್ಲಿ ತೋರ್ಪುದೇ ವಾಸನಾನಂದ ವೆನಿಸುವದು। ಹಾನೋಪಾನವಿಲ್ಲದುಪೇಕ್ಷಾಬುದ್ಧಿಯಲ್ಲಿ ತೋರ್ಪುದೇ ಮುಖ್ಯಾನಂದ ವೆನಿಸುವದು। ಯೋಗಾಭ್ಯಾಸಬಲದಿಂ ಮನೋಲಯವಾದಲ್ಲಿ ತೋರ್ಪುದೇ ನಿಜಾನಂದವೆನಿಸುವದು। ಪ್ರಿಯವಾದವನಿತಾದಿ ವಿಷಯಂಗಳ ಮಧ್ಯದೊಳು ತಾನೇಪ್ರಿಯತಮನೆಂದು ತೋರ್ಪುದೇ ಆತ್ಮಾನಂದವೆನಿಸುವದು। ನಾಮರೂಪಪ್ರಪಂಚವೆಲ್ಲಂಮಿಥ್ಯೆ। ತಾನೇಸತ್ಯವೆಂಬವಿವೇಕದಲ್ಲಿತೋರ್ಪುದೇ ಅದ್ವೈತಾನಂದವೆನಿಸುವದು। ತತ್ವಮಸ್ಯಾದಿ ಮಹಾವಾಕ್ಯಜನಿತವಾದ ಅಪರೋಕ್ಷಜ್ಞಾನದಲ್ಲಿತೋರ್ಪುದೇ ವಿದ್ಯಾನಂದಮುಕ್ಕುಂ.

## — ಅಭಾವವಿವೇಕ. —

ಮತ್ತಂಪ್ರಾಗಭಾವ, ಪ್ರಧ್ವಂಸಾಭಾವ, ಅನ್ಯೋನ್ಯಾಭಾವ, ವೆಂಬವೇ ಬ್ರಹ್ಮನಿತ್ಯಪದದೋಳ್ ಪೊಗದ। ಅಭಾವಚತುಷ್ಟಯಮದರಲ್ಲಿ। ಮೃತ್ತಿಕೆಯೊಳು ಘಟಾಧಿಕವುವೊದಲಿಲ್ಲದಿರುವಿಕೆಯೇ ಪ್ರಾಗಭಾವವೆನಿಸುವದು। ಪುಟ್ಟದಘಟವೊಡಪಬಳಿಕಿನ್ನಿಲ್ಲವೆಂಬುದೇ ಪ್ರಧ್ವಂಸಾಭಾವವೆನಿಸುವದು। ಘಟವುಪಟವಲ್ಲ। ಪಟವುಘಟವಲ್ಲ। ಘಟಪಟೋಭಯವುಘಟವೂ ಪಟವೂ ಸಹಾದೊಡಂಘಟವೂ। ಅಲ್ಲಪಟವೂ। ಅಲ್ಲವೆಂಬುದು। ಮೊದಲಾದುದೇ ಅನ್ಯೋನ್ಯಾಭಾವವೆನಿಸುವದು।ವಂಧ್ಯಾಪುತ್ರ। ಶಶವಿಷಾಣ ಗಗನಾ। ರವಿಂದಾದಿಗಳೆಂದಿಗೂ।ಇಲ್ಲವೆಂಬುವದೇ।ಅತ್ಯಂತಭಾವಮುಕ್ಕುಂ

## — ಪರಿಚ್ಛೇದತ್ರಯ. —

ಮತ್ತುಂ ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದವೆಂಬವೇ। ಬ್ರಹ್ಮದಪರಿಪೂರ್ಣಪದದೊಳ್। ನಿರಾಕರಿಸಲ್ತಕ್ಕ। ಪರಿಚ್ಛೇದತ್ರಯಮದರೊಳಗೊಂದು। ಕಾಲದೊಲುಂಟೊಂದು। ಕಾಲದಲ್ಲಿಲ್ಲವೆನಿಸಿಕೊಂಬುವೇ। ಕಾಲಪರಿಚ್ಛೇದಮುಕ್ಕುಂ॥ಒಂದುದೇಶದಲ್ಲುಂಟು।ಮತ್ತೊಂದುದೇಶದಲ್ಲಿಲ್ಲವೆಂದೆನಿಸಿಕೊಂಬುದೇ। ದೇಶಪರಿಚ್ಛೇದವೆನಿಸುವದು। ಒಂದುವಸ್ತುವಿನವಿಹುದೆಂದೊಂದುವಸ್ತುವಿದಲ್ಲವೆಂದೆನಿಸಿಕೊಂಬುದೇ।ವಸ್ತುಪರಿಚ್ಛೇದಮುಕ್ಕುಂ.

— ಜೀವಾದಿನಾಮಭೇದ. —

ಬಳಿಕ ಪೂರ್ವೋಕ್ತಚಿದ್ರೂಪಭೇದವಾದ । ಜೀವೇಶ್ವರಾದಿಚತುಷ್ಟಯಕ್ಕೆ ನಾನಾದಿವ್ಯವಹಾರಕಲ್ಪನೆಗಳೆಂತೆನೆ! ಮೊದಲುಜೀವನೇ ವಿಶ್ವತೈಜಸ! ಪ್ರಾಜ್ಞನೆಂದು! ತ್ರಿವಿಧವಾಗಿರ್ಪವರಲ್ಲಿ! ಸ್ಥೂಲಶರೀರವ್ಯಷ್ಟ್ಯಭಿಮಾನಿ! ವ್ಯವಹಾರಕಜೀವನು! ಬುದ್ಧಿಪ್ರತಿಫಲಿತಚೇತನನು! ಚಿದಾಭಾಸನು! ವಿಕ್ಷೇಪರೂಪನು! ಕ್ಷೇತ್ರಶರೀರ! ಪ್ರಮಾತೃ! ಕರ್ತೃಣಾಭೋಕ್ತೃ! ಸಂಸಾರಿ! ವಿಷಯಿ! ಪರಾಗಾತ್ಮನು ನಿಜಾಜ್ಞಾನಮಯನು! ತ್ವಂಪದಮುಖ್ಯಾರ್ಥವೆಂಬಿವು! ಮೊದಲಾದವೇ!ಜಾಗ್ರದಾವಸ್ಥಾಭಿಮಾನಿಯಾದ ವಿಶ್ವನಪರ್ಯಾಯನಾಮಗಳಕ್ಕು!!ಬಳಿಕ ಸೂಕ್ಷ್ಮಶರೀರದವ್ಯಷ್ಟ್ಯಭಿಮಾನಿ! ಪ್ರಾತಿಭಾಸಕಜೀವನು! ಸ್ವಾಪ್ನಕಲ್ಪಿತನೆಂಬಿವು! ಮೊದಲಾದವೇಸ್ವಪ್ನಾವಸ್ಥಾಭಿಮಾನಿಯಾದ ತೈಜಸನಪರ್ಯಾಯನಾಮಗಳು!ಬಳಿಕಕಾರಣಶರೀರವ್ಯಷ್ಟ್ಯಭಿಮಾನಿ! ಅವಿದ್ಯೋಪಹಿತನು! ಕಾರ್ಯೋಪಾಧಿಕನೆಂಬಿವುಮೊದಲಾದವೇ ಸುಷುಪ್ತ್ಯವಸ್ಥಾಭಿಮಾನಿಯಾ ಪ್ರಾಜ್ಞನಪರ್ಯಾಯ ನಾಮಂಗಳು.

— ಆತ್ಮತ್ರಯ. —

ಬಳಿಕ ಜೀವಾತ್ಮ, ಅಂತರಾತ್ಮ, ಪರಮಾತ್ಮ, ನೆಂದಾತ್ಮತ್ರಯದಲ್ಲಿ ತಪ್ತಾಯಪಿಂಡದಂತೆ! ದೇಹಾದಿಗಳೊಡನೆ ತನ್ನಸಂಬಂಧದಿಂ ಸಕಲಸಂಸಾರವ್ಯವಹಾರಮುಳ್ಳಾತನೇ ಜೀವಾತ್ಮನು- ಕಮಲಪ್ರತೋದಕದಂತೆ ಸಂಸಾರವಂ ಪೊಂದಿಯುಂ! ಪೊಂದದಾತನೇ ಅಂತರಾತ್ಮನಕ್ಕುಂ! ಲೋಕವ್ಯವಹಾರಕ್ಕೆ ಸೂರ್ಯನಂತೆ-ಜೀವಾಂತರಾತ್ಮವ್ಯವಹಾರಗಳಗೆ ಸಾಕ್ಷಿಯೇ ಪರಮಾತ್ಮನಪ್ಪಂ ॥

— ವಿಕಾರಸ್ಥಿತಿ. —

ಬಳಿಕ ಜಲದಲ್ಲಿನೆರಳು ಚಲಿಸಿತೆಂಬಂತೆ-ಮುಗಿಲೊಡೆ ಚಂದ್ರನೋಡಿದನೆಂಬಂತೆ- ನದಿಯುಹರಿಗೋಲುಗಮಿಸಿದೊಡೆ- ತೀರದತರುಗಳ-ಗಮಿಸಿದವೆಂಬಂತೆ- ಮನೆಯುಕಂಡಿಯೊಳ್ಬಿದ್ದ, ಸೂರ್ಯಾತಪದಲ್ಲಿ ಹಸ್ತದೆಡೆಯಾಟವಿಂದೆಡೆಯಾಡಿತೆಂಬಂತೆ ದೇಹದಜನನಮರಣಾದಿಗಳಾತ್ಮಂಗೆಂಬಂತೆ-ನಿರ್ವಿಕಾರವಾದ-ಚೈತನ್ಯಕ್ಕೆ ದೇಹಾದ್ಯುಪಾಧಿಯೊಂದಾದ ಜೀವಾವಸ್ಥೆಯು ಸಂಸಾರನುವಹಾರವೆಂದರಿಯಲ್ವೇಳ್ಕುಂ.

## — ಈಶ್ವರನ ಭೇದ —

ಮತ್ತಮಾ ಈಶ್ವರನೇ ವಿರಾಟ್ಪುರುಷನು, ಹಿರಣ್ಯಗರ್ಭನು,ಅಂತರ್ಯಾಮಿಯೆಂದು ತ್ರಿವಿಧವಾಗಿರ್ಪನು-ಅವರಲ್ಲಿ ಸ್ಥೂಲಶರೀರಸಮಷ್ಟ್ಯಭಿಮಾನಿ-ವೈಶ್ವಾನರನು-ಎಂಬಿವು ಮೊದಲಾದವೇ ವಿರಾಟ್ಪುರುಷನ ಪರ್ಯಾಯನಾಮಂಗಳು ಬಳಿಕ ಲಿಂಗಶರೀರಸಮಷ್ಟ್ಯಭಿಮಾನಿ-ಮಹಾಪ್ರಾಣನು -ಸೂತ್ರಾತ್ಮಕನೆಂಬಿವು ಮೊದಲಾದವೇ ಹಿರಣ್ಯಗರ್ಭನ ಪರ್ಯಾಯನಾಮಂಗಳು-ಬಳಿಕ ಕಾರಣಶರೀರಸಮಷ್ಟ್ಯಭಿಮಾನಿ-ಅಜ್ಞಾನೋಪಹಿತಚೇತನನು-ಕಾರಣೋಪಾಧಿಕನು, ಮಾಯಾವಚ್ಛಿನ್ನನು, ಮಾಯಾಭಾಸನು. ಮಾಯಿ, ಮಾಯಾವಿ ಜಗದ್ಯೋನಿ-ಆನಂದಮಯನು, ಅಕ್ಷರನು,ಅಭಿವ್ಯಕ್ತನು, ಅವ್ಯಾಕೃತನು, ಶಬಳಬ್ರಹ್ಮವು, ಸಗುಣಬ್ರಹ್ಮವು, ಪರಮನು, ಈಶ್ವರನು, ಮಹೇಶ್ವರನು, ಅನ್ಯದೇವತೆ, ತತ್ಪದಮುಖ್ಯಾರ್ಥ ಮೆಂಬಿವು ಮೊದಲಾದವೇ ಅಂತರ್ಯಾಮಿಯ ಪರ್ಯಾಯನಾಮಂಬಳಕ್ಕುಂ.

## — ಉಪಾಧಿದೃಷ್ಟಾಂತ. —

ಮತ್ತಮಾ ಈಶ್ವರನ ತ್ರಿವಿಧತ್ವದಲ್ಲಿ ದೃಷ್ಟಾಂತಮೆಂತೆನೆ-ಹೀಗೊಂದಾ ಚಿತ್ರಪಟವು-ದ್ರವ್ಯಾಂತರಸಂಬಂಧವಿಲ್ಲದಿಹುದರಿಂ ತಾನೇ। ಧೌತಮೆನಿಸಿಕೊಂಬುದೋ ಮೇಲೆಗಂಜಗೂಳಿನ ಅನುಲೇಪನದಿಂ ಘಟ್ಟಿತವೆನಿಸಿಕೊಂಬುದೋ-ಬಳಿಕ ನೀಲಮಯವಾದಾಕಾರದಿಂ ಲಾಂಛಿತವೆನಿಸಿಕೊಂಬುದೋ ಮೇಲೆಯಥಾಯೋಗ್ಯವಾದವರ್ಣದಿಂ ರಂಜಿತಮೆನಿಸಿಕೊಂಬುದೋ। ಹಾಗೆ ಪರಬ್ರಹ್ಮವು ಮೊದಲು ಮಾಯಾತತ್ಕಾರ್ಯರಹಿತವಾದ ತಾನೇ ಚಿತ್ತೆನಿಸಿಕೊಂಬುದು-ಬಳಿಕ ಸರ್ವಕಾರಣವಾದ ಮಾಯೋಪಾಧಿಯಿಂದಂತರ್ಯಾಮಿ ಯೆನಿಸಿಕೊಂಬುದು-ಮೇಲೆ ಅವ್ಯಕ್ತವಾದ ಅಪಂಚೀಕೃತಭೂತಕಾರ್ಯ ಸೂಕ್ಷ್ಮಶರೀರಸಮಷ್ಟ್ಯುಪಾಧಿಯಿಂ ಸೂತ್ರಾತ್ಮಕನೆನಿಸಿಕೊಂಬುದು। ಮೇಲೆ ವ್ಯಕ್ತವಾದ ಪಂಚೀಕೃತಭೂತಕಾರ್ಯರೂಪ ಸಮಷ್ಟ್ಯುಪಾಧಿಯಿಂ ವಿರಾಟನೆನಿಸಿಕೊಳ್ಳುತ್ತಿರ್ಕುಂ.

## — ದೃಷ್ಟಾಂತಸಮನ್ವಯ. —

ಬಳಿಕಿಲ್ಲಿ ಬ್ರಹ್ಮಕ್ಕೆ ಚಿತ್ರಪಟದೃಷ್ಟಾಂತವಾಗಲಾ ಚಿತ್ರಂಗಳಾವುವೆಂದೊಡೆ-ವಿರಿಂಚಾದಿತೃಣಾಂತವಾದ ಚೇತನಪ್ರಾಣಿಗಳುಂ-ಗಿರಿನದ್ಯಾದ್ಯಚೇತನವಿಷಯಂಗಳೆಂಬೀ। ಜಡಾಜಡರೂಪಜಗವೇ-ಚಿತ್ರದೃಷ್ಟಾಂತನು.

— ಗುಣಾದಿಕಲ್ಪನೆ. —

ಮಾತ್ರವಾ-ಪಾರಮಾರ್ಥಿಕವಾದಚಿದ್ರೂಪಬ್ರಹ್ಮವೊಂದರಲ್ಲಿ। ಮಿಥ್ಯಾತ್ಮಕ। ಬಹುಚೇತನಾಚೇತನರೂಪಜಗತ್ತಿನತೋರ್ಕೆಯೆಂತೆಂದೊಡೆ-ಹೀಗೆಚಿತ್ರದಲ್ಲಿ ಬರೆಯಲ್ಪಟ್ಟಮನುಷ್ಯರುಟ್ಟ ಪೊದ್ದಿರ್ದ ನಾನಾವರ್ಣೋಪೇತವಾದ ಶೀತಾದಿ ನಿವೃತ್ತಿಯಂಮಾಡಲಸಮರ್ಥಮಪ್ಪವಸ್ತ್ರಾಭರಣಾದಿಗಳಾದೊಪ್ಪ ಏಕಾಕಾರವಾದ ಶೀತಾದಿ ಪರಿಹಾರಕಮಪ್ಪ ತಥ್ಯವಾದ ಆಧಾರ ಪಟವೊಡನೆ ಸದೃಶಂಗಳಾಗಿರ್ಪವಾಚಿತ್ರದಲ್ಲಿರ್ದ ಗಿರಿನದ್ಯಾದಿಗಳಿಗಾ ಚಿತ್ರಾಧಾರವಾದೊಡನೆ - ಹೋಲಿಕೆ ಘಟಿಸಲರಿಯದೋಹಾಗೆಚಿದ್ರೂಪಪರಬ್ರಹ್ಮದಲ್ಲಿ ಬೇರೆಬೇರೆತೋರುತಿರ್ದ ವ್ಯವಹಾರಿಕಜೀವರುಗಳೇ ಚಿತ್ತಿನಹೋಲಿಕೆಯಾಗಿ ಚಿದಾಭಾಸಚೇತನರೆನಿಸಲುಸರ್ವಜ್ಞತ್ವ ಸರ್ವೇಶ್ವರತ್ವ ಸರ್ವನಿಯಂತೃತ್ವ ಸರ್ವಾಂತರಾಮಿತ್ವ ಸರ್ವಾತ್ಮಕತ್ವ ಸರ್ವಶಕ್ತಿತ್ವಾದಿಗಳು। ಈಶ್ವರನಮುಖ್ಯಗುಣಂಗಳಾಗಿಯುಂ ಅಕರ್ತೃತ್ವಕರ್ತೃತ್ವಅನ್ಯಥಾಕರ್ತೃತ್ವವೆಂಬವೇಈಶ್ವರನಪ್ರಭುತ್ವ ಸಾಮರ್ಥ್ಯತ್ರಯಮಾಗಿಯುಂಸೃಷ್ಟಿಸ್ಥಿತಿ ಸಂಹಾರನಿಯಮನ। ಅನುಪ್ರವೇಶವೆಂಬವೇ ಈಶ್ವರನ ಪಂಚಕೃತ್ಯಗಳಾಗಿಯುಂ ತಿಳಿಯಲ್ಪೇಳ್ಕುಂ.

—ಈಶ್ವರಕೃತ್ವಕ್ಕೆ ದೃಷ್ಟಾಂತ.—

ಬಳಿಕ ನಿರ್ವಿಕಾರದಿಂದ ದ್ವಿತೀಯಬ್ರಹ್ಮಸ್ವರೂಪನಾದೀಶ್ವರನಲ್ಲಿ ಸೃಷ್ಟ್ಯಾದಿಬಹುಕೃತ್ಯವೆಂತು ಘಟಿಸುವದೆಂದೊಡೆ ಹೀಗೆ ಸೂರ್ಯನು ಇಚ್ಛಾಯತ್ನಾಧಿಕವಿಲ್ಲದೆ- ತನ್ನವರುಷಕಿರಣದಿಂ ವೃಷ್ಟಿರೂಪಜಲವಂಕರೆದು ಬಳಿಕಾಜಲದಲ್ಲಿ ಪ್ರತಿಬಿಂಬರೂಪದಿಂತಾನೆಪೊಕ್ಕು- ಮೇಘಾದಿಗಳಿಂ ಜಲಪ್ರತಿಬಿಂಬಮಂಮರಸಿ ಹಿಮಕಿರಣಾದಿಗಳಿಂದಾ ಜಲಪ್ರತಿಬಿಂಬಮಂ ತಡದು ಉಷ್ಣಕಿರಣದಿಂದಾಜಲಮಂಹೀರ್ದು-ಬಳಿಕಪ್ರತಿಬಿಂಬಮಂತನ್ನೊಡಗೂಡಿಕೊಳುತಿರ್ಪನೋಹಾಗೆಮಹೇಶ್ವರನುತನ್ನಮಾಯಾಶಕ್ತಿಯೊಡನೆಚಿತ್ಪ್ರಧಾನತ್ವದಿಂನಿಮಿತ್ತಕಾರಣಮಾಗಿ ಜಡಪ್ರಧಾನತ್ವದಿಂ ದುಪಾದಾನಕಾರಣಮೆಂದೆನಿಸಿ ಬುಧ್ಯಾದಿಕಾರ್ಯಮಂಸೃಜಿಸಿ ಜೀವರೂಪದಿಂದಲ್ಲಿ- ತಾನೆಪ್ರವೇಶಿಸಿ ಕರ್ಮದಿಂ ಭೋಕ್ತೃವೆನಿಸಿ-ನಿಯಮಶಕ್ತಿಯಿಂದಾಭೋಗ್ಯಭೋಕ್ತೃಗಳಂ ನಿಯಮಿಸಿ ರುದ್ರರೂಪದಿಂದಾಕಾರ್ಯಮಂ ಸಂಹರಿಸಿ- ಬಳಿಕ ಶ್ರುತ್ಯಾಚಾರ್ಯರೂಪದಿಂದಾ ಜೀವನಂತನ್ನೊಡನೈಕ್ಯಮಂ ಮಾಡಿಕೊಳ್ಳುತಿರ್ಪನೆಂಬವೇಸಂಸೃತಿಯಕ್ಕುಂ॥

— ವ್ಯಷ್ಟಿಸಮಷ್ಟಿವಿವೇಕ. —

ಬಳಿಕ ವ್ಯಷ್ಟಿಸಮಷ್ಟಿಯೆಂಬುದೇ ಜೀವೇಶ್ವರರ್ಗೆ। ವಿಭಾಗೋಪಾಧಿಧ್ವಯವುದರಲ್ಲಿ। ಅನೇಕವೃಕ್ಷಗಳುಳ್ಳದನೊಂದುವನವಾಗಿ ತಿಳಿವಂತೆ-ಅನೇಕಜೀವರೆಲ್ಲರನ್ನೂ-ತನ್ನಾತ್ಮರೆಂಬಭಿಮಾನವೇ । ಈಶ್ವರಂಗೆಸಮಷ್ಟಿರೂಪವಾಹುದು ಇದೊಂದು ವೃಕ್ಷವಿದೊಂದು ವೃಕ್ಷವೆಂದು। ಬೇರೆ ಬೇರೆ ಕುರುಹಿಸುವಂತೆ-ಭಿನ್ನಭಿನ್ನ ದೇಹಿದ್ದಾಭಿಮಾನವೇ ಜೀವಂಗೆವ್ಯಷ್ಟಿರೂಪವುಕ್ಕುಂ.

—* ಕೂಟಸ್ಥನಾದಿನಾಮವಿವೇಕ. *—

ಮತ್ತಮಾ ವಿಶ್ವಾದಿಜೀವತ್ರಯಾಧಿಷ್ಠಾನಚೇತನನುತರ್ಯನು।ಸ್ವಯಂಶಬ್ದಾರ್ಥನು ಸಾಕ್ಷಿಕನು ಪಾರಮಾರ್ಥಿಕಜೀವನು ಪ್ರತ್ಯಗಾತ್ಮನು ಅಂತರ್ಯಾಮಿ ಅನುಸಂಧಾತೃ ಅವಚ್ಛಿನ್ನಜೀವನು ತ್ವಂಪದಲಕ್ಷ್ಯಾರ್ಥ ಮೆಂಬಿವು ಕೂಸಪರ್ಯಾಯನಾಮಗಳಕ್ಕುಂ.

—* ಬಹ್ಮಪರ್ಯಾಯನಾಮಗಳು. *—

ಮತ್ತಮಾ ಅಂತರ್ಯಾಮಿ ಮೊದಲಾದ ಈಶ್ವರತ್ರಯಕ್ಕೆ ಅಧಿಷ್ಠಾತೃ ಪರಬ್ರಹ್ಮ ಪರತತ್ವ ಪರಮಾತ್ಮ ಸರ್ವಾಧಿಷ್ಠಾತೃ ವಿಶುದ್ಧಚೈತನ್ಯ ನಿರ್ಗುಣ ನಿರ್ವಿಶೇಷ ನಿಷ್ಕಳ ನಿರವದ್ಯ ನಿರಂಜನ ಅಸಂಗ ನಿರುಪಮಾನಂದ, ನಿರ್ವಿಕಾರ ನಿರ್ಮಾಯ ನಿರುಪದ್ರವ ಸತ್ತಾಮಾತ್ರ ಸತ್ಯ ತತ್ಪದಲಕ್ಷ್ಯಾರ್ಥ ಮೆಂಬಿವು ಮೊದಲಾದವೇ ಅದ್ವೈತ ಬ್ರಹ್ಮಪರ್ಯಾಯನಾಮಂಗಳಕ್ಕುಂ॥

— ದೃಗ್ವಿವೇಕಸಾರ. —

ಬಳಿಕ ಮೃತ್ತಿಕೆಯೊಂದೇ ನಾಮರೂಪಗಳಿಂ ಘಟಾದಿಬಹುಭೇದಮಾದಂತೆ। ಸುವರ್ಣವೊಂದೇ ನಾನಾಭರಣದಿಂ ಕಟಕಮಕುಟಾದಿ ಹಲವಾಭರಣವಾದಂತೆ। ಜಲವೊಂದೇ ವಾಯುವಶದಿಂ ಫೇನತರಂಗಾದಿ ಸಮುದಾಯವಾದಂತೆ। ದೀಪವೊಂದೇ ಘಟವಿವರಗಳಿಂ ಬಹುರೂಪವಾದಂತೆ। ಮಾರುತವೊಂದೇ ವಂಶವಿವರಗಳಿಂ ।ಮಧುರಮಂದ್ರಾದಿವಿಭಿನ್ನವಾದಂತೆ। ಸ್ವರವೊಂದೆ ಗಾಯಕನ ಕಿರಣವೃತ್ತಿಯಿಂ ನಾನಾರಾಗವಾದಂತೆ। ಗಗನವೊಂದೇಗೃಹಾದ್ಯುಪಾಧಿಯಿಂದನೇಕವಾದಂತೆ । ಧನಿಯೊಂದೇ ವಾದ್ಯ ಭೇದದಿಂದಹಲವುಬಗೆಯಾದಂತೆ। ನಭವೊಂದೆ ಕರಳೇದಳದ ಖಂಡಂಗಳಿಂ ಕರಿತುರಗಾವಿಚಿತ್ರವಾದಂತೆ । ರವಿಯೊಬ್ಬನೇಜಲಕುಂಭಾದಿಕದಿಂ ನಾನಾತ್ವವಡೆದಂತೆ । ಮುಖವೊಂದೇ ದರ್ಪಣಭೇದದಿಂದನೇಕವಾದಂತೆ । ಲಕ್ಷ್ಯ

ವೊಂದೇಬಹುಬಿಂದುಗಳಿಂದಶ ಶತ ಸಹಸ್ರಾದಿಕವಾದಂತೆ। ಚಿತ್ತೊಂದರಲ್ಲಿ। ಉಪಾಧಿಭೇದಕಲ್ಪನೆಯಿಂ। ಪೂರ್ವೋಕ್ತಜೀವೇಶಾದಿಸಕಲಭೇದ ವ್ಯವಹಾರಕಲ್ಪನವುಪ್ಪುದುಬಿವುದೊದಲಾದವೆಲ್ಲಂ। ದೃಗ್ದೃಶ್ಯವಿವೇಕಸಾರವಾಗಿಕ್ಕುಂ॥

— ಮಾಯಾಸ್ವರೂಪವಿವೇಕ. —

ಬಳಿಕ ನಾದಿಯಿಂಚಂದ್ರನಕಳೆಕಚಂದ್ರನೆನ್ನದಿಕ್ಕ ಚಂದ್ರನಂಮುಸುಕದ ಚಂದ್ರನಿಂಬೆಳಗಿಸಿಕೊಂಡು। ಚಂದ್ರಪೂರ್ಣಕಳೆಯಿಂದಡಗಿತೋರದಂತೆ। ಅನಾದಿಯಾದಭಾವರೂಪಾಜ್ಞಾನವು। ನಾಸಂನನರಿಯನೆಂಬ'ಪ್ರಸಿದ್ಧವಾದಲೋಕವ್ಯವಹಾರದಲ್ಲಿ। ಆತ್ಮನನ್ನೆವಿಕ್ಕ। ಆತ್ಮನನಾಚ್ಛಾದಿಸದೆ। ಆತ್ಮನಿಂದರುಹಿಸಿಕೊಳ್ಳುತಿಹುದಾಗಿಯುಂ । ಮತ್ತಮಗ್ನಿಯದಾಹಶಕ್ತಿಯುಂ। ಹೀಗೆಮಣಿಮಂತ್ರಾದಿಪ್ರಯೋಗದಿಂ ತಾನೇಬಂಧಿಸಿಕೊಳ್ಳುತ್ತಿಹುದದರಿಂದ। ಅಗ್ನಿಸ್ವರೂಪವಲ್ಲದೆ। ಅಗ್ನಿಯಂಬಿಟ್ಟತೋರದೆ। ಸ್ಫೋಟಕಾದಿಕಾರ್ಯಗಮ್ಯವಾಗಿರ್ಪುದೋಹಾಗೆ ಬ್ರಹ್ಮವಿಲಕ್ಷಣವಾಗಿತೋರದೆ। ನಿಯಮಾದಿಕಾರ್ಯಗಮ್ಯವಾಗಿಯುಂ । ಅಘಟಿತಘಟನಾಸಮರ್ಥವಾಗಿಯುಂ। ಸರ್ವಾನರ್ಥಗಳಿಗೆ ಕಾರಣವುಪ್ಪುದೇ। ಗ್ಯಸ್ವರೂಪಮಾಯಾಶಕ್ತಿಯಕ್ಕುಂ॥

— ಮಾಯಾಲಕ್ಷಣ. —

ಬಳಿಕ ಅಸತ್ತು ಜಡ ದುಃಖ ಅನಿತ್ಯ ಖಂಡಿತವೆಂಬವೇ ಅಸದ್ರೂಪ॥ ಮೂಢವಾದಪಾಷಾಣಾದಿಕವೇ ಜಡರೂಪ। ರಜಸ್ತಮೋಮಯವಾದ ಬುದ್ಧಿಯಘೋರಾದ್ಯ ಸರ್ವವೃತ್ತಿಯೇದುಃಖರೂಪ । ತೋರಿಕಡಗದೇಹಾದಿಕವೇಅನಿತ್ಯರೂಪ। ಕಾಲಪರಿಚ್ಛೇದಾದಿಕವೇಖಂಡಿತರೂಪವಕ್ಕುಂ॥

— ಅನಿರ್ವಾಚನವಪ್ರಕಾರ. —

ಬಳಿಕ ಭಿನ್ನ ಅಭಿನ್ನ ಭಿನ್ನಾಭಿನ್ನ ಸತ್ತು ಅಸತ್ತು ಸದಸತ್ತು ಸಾವಯವ ನಿರವಯವ ಸಾವಯವನಿರವಯವಮಲ್ಲೆಂಬುದು। ಇಂತುಮಾಯೆಗೆನಿರ್ವಾಚ್ಯಸಪ್ತಪ್ರಕಾರಗಳು। ಅವುಗಳೊಳು। ಘಟಪಟಾದಿಗಳು ಬೇರೆ ಬೇರೆತೋರ್ಪುದೇಭಿನ್ನ। ಘಟವೊಂದಾಗಿ ತೋರ್ಪುದೇಅಭಿನ್ನ ಶರೀರದೊಳು ಅವಯವಗಳು ಬೇರೆ ಬೇರೆತೋರಿದರುಂ ಯೆಲ್ಲವೂಶರೀರವಾಗಿರುವದುಂ। ಲೋಪನದಾದಿಗಳು ಭೋಗಸಾಧನವಾದಶರೀರಕ್ಕೆಸೇರಿಯುಂ ಸೇರದೆಯುಂ ಯಿಗುವದೇಭಿನ್ನಾಭಿನ್ನ। ಇದೆಯೆಂಬ ಗಗನಾದಿಕವೇಸತ್ತು ಇಲ್ಲವೆಂಬ ಗಗನಕುಸುಮವೇ ಅಸತ್ತು ಘಟಾಕಾರವಾಗಿರ್ಪುದೇಸಾವಯವ

ನಿರಾಕಾರವಾಗಿಸ್ವಾಕಾರವು ೫ ಅಭಾವವೇನಿರವಯವ। ಅನಿರ್ವಾಚವಾದನೆರುಹೆಂಬಅಜ್ಞಾನವೇಸಾವಯವನಿರವಯವಮಲ್ಲೆಂಬುದಕ್ಕಾ೯

— ಮಾಯಾಪ್ರತೀತಿತ್ರಯ. —

ಬಳಿಕ ಮಾಯೆಯೊಳ್ ಶ್ರುತಿಸಂಬಂಧಿಜ್ಞಾನ । ಯುಕ್ತಿಸಂಬಂಧಿಜ್ಞಾನ । ಲೋಕಸಂಬಂಧಿಜ್ಞಾನವೆಂಬ । ಜ್ಞಾನತ್ರಯಾದಿಂಕ್ರಮವಿಡಿದು । ಗಗನಕುಸುಮದಂತೆ । ಶುಚ್ಛವೆನಿಸಿ । ಶುಕ್ತಿಕಾರಜತದಂತೆ ಅನಿರ್ವಚ್ಯನೆನಿಸಿ ಆತ್ಮನಂತೆ ಆಸ್ತಿಯೆಂದೆನಿಸಿ ಕೊಳ್ಳುತಿಕ್ಕುಂ ॥

— ಮಾಯಾಪಂಚಕ. —

ಮತ್ತಮಾ ಮನಸ್ಸು ಮಾಯೆ ಮೋಹ ಅವಿದ್ಯೆ ಅನೃತಾತ್ಮಿಕೆಯೆಂಬವೇ । ಮಾಯಾಪಂಚಕಮದರಲ್ಲಿ ಜೀವಚೇತನವನಾಚ್ಛಾದಿಪ್ಪುದರಿಂ ತಮಸ್ಸೆನಿಸುವದು । ಜಗದ್ರೂಪವನಾದನ್ಯಥಾತೋರ್ಕೆಗೆ ಕಾರಣಮಪ್ಪುದರಿಂ ಮಾಯೆಯೆನಿಸುವದು । ಆತೋರಿದಜಗತ್ತಿನಲ್ಲಿ ಶುಕ್ತಿಕಾರಜತಾದಿ ವಿಪರೀತಜ್ಞಾನಮಂ ಪುಟ್ಟಿಸುವದಾಗಿ ಮೋಹವೆನಿಸುವದು । ವಿದ್ಯೆಯಿಂಕೆಡುವದರಿಂದ ವಿದ್ಯೆಯೆನಿಸುವದು । ಸದ್ರೂಪಕ್ಕೆ ವಿಲಕ್ಷಣಮಪ್ಪುದರಿಂದ ನೃತಾತ್ಮಿಕೆಯೆಕ್ಕುಂ ॥

— ಮಾಯಾಧರ್ಮದ್ವಯ. —

ಬಳಿಕ ಸಂಕೋಚವಿಕಾಸಗಳೆ ಮಾಯಾಧರ್ಮದ್ವಯಮದರಲ್ಲಿ ಹೇಗೆಚಿತ್ರಪಟವು । ಉನ್ನತಪ್ರಸರಣದಿಂ ಚಿತ್ರಂಗಳಂ ಬಹುಳಮಾಗಿಕಾಣಿಸಿ । ಸಂಕೋಚದಿಂ ಚಿತ್ರಗಳಂ ಮರೆಸುತ್ತಿಹುದೋ ಹಾಗೆಮಾಯೆಯು । ತನ್ನ ವಿಕಾಸಧರ್ಮದಿಂ ಜಗತ್ಪ್ರಪಂಚಮಂ ತೋರಿ । ಸಂಕೋಚಧರ್ಮದಿಂದ ನಡಗಿಸಿಕೊಳ್ಳುತಿರ್ಕುಂ ॥

— ಮಾಯಾಗುಣದ್ವಯ. —

ಬಳಿಕ ಅಸ್ವತಂತ್ರತೆಗಳೆಂಬೆರಡು ಮಾಯಾಗುಣಂಗಳವುಗಳಲ್ಲಿ । ಮಾಯೆಯು ಮಿಥ್ಯೆಯುಪ್ಪುದರಿಂ । ಸದ್ರೂಪಚೈತನ್ಯವಂಬಿಟ್ಟು ತೋರದಿಹುದೇ । ಅಸ್ವತಂತ್ರತೆಯೆನಿಸುವದು । ಸಾಕ್ಷಿಕನಾಗಿರ್ಪುದರಿಂದಸಂಗನಾದಾತ್ಮನಂ । ಜೀವಾದಿಪ್ರಪಂಚಮಯನಾಗಿಮಾಳ್ಪುದೇ । ಸ್ವತಂತ್ರತೆಯೆಕ್ಕುಂ ॥

— ಮಿಥ್ಯಾತ್ವನಿರುಕ್ತಿ. —

ಬಳಿಕ ವಸ್ತುಗತ್ಯಾ ಪರಮಾರ್ಥವಿಚಾರದೊಳು ಮಾಯೆಯೆಂಬುದು ಯಿಲ್ಲವಾಗಿ । ತಾನಿಲ್ಲಗಳಕಡೆ ತೋರುತ್ತಿರುವುದೇ ಮಿಥ್ಯೆ ಇಲ್ಲನ್ನಲಳವಲ್ಲದ್ದೇ

ಮಿಥ್ಯೆ। ಬ್ರಹ್ಮಜ್ಞಾನಮಾತ್ರದಿಂದದು ಪೋಪುದೆ ಮಿಥ್ಯೆ । ಕಾಲತ್ರಯದಲ್ಲಿಯೂ ನಿಷೇಧಿಸಲ್ಪಡತಕ್ಕದ್ದೇ ಮಿಥ್ಯೆ । ಸತ್ತಿಗಿಂತಲೂ ಬೇರೆಯಾಗಿ ತೋರ್ಪುದೇ ಮಿಥ್ಯೆ। ಇಂತು ಮಿಥ್ಯಾರೂಪಮಾಯೆ । ತತ್ಕಾರ್ಯಮಾದ ಪ್ರಪಂಚನ್ನಿಷ್ಟಮಾದಮಿಥ್ಯಾತ್ವ । ತತ್ಜ್ಞಾನಮುಂತಾದವೆಲ್ಲವೂ । ಸ್ವರೂಪತಃ ಮಿಥ್ಯೆಯಾಗಿರಲು । ಬ್ರಹ್ಮಾತಿರಿಕ್ತಮಾಗಿ । ಮಾಯೆಯು ಸರ್ವಥಾಶೂನ್ಯಮಾದರುಂ ಬ್ರಹ್ಮಜ್ಞಾನಪರ್ಯಂತಮುಂಸ್ವಪ್ನಗಜಾದಿಗಳಂತೆ ತೋರುತಿರ್ದು ಬಳಿಕ ವಿಚಾರಬಾಧ್ಯಮಪ್ಪುದೇ ಮಿಥ್ಯಾತವೆಂದು ಮುಮುಕ್ಷುಗಳು ನಿರ್ಧರಿಸಿ ಪೇಳ್ವರ್ಕಂ॥

— ಮಾಯಾಪ್ರಕೃತಿತ್ರಯ. —

ಮತ್ತಂ ವಿಶುದ್ಧ ಸತ್ವ ಸ್ವರೂಪಮಾಯೆ । ಮಲಿನಸತ್ವಸ್ವರೂಪಾವಿದ್ಯೆ ತಮಃಪ್ರಧಾನರೂಪಪ್ರಕೃತಿಯೆಂಬವೇ । ಮೂರುಮಾಯಾಪ್ರಕೃತಿಗಳವುಗಳಲ್ಲಿಮಾಯೆಯು। ಸುಪ್ತಿಲಯಂಗಳಲ್ಲಿ। ಐಕ್ಯಾಧ್ಯಾಸಮಾಗಿಗ್ದು।ಸ್ವಪ್ನಜಾಗರಣಂಗಳಲ್ಲಿನಿಂತು। ಭೇದಾವಸ್ಥೆಯಂ ಪೊಂದುತ್ತಿಹುದಾಗಳಾಬ್ರಹ್ಮಚೈತನ್ಯಮದರಲ್ಲಿಪ್ರತಿಫಲಿಸಿ । ಸರ್ವಜ್ಞತ್ವಾದಿಗುಣವಿಶಿಷ್ಟನಾದೀಶ್ವರನೆನಿಸಿ। ತತ್ಪದಾರ್ಥವೆನಿಸಿ। ಪ್ರೇರಯಿತೃವೆನಿಸಿ ಕೊಂಬುವದರಿಂದ। ಆಮಾಯೆ । ಈಶ್ವರಂಗುಪಾಧಿಯಾಗಿ ।ಮೋಹಕಾರಿಣಿಯೆನಿಸಿಕೊಂಬುದು । ಮತ್ತಮಾಅವಿದ್ಯೆ । ತನ್ನ ನಾನಾತ್ವದಿಂ। ಭೋಕ್ತೃಗಳಾದಪಶುಪದಾರ್ಥವೆನಿಪಸಜೀವರಿಗೆ । ಉಪಾಧಿಯಾಗಿಮೋಹಿಸುತ್ತಿಹುದು । ಮತ್ತಮಾಪ್ರಕೃತಿಯೆಭೋಗ್ಯಾತ್ಮಕತ್ವದಿಂ । ಪಾಶಪದಾರ್ಥ ವೆನಿಸಿಕೊಂಡು। ಗುಣತ್ರಯಸಮಾನಾವಸ್ಥೆಯಿಂದಿರ್ದು। ಬಳಿಕ ಆವಿದ್ಯೆಯೊಳ್ ಪ್ರವೇಶಿಸಿದಜೀವರ ಭೋಗಾರ್ಥಮಾಗಿ ।ಸಕಲಕಾರ್ಯಮಾಗಲೋಸುಗ। ಈಶ್ವರಸನ್ನಿಧಾನಲಕ್ಷಣ ವೀಲಕ್ಷಣಮಾತ್ರದಿಂದ। ವಿಕಸಿಸಿ ಪ್ರಪಂಚವಂ ಕಲ್ಪಿಸುತಿರ್ಕುಂ॥

— ಮಹದಾದಿಸೃಷ್ಟಿಕ್ರಮ. —

ಮತ್ತಮಾಪ್ರಕೃತಿಯುಂ । ವಿಕೃತಿಯಿಂ । ಕಾಲತತ್ವಮಂಪಡೆವುದುಮೇಲಾಕಾಲವಶದಿಂಪರಿಣಮಿಸಿ ಮಹತ್ತತ್ವವೆನಿಸುವದು । ಬಳಿಕಾ ಮಹತ್ತತ್ವಮಾದೊಡೆ। ಬಿತ್ತಿನೀರೆರೆದಂಕುರಿಸದೆ। ಮೊದಲಂತಿರದೆ। ಉದ್ಭಿಜ್ಞಾನವಸ್ಥೆಯನೈದಿಹಬೀಜದಂತೆ । ಕಾರಣಪ್ರಕೃತಿಯಲ್ಲದೆ। ಕರಣಮಾದಹಂಕಾರಮಲ್ಲದೆ । ಮಿಥ್ಯಾಜ್ಞಾನವನಿರ್ವಿಕಲ್ಪಸ್ವರಪದಿಂ ಮಧ್ಯಾವಸ್ಥೆಯೆನಿಸುವದು ॥ ಮತ್ತಮಾಮಹತ್ತತ್ವದಿಂ । ಗುಣಭೇದವಡೆದು । ಮಿಥ್ಯಾಜ್ಞಾನದ

ನಿರ್ವಿಕಲ್ಪಸ್ವರೂಪವಾದ ಪ್ರಥಮಾಧ್ಯಾಸವೆನಿಸಿಕೊಂಬ ಮೂಲಾಹಂ ಕಾರಜವಿಸುತಿರ್ಕುಂ ॥ ಬಳಿಕ ಸತ್ವಗುಣ ರಜೋಗುಣ ತಮೋಗುಣವೆಂಬ ವೇ। ಗುಣತ್ರಯವಾಗಿಪ್ಪುದು । ಪ್ರಕಾಶಪ್ರವೃತ್ತಿ ಮೋಹವೆಂಬವೇ ಸ ತ್ವಾದಿಗುಣರೂಪಂಗಳು। ವೈಕಾರಿಕ ತೈಜಸಭೂತಾದಿಯೆಂದು ಅಸತ್ವಾದಿ ಗುಣಪರ್ಯಾಯ ನಾಮಗಳವ್ರಗಳಲ್ಲಿ । ನಿತ್ಯಗುಣದಿಂ ಮಾನಸಾದ್ಯಂತಃಕರ ಣಚತುಷ್ಟಯವುಂ । ಶ್ರೋತ್ರಾದಿಜ್ಞಾನೇಂದ್ರಿಯಪಂಚಕಮುಂ।ಪು ಟ್ಟಿದನು ರಜೋಗುಣದಿಂ ವಾಗಾದಿಕರ್ಮೇಂದ್ರಿಯಪಂಚಕಮುಂ। ಪ್ರಾಣಾದಿ ವಾಯುಪಂಚಕಮುಂ ಉದಿಸಿದವು ತಮೋಗುಣದಿಂದ ಆಕಾಶಾದಿ ಭೂತ ಪಂಚಕಮುದಿಸಿತು ॥

— ಅಂತಃಕರಣಚತುಷ್ಟಯ. —

ಬಳಿಕ ಭೂತಪಂಚಕಂಗಳ ಪಂಚೀಕರಣಮೇಳದಿಂ । ಬ್ರಹ್ಮಾಂಡಭು ವನಶರೀರಘಟಾದಿವಿಷಯಂಗಳಂ। ನೆನವುದು।ನಿಶ್ಚಯಿಸುವದು। ಅಭಿಮಾ ನಿಸುವದು। ಅವಧರಿಸುವದೆಂಬುವವೇ ವ್ಯಾಪಾರಂಗಳು । ಚಂದ್ರ। ಚತು ರ್ಮುಖ। ಕ್ಷೇತ್ರಜ್ಞ। ತ್ರಿಪುರಾಂತಕರೆಂಬುವರೇ ಅಧಿದೇವತೆಗಳು।ಹೃದಯ ಗೋಳಕವೇಸ್ಥಾನಮುಕ್ಕುಂ॥

— ಜ್ಞಾನೇಂದ್ರಿಯಪಂಚಕ. —

ಮತ್ತಮಾ। ಶ್ರೋತ್ರಾದಿಜ್ಞಾನೇಂದ್ರಿಯಂಗಳಿಗೆ। ಕ್ರಮದಿಂಶಬ್ದಾದಿ ಗಳಂ ವಿಷಯಗೊಳಿಸುವೆದೆಂದರೇ।ಶಬ್ದವಂಕೇಳುವದು ಸ್ಪರ್ಶವಂಸೋಂ ಕುವದು, ರೂಪವಂನೋಡುವದು, ರಸವಂರುಚಿಸುವದು, ಗಂಧವಂವಾಸಿ ಪುವೆಂಬುವದೇ ವ್ಯಾಪಾರಗಳು। ದಿಕ್ಕು ಮಾರುತ, ಮಿತ್ರ, ವರುಣ, ಅಶ್ವಿ ನೇಯರೆಂಬವರೇ ಅಧಿದೇವತೆಗಳಾಗಿಹರು।ಕರ್ಣಾದಿಗೋಳಕಂಗಳೇ ಸ್ಥಾ ನಂಗಳಕು ೦॥ ಬಳಿಕ ಶ್ರೋತ್ರಾದಿಂದ್ರಿಯಗಳಿಗೆ-ಬಾಹ್ಯದೊಳಗೆ ಶಬ್ದಾ ದಿಗಳನರಿವಂತೆ । ಕಿವಿಗಳಂ ಅಂಗುಳಿಯಿಂ ಮುಚ್ಚುವಲ್ಲಿ-ಪ್ರಾಣವಾಯು ಜಠರಾಗ್ನಿಗಳಲ್ಲುಂಟಾದ। ಶಬ್ದಗ್ರಹಣಾನುಭವದಿಂ। ನೇತ್ರವಂಮುಚ್ಚಿದ ಲ್ಲಿಯೊಳಗಣ ತಮೋರೂಪಗ್ರಹಣದಿಃ ಅನ್ನಪಾನಸ್ವೀಕಾರವಾದಲ್ಲಿ। ಉ ಷ್ಣಶೀತಾದಿಸ್ಪರ್ಶಗ್ರಹಣದಿಂ ಉದ್ಗಾರವಾದಲ್ಲಿ ರಸಗಂಧಗ್ರಹಣದಿಂ। ಅಂತರಶಬ್ದಾದಿ ವಿಷಯಗ್ರಹಣಗಳುಂಟೆಂಬುದೇ ಸಿದ್ಧಮಕ್ಕುಂ॥

— ಕರ್ಮೇಂದ್ರಿಯಪಂಚಕ. —

ಮತ್ತಮಾ ವಾಗಾದಿ ಕರ್ಮೇಂದ್ರಿಯಂಗಳಿಗೆ ಕ್ರಮದಿಂ ನುಡಿವುದು

ಹಿಡಿವುದು ಬಿಡುವದು ನಡಿವುದು ಆನಂದಗೊಳಿಸುವದೆಂಬವೇವ್ಯಾಪಾರಂಗಳು ಅಗ್ನಿ ಇಂದ್ರ ರವಿ ಮೃತ್ಯು ಪ್ರಜಾಪತಿಗಳೆಂಬವರೇ ಅಧಿದೇವತೆಗಳು ಮುಖ ದಿಗೋಳಕಂಗಳೇ ಸ್ಥಾನಗಳಕ್ಕುಂ.

— ಅಧ್ಯಾತ್ಮಿಕಾದಿವಿವೇಕ —

ಬಳಿಕವುಗಳಲ್ಲಿ ಅಂತಃಕರಣಚತುಷ್ಟಯ ಜ್ಞಾನೇಂದ್ರಿಯಪಂಚಕಕರ್ಮೇಂದ್ರಿಯ ಪಂಚಕವುಂಗೂಡಿ ಹದಿನಾಲ್ಕು ಅಧ್ಯಾತ್ಮಿಕಂಗಳು ಅವುಗಳ ವಿಷಯಗಳೇ ಆದಿಭೌತಿಕಂಗಳು ಅವುಗಳಗಧಿದೇವತೆಗಳೆ ಅಧಿದೈವಿಕಂಗಳೆಂನಿಸಿಕೊಳ್ಳುತಿರ್ಕುಂ॥

— ಇಂದ್ರಿಯಮೂಲಸಮನ್ವಯ. —

ಮತ್ತಮಾ ಇಂದ್ರಿಯಾಧಿದೇವತೆಗಳೇ ವಿರಾಟ್ಪುರುಷನ ಇಂದ್ರಿಯಂಗಳು ಆ ಇಂದ್ರಿಯಂಗಳೇ ಹಿರಣ್ಯಗರ್ಭನಶರೀರವು। ಆಶರೀರವೇ ತಮೋರೂಪದಿಂ ಅಂತರ್ಯಾಮಿಗಾವರಣಮಾಗಿರ್ಕುಂ॥

— ಪ್ರಾಣಪಂಚಕಾದಿ. —

ಮತ್ತಮಾಪ್ರಾಣವಾಯುವು ಹೃದಯಸ್ಥಾನದಲ್ಲಿರ್ದು। ಉಚ್ಛ್ವಾಸನಿಶ್ವಾಸಗಳಗೈಯ್ಯುತ್ತಿಹುದು। ಅಪಾನವಾಯುವು। ಗುದಸ್ಥಾನದಲ್ಲಿರ್ದು। ಮಲಮೂತ್ರಂಗಳಂತ್ಯಜಿಸುತ್ತಿಹುದು।ಸಮಾನವಾಯುವು।ನಾಭಿಸ್ಥಾನದಲ್ಲಿರ್ದು! ಉಂಡನ್ನ ಮುಂಸ್ವಾಂಗಗಳಿಗೆ ಹಂಚುತ್ತಿಹುದು-ಉದಾನವಾಯುವು ಕಂಠಸ್ಥಾನದಲ್ಲಿರ್ದು। ಉದ್ಧಾರಮುಂಮಾಡುತ್ತಿಹುದು-ವ್ಯಾನವಾಯುವು। ಸರ್ವಾಂಗದಲ್ಲಿರ್ದು ದೇಹಮುಂಧರಿಸಿಕೊಂಡಿರ್ಕುಂ। ಮತ್ತಮಾವುಪವಾಯುಗಳೊಳು। ನಾಗವಾಯುವಿನಿಂ ಸೀನು ಕೆಮ್ಮು ದೇವದತ್ತವಾಯುವಿನಿಂ । ನಗೆನುಡಿ। ಧನಂಜಯವಾಯುವಿನಿಂ ಶೋಕಮೋಹಂಗಳಹ ವಾಧನಂಜಯವಾಯುವು। ಮೃತಮಾದ್ಮೆದುದಿನಪರ್ಯಂತಮಾದೇಹದಲ್ಲಿರ್ದು। ದೇಹವನೂದಿಸಿಕೆಡಿಸಿ ತಾನುಪೋಗುವದು ಬಳಿಕನಾಗಾದಿಗಳೇ ಬಾಹ್ಯವಾಯುಗಳೆನಿಸಿಕೊಂಡು। ವಾಗಾದಿಕರ್ಮೇಂದ್ರಿಯ ಚೇಷ್ಟಹೇತುಗಳಾಗಿಹವು। ಪ್ರಾಣಾದಿವಾಯುಗಳೇ ಶ್ರೋತ್ರಾದಿಜ್ಞಾನೇಂದ್ರಿಯಚೇಷ್ಟಾನಿಮಿತ್ತಗಳಾಗಿಹವು । ವೈರಂಭ ಮುಖ್ಯಪ್ರಭಂಜನ । ಅಂತರ್ಯಾಮಿ। ಸಂಜ್ಞೆಯುಳ್ಳ ಚತುರ್ವಿಧ ಜೀವಸಂಬಂಧಮಾದ ವಾಯುಗಳೇ ಮಾನಸಾದ್ಯಂತಃಕರಣ ಚೇಷ್ಟಕಾರಣಗಳಾಗಿರ್ಕುಂ॥

— ಭೂತಗುಣವಿಕಾರ. —

ಮತ್ತಮಾ ಭೂವ್ಯಾದಿಪಂಚಭೂತಂಗಳಿಗೆ ಕ್ರಮದಿಂ-ಧಾರಣ, ಪಿಂಡೀಕರಣ ಪಾಕ, ವ್ಯೂಹಕರಣ, ಅವಕಾಶಂಗಳೆಂಬವೇ। ವ್ಯಾಪಾರಂಗಳು ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಸದಾಶಿವರೆಂಬವರೇ। ಅಧಿದೇವತೆಗಳು-ಗಂಧಾದಿಗಳೇಮುಖ್ಯ ಗುಣಂಗಳಕ್ಕುಂ। ಮತ್ತಮಾಭೂತಗುಣಂಗಳಲ್ಲಿ। ಆಕಾಶಕ್ಕೆ ಪ್ರತಿಧ್ವನಿಯೆಂಬ ಶಬ್ದವೊಂದೇ ಮುಖ್ಯಗುಣ।ಜಲಕ್ಕೆ। ಬುಳಬುಳೆಂಬಶಬ್ದ। ಶೀತಸ್ಪರ್ಶಅಭಾಸ್ವರಶ್ವೇತವಾದ। ಮಧುರಸವೆಂಬವೇನಾಲ್ಕುಗುಣ। ಭೂಮಿಗೆ। ಗಡಗಡೆಂಬಶಬ್ದ। ಕಠಿನಸ್ಪರ್ಶ-ನೀಲಾದಿಚಿತ್ರವಾದ ಮಧುರಾಮ್ಲಾದಿನಾನಾರಸ। ಸುಗಂಧದುರ್ಗಂಧಗಳೆಂಬೈದು। ಗುಣಮಾದೊಡಂ ಶಬ್ದ ಸ್ಪರ್ಶ ರೂಪರಸ ಗಂಧವೆಂಬ ಗುಣಪಂಚಕದಲ್ಲಿ। ಶಬ್ದವಾಕಾಶಕ್ಕೆ ಸ್ಪರ್ಶವಾಯುವಿಗೆ। ರೂಪತೇಜಸ್ಸಿಗೆ-ರಸಜಲಕ್ಕೆ। ಗಂಧಪೃಥಿವಿಗೆ-ಪ್ರಧಾನಗುಣವಾಗಿಯುಂ ಮತ್ತೆ ಭೂತಪಂಚಕವು।ವಿಕೃತಿಯಿಂ ಭೌತಿಕಗಳಾದ ಘಟಾದಿಗಳಾಗಿ-ಪರಿಣಮಿಸೆ। ತದ್ವೈಚಿತ್ರ್ಯದಿಂ ದುಚ್ಚಾವಚವಾಗಿತೋರ್ಪ। ಪ್ರಪಂಚದೊಳು। ಸಕಲಗುಣಗಳುಂ-ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬವಸ್ಥೆಗಳಿಂದವುಗಳೊಳು ಸಂಸೃಷ್ಟಗಳಾಗಿಪ್ಪಂತೆಪರೀಕ್ಷಿಸೆ ತಿಳಿಯಲಕ್ಕುಂ॥

— ತ್ರಿಪುಟೀಲಕ್ಷಣ. —

ಬಳಿಕ-ಜ್ಞಾತೃ, ಜ್ಞಾನ, ಜ್ಞೇಯಗಳೆಂಬಮೂರೆ। ತ್ರಿಪುಟಿಯಾಗಿರ್ಪುದವರೊಳು। ಮೂಲಾಹಂಕಾರದಲ್ಲಿ ಪ್ರತಿಫಲಿಸಿರ್ದ ಜೀವಚೈತನ್ಯವೇಜ್ಞಾತೃವೆನಿಸುವದು। ಮನದಲ್ಲಿಪ್ರತಿಫಲಿಸಿರ್ದ।ಜೀವಚೈತನ್ಯವೇಜ್ಞಾನವೆನಿಸುವದು। ಭೂತಾದಿವಿಷಯಾವಚ್ಛಿನ್ನ ಚೈತನ್ಯವೇ। ಜ್ಞೇಯವೆನಿಸುವದು। ಈಮೂರುಂಸೋಪಾಧಿಕವಾಗಿ ಇಡಕ್ಕಧಿಷ್ಠಾನಚೇತನಮೆ ತಾನಾಗಿರ್ಪಂ॥

— ತತ್ವಗಳು. —

ಬಳಿಕ ಭೂತಪಂಚಕ। ಜ್ಞಾನೇಂದ್ರಿಯಪಂಚಕ। ಕರ್ಮೇಂದ್ರಿಯಪಂಚಕ। ಪ್ರಾಣಾದಿಪಂಚಕ। ಅಂತಃಕರಣಚತುಷ್ಟಯವೆಂಬಮನವೇ ಇಪ್ಪತ್ತುನಾಲ್ಕು ತತ್ವಗಳಾಗಿರಲು-ಅಹಂಕಾರಕಾಮಾದಿ ಮೂಲಾವಿದ್ಯೆಯೇಇಪ್ಪತ್ತೈದನೆಯತತ್ವವೆನಿಸುವದು। ಆಯಹಂಕಾರಗತಚಿದಾಭಾಸಜೀವನೆ ಇಪ್ಪತ್ತಾರನೇತತ್ವವಾಗಿರ್ಪನು। ಮಾಯೋಪಾಧಿಯೇ ಇಪ್ಪತ್ತೇಳನೆಯದಾಗಿರ್ಪುದು-ಮಾಯಾವಚ್ಛಿನ್ನ ನಾದ-ಈಶ್ವರನೇ ಇಪ್ಪತ್ತೆಂಟನೆಯತತ್ವ

ವು-ಅಹಂಕಾರಜೀವರ್ಗಾಧಿಷ್ಠಾನವಾದ ಕೂಟಸ್ಥನೇ ಇಪ್ಪತ್ತೊಂಭತ್ತನೇತತ್ವವಾಗಿಹನು। ಮಾಯೇಶ್ವರರ್ಗಾಧಿಷ್ಠಾನವಾದ ಬ್ರಹ್ಮವೇ ಮೂವತ್ತನೇಯ ತತ್ವವೆಂದರಿವುದು-ಅನನ್ಯಮಾಯಿಕವಾದ ಮಾಯೋಪಹಿತಬ್ರಹ್ಮಚೈತನ್ಯಮೆಂ ಮೂವತ್ತೊಂದನೆಯ ತತ್ವವಾಗಿರ್ಪುದು। ಸಚ್ಚಿದಾನಂದೈಕರಸಸ್ಫೂರ್ತಿಯುಪ್ಪುಉಪರಿತತ್ವವೇ ಮೂವತ್ತೆರಡನೆಯ ತತ್ವಮಪ್ಪುದು ಮತ್ತಂವಿಚಾರಲಕ್ಷ್ಯಭೇದದಿಂ। ತತ್ವಸಂಖ್ಯೆಯು ಬಹುವಿಧವಾಗಿರ್ದೊಡಂಪೇಳ್ದತತ್ವಗಳೊಳಗಂತರ್ಭಾವಮಪ್ಪುದಾಗಿ। ಇಂತೀಮೂವತ್ತೆರಡು ತತ್ವಂಗಳಿಗಸಂಗವಾದ ನಿರ್ಗುಣಸತ್ತಾಮಾತ್ರಮಪ್ಪ ಮಾಯೋಪಲಕ್ಷಿತಪರಾತ್ಪರಶಿವಚೈತನ್ಯವೇ ನಿತ್ಯಮುಕ್ತಬ್ರಹ್ಮಮೆಂದುಸ್ವಸ್ವರೂಪವನರಿಯಲ್ಪೇಳ್ಕುಂ.

## — ಸೃಷ್ಟಿಕ್ರಮ. —

ಮತ್ತಮಾಪ್ರಕೃತಿಯಿಂ ಕಾರ್ಯೋದಯಮಾದೊಡೆ ಕ್ರಮಸೃಷ್ಟಿಯೆಂದು ಯುಗಪತ್ಸೃಷ್ಟಿಯೆಂದು। ದ್ವಿಪ್ರಕಾರವಹುದದರಲ್ಲಿ। ಮೂಲಪ್ರಕೃತಿಯಿಂ ಮಹತ್ತತ್ವ ಅಹಂಕಾರ ಪಂಚತನ್ಮಾತ್ರಗಳೆಂಬ-ಸಪ್ತಪ್ರಕೃತಿಗಳವುಗಳಿಂ। ಪಂಚಭೂತಂಗಳವುಗಳಿಂ-ಬ್ರಹ್ಮಾಂಡದೇಹಘಟಾದಿಪ್ರಪಂಚೋದಯಮೇ ಕ್ರಮಸೃಷ್ಟಿಯೆನಿಸುವದು॥

## — ಯುಗಪತ್ಸೃಷ್ಟಿ. —

ಬಳಿಕ-ನಿಸ್ತರಂಗಸಮುದ್ರದೊಳೊಂದೇಕಾಲದಲ್ಲಿ। ವಾಯುವಶದಿಂ ವಿಚಿತ್ರಫೇನತರಂಗ ಬುದ್ಬುದಾದಿಗಳಾಗುವಂತೆ-ಸಚ್ಚಿದಾನಂದಾತ್ಮಕ ಬ್ರಹ್ಮದಲ್ಲಿ ಮಾಯಾಮಯನಾಮರೂಪ। ಪ್ರಸರಣವೇಯುಗಪತ್ಸೃಷ್ಟಿಯೆನಿಸುವದಿವೆರಡುತೆರನುಂ ಶ್ರುತಿಸಿದ್ಧಮಪ್ಪುದರಿಂದಂಗೀಕೃತಮಕ್ಕು॥

## — ಸೃಷ್ಟಿದೃಷ್ಟಾಂತ. —

ಬಳಿಕಿಲ್ಲಿ-ಅತಿರೋಹಿತಬ್ರಹ್ಮಸ್ವರೂಪನಪ್ಪುದರಿಂ। ವಿಕಾರವಿಲ್ಲದ ಈಶ್ವರನಿಂ ಜಡಪ್ರಕೃತಿಯುಕಾರ್ಯೋದಯಮೆಂತೆನೆ-ಇಚ್ಛಾಧಿಕವಿಲ್ಲದಸೂರ್ಯನಿಂಯುತ್ನಾದಿಕವಿಲ್ಲದಸೂರ್ಯಕಾಂತದಲ್ಲಿ ವಹ್ನಿಯುಜ್ವಲಿಸುವಂತೆಪರಬ್ರಹ್ಮನಿಂಪ್ರಕೃತಿಯಲ್ಲಿ ಮಹದಾದಿಕಾರ್ಯಮುದಿಸಲ್ ವಿರೋಧವಿಲ್ಲಂ॥

## — ಚತುರ್ವಿಧಕಾರ್ಯಕಲ್ಪನೆ. —

ಬಳಿಕ-ವೃತ್ತಿ, ಪರಿಣಾಮ, ಆರಂಭ, ವಿವರ್ತವೆಂದು। ಚತುರ್ವಿಧವಾಗಿ ಕಾರ್ಯೋದಯಮಪ್ಪುದವುಗಳಿಗೆ। ಪಟಕುಟೀಭಾವ-ಕ್ಷೀರದಧ್ಯಾ

ಕಾರ-ತಂತುಪಟನ್ಯಾಯ-ರಜ್ಜುಸರ್ಪ ತೋರ್ಕೆಯೆಂಬವೀ । ಕ್ರಮದಿಂ ದೃಷ್ಟಾಂತಚತುಷ್ಟಯಮಕ್ಕುಂ॥

—* ಮಿಥ್ಯಾದೃಷ್ಟಾಂತ. *—

ಬಳಿಕ ರಜ್ಜುಸರ್ಪ । ಸ್ಥಾಣುಚೋರ, ಸ್ವಪ್ನೇಂದ್ರಜಾಲ, ಗಂಧರ್ವನಗರ, ಶುಕ್ತಿಕಾರಜತ, ನೀಲನಭ, ಮರುಮರೀಚಿಕಾಜಲ, ಶಂಖಪೀತಿಮಾ ಜಪಾಕುಸುಮಸನ್ನಿಹಿತಸ್ಫಟಿಕಲೌಹಿತ್ಯಶರೀರಸ್ವಜ್ಞಾಪ್ತಿ ಮೊದಲಾದವೀ ಸದ್ರೂಪ ವಸ್ತುವಿನಲ್ಲಿ ಮಿಥ್ಯಾವಸ್ತು ಕಲ್ಪನೆಗೆ ದೃಷ್ಟಾಂತಸಮೂಹಗಳಕ್ಕುಂ.

—* ಕಾರಣತ್ವದೋಷಪರಿಹಾರ. *—

ಬಳಿಕಿಲ್ಲಿ ನಿರ್ವಿಕಾರಸ್ವರೂಪದಿಂದದ್ವಯಮಾದಾತ್ಮನಲ್ಲಿ ಮಿಥ್ಯಾವಸ್ತು ಕಲ್ಪಿತಮಾಯಿತಸೆ ಮೊದಲಾ ಭ್ರಾಂತಿ ಯಾವಾತಂಗಾಯಿತೆಂದೊಡೊಬ್ಬನೊಬ್ಬ ಯುವತೀಶ್ವರಂಗೆ ಸತಿಪತಿರತಿಕಾಂಕ್ಷೆಯೆಂಬ ತ್ರಿವಿಧಸ್ವಪ್ನಮೊಂದೇಕಾಲದಲ್ಲಿ ತೋರಲಾತಂಗದರಿಂದಾವ ದೋಷಮುಮಿಲ್ಲದಂತೆ ಸಾಕ್ಷಿಕನಾದಾತ್ಮನಲ್ಲಿ ಗುಣತ್ರಯಾತ್ಮಕ ಪ್ರಕೃತಿಯಿಂ ಭ್ರಾಂತಿಸಂವಜ್ಞತ್ವ ಭ್ರಾಂತಿ ಜ್ಞಾನಭ್ರಾಂತಿ ವಿಷಯಜ್ಞೇಯತೆಯೆಂಬ ತ್ರಿಪುಟೀಮಯಮಪ್ರಪಂಚವೇಕಕಾಲದಲ್ಲಿ ಕಲ್ಪಿತವಾಗಲಾತ್ಮಂಗಾವದೋಷಮುಮಿಲ್ಲವೆಂಬುದೇಸಿದ್ಧಮಕ್ಕುಂ॥

—* ಪ್ರಪಂಚತ್ರೈವಿಧ್ಯಭಾವನ. *—

ಮತ್ತಮಾ ಈಶ್ವರನಿಂ ಸೃಷ್ಟಮಾದ ಮಾಯಾಮಯಮಪ್ಪೀ ಮಹಾಪ್ರಪಂಚಮಾದೊಡೆ ತನ್ನ ಸ್ವರೂಪದಿಂ ದೊಂದೇಪ್ರಕಾರ ಮಾಗಿಹುದದರಲ್ಲಿ ಜೀವಬುದ್ಧಿವೃತ್ತಿಕಲಿತಮಾದ ಬೇರೊಂದು ಭೋಗ್ಯರೂಪತ್ವಕ್ಕೆ ಪ್ರೀತಿವಿಷಯಮೆಂದು ದ್ವೇಷವಿಷಯಮೆಂದು ಉಪೇಕ್ಷಾವಿಷಯಮೆಂದು ತ್ರಿವಿಧಮಾಗಿರ್ಪುದದರಲ್ಲಿ ವನಿತಾದಿಕವೇ ಪ್ರೀತಿವಿಷಯಮೆನಿಸುವುದು । ವ್ಯಾಘ್ರಾದಿಕವೇ ದ್ವೇಷವಿಷಯಮೆನಿಸುವುದು । ಬಲ್ಪಜತೃಣಾದಿಕವೇ ಉಪೇಕ್ಷಾವಿಷಯಮಕ್ಕುಂ॥

—* ಹಲವುಬಗೆಯಾಗಿತೋರ್ಪುದು. *

ಮತ್ತಮಾವಿಷಯಮೊಂದರಲ್ಲಿಯೆ ಈಶ್ವರನಿರ್ಮಿತಮಾದೇಕಾಕಾರಮುಂ ಜೀವನಿರ್ಮಿತಮಾದನಂತಾಕಾರಮುಂ ತೋರ್ಪುದದಕ್ಕೆ ದೃಷ್ಟಾಂತಮೆಂತೆನೆ ಈಶಕಲ್ಪಿತಮಾದ ರತ್ನಾದಿವಸ್ತು ಜಾತಮೇಕಾಕಾರವಾಗಿರ್ದ

ಡಾಭೋಕ್ತೃಗಳಾದಜೀವರಬುದ್ಧಿವೃತ್ತಿಕಲ್ಪಿತನಾನಾತ್ವದಿಂದ ಆ ರತ್ನಾದಿಕವೇ ತನ್ನ ಪಡದಾತಂಗೆಪ್ರೀತಿವಿಷಯವಾಗಿ ಪಡೆವಾತಂಗೆ ಇಚ್ಛಾವಿಷಯವಾಗಿ ಪಡೆಯದಾತಂಗೆದ್ವೇಷವಿಷಯವಾಗಿ । ವಿರಕ್ತಂಗುಪೇಕ್ಷಾವಿಷಯವಾಗಿಯುಂ ತೋರ್ಪುದು । ಮತ್ತಮಾಪರಮೇಶ್ವರನಿರ್ಮಿತವಾದ ವಸ್ತುರೂಪವೊಂದೇ ಬಗೆಯಾಗಿದ್ದರ್ಜ ಜೀವರಿಂಕಲ್ಪಿತವಾದ ಭೋಗ್ಯತ್ವಾಕಾರದಲ್ಲಿ ನಾನಾಪ್ರಕಾರವಾಗಿಹುದು। ಅದನಭಿವ್ಯಕ್ತಂ ಮಾಡಲೋಸುಗ ಮಿನ್ನೊಂದುದೃಷ್ಟಾಂತ ಮೆಂತೆನೆ, ಪಿತೃಜನ್ಯವಾ ದೊಬ್ಬಳೊಬ್ಬಸ್ತ್ರೀಯ ಮಾಂಸಮಯವಾದರೂಪವೊಂದೇ ತರದಿಂದಿಹುದಾಸ್ತ್ರೀಯೊಳ್ ಭೋಕ್ತೃಗಳಬುದ್ಧಿಕಲ್ಪಿತವಾದಾಕಾರದಿಂ ತಂದೆಗೆ ಮಗಳೆನಿಸಿ ಗಂಡಗೆ ಸತಿಯೆನಿಸಿ ಸುತನಿಗೆತಾಯಿಯೆನಿಸಿ ಮಾವಂಗೆಸೊಸೆಯೆನಿಸಿ ಬಹುವಿಧವಾಗುತ್ತಿಹಳಾಕೆಯೇ ಚಿಕ್ಕವರಿಗೆನಿಯಾಮಕಳೆಂದೆನಿಸಿದೊಡ್ಡವರಿಗೆ ನಿಯಾಮ್ಯಳೆಂದೆನಿಸಿ ಪಿತ್ರಾದಿಗಳಿಗೆ ಪೂಜಕಳೆಂದೆನಿಸಿ ಪತಿಗರ್ಧಶರೀರವಾಗಿ ತನಗಿಂತಲೂ ಪಶ್ಚಿಮದಲ್ಲಿಪ್ಪನರಿಗೆಮೂಡಲೊಳಿಪ್ಪಳೆಂದೆನಿಸಿ ಟೆಂಕಲೊಳಿಪ್ಪವರಿಗೆಬಡಗಲೊಳಿಪ್ಪಳೆಂದೆನಿಸಿ ಪೂರ್ವದೊಳಿಪ್ಪವರಿಗೆಪಡವಲೊಳಿಪ್ಪಳೆಂದೆನಿಸಿಯಾಕೆಯೇ ದಿಕ್ಕಾಲ ಕರ್ಮೋಪಾಧಿಗಳಿಂ ಪಲವುಬಗೆಯಾಗಿ ವ್ಯವಹರಿಸಲ್ಪಪ್ಪಳಂತು ಸರ್ವವಿಷಯಮುಂ ಈಶ್ವರನಿರ್ಮಿತವಾದೇಕಾಕಾರದಿಂ ಜೀವನಿರ್ಮಿತಮಾದನಂತಾಕಾರದಿಂದಿತ್ತೆರಮಪ್ಪುದವುಗಳೊಳು ॥

—* ಈಶ್ವರಪ್ರಪಂಚ. *—

ಈಶ್ವರನಿರ್ಮಿತಪ್ರಪಂಚವು ಗುರುಶಾಸ್ತ್ರಾದಿರೂಪದಿ ಮೋಕ್ಷಸಾಧಗಮಾಗಿಯುಂ ಪಾಪನಿವರ್ತಕ ಕರ್ಮಸಾಧನ ಮಪ್ಪುದರಿಂ ಬಾಧಕಮಲ್ಲದ್ದಾಗಿಯುಂ ಜೀವಾತ್ಮಪ್ರಸಿದ್ಧಮಪ್ಪುದರಿಂ ತನ್ನಂ ಬಿಡಲಾರಿಗುಮಶಕ್ಯಮಾಗಿಯುಂ ಮದುತಿರ್ಕೆ ॥

—* ಜೀವಪ್ರಪಂಚತ್ರಯನಿಷೇಧ. *—

ಬಳಿಕ ಜೀವಕಲ್ಪಿತಮಾದ ಪ್ರಪಂಚವುಬಂಧಕರಮಪ್ಪುದರಿಂ ಮುಮುಕ್ಷುಗಳಿಂಬಿಡಲ್ತಕ್ಕದಾದೊಡೆ ಅದುಆಶಾಸ್ತ್ರೀಯ ಪ್ರಪಂಚವು ಶಾಸ್ತ್ರೀಯಪ್ರಪಂಚವೆಂದು ದ್ವಿವಿಧವಾಗಿಪ್ಪುದಾಯ ಶಾಸ್ತ್ರೀಯಪ್ರಪಂಚವೇ ಬಂಧಕರಮಪ್ಪುದರಿಂತೀವ್ರವೇದು ಮದವೆಂದೆರಡುತೆರನಾಗಿಹುದೆ। ಬಳಿಕ ಆತ್ಮಬ್ರಹ್ಮವಿಚಾರಾದಿಕವೇ ಶಾಸ್ತ್ರೀಯ ಪ್ರಪಂಚವೆನಿಸುವುದು । ಕಾಮ ಕ್ರೋಧಾದಿಕವೇ ತೀವ್ರಪ್ರಪಂಚವೆನಿಸುವುದು । ಮನಃಕಲ್ಪಿತರಾಜಸಕರ್ಮಾದಿ

ಕವೇಮುದಪ್ರಪಂಚವೆನಿಸುವದು । ಜೀವಕಲ್ಪಿತತ್ರಿವಿಧಪ್ರಪಂಚದಲ್ಲಿ ಶಾಸ್ತ್ರೀಯಪ್ರಪಂಚವು ಜ್ಞಾನಸಾಧನದಿಂದಾತ್ಮ ಸಾಕ್ಷಾತ್ಕಾರವಾದಬಳಿಕ ಆರೂಢನಿಂ ಬಿಡಲ್ಪಕ್ಕದ್ದು ಆ ಶಾಸ್ತ್ರೀಯಂಗಳಾದ ತೀವ್ರಮಂದಪ್ರಪಂಚಗಳೇ ಆತ್ಮ ಸಾಕ್ಷಾತ್ಕಾರಕ್ಕೆ ವಿರುದ್ಧಗಳಾಗಿರುವದರಿಂ ಜ್ಞಾನಾಭ್ಯಾಸಕ್ಕೆ ಮುನ್ನವೇ ಬಿಡಲ್ಪಕ್ಕವು ಬಳಿಕ ಜೀವೇಶ್ವರಕಲ್ಪಿತಪ್ರಪಂಚದ್ವಯಮುಂ ಶುದ್ಧಶಿವಸಾಕ್ಷಾತ್ಕಾರವಾದ ಬಳಿಕಬಿಡಲ್ಪಟ್ಟರುಂ ಕಸ್ತೂರಿಯಂತೋರದಕರಂಡದೊಳು ವಾಸನಾಮಾತ್ರಮವಶಿಷ್ಟಮಾಗಿರ್ಪಂತೆ ಪ್ರಪಂಚಾಕಾರಭಾಸವೆಂಬ ಚಿದಾಭಾಸಭ್ರಾಂತಿ ವಾಸನಾ ಮಾತ್ರಮುಂ ಜೀವನ್ಮುಕ್ತನಾದೊಡಂಬಿಡದೆ ವಿದೇಹಕೈವಲ್ಯಪರ್ಯಂತಮು ನಿವಾರ್ಯಮಾಗಿರ್ದು ಬಳಿಕ ತಾನಾಗಿನಾಶವಾದೊಡೆ ಸ್ವೇತರಜ್ಞಪ್ತಿಶೂನ್ಯವಾದಸ್ವಜ್ಞಪ್ತಿಶುದ್ಧಾನಂದಸತ್ಯಪೂರ್ಣತ್ವವೇ ನಿರ್ವಾಣಮಪ್ಪುದೆಂದುರಹಸ್ಯಾರ್ಥಮಕ್ಕುಂ॥

—* ಉಪಾಧಿತ್ರಯ. *—

ಅನಂತರವವಚ್ಛಿನ್ನೋಪಾಧಿ ಪ್ರತಿಬಿಂಬೋಪಾಧಿ ಅಧ್ಯಾಸೋಪಾಧಿಯೆಂಬವೇ ಉಪಾಧಿತ್ರಯ ಮವುಗಳಲ್ಲಿ ಪ್ರತ್ಯಗಾತ್ಮಂಗೆ ಸುಷುಪ್ತಿರೂಪಾವಿದ್ಯೆಯೇಅವಚ್ಛಿನ್ನೋಪಾಧಿಯೆನಿಸುವದು । ತತ್ಕಾರ್ಯವಾದಬುದ್ಧಿಯಲ್ಲಿ ಆತ್ಮನು ಪ್ರತಿಫಲಿಸುವದೇ ಪ್ರತಿಬಿಂಬೋಪಾಧಿಯೆನಿಸುವದು। ಬುದ್ಧಿಗತ ಸುಖದುಃಖಾದಿಗಳನಾತ್ಮನು ಭುಜಿಸುವಂತಿರ್ಪುದೇ ಅಧ್ಯಾಸೋಪಾಧಿ ಯಕ್ಕುಂ ॥

—* ಅಧ್ಯಾಸಲಕ್ಷಣ. *—

ಮತ್ತಮಲ್ಲದದರಲ್ಲಿ ಅಹಮೆಂಬಬುದ್ಧಿಯೇ ಶುಕ್ತಿಕಾರಜತನ್ಯಾಸ್ಪಾಟಂತದಿಂದಧ್ಯಾಸಲಕ್ಷಣವಹುದಾ ಅಧ್ಯಾಸವೇ ಮಿಥ್ಯಾಧ್ಯಾಸ, ಇತರಾಧ್ಯಾಸ, ಇತರೇತರಾಧ್ಯಾಸವೆಂದು ನಾಲ್ಕುತೆರನಾಗಿಹುದದರಲ್ಲಿ ಅಗ್ನಿಸಂಪರ್ಕದಿಂದಲಕ್ಕೆ ದಾಹಕತ್ವವಾದಂತೆ ಪ್ರತ್ಯಗಾತ್ಮ ಸನ್ನಿಧಿಯಿಂ ಕ್ರಮದಿಂದಡಯಾಡುವ ನೋಡುವನೆನಿಪ ಅರಿವಶಕ್ತಿಗಳುಂಟಾಗಿ ಸ್ಥೂಲಶರೀರವೇ ಮಿಥ್ಯಾಧ್ಯಾಸವೆನಿಸುವದು। ಇಂದ್ರಿಯವರ್ಗವೇ ಇತರಾಧ್ಯಾಸವೆನಿಸುವದು ಅಂತಃಕರಣವೇ ಇತರೇತರಾಧ್ಯಾಸ ವೆನಿಸುವದು। ಮೂಲಾಹಂಕಾರವೇಸತ್ಯಾಧ್ಯಾಸಮಕ್ಕುಂ॥ ಬಳಿಕ ಅಹಂ ಎಂಬುವದರಿಂ ಪ್ರತ್ಯಗಾತ್ಮಾಹಂಕಾರಗಳಿಗೆ ರಜ್ಜುಸರ್ಪವೆಂಬಂತೆನಿರುಪಾಧಿಕಾಧ್ಯಾಸವೆನಿಸುವದು। ಅಹಂಕರ್ತಾ ಎಂಬುವದರಿಂ ಅಹಂಕಾರಧರ್ಮಾತ್ಮರ್ಗೆ ರಕ್ತಸ್ಫಟಿಕವೆಂಬಂತೆ ಸೋ

ಬಾಧಿ ಕಾಧ್ಯಾಸ ಮೆನಿಸುವದು। ಇಚ್ಛಾವನ್ಯಹಂ ಎಂಬುವದರಿಂ ಅಂತಃ ಕರಣಧರ್ಮಾತ್ಮಗೆ ಪ್ರವಾಹಜಲಪ್ರತಿಫ. ತಪತಂಗಪ್ರತಿಬಿಂಬದಂತ ತದ್ಧ ರ್ಮತಾಧ್ಯಾಸವೆನಿಸುವದು। ಕುಟುಂಬವಾನಹಂ ಎಂಬುವದರಿಂ ಆತ್ಮಪುತ್ರಾ ದಿಕಕ್ಕೆ ಚೈತ್ರಸ್ಥವ್ಯವಹಾರದಂತೆ ಸಂಬಂಧವಾತಾಧ್ಯಾಸವೆನಿಸುವದು ಇಂತಧ್ಯಾಸದಿಂದಲೇ ನಿರ್ವಿಕಾರ ನಾದಾತ್ಮಗೆ ಸಂಸಾರಕಲ್ಪನೆಯುಕ್ಕುಂ ॥

—* ಪಂಚಾವಸ್ಥೆಗಳು. *—

ಮತ್ತಂ ಜಾಗರಣ, ಸ್ವಪ್ನ, ಸುಷುಪ್ತಿ, ತುರ್ಯ, ತುರ್ಯಾತೀತಗಳೆಂಬ ವೆಪಂಚಾವಸ್ಥೆಗಳವುಗಳಲ್ಲಿ। ಸ್ಥೂಲಪಂಚಭೂತಗಳು। ದಶೇಂದ್ರಿಯಗ ಳು। ಪ್ರಾಣಪಂಚಕವು ಅಂತಃಕರಣಚತುಷ್ಟಯವೆಂಬ। ಚತುರ್ವಿಂಶತಿತ ತ್ವಾತ್ಮಕಸ್ಥೂಲ ಶರೀರದಲ್ಲಿ ಸತ್ವಗುಣ। ಅಕಾರಾಕ್ಷರ। ವಿಷ್ಣುವಧಿದೇವ ತೆ। ಲೋಚನಸ್ಥಾನ। ಹೃದಯಕಮಲದಅಷ್ಟದಳಗತಿಗಳಂ। ವಿಶ್ವಜೀವ ನ। ವಿರಾಟ್ಸಂಜ್ಞಕನಾದೀಶ್ವರನುಮೊಂದಾಗಿ। ವನಿತಾದಿವಿಷಯಭೋಗ ಮಂ। ಸಕಲಕರಣ ಸಾಮಗ್ರಿಯಿಂ ದನುಭವಿಸುತ್ತಿಹುದೇ ಜಾಗರಣಾವ ವಸ್ಥೆ ಯೆನಿಸುತ್ತಿಹುದು।ಮತ್ತೆಮಾವಿಪ್ಪತ್ತು ನಾಲ್ಕುತತ್ವಂಗಳೊಳಗೆ ಸ್ಥೂಲಭೂತಂಗಳೈದನು। ಚಿತ್ತಬುದ್ಧಿಗಳೆರಡನುಂಬಿಟ್ಟು। ವಿಕ್ಕಹದಿ ನೇಳುತತ್ವಗಳಾದ ಸೂಕ್ಷ್ಮತನುವಿನಲ್ಲಿ। ರಜೋಗುಣ। ಉಕಾರಾಕ್ಷರ। ಬ್ರಹ್ಮನದಿದೇವತೆ। ಕಂಠಸ್ಥಾನ। ಹೃತ್ಕಮಲಕರ್ಣಿಕಾಗತಿಗಳಂ। ತೈಜಸ ಜೀವನು। ಸೂತ್ರಾತ್ಮಕಸಂಜ್ಞಿತ ನಾದೀಶ್ವರರುಗಳೊಂದಾಗಿ। ಜಾಗ್ರದ್ವಾ ಸನಾ ವಿಷಯಭೋಗಮಂ ಮನವೆಂಬ ಕರಣದಿಂದನು ಭವಿಸುತ್ತಿಹುದೇ ಸ್ವಪ್ನಾವಸ್ಥೆಯೆನಿಸುತ್ತಿಹುದು। ಮತ್ತಮಾಪರದು ಮೇಯಂತಿರ್ದ ಮ ರಿಗಳೆಲ್ಲಮಂ। ಪಕ್ಕದಮರೆಯೊಳಗಡಗಿಸಿ ಕೊಂಡೊಂದೆಡೆಯಲ್ಲಿ ನಿದ್ರೆಗೈ ಯುತ್ತಿರ್ದ। ಚರಣಾಯುಧನಂತಾ ಸಮಸ್ತಕಾರ್ಯವನೊಳಕೊಂಡುತ ತ್ಸಂಸಾರಸಹಿತವಾಗಿ। ಆತ್ಮಾಶ್ರಯದಲ್ಲಿ ನಿರವಸ್ಥೆಯಿಂದಿರ್ದ। ಪ್ರಕೃ ತಿರೂಪಕಾರಣದೇಹದಲ್ಲಿ ತಮೋಗುಣ। ಮಕಾರಾಕ್ಷರ। ರುದ್ರನಧಿದೇವ ತೆ। ಹೃದಯಸ್ಥಾನ। ತತ್ಕಮಲಕರ್ಣಿಕಾಮಧ್ಯಗತಿಗಳಂ। ಪ್ರಾಜ್ಞನೆಂಬ ಜೀವನು। ಅಂತರ್ಯಾಮಿಯೆಂಬ ಈಶ್ವರನು ಮೊಂದಾಗಿ! ಬ್ರಹ್ಮಾನಂದವಿ ಷಯ ಭೋಗಮಂ। ಮಾಯಾವೃತ್ತಿಯೆಂಬ ಸೂಕ್ಷ್ಮಕಾರಣದಿಂದನು ಭವಿಸುತ್ತಿಹುದೇ ಸುಷುಪ್ತ್ಯವಸ್ಥೆಯುಕ್ಕುಂ। ಬಳಿಕೀಜಾಗ್ರದಾದ್ಯವಸ್ಥೆ ಗಳಿಗೆ। ಅವಸ್ಥಾತ್ರಯ। ಧಾಮತ್ರಯ। ಪುರತ್ರಯ। ಸ್ಥಾನತ್ರಯಗ

ಳೆಂಬವೇ ಪರ್ಯ್ಯಾಯ ನಾಮಂಗಳಕ್ಕುಂ॥ ಮತ್ತಮಾ ಜಾಗರಣದಲ್ಲಿಯೇ। ತರ್ಕಮುಲವನುಳಿದು। ನಮೋವ್ಯಾಪಾರವನಳಿದು। ಪರಮಾತ್ಮಚಿಂತನಂಗೈವುದೇ ತುರ್ಯ್ಯಾವಸ್ಥೆಯೆನಿಸುವದು। ಮತ್ತಮಾತ್ಮನಲ್ಲಿಯೇ ಮನಸ್ಸು ಮಗ್ನಮಾಗಿರ್ಪುದು। ತುರ್ಯ್ಯಾತೀತಾವಸ್ಥೆಯೆಕ್ಕುಂ॥ ಇಂತೀಅವಸ್ಥಾಪಂಚಕದಲ್ಲಿ। ಸ್ಥಾವರಕ್ಕೆ ಸುಷುಪ್ತಿಯೊಂದೇಪಶ್ವಾದಿಗಳಿಗೆ ಸ್ವಪ್ನಸುಷುಪ್ತಿಗಳೆರಡು। ದೇವತೆಗಳಿಗೆ ಜಾಗರಣವೊಂದೇ। ಮನುಷ್ಯರಿಗೆ ಜಾಗ್ರತ್ಸ್ವಪ್ನಸುಷುಪ್ತಿಗಳುಮೂರು। ಮರುಳುಗಳಿಗೆ। ತುರ್ಯ್ಯಾವಸ್ಥೆಯೊಂದು। ಯೋಗಿಗಳಿಗೆ ತುರ್ಯ್ಯಾತೀತವೊಂದು। ಸಹಜಗಳಾಗಿರುವವಾಗಿ।ಮನುಷ್ಯರಿಗೆ ಮೊದಲನೆಯ ಮೂರವಸ್ಥೆಗಳು ತಮ್ಮಿಂದತಾವೇತೋರಿ। ಸಂಸಾರಾತ್ಮಕವಾಗಿಹವು। ಮಿಕ್ಕೆರಡವಸ್ಥೆಗಳೇ ಯೋಗಾಭ್ಯಾಸಬಲದಿಂದಜನಿಸಿ ಮುಕ್ತಿಸಾಧನಗಳಾಗಿರ್ಕುಂ॥

— ಅವಸ್ಥಾಮಿಥ್ಯಾತ್ವ. —

ಮತ್ತಮಾ ಅವಸ್ಥೆಗಳೊಳು। ಜಾಗ್ರದವಸ್ಥೆಯು ತದ್ವಿಷಯಗಳುಂ ಸ್ವಪ್ನಕಾಲದೊಳಗಿಲ್ಲ। ಸ್ವಪ್ನಾವಸ್ಥೆ। ತದ್ವಿಷಯಗಳುಂ ಜಾಗ್ರತ್ಕಾಲದೊಳಗಿಲ್ಲ। ಈ ಯೆರಡವಸ್ಥೆಗಳುಂ ಉಭಯವಿಷಯಗಳುಂ ಸುಷುಪ್ತಿಕಾಲದೊಳಗಿಲ್ಲವಾಗಿ ಕಾಲ। ದೇಶ। ವಸ್ತುನೈಯತ್ಯವಿಲ್ಲದಿರುವದರಿಂ।ಅಧಿಕಾರಿಭೇದದಿಂಪಲವುಬಗೆಯಾಗಿ ತೋರ್ಪುದರಿಂ। ಅಭಿಸಂಧಿಬಲಾನುಗುಣವಾಗಿ ಕಾರ್ಯವೈಚಿತ್ರ್ಯತೋರ್ಪುದರಿಂ। ತ್ರಿಕಾಲಾಬಾಧ್ಯವಲ್ಲವಾಗಿ ಸತ್ಯವಲ್ಲವೆಂತಲುಂ। ಬ್ರಹ್ಮಜ್ಞಾನದಿಂಸಮೂಲವಾಗಿ ಅಳಿವುದರಿಂ ಸಾವಸ್ಥೆಯೆಲ್ಲಮುಂ ಮಿಥ್ಯೆಯೆಂದರಿಯಲ್ಪೇಳ್ಕುಂ। ಮತ್ತಮಾಅವಸ್ಥೆಗಳೆಲ್ಲದರೊಳಗನುಸ್ಯೂತನಾಗಿಯುಂ। ಜ್ಞಪ್ತಿಸತ್ತಾಮಾತ್ರನಾಗಿಯುಂ। ಅವಿನಾಶಿಯಾಗಿಯುಂ। ಸಾಕ್ಷಿಯಾಗಿಯುಂ। ಅಸಂಗನಾಗಿಯುಂ। ಜಡದರಿವನಿಜತುರ್ಯನಾದಾತ್ಮನೋರ್ವನೇ। ಸತ್ಯವೆಂದರಿವುದು॥

— ಆತ್ಮಸಿದ್ಧಿ. —

ಮತ್ತಮಾ-ಜಾಗ್ರತ್ಸ್ವಪ್ನಂಗಳಲ್ಲಿ ಅರಿವುಂಟೆಂಬುವದು। ಪ್ರಸಿದ್ಧಮಾಗಿಯೇಯಿರ್ಪುದಾ ಸುಷುಪ್ತಿಯಲ್ಲಿ ಅರಿವುಂಟೆಂಬುದಕೆ ಯೆಚ್ಚತ್ತಮೇಲೆ ಇದುವರೆಗುನಾನೇನುಮರಿಯದೆಮಲಗಿದ್ದೆನು-ಸುಖದಿಂನಿದ್ರೆಗೈದನೆಂಬ ಸ್ಮರಣದ್ವಯವು ಅನುಭವವಿಲ್ಲದೇಪುಟ್ಟದೆಂಬ ಅರ್ಥಾಪತ್ತಿಪ್ರಮಾಣದಿಂದಸುಷುಪ್ತಿಯಲಾತ್ಮನು। ಸಮಸ್ತಘಟಾದಿಗಳನೊಳಕೊಂಡು ಅವಿದ್ಯೆ

ಯುನ್ನುಂ। ಆಯವಿದ್ಯೆಯಸೂಕ್ಷ್ಮವೃತ್ತಿಗಳಗತಿಗಳಲ್ಲಿ ಚಂಚಲತರವಪ್ಪ ವಾಂತರದ ಚಂದ್ರಿಕಾಲೇಶಂಗಳಂತೆಪ್ರೋಳದಡಗುತಿರ್ದ ನಿಜಸ್ವರೂಪದಾನಂದಾಂಶಗಳನು। ಕರಣಾಂತರಾಪೇಕ್ಷೆಯಿಲ್ಲದೇ ಅನುಭವಿಸುತಿರ್ಪುದರಿಂದಱಿಲ್ಲರಿಪ್ಪುದೆಂಬುದೇಸಿದ್ಧವಾಕ್ಕುಂ॥ ಬಳಿಕೇನನೂಅಱಿಯದೇ ಸುಖದಿಂ ಮಲಗಿದ್ದನೆಂಬುವದಕ್ಕೆ। ಕ್ರಮದಿಂಸಕಲವಿಷಯಜ್ಞಾನವಿಲ್ಲದೆ ಸಂಸಾರದುಃಖನಿವೃತ್ತಿಯಿಲ್ಲದೆ। ದುಃಖಾನುಭವತೋರದೆ ಸರ್ವದಾಸುಪ್ತಿಯಲ್ಲಿ। ಅವಿದ್ಯೆಗೆಸಾಕ್ಷಿಕನಾದಾನಂದಮಯನಪ್ಪಾತ್ಮನುಂಟಾದೊಡೆ। ಓರ್ವನೂ ಅಲ್ಲರಿದನೆಂಬುವೇನುಕಾರಣವಿಲ್ಲೆನಲು। ವಡಿವೆಯನರಸಲೆಂದು ಭಾವಿಯೊಳುಮುಳುಗಿದಾತಂಗೆ ಆವಡವೆಯಿಲ್ಲುಂಟುಂಬುದು। ಅಲ್ಲಿಂದಪ್ಪೇರವಾಟ್ಟಲ್ಲದೆ ಪೇಳಲೆಂತುಘಟಿಸದೋ। ಅಂತುಸುಷುಪ್ತಿಯಲ್ಲರಿವುಂಟಾದೊಡಂ ಕಾಲಕರ್ಮವಶದಿಂದೆಚ್ಚತ್ತು ಕರಣಸಹಕೃತನಾಗದಲ್ಲಿತಾನರಿದರ್ಥಂಪೇಳಲ್ ಘಟಿಸದು। ಇಂತಾಗಲಾಸರ್ವಾವಸ್ಥೆಗಳಿಗೂ। ಸಾಕ್ಷಿಕನಾದಾತ್ಮಂಗೆ।ಸಚ್ಚಿದಾನಂದಸ್ವಯಂ। ಪ್ರಕಾಶರೂಪತ್ವವನುಭವಸಿದ್ಧವಾಕ್ಕುಂ

—ಪಂಚಕೋಶವಿವೇಕ.—

ಬಳಿಕ-ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯವೆಂಬವೇ।ಪಂಚಕೋಶಂಗಳವುಗಳಲ್ಲಿಪಿತೃಮಾತೃಗಳ ಶುಕ್ಲಶೋಣಿತಗಳಿಂದಾದ ಸ್ಥೂಲಶರೀರವೇ ಅನ್ನಮಯಕೋಶವೆನಿಸುವದು। ಸೂಕ್ಷ್ಮತನುವಿನಲ್ಲಿ ಪ್ರಾಣಮಾರುತಕರ್ಮೇಂದ್ರಿಯಂಗಳುಂಕೂಡಿ। ಪ್ರಾಣಮಯಕೋಶವೆನಿಸುವದು॥ ಮನಸ್ಸು ಜ್ಞಾನೇಂದ್ರಿಯಂಗಳುಂ ಕೂಡಿ ಮನೋಮಯಕೋಶವೆನಿಸುವದುಪ್ರತ್ಯಗಾತ್ಮಚೈತನ್ಯಚ್ಛಾಯೆಯೊಡಗೂಡಿ।ಲೋಹಕಾಂತಾಂತರಕುಂತದಂತಿರ್ಪಹಂಕಾರ। ಜ್ಞಾನೇಂದ್ರಿಯಂಗಳುಂಕೂಡಿ। ವಿಜ್ಞಾನಮಯಕೋಶವೆನಿಸುವದು। ಕಾರಣದೇಹರೂಪವಾದ ಅವಿದ್ಯೆಯುಂ-ಜಾಗರದಲ್ಲಿ ವನಿತಾದಿವಿಷಯಸಾಮೀಪ್ಯಸಂಯೋಗಾದಿಗಳಿಂ। ಕ್ರಮದಿಂಪುಟ್ಟಿದ ಪ್ರಿಯ। ಮೋದ। ಪ್ರಮೋದಗಳೆಂಬ ತ್ರಿವಿಧಸುಖವೃತ್ತಿಯುಂಕೂಡಿ ಆನಂದಮಯಕೋಶವಕ್ಕುಂ॥

—ಅಹಂಕಾರಕ್ಕಾತ್ಮತ್ವಖಂಡನೆ.—

ಬಳಿಕೀ-ವಿಜ್ಞಾನಮಯಕೋಶರೂಪವಾದಹಂಕಾರವನ್ನೇ।ಆತ್ಮಾನಾತ್ಮವಿವೇಕಶೂನ್ಯರು। ಅಹಂಯೆಂಬತನ್ನನುಭವದಿಂದ ಆತ್ಮನೆಂಬುವರು। ನೀಲೋತ್ಪಲವೆಂಬಲ್ಲಿ ನೀಲಗುಣವಿಶೇಷಣದೊಡಸವಿಶೇಷವಾದುತ್ಪಲವು

ವೇದ್ಯವುಪ್ರತ್ಯಕ್ಷಕೋಹಂಯೆಂಬಲ್ಲಿ ಸ್ಥೂಲತನುವಿನೊಡನೆ। ದ್ರಷ್ಟಾಹಂಯೆಂಬಲ್ಲಿ ಚಕ್ಷುರಿಂದ್ರಿಯದೊಡನೆ ಕಾಣೋಹಂಯೆಂಬಲ್ಲಿ। ಚಕ್ಷುರಭಾವದೊಡನೆಸ್ಮರ್ತಾಹಂಯೆಂಬಲ್ಲಿ। ಸ್ಮರಣವೆಂಬಾಂತಃಕರಣವೃತ್ತಿಯೊಡನೆಯುಂ ಕೂಡಿ-ಪ್ರತ್ಯಗಾತ್ಮನೇ। ವೇದ್ಯವಪ್ಪುದರಿಂ ಮತ್ತಮಾಯಹಂಕಾರಕ್ಕೆ ಸಾಕ್ಷಿಯಾಗಿ। ಅಹಂಕಾರ್ಯಹಂಯೆಂಬಲ್ಲಿ ಅಹಂಕಾರದೊಡಗೂಡಿ। ಅಹಂಯೆಂಬಲ್ಲಿ ಅಹಮಾಕಾರಾಂತಃಕರಣವೃತ್ತಿವಿಶಿಷ್ಟನಾಗಿ ಪ್ರತ್ಯಭಿಜ್ಞೆಯೊಳಗರಿಪ್ಪುದರಿಂ। ವಿಶೇಷಣಾಂಶಮೆಲ್ಲಂಜಡವಾಗಿಪ್ಪುದರಿಂ। ಚೇತನನಾದಲಾತ್ಮನಿಗಿಂತಲೂ। ವಿಲಕ್ಷಣವಾಗಿಪ್ಪುದಾಗಿ। ಅಹಂಕಾರವೇ ಆತ್ಮನೆಂಬುವದು ಸಿದ್ಧವಾಕ್ಯಂ॥

### — ಅಹಂಕಾರಚೈತನ್ಯವಿವೇಕ. —

ಬಳಿಕೆಂತಾದೊಡೆ-ಅಚೇತನವಾದಹಂಕಾರಕ್ಕೆ। ಬಾಹ್ಯವಿಷಯಮನರಿವನವದೆಂತೆನೆ। ಸೂಜಿಕಲ್ಲಿನಸನ್ನಿಧಿಯಿಂ ಸೂಜಿಚಲಿಸುವಂತೆ। ಬಿಸಿಲಲ್ಲಿಪಿಡಿದಕನ್ನಡಿಯು ಕತ್ತಲೆಕೋಣೆಯುಂಬೆಳಗುವಂತೆ। ಪ್ರತ್ಯಗಾತ್ಮಸನ್ನಿಧಿಯಿಂದಚೈತನ್ಯಪ್ರತಿಬಿಂಬನು ತನ್ನಲ್ಲಿಪ್ಪುದರಿಂದಲೂ ಜಡವಾದಹಂಕಾರವೇ। ಬಾಹ್ಯವಿಷಯದರಿಕೆಯುಂ ಜಾಗ್ರತ್ಸ್ವಪ್ನಂಗಳಲ್ಲಿ ಸಂಚರಿಸಿ। ಸುಷುಪ್ತಿಯೊಳಗಡಗುತಿಹುದು॥ ತತ್ಪ್ರಪಂಚಕ್ಕುಪಮಾನವೆಂತೆನೆ-ಅಹಂಕಾರದಲಯಮಾವಸ್ಥಾತ್ಮಕಸುಷುಪ್ತಿಯೊಳು। ಅವಿದ್ಯೆಯೆಂಬಕೋಣೆಯೊಳಭಿವ್ಯಕ್ತಿಯಿಂನಿದ್ರೆಯೆಂಬಕವಾಟದೊಳಗೆ। ನಿಷ್ಕಂಪರೂಪನಾದ ತನ್ನ ತಾನೇಬೆಳಗುತಿರ್ದಂತೆ। ಪ್ರತ್ಯಗಾತ್ಮಜ್ಯೋತಿರೆನಿಸುವದು। ಬಳಿಕ ಕಾಲಕರ್ಮಾದಿಸಮೀರಣ ಪ್ರೇರಣೆಯಿಂದ। ತಾಮಸಮಪ್ಪನಿದ್ರಾಕವಾಟೋದ್ಘಾಟನಮಾಗೆ। ಅವಿದ್ಯಾಪ್ರಥಮಾಸ್ಥಾತ್ಮಕಮಹತ್ತತ್ವಮೆಂಬಗೇಹಳಿಯಮೇಲಿರ್ದ ಸಾತ್ವಿಕವಾದಹಂಕಾರವೆಂಬ ಸ್ಫಟಿಕಮಣಿಯು। ಪ್ರತ್ಯಗಾತ್ಮಪ್ರದೀಪಪ್ರತಿಬಿಂಬಗರ್ಭಿತಮಾಗಿ। ಮುನ್ನಿನಂತೆಜೀವನೆನಿಸಿ। ಸ್ವಪ್ನಾವಸ್ಥೆಯೆಂಬ ನಡುಮನೆಯುಂಬೆಳಗಿ ಮೇಲಿಂದ್ರಿಯಂಗಳೆಂಬ ಗವಾಕ್ಷದಿಂಪೊರಮಟ್ಟು। ಜಾಗ್ರದವಸ್ಥೆಯೆಂಬ ಬಾಹ್ಯಗುಣಮಂಪ್ರಕಾಶಿಸುತಿರ್ಕುಂ। ಮತ್ತಮಾ ಕಾಲಕರ್ಮಾದಿ ಸಮೀರಣಪ್ರೇರಣೆಯಿಂದನಿದ್ರೆಯೆಂಬ ಕವಾಟಮುಚ್ಚಲೊಡನೆ ಆಯಹಂಕಾರವೆಂಬ ಸ್ಫಟಿಕಮಣಿಯು ತನಗೆಕಾರಣವಾದ ಅವಿದ್ಯೆಯೊಳಗಡಗಲು। ಅಜಾಗ್ರತ್ಸ್ವಪ್ನಂಗಳೆಂಬ। ಅಂಗಣನಡುಮನೆಗಳಂಧಕಾರಮಯಮಪ್ಪ। ವಹಂಕಾರಮಣಿಸಂಕ್ಷಿಪ್ತಪ್ರತಿಫಲಿಸಿರ್ದ ಚೇತನಪ್ರಕಾ

ಶವೇ ತನಗೆಮೂಲಭೂತವಾದ ಪ್ರತ್ಯಗಾತ್ಮಪ್ರದೀಪದಲ್ಲಿ ಯೇಕವಾಗು ತ್ತಿಹ ದಿಂತುಜಾಗ್ರದಾದ್ಯವಸ್ಥಾತ್ರಯದೊಳು। ಹವಿಮ್ಮಿನ ಭಾವಾಭವಂ ಗಳಲ್ಲಿಕಾರಣವಾಗಿ। ಅರಿವಆತ್ಮನೋರ್‍ವ್ವಂಬೇರಿಪ್ಪುದರಿಂದಅಹಂಭಾವವಾ ತ್ಮಸ್ವರೂಪವಾಲ್ಲೆಂದು ಸ್ಥಿರವಾಕ್ಕುಂ.

— ಅಹಂಕಾರಸಂಬಂಧ. —

ಬಳಿಕ-ಬಾಹ್ಯವಿಷಯಕ್ಕಾತ್ಮನಂತೆತೋರಿ- ಅಂತರದೊಳು ಪ್ರತ್ಯಗಾ ತ್ಮವೇದ್ಯವಪ್ಪುದರಿಂ। ಜಡಾಜಡಸ್ವರೂಪವಾಗಿ। ದರ್ಪಣಹಿಂಭಾಗದಂತೆ ಪ್ರಕಾಶಾಪ್ರಕಾಶಾತ್ಮಕವಾದಹಂಕಾರಕ್ಕೆ। ದೇಹಚಿಚ್ಛಾಯೆ।ಪ್ರತ್ಯಗಾತ್ಮ ನೆಂಬಮೂವರೊಡನೆ ಸಂಬಂಧವುಂಟವರಲ್ಲಿ। ಅಹಂಜ್ವರಾಮಿಯೆಂಬುವ ಲ್ಲಿ। ಚಿತ್ಪ್ರತಿಬಿಂಬಯುಕ್ತವಾದಹಂಕಾರಸಂಬಂಧದಿಂ। ಸ್ಥೂಲದೇಹಕ್ಕೆ ಉಷ್ಣಾದಿಗಳನರಿವತನವೇ। ಕರ್ಮಜನಿತಕರ್ಮವೆನಿಸುವದು। ಅಹಂಜ್ಞಾನಾ ಮಿಯೆಂಬುವಲ್ಲಿ ಚಿಚ್ಛಾಯೆಯಾಹಂಕಾರಸಂಬಂಧವು। ಸೃಷ್ಟಿತೊಡಗಿ ಮೋ ಕ್ಷಾವಧಿಕೆಡದಾಗಿ। ಸಹಜವೆನಿಸುವದು। ಅಹಂಕರ್ತಾರಯೆಂಬುವಲ್ಲಿ ಅಸಂಗ ನಾದಪ್ರತ್ಯಗಾತ್ಮನಿಗೆ-ಅಹಂಕಾರಸಂಬಂಧವು। ಭ್ರಾಂತಿಜನ್ಯವೆಂದು। ವ್ಯಕ್ತ ವಾಗಿ ತಿಳಿಯಲಕ್ಕುಂ॥

— ಬಿಂಬಪ್ರತಿಬಿಂಬಭಾವ. —

ಬಳಿಕ-ನಿರ್ಗುಣಾಖಂಡ ಚಿನ್ಮಾತ್ರಬ್ರಹ್ಮವೆನಿಪಪರಶಿವನೇಬಿಂಬ।ಮೂ ಲಭೂತವಾದಮಾಯೆಯೇದರ್ಪಣ-ಸಗುಣಬ್ರಹ್ಮವೆನಿಪ ಈಶ್ವರಲಿಂಗವೇಪ್ರತಿ ಬಿಂಬ। ಮತ್ತಮಾಪರಶಿವನೇಬಿಂಬ। ಅವಿದ್ಯೆಯೇ ದರ್ಪಣ। ಜೀವಲಿಂಗವೇ ಪ್ರತಿಬಿಂಬ ಇನ್ನುಮಾಯಿಶ್ವರಲಿಂಗವೇಬಿಂಬ-ಗುಣಸಾಮ್ಯವೆಂಬ ಮಾ ಯೋಪಾಧಿಯೇ ದರ್ಪಣ-ಬ್ರಹ್ಮಾಂಡಪ್ರಪಂಚವೇಪ್ರತಿಬಿಂಬ-ಬಳಿಕಜೀವ ಲಿಂಗವೇಬಿಂಬ। ಅಂತಃಕರಣವೇದರ್ಪಣ-ಸುಖಾದಿವಿಷಯವೇ ಪ್ರತಿಬಿಂಬ ವೀಪರಿತಿಳಿಯಲು ಜೀವಸಾಕ್ಷಿ ಈಶ್ವರಸಾಕ್ಷಿಗಳೇನಿರೂಪಾಧಿಕಮೂಲಬಿಂ ಬಗಳಾಗೆ। ಅವರೊಳಗೈಕ್ಯಮುಪಪನ್ನಮಕ್ಕುಂ.

— ನಿರಾಕಾರಕ್ಕೆ ಪ್ರತಿಬಿಂಬ. —

ಬಳಿಕ-ಲೋಕನ್ಯಾಯವಿರುದ್ಧವಾಗಿ ನಿರಾಕಾರವಸ್ತುವೆಂತು ಪ್ರಬಲಿ ಸಿಪ್ರತಿಬಿಂಬವಪ್ಪುದೆನೆ। ಗಗನವುನಿರೂಪವಾದೊಡೆಜಲದಲ್ಲಿಪ್ರತಿಬಿಂಬಿಸಿ ತೆಂಬಂತೆ ಇತರಪ್ರತಿಬಿಂಬನ್ಯಾಯವನಿಯತವಾಗೆ। ಚಿತ್ಪ್ರಭಾವದೊಳ ಗೆವಿರುದ್ಧಮಕ್ಕುಂ.

—* ಪ್ರತಿಬಿಂಬಕ್ಕೆ ಪ್ರತಿಬಿಂಬ. *—

ಮತ್ತಮಾಬಿಂಬವು ಪ್ರತಿಬಿಂಬಿಸುವದು। ನ್ಯಾಯಸಮ್ಮತವಾದರುಂ। ಪ್ರತಿಬಿಂಬವಾದೀಶ್ವರನು । ಜಗದಾಕಾರವಾಗಿ । ಪ್ರತಿಬಿಂಬಿಸುವದೆಂತೆನೆ ಕನ್ನಡಿಯೊಳ್-ಪ್ರತಿಫಲಿಸೆ ಕನ್ನಡಿ ಗೋಡೆಯೊಳುತೋರ್ಪ ಸೂರ್ಯನಬೆಳಕು-ಬೇರೆ ಪ್ರತಿಬಿಂಬಿಸಿದಂತೆ ಭಾನಮಾತ್ರಮೆಂಬಲ್ಲಿಯೆಂತಾದರುಂ ವಿರೋಧವಿಲ್ಲದಿರ್ಕುಂ.

—* ಬಿಂಬಸಾಮ್ಯಭಂಗ. *—

ಬಳಿಕ ನಿಷ್ಕಳಂಕವಾದ-ಸಕಳಂಕವಾದ ಚಿದಾಭಾಸಮೆಂತೆನೆ ಚಿಹ್ನವಿಲ್ಲದ ಮುಖವು ದಪಸಿಡಿದು ಚಿಹ್ನಿ । ತವಾದ ಕನ್ನಡಿಯೊಳು ಪ್ರತಿಫಲಿಸಿ ಚಿಹ್ನಿತವಾಗಿ ಚಿತ್ರೋರ್ಪಂತೆ ಉಪಾದಿಗಳಾದ ಮಾಯಾವಿದ್ಯಾದಿಗಳ ಸಕಳಂಕತ್ವಮೇ। ಚಿದಾಭಾಸಾದಿ ಕಾರಣಮುಪ್ಪುದಾಗಿ । ಪ್ರತಿಬಿಂಬವಾದುದೆಲ್ಲಂ। ಬಿಂಬಸಮಾನವಾಗಿರ್ಪುದೆಂಬುದು ನಿರಾಕೃತಮಕ್ಕುಂ.

— ಉಪಾಧಿಸಾಪ್ಯ. —

ಅಂತಾದೊಡೀ ಪ್ರತಿಬಿಂಬನಾವುದಕೆ-ಸಮನಿಯತಮಪ್ಪುದೆನೆ ಉಪಾಧಿಯಾದ ದರ್ಪಣವಿಲ್ಲದಿರಲಿರದೆ। ದರ್ಪಣವಿರಲಿದ್ದು ದರ್ಪಣವು ದೂಷಿತವಾದೊಡೆ ದುಷ್ಟವಾಗಿ ದರ್ಪಣವು ಚೇಷ್ಟಿಸೆ ಚೇಷ್ಟಿಸಿ-ದರ್ಪಣವು ಭಂಗವಾಗೆ ತಾನುಂ ಭಂಗವಾಗಿ ಬಿಂಬದೊಳೈಕ್ಯವಪ್ಪುದರಿಂ ಪ್ರತಿಬಿಂಬವು ತದುಪಾಧಿಸಮನಿಯತವಾಗೆ। ಅಂತಃಕರಣವೆಂಬ । ಅವಿದ್ಯೋಪಾಧಿಯು।ಕಾಮಕ್ರೋಧಾದಿಮಲಯುಕ್ತವಾಗೆ ಜೀವಲಿಂಗಸ್ವರೂಪಮುಂ ಸಕಳಂಕವಾಗಿ।ಅಂತಃಕರಣವು ಮೈತ್ರ್ಯಾದಿ ಪರಿಕರ್ಮಿತತ್ವದಿಂ । ವೈರಾಗ್ಯವಿವೇಕಾದಿ ಪರಿಶುದ್ಧವಾದೊಡೆ ಜೀವಲಿಂಗಸ್ವರೂಪವು ಶಿವಲಿಂಗದಂತೆ ನಿಷ್ಕಳಂಕವಾಗಿ ಅಂತಃಕರಣನಾಶವಾದೊಡೆ ಜೀವತ್ವಕ್ಕೆ ಹಾನಿ ಯುಂಟಾಗಲು ಶಿವಲಿಂಗದೊಳೈಕ್ಯಮೆಂಬುದೇ ನಿಶ್ಚಿತಮಕ್ಕುಂ॥

— ಉಪಧೇಯಭಿನ್ನತ್ವ. —

ಮತ್ತಮಾ ಚೈತನ್ಯ ಮೊಂದೇಯಾಗಿ ತತ್ಸಾನ್ನಿಧ್ಯಮಾತ್ರದಿಂ ಮಾಯಾದ್ಯುಪಾಧಿಗಳು ಚೇಷ್ಟಿಪವನೆ। ಚೈತನ್ಯವೆಂಬುದು ಸರ್ವದಿಕ್ಕಾಲವ್ಯಾಪಕವಾಗಿರಲ್ಕೆ ।ಉಪಾಧಿಕಾರ್ಯವು ಸಾರ್ವತ್ರಿಕವಾಗಿಯುಂ।ಸಾರ್ವಕಾಲಿಕವಾಗಿಯುಂ ಪುಟ್ಟದೇತಕೆನೆ। ಏಕವಾದ ಖಂಡಾಕಾಶದೊಳು । ಖಂಡಗಳಾಗಿ ವೀಣಾ । ವೇಣು ಮೃದಂಗಾದಿ ವಾದ್ಯಗಳೊಳು। ಭಿನ್ನಗಳಾದ ಶಬ್ದಂಗಳುಚಿತ್ರ

ಗಳವುದರಿಂದವಿಕೃತವಾದಾಕಾಶಕ್ಕೆ। ಮೇಘಾಕಾಶ ಮೇಘಾಕಾಶ ಹೃದಂ ಗಾಕಾಶವೆಂದು ಭೇದಮಂ ಕಲ್ಪಿಸುವಂತೆ ತತ್ತದಂತಃಕರಣಾದಿ ಶರೀರೋ ಪಾಧಿಗಳಿಂ।ತತ್ತಜ್ಜೀವಾದಿಚೈತನ್ಯಭಿನ್ನತ್ವಮುಂ। ಬಂಧಮೋಕ್ಷ ಭೇದ ಮಂ ವ್ಯವಹಾರಸಿದ್ಧವಾಗಿಪ್ಪುದು ॥

— ಅನಾದಿಷಟ್ಕ. —

ಬಳಿಕ ಶುದ್ಧಚಿತ್ತೆಂಬ ಪರಶಿವನು। ಜಗತ್ಕಾರಣನಾದಪರಮೇಶ್ವರನು। ಸಂಸಾರಿಯಾದಜೀವನು ಸಂಸಾರಮೂಲನಾದ ಅಜ್ಞಾನಜೀವೇಶ್ವರಭೇದಚಿ ಜ್ಜಡಭೇದವೆಂಬೀಆರುಂ ಅನಾದಿಸಿದ್ಧಗಳಾಗಿ ಇವುಗಳಿಗೆ ಕಾರಣವಿಲ್ಲದಿರ ಲ್ಕೆ ಇವುಗಳಿಂದೊಡಗೂಡಿದಪ್ರಪಂಚಮಂ ಪರಮೇಶ್ವರನೆಂತು ಪುಟ್ಟಿಸಿದನೆನೆ ಮುನ್ನು ಪೇಳ್ದ ಅನಾದಿಪದಾರ್ಥಗಳಲ್ಲದೆ ಶಶಶೃಂಗಾದಿಗಳಂತೆ ತುಚ್ಛ ವಾಗದೆ ಜೀವಕಲ್ಪಿತವಾದ ಶುಕ್ತಿರಜತದಂತೆ ಅನಿರ್ವಚನೀಯವಾದ ವ್ಯೋಮಾದಿ ಪ್ರಪಂಚವೇ ಪುಟ್ಟಿತಾಗಿ ಪರಮೇಶ್ವರ ಕಲ್ಪಿತತ್ವವು ಬಾಧಿತಮಕ್ಕುಂ ॥

— ಸಪ್ತಾವಸ್ಥೆಗಳು. —

ಅನಂತರದಲ್ಲಿ ಅಜ್ಞಾನ ಆವರಣ, ವಿಕ್ಷೇಪಪರೋಕ್ಷಜ್ಞಾನ ಅಪರೋ ಕ್ಷಜ್ಞಾನ, ಶೋಕನಿವೃತ್ತಿ, ನಿರಂಕುಶತೃಪ್ತಿ, ಯೆಂಬವೇಜೀವನ ಸಪ್ತಾ ವಸ್ಥೆಗಳವುಗಳಲ್ಲಿ ಸಂಸಾರಾಸಕ್ತನಾ ಚಿದಾಭಾಸಜೀವನು ಶ್ರುತಿ ವಿಚಾರ ಕ್ಕೆಮುನ್ನವೇ ತನ್ನನಿಜಸ್ವರೂಪವಾದ ಸ್ವಯಂಪ್ರಕಾಶನಪ್ಪ ಪ್ರತ್ಯಗಾ ತ್ಮನನರಿಯದಿಹುದೇ ಅಜ್ಞಾನವೆನಿಸುವದು। ಬಳಿಕೋದಾಸೀನ್ಯವಳಿ ಚಿದಾತ್ಮ ಪ್ರಸಂಗಂಬರಲಾಗಿ। ಪ್ರತ್ಯಗಾತ್ಮನಿಲ್ಲೆಂಬ। ಪ್ರತ್ಯಗಾತ್ಮ ತೋ ರದೆಂಬ। ಉಭಯವಿಧವೊಸೆವ। ಅಜ್ಞಾನಕಾರ್ಯವಾದ ಆವರಣವೆನಿಸು ವದು। ಬಳಿಕತಾನೇಕರ್ತ್ರ ಕರ್ತೃ ।ತಾನೇಕರ್ಮಫಲಭೋಕ್ತೃವೆಂದು। ಬಗೆದು ದೇಹಾಭಿಮಾನಿಯಾದಚಿದಾಭಾಸಜೀವನೇ ವಿಕ್ಷೇಪವೆನಿಸುವದು। ಬಳಿಕ ಆತ್ಮನ ಅಸ್ತಿತ್ವಮಂ ಪೇಳ್ದ ಶ್ರುತ್ಯಾಚಾರ್ಯವಾಕ್ಯವಿಶ್ವಾಸದಿಂ। ಪ್ರತ್ಯಗಾ ತ್ಮನುಂಟೆಂದು ತಿಳಿವುದೇ। ಮೊದಲನೆಯ ಅಸತ್ವಾವರಣಕ್ಕೆ ನಿವರ್ತಕವಾ ದ ಪರೋಕ್ಷಜ್ಞಾನವೆನಿಸುವದು। ಬಳಿಕ ನೀನೇಬ್ರಹ್ಮವೆಂದು ಪೇಳ್ವವೇ ದವಾಕ್ಯ ವಿಚಾರಪರಿಪಾಕಾವಶದಿಂ। ಪ್ರತ್ಯಗಾತ್ಮನೇತಾನೆಂದುಬಗೆವುದು। ಯೆರಡನೆಯ ಅಭಾನಾವರಣಕ್ಕೆನಿವರ್ತಕವಾದ ಅಪರೋಕ್ಷ ಜ್ಞಾನವೆನಿಸುವ ದು।ಬಳಿಕಪ್ರತ್ಯಗಾತ್ಮಸಾಕ್ಷಾತ್ಕಾರದಿಂ। ಕರ್ತ್ರ ಕರ್ತೃ । ಕರ್ಮಫಲಭೋಕ್ತೃವ

ವೆಂಬ। ಜೀವತ್ವರೂಪದುಃಖಪರಿತ್ಯಾಗವೇ। ಶೋಕನಿವೃತ್ತಿಯೆನಿಸುವದು ಬಳಿಕ ಮಾಡಲ್ಪತಕ್ಕ ಕೃತ್ಯವೆಲ್ಲಂಮಾಡಲ್ಪಟ್ಟಿತು। ಐದಲ್ಪತಕ್ಕಫಲಜಾತವೆಲ್ಲಂ ಐದಲ್ಪಟ್ಟಿತೆಂದುಸಹಜಪರಿತುಷ್ಟಿವಡದಿರ್ಪುದೇನಿರಂಕುಶವೃತ್ತಿಯೆನಿಸುವದು। ಈ ಶೋಕನಿವೃತ್ತಿ। ನಿರುಕುಶವೃತ್ತಿಗಳೆರಡೇ। ಅಪರೋಕ್ಷಜ್ಞಾನಕ್ಕೆ ಫಲಮುಕ್ಕುಂ॥

— ಸಪ್ತಾವಸ್ಥೆಸಮನ್ವಯ —

ಬಳಿಕ ಸ್ವಯಂ ಪ್ರಕಾಶಚಿದ್ರೂಪನಾದಾತ್ಮಂಗೆ ನಿತ್ಯಾಪರೋಕ್ಷತ್ವಮುಂಟಾದದರಿಂದಾತನೊಳ್। ಅಜ್ಞಾನಾದಿಸಪ್ತಾವಸ್ಥೆಗಳುಘಟಿಸವೆಂದೊಡವಕ್ಕೆದೃಷ್ಟಾಂತವೆಂತೆನೆ। ಪೂರ್ವದಲ್ಲಿ। ದಶಪುರುಷರೊಂದು ನದಿಯಂ ದಾಂಟಿಪೋಗಿ। ಮೇಲೆಪರಾಮರ್ಶ್ಯಂಗೈವಸಮಯದೊಳವರಲ್ಲಿ ನವಸಂಖ್ಯಾತಪುರುಷರುಗಳ ನಿದಿರಿಟ್ಟೆಣಿಸುತಿದೊರ್ವಪುರುಷನು। ತಾನೇದಶಮಪುರುಷನೆಂಬುಗ ನರಿಯದಿಹುದೇಅಜ್ಞಾನವೆನಿಸುವದು ಬಳಿಕಹತ್ತನೆಯಾತನೇ ಯಿಲ್ಲಕಾಣಿಸುತ್ತಿರೆನೆಂಬುಭಯವಿಧ ಭ್ರಾಂತಿಯೇಆಯಜ್ಞಾನಕಾರ್ಯಮಾದಾವರಣ ವೆನಿಸುವದು। ಬಳಿಕ ಹತ್ತನೆಯಾತನು ನದಿಯಲ್ಲಿ ಮೃತನಾದನೆಂಬ ದುಃಖವೇವಿಕ್ಷೇಪವೆನಿಸುವದು। ಬಳಿಕ ಬೇರೊಬ್ಬಾಪ್ತವಚನದಿಂದ ದಶಮಪುರುಷನುಸ್ಸರ್ಗದಲುಂಟೆಂದರಿವುದೇದಶಮನಿಲ್ಲೆಂಬ ಪೊದಲಾವರಣಕ್ಕೆ ವಿರೋಧಿಯಾದಪರೋಕ್ಷಜ್ಞಾನವೆನಿಸುವದು। ಬಳಿಕ ಆನವಸಂಖ್ಯಾಪುರುಷರುಗಳೊಡಗೂಡಿ ಕ್ರಮದಿಂದೆಣಿಸಿ ನೀನೇದಶಮನೆಂದು ಪೇಳೆ ತನ್ನತಾನೇ ಸಾಕ್ಷಾತ್ಕರಿಪುದೇ। ದಶಮಂಕಾಣಿಸನೆಂಬಯುರಡನೇಯಾವರಣಕ್ಕೆವಿರೋಧಿಯಾದ। ಅಪರೋಕ್ಷಜ್ಞಾನವೆನಿಸುವದು।ಬಳಿಕಾದಶಮನುದುಃಖಮಂಬಿಡುವದೇ ಶೋಕನಿವೃತ್ತಿಯೆನಿಸುವದು। ಬಳಿಕ ನಿಜಸ್ಥಿತಿಯಿಂಸುಖಮಾಗಿಹುದೇ ನಿರಂಕುಶವೃತ್ತಿಯಕ್ಕುಂ॥

— ವೇದವಾಕ್ಯವಿಚಾರ. —

ಬಳಿಕ- ವೇದವಾಕ್ಯವಿಚಾರಮೆಂತೆನೆ। ವಿಧಿವಾಕ್ಯನಿಷೇಧವಾಕ್ಯ। ಸಿದ್ಧಾರ್ಥಬೋಧಕವಾಕ್ಯವೆಂದು। ವೇದವಾಕ್ಯವು ತ್ರಿವಿಧಮಾಗಿರ್ಪುದದರಲ್ಲಿ।ಯಜ್ಞಾದಿಗಳಂ ಮಾಡಬೇಕೆಂಬುವದೇವಿಧಿವಾಕ್ಯವು। ಸುರಾಪಾನಾದಿಗಳಂ ಮಾಡಬಾರದೆಂಬುದವೇನಿಷೇಧವಾಕ್ಯವು। ವಿಧಿಶೂನ್ಯ ಮಾಗಿಬ್ರಹ್ಮಾತ್ಮೈಕರೂಪ ವಸ್ತುಮಾತ್ರಮಂಬೋಧಿ ಸುವದೇ ಸಿದ್ಧಾರ್ಥಬೋಧಕವಾಕ್ಯಮುಕ್ಕುಂ॥

## — ವೇದಾಂತಮಹಾವಾಕ್ಯಾರ್ಥ. —

ಬಳಿಕ ಋಗ್ಯಜುಸ್ಸಾಮಾಥರ್ವಣಗಳೆಂಬನಾಲ್ಕುವೇದಗಳಲ್ಲಿ ಕ್ರಮದಿಂ
ಪ್ರತಿಪಾದಿಸಲ್ಪಟ್ಟ । ನಿತ್ಯಶುದ್ಧಪೂರ್ಣಜ್ಞಾನವೇ ಪ್ರಜ್ಞಾನ । ಇದೇ
ಬ್ರಹ್ಮವೆಂದರ್ಥವುಳ್ಳ । ಪ್ರಜ್ಞಾನಂಬ್ರಹ್ಮಯೆಂಬ ಮಹಾವಾಕ್ಯವೊಂದು
ನಾನೇಬ್ರಹ್ಮನಾದೆಯೆಂಬರ್ಥವುಳ್ಳ । ಅಹಂಬ್ರಹ್ಮಾಸ್ಮಿಯೆಂಬ ಮಹಾವಾ
ಕ್ಯವೊಂದು । ಆ ಬ್ರಹ್ಮವೇ ನೀನಾದೆಯೆಂಬರ್ಥವುಳ್ಳ । ತತ್ವಮಸಿಯೆಂಬ
ಮಹಾವಾಕ್ಯವೊಂದು ॥ ಆಯಾತ್ಮನೆಬ್ರಹ್ಮವೆಂಬರ್ಥವುಳ್ಳ । ಅಯಮಾ
ತ್ಮಬ್ರಹ್ಮವೆಂಬ । ಮಹಾವಾಕ್ಯವೊಂದುಂಗೂಡಿ । ಮಹಾವಾಕ್ಯಚತುಷ್ಟ
ಯುಮೆನಿಸುತಿರ್ಕುಂ ॥ ಈ ಮಹಾವಾಕ್ಯಗಳುನಾಲ್ಕುಂ ಸರ್ವವೇದಾಂತಮು
ಖ್ಯಗಳಾಗಿರುವವೆಂತನೆ । ಕರ್ಮಕಾಂಡದೊಳುಶ್ರೀರುದ್ರಾಧ್ಯಾಯವೇಮುಖ್ಯ
ವದರೊಳಗೆ ಶಿವಪಂಚಾಕ್ಷರೀ ಮಹಾಮಂತ್ರವೇಮುಖ್ಯವೆಂಬಂತೆ । ಬ್ರಹ್ಮ
ಕಾಂಡದೊಳು ಉಪನಿಷದ್ಗತ ಬ್ರಹ್ಮಬೋಧಕವಾಕ್ಯಗಳೇಮುಖ್ಯ । ಅವು
ಗಳೊಳು ಮಹಾವಾಕ್ಯ ಸಹಸ್ರರತ್ನಾವಳಿಯೇ ಮುಖ್ಯ । ಅವುಗಳೊಳು
ಮಹಾವಾಕ್ಯಚತುಷ್ಟಯವೇ ಮುಖ್ಯಮಾದ ಕಾರಣದಿಂ । ದೀಸಿದ್ಧಾರ್ಥ
ಬೋಧಕಗಳಾದ ನಾಲ್ಕುವಾಕ್ಯಂಗಳುಂ ಮುಮುಕ್ಷುಗಳತಮ್ಮಧಿಕಾರಕ್ಕ
ನು ರೂಪಮಾಗಿ ಪಡಮು । ಪಠಿಸಿ । ಅಥವಿಚಾರದಿಂ । ಶ್ರುತಾಮನನಾದಿಗಳಂ
ಮಾಳ್ಪರು । ಇಂತೀನಾಲ್ಕುವಾಕ್ಯಗಳೊಳು । ತತ್ವಮಸಿಯೆಂಬಮಹಾವಾ
ಕ್ಯವು ಸರ್ವಮುಖ್ಯವಾಗಿರ್ಪುದದೆಂತೆಂದೊಡೆ ॥ ವೇದಾನಾಂಸಾಮವೇದೋ
ಸ್ಮಿಯೆಂಬಪ್ರಮಾಣದಿಂ ॥ ಈಶ್ವರನ ವೇದವಿಭೂತಿಯೊಳು ಮುಖ್ಯಮಾ
ದ ಸಾಮವೇದಶಿಖಿಯೋ । ಛಾಂದೋಗ್ಯೋಪನಿಷತ್ತಾಗಿರುವದು । ಅದರೊ
ಳಗಾರನೆಯಅಧ್ಯಾಯವು ಸಮಗ್ರಮಾಗಿ ತತ್ವೋಪದೇಶಮಹುದರಿಂದದ
ರೊಳುಶ್ವೇತಕೇತು ವೆಂಬಯೋಗ್ಯಾಧಿಕಾರಿಗೆ । ಸರ್ವಸಂಶಯನಿವೃತ್ತಿಪೂ
ರ್ವಕಜ್ಞಾನದಾರಢ್ಯಸಿದ್ಧಿಗಾಗಿ । ತತ್ವಮಸಿಯೆಂಬ ಮಹಾವಾಕ್ಯವೊಂಬ
ತ್ತುಸಾರಿಸಲ್ಪಟ್ಟದ್ದರಿಂ । ದಿದಕನುಕೂಲವಾಗಿ ಸರ್ವವೇದಾಂತಗಳುಂ
ಸಾರುತಿರಲಿದಂ ಮುಖ್ಯೋಪದೇಶವೆಂದನುಗ್ರಹಿಸಲಕ್ಕುಂ । ಬಳಿಕ-ತತ್
ತ್ವಂ-ಅಸಿ ಯೆಂಬಪದತ್ರಯಕ್ಕೆ ಕ್ರಮದಿಂ । ಶಿರ-ಜೀವ-ಅರ್ಥಮಹುದಾಗಿ ।
ಶಿವಜೀವಲಿಂಗಾಂಗಸಂಗೋಪಾಧಿ ಭಂಗಚಿನ್ಮಾತ್ರಕೈವಲ್ಯಮೆಂಬ ಸಿಂದ್ಧಾಂ
ತಾರ್ಥಮೇನಿರ್ಧರಿಸಲಪ್ಪುದು ॥

— ವಾಕ್ಯಾರ್ಥಸಂಬಂಧತ್ರಯವು. —

ಬಳಿಕ ಪದಾರ್ಥವಾಕ್ಯಾರ್ಥಂಗಳಿಗೆ। ಸಮಾನಾಧಿಕರಣ್ಯಸಂಬಂಧ।ವಿಶೇಷಣವಿಶೇಷ್ಯಭಾವಸಂಬಂಧ । ಲಕ್ಷ್ಯಲಕ್ಷಣ ಸಂಬಂಧವೆಂಬಿವೇ ಕ್ರಮದಿಂಸಂಬಂಧತ್ರಯಮಕ್ಕುಂ॥

— ತತ್ವಂಪದವಾಚ್ಯಾರ್ಥ. —

ಬಳಿಕ ಪದಗಳಿಗೆ ವಾಚ್ಯಾರ್ಥಲಕ್ಷ್ಯಾರ್ಥಮೆಂದರ್ಥದ್ವಯಮಿಪ್ಪುದು। ಅವರಲ್ಲಿ ಪೂರ್ವೋಕ್ತಸ್ಥೂಲಾದಿಸಮಷ್ಟಿರೂಪವಾದ। ವಿರಾಟ್ಪುರುಷ। ಹಿರಣ್ಯಗರ್ಭ। ಈಶ್ವರರುಗಳನು। ಬ್ರಹ್ಮವನೂಕೂಡಿ।ತಪ್ತಾಯಃಪಿಂಡದಂತೆ ಯೇಕರೂಪವಾಗಿಕಾಣುವದೇ । ತತ್ಪದಕ್ಕೆವಾಚ್ಯಾರ್ಥಮೆಂದು। ಮುಖ್ಯಾರ್ಥಮೆಂದು। ಅಭಿಧಾನಾರ್ಥಮೆಂದು । ಶಕ್ಯಾರ್ಥಮೆಂದುತಿಳಿಯಲಕ್ಕುಂ। ಬಳಿಕ ತನುತ್ರಯವ್ಯಷ್ಟಿರೂಪವಾದ। ವಿಶ್ವ। ತೈಜಸಪ್ರಾಜ್ಞರುಗಳನೂ। ಪ್ರತ್ಯಗಾತ್ಮನನುಕೂಡಿತಪ್ತಾಯಃಪಿಂಡದಂತೆ ಒಂದೆಂದುಕಂಡಲ್ಲಿ ತ್ವಂಪದಕ್ಕೆ ವಾಚ್ಯಾರ್ಥಮೆಂದು । ಶಕ್ಯಾರ್ಥಮೆಂದು। ಮುಖ್ಯಾರ್ಥಮೆಂದು। ಅಭಿಧಾನಾರ್ಥಮೆಂದು। ತಿಳಿಯಲಕ್ಕುಂ॥

— ತತ್ವಂಪದಲಕ್ಷ್ಯಾರ್ಥ. —

ಬಳಿಕ ವಿರಾಟ್ಪುರುಷಾದಿಗಳಂಬೇರ್ಪಡಿಸಿದನಿರುಪಾಧಿಕಬ್ರಹ್ಮವೇ।ತತ್ಪದಲಕ್ಷ್ಯಾರ್ಥಮೆಂದು। ಶೋಧಿತ ತತ್ಪದಾರ್ಥಮೆಂದುಪೇಳ್ಕುಂ॥ ಮತ್ತಮಾ ವಿಶ್ವಾದಿಗಳಂಪೃಥಕ್ಕರಿಸಿದ ನಿರುಪಾಧಿಕಪ್ರತ್ಯಗಾತ್ಮನೇ । ತ್ವಂಪದಕ್ಕೆಲಕ್ಷ್ಯಾರ್ಥಮೆಂದು। ಶೋಧಿತತ್ವಂಪದಾರ್ಥಮೆನಿಸುತಿರ್ಕುಂ॥

— ಲಕ್ಷಣಾಭೇದ. —

ಮತ್ತಮಾಪದಗಳಿಗೆ-ವ್ಯಾಕರಣ- ಉಪಮಾನ-ಕೋಶ- ಆಪ್ತವಾಕ್ಯ-ಲೋಕವ್ಯವಹಾರ-ವಾಕ್ಯಶೇಷ-ವಿವೃತಿ-ಸಿದ್ಧಪದಸಾನ್ನಿಧ್ಯಗಳೆಂಬ ಸಾಮಗ್ರಿಗಳಿಂ-ಘಟಪದಕ್ಕೆ-ಪೃಥುಬುಧ್ನೋದರಾದ್ಯಾಕಾರಮುಳ್ಳ ಕಲಶವರ್ಧನಮಪ್ಪಂತೆ-ಈಶ್ವರಸಂಕೇತದಿಂದೀಪದಕ್ಕೆ ಈ ಯರ್ಥಮೆಂದು ತಿಳಿಯಲ್ಪಡುವದೇಶಕ್ಯಾರ್ಥವೆನಿಸುವದು-ವಾಕ್ಯಾರ್ಥದಲ್ಲಿಅರ್ಥಕ್ಕಾದರುಂ-ತಾತ್ಪರ್ಯಕ್ಕಾದರು-ಪ್ರಕರಣ-ಲಿಂಗಷಟ್ಕಾದಿಗಳಿಂ ಅನುಪಪತ್ತಿಯುಂಟಾಗ್ಗುವಲ್ಲಿ-ಶಕ್ಯಾರ್ಥಸಂಬಂಧಮುಳ್ಳ ಉಪಪನ್ನಮಾದ ಮತ್ತೊಂದರ್ಥಮಂ-ಆಪಲಿಕ್ಕೆ ಪೇಳ್ವುದೇ ಲಕ್ಷ್ಯಾರ್ಥಮೆನಿಸುವದಾಗಿ-ಶಕ್ಯಾಸಂಬಂಧವೇ ಲಕ್ಷಣೆಯೆನ್ನಿಸಿಕೊಳ್ಳುತಿರ್ಕುಂ॥ ಬಳಿಕಾಲಕ್ಷಣೆಯೇ ಜಹಲ್ಲಕ್ಷಣೆ-ಅಜಹಲ್ಲಕ್ಷಣೆ-ಜಹ

ದಜಹಲ್ಲಕ್ಷಣೆಯೆಂದು ತ್ರಿವಿಧವಾಗಿರ್ಪುದದಕೆ-ಗಂಗಾಯಾಂಘೋಷಃ-ಕುಂತಾಃಪ್ರವಿಶಂತಿ-ಸೋಯಂದೇವದತ್ತಃ-ಯೆಂಬವಿಕ್ರಮದಿಂದುದಾಹರಣತ್ರಯವಪ್ಪುದದರಲ್ಲಿ

— ಜಹಲ್ಲಕ್ಷಣೆ. —

ಗಂಗಾಶಬ್ದವು-ಭಾಗೀರಥೀ ಜಲಪ್ರವಾಹಮಂವಾಚಿಸಲು। ಅದರೊಳು ಘೋಷವಿರ್ಪುದೆಂಬರ್ಥವಂ ಪ್ರಸಿದ್ಧತ್ವದಿಂದನುಪಪನ್ನವಾಗಿ- ವಾಚ್ಯಾರ್ಥವಾದಜಲಪ್ರವಾಹವಂಬಿಟ್ಟು-ತತ್ಸಾನ್ನಿಧ್ಯಸಂಬಂಧಮುಳ್ಳ ತೀರದೊಳುಗೊಲ್ಲವಳ್ಳಿಯಿರ್ಪುದೆನಲಾಶ್ರಯತ್ವ ಘಟಿಸುವದರಿಂದುಪಪನ್ನವಾಗೆ। ಗಂಗಾಪದಕ್ಕೆ ತೀರವೇಜಹಲ್ಲಕ್ಷ್ಯಾರ್ಥವೆನಿಸುವದು.

— ಅಜಹಲ್ಲಕ್ಷಣೆ. —

ಕುಂತಾಃ ಪ್ರವಿಶಂತಿಯೆಂಬಲ್ಲಿ ಅಚೇತನಗಳಾದಕುಂತಾಯುಧಗಳುಚೇತನಸಂಬಂಧವಿಲ್ಲದೇ ಪ್ರವೇಶಿಸುವದನುಪಪನ್ನವಾಗಿ ಕುಂತಶಬ್ದವುತನಿಗೆವಾಚ್ಯಾರ್ಥವಾದ ಕುಂತಾಯುಧಗಳಂಬಿಡದೇ ಕುಂತಧಾರಿಗಳಂಲಕ್ಷಿಪ್ಪುದೇ ಅಜಹಲ್ಲಕ್ಷ್ಯಾರ್ಥವೆನಿಸುವದು.

— ಜಹದಜಹಲ್ಲಕ್ಷಣೆ. —

ಸೋಯಂದೇವದತ್ತಃಯೆಂಬಲ್ಲಿ- ಸಯೆಂಬತಚ್ಛಬ್ದಕ್ಕೆಪೂರ್ವದರ್ಶನಕಾಲಯಂಗತಿಸಿದ-ಭೂತಕಾಲ, ಕಾಶೀದೇಶ, ಬಾಲ್ಯವಯಸ್ಸುಗಳಿಂದೊಡಗೂಡಿದ ದೇವದತ್ತನೆಂಬವನು ವಾಚ್ಯಾರ್ಥವಾಗಿಹನು-ಅಯಂಯೆಂಬಶಬ್ದಕ್ಕೆ-ವರ್ತಮಾನಕಾಲ, ಈದೇಶ-ಮುದಿತನದಗಳಿಂದೊಡಗೂಡಿದ ದೇವದತ್ತನೆಂಬವನು ವಾಚ್ಯಾರ್ಥವಾಗಿಹನು ತಚ್ಛಬ್ದಕ್ಕೆಸ್ಮರಿಸಲ್ಪಟ್ಟ ದೇವದತ್ತನೇಶಕ್ಯಾರ್ಥ। ಅಯಂಶಬ್ದಕ್ಕೆ-ಚಾಕ್ಷುಷಪ್ರತ್ಯಕ್ಷವಿಷಯನಾದದೇವದತ್ತನೇಶಕ್ಯಾರ್ಥ-ಕಾಲದೇಶ, ವಯಸ್ಸು, ಜ್ಞಪ್ತಿಗಳಿಂ ಪರಸ್ಪರವಾಗಿಬೇರ್ಪಟ್ಟಿರುವ ದೇವದತ್ತರಿಬ್ಬರಿಗೂಐಕ್ಯವಂಪೇಳಲು-ತತ್ತದ್ಧರ್ಮಗಳುವಿರುದ್ಧಗಳಾಗಿರುವದರಿಂದನುಪಪನ್ನಮಹುದು-ಭೇದವಂಪೇಳಲು ವಿಶೇಷಣವಿಶೇಷ್ಯಭಾವಘಟಿಸದು। ಮತ್ತಮಾದೇವದತ್ತರಿಬ್ಬರಲ್ಲದೇ-ಮುನ್ನಕಾಶಿಯೊಳು ಚಿಕ್ಕವಯಸ್ಕನಾಗಿ ನೋಡಲ್ಪಟ್ಟದ್ದದೇವದತ್ತನೇ-ಈಗಯೀದೇಶದಲ್ಲಿ ವೃದ್ಧನಾಗಿಕಾಣಲ್ಪಡುವದರಿಂ- ವಾಚ್ಯಾರ್ಥದಲ್ಲೇ ವಿರುದ್ಧಗಳಾದತತ್ಕಾಲತದ್ದೇಶಾದಿವಿಶೇಷಣಾಂಶಗಳನ್ನು ಮಾತ್ರಬಿಟ್ಟು-ಮಿಕ್ಕಅವಿರುದ್ಧವಾದವಿಶೇಷ್ಯವಂಬಿಡದೇ-ಶುದ್ಧದೇವದತ್ತನೇಪ್ರತ್ಯಭಿಜ್ಞೆಗೆ ವಿಷ

ಯೆಂದು-ಸೋಯಂಶಬ್ದಗಳಿಂದ-ದೇವದತ್ತಗತವಾದವಿಕ್ಯವಂ ಲಕ್ಷಿಸಿ-ಬಳಿಕೀತನೇ ಆತನು-ಆತನೇ ಈತನೆಂದು-ಪರಸ್ಪರಾಭೇದತಾದಾತ್ಮ್ಯಂಘಟಿಸುವಂತೆ ಬೋಧಿಪುದೇ-ಜಹದಜಹಲ್ಲಕ್ಷಣಯೆಂದು- ಅರ್ಧಲಕ್ಷಣೆಯೆಂದು ಖಂಡಲಕ್ಷಣೆಯೆಂದು-ಭಾಗತ್ಯಾಗಲಕ್ಷಣೆಯೆಂದು-ಪರ್ಯಾಯನಾಮಗಳುಳ್ಳ ದ್ದಾಗಿ-ತತ್ತ್ವಮಸಿಯೆಂಬ ಮಹಾವಾಕ್ಯಾರ್ಥದೊಳಗುದಹರಿಸಲು ಯೋಗ್ಯವಾಗಿಪ್ಪುದೆಂತೆನೆ.

— ತತ್ತ್ವಮಸ್ಯರ್ಥ. —

ಬಳಿಕ-ತತ್ತ್ವಮಸಿಯೆಂಬಪದತ್ರಯದಲ್ಲಿ ತತ್‌ಯೆಂಬಪದವು-ಬ್ರಹ್ಮನಿರ್ದೇಶಪರವಾಗಿರುವದರಿಂ-ತನಿಗೆವಾಚ್ಯಾರ್ಥವಾದ ಸದ್ಗುಣವಿಶಿಷ್ಟಪರೋಕ್ಷಬ್ರಹ್ಮವಂಬೋಧಿಪುದು-ತ್ವಮೆಂಬಪದವು-ತನಿಗೆವಾಚ್ಯಾರ್ಥವಾದ ಕಿಂಚಿಜ್ಜ್ಞತ್ವಾದಿಹೀನಗುಣವಿಶಿಷ್ಟನಪ್ಪ-ಅಪರೋಕ್ಷನಾದ ಚಿದಾಭಾಸಜೀವನಂಬೋಧಿಸುವದು-ನೇಹನಾನಾಸ್ತಿಕಿಂಚನ-ನಾತ್ರಕಾಚನಭಿದಾಸ್ತಿ-ಏಕಮೇವಾದ್ವಿತೀಯಂ-ಇತ್ಯಾದಿಶ್ರುತಿಪ್ರಾಬಲ್ಯದಿಂದ ದ್ವೈತಮೇ ತಾತ್ಪರ್ಯವಿಷಯಮಪ್ಪುದಾಗಿ ಬ್ರಹ್ಮಜೀವರ್ಗೈಕ್ಯಮಂಪೇಳಲು-ಸರ್ವಜ್ಞತ್ವಕಿಂಚಿಜ್ಜ್ಞತ್ವಾದಿಗಳು ವಿರುದ್ಧಗಳಪ್ಪವೆಂತನೆ-ಬ್ರಹ್ಮನೇಜೀವನಾದಲ್ಲಿ ಸರ್ವಜ್ಞತ್ವವಿಲ್ಲದಿಹಾನುಭವವೇವಿರೋಧ।ವತ್ತುಂಪರೋಕ್ಷತ್ವಮುಂಟಾಗಬೇಕದಿಲ್ಲಾಗಿತಾನೆಂಬಸಾಕ್ಷಾತ್ಕಾರವಿಪ್ಪುದರಿಂ ದೊಂದುವಿರೋಧ- ತತ್ತ್ವಮೇವತ್ವಮೇವತತ್-ಯೆಂಬಪ್ರಮಾಣದಿಂ-ತ್ವಂಪದಾರ್ಥಾಭೇದ ತತ್ಪದಾರ್ಥದೋಳ್‌ಪೇಳೆ। ಸರ್ವಾನುಭವಸಿದ್ಧಮಪ್ಪಕಿಂಚಿಜ್ಜ್ಞತ್ವವು ಬ್ರಹ್ಮದೊಳು ಶ್ರುತಿಸಿದ್ಧಮಲ್ತು- ಇಂತುವಿರೋಧಪರಂಪರೆಗವಕಾಶವಪ್ಪುದಾಗಿ-ಅವಿರುದ್ಧಮಪ್ಪರೀತಿಯಿಂವಾಕ್ಯಾರ್ಥಮಂತಿಳಿಯಲು-ವಾಚ್ಯಾರ್ಥಗಳಿಗೈಕ್ಯಂಘಟಿಪದಾಗಿ-ಶ್ರುತಿತಾತ್ಪರ್ಯವಾದೈಕ್ಯವಂನಿರ್ಧರಿಸಲ್ಕೆ-ಭಾಗತ್ಯಾಗಲಕ್ಷಣೆಯು ಸ್ವೀಕರಿಸಲದುಸಿದ್ಧಪುದೆಂತೆನೆ-ತತ್ತ್ವಂಪದಗಳಿಗೆ ವಾಚ್ಯಾರ್ಥಗಳಾದ ಬ್ರಹ್ಮಜೀವರಲ್ಲಿಕ್ರಮದಿಂದಿಪ್ಪಸರ್ವಜ್ಞತ್ವಕಿಂಚಿಜ್ಜ್ಞತ್ವಗಳಂಪರೋಕ್ಷತ್ವಾಪರೋಕ್ಷತ್ವಾದಿಗಳಂ ಬಿಟ್ಟು-ಅವಿರುದ್ಧವಾದಚೈತನ್ಯಮಾತ್ರಮಪ್ಪ-ಬ್ರಹ್ಮತ್ವೋಪಲಕ್ಷಿತಶುದ್ಧಶಿವಚೈತನ್ಯಕ್ಕಂ-ಜೀವತ್ವೋಪಲಕ್ಷಿತಕೂಟಸ್ಥಪ್ರತ್ಯಗಾತ್ಮಚೈತನ್ಯಕ್ಕಂ- ಅಸಿಯೆಂಬುವದೈಕ್ಯಮಂ ಬೋಧಿಸಿ ಸಫಲಮಹುದಾಗಿ-ಇಂತುಲಕ್ಷಿತಜೀವಬ್ರಹ್ಮೈಕ್ಯಾನುಸಂಧಾನಬಲದಿಂ-ಅನ್ಯಾಕಲ್ಪಿತಗಳಾದ ಪರಿಪರಿ ವಿಶೇಷಾಭಾಸಂಗಳಡಗಿಪ್ಪೋಗೆ—

ಅಖಂಡಸಚ್ಚಿದಾನಂದ ಶಿವಸ್ವರೂಪವೊಂದೇಸತ್ಯವೆಂದು ಮಹಾವಾಕ್ಯಾರ್ಥತಾತ್ಪರ್ಯಸಿದ್ಧಮಕ್ಕುಂ.

ಬಳಿಕ-ತತ್ವಮಸಿಯೆಂಬಮಹಾವಾಕ್ಯದಲ್ಲಿ, ಪ್ರತ್ಯಗಾತ್ಮಪರಾತ್ಮರಿಗೆ। ತತ್ವವೆಂಬಪದದ್ವಯವು। ಘಟಾದುಪಾಧಿಗಳಂ ನೆರೆಗಳೆದು ಆಕಾಶಮೊಂದೇಆಯಿತೆಂಬಂತೆ-ರಾಮಚಂದ್ರನಮನುಜತ್ವಮಂ ಬಿಡಿಸು ನೀನೇವಿಷ್ಣುವೆಂಬಂತೆ। ಕರ್ಣನವ್ಯಾಧಭಾವಕ್ಕೆ ಕಾರಣವಾದ ರಾಧಾಪುತ್ರತ್ವಮಂಬಿಡಿಸಿ ಕ್ಷತ್ರಿಯತ್ವಕ್ಕೆಕಾರಣವಾದಕುಂತೀ ಪುತ್ರತ್ವಮಂಬೋಧಿಸುವಂತೆ ದಶಮಪುರುಷನ ಮರಣದುಃಖಮಂಬಿಡಿಸಿ ನೀನೇದಶಮನೆಂಬಂತೆ ॥ ಸ್ವಭಾವಸಿದ್ಧಮಾದೈಕ್ಯಮಂಬೋಧಿಸುವದು.

— ವಾಕ್ಯಾರ್ಥಪ್ರತಿಪತ್ತಿನಿರಾಕರಣೆ. —

ಇಂತುಮಲ್ಲದೆ-ಬಳಿಕೊಂದುಪುವ್ವಿಗೆಸಗ್ಗವೆಂಬವ್ಯಾದಂತೆ। ಮೋಕ್ಷದೊಳಗಪೇಕ್ಷೆಯಂಪುಟ್ಟಿಸುವಂತೆ ಅರ್ಥವಾದವೆಂದು ಪ್ರತಿಮೆಯುಂ ದೇವತಾಕೃತಿಯೆಂಬಂತೆಉಪವಾಸನಾಪರವೆಂದು। ಮನುಜರಂದೇವೇಂದ್ರನೆಂಬವಾಕ್ಯದಂತೆಸ್ತುತಿಪರವೆಂದು ಆಳನರಸೆಂಬವಾಕ್ಯದಂತೆ ಔಪಚಾರಿಕವೆಂದು ಅಗ್ನಿಮಾಣವಕನೆಂಬವಾಕ್ಯದಂತೆ ಗುಣಸಾದೃಶ್ಯವೆಂದು। ಇದುಗೋವಿನದೇಹವೆಂಬವಾಕ್ಯದಂತೆ ಜಾತಿವ್ಯಕ್ತಿಪರವೆಂದು। ಘಟಮೃತ್ತಿಕೆಗನನ್ಯವೆಂಬವಾಕ್ಯದಂತೆ ಕಾರಣಲಕ್ಷಣವೆಂದು। ನೀಲೋತ್ಪಲವಾಕ್ಯದಂತೆ ಗುಣಗುಣಿಗಳೆಂದು ಕ್ಷೀರದಧಿಕಭೇದವಾಕ್ಯದಂತೆ ನಿಕಾರವೆಂದು ವಾರಿಕಣಂಗಳಿಗೈಕ್ಯಮೆಂಬಂತೆ ಅಂಶಾಂಶಿಕವೆಂದು। ಬಿಂಬವೇ ಪ್ರತಿಬಿಂಬವೆಂಬ ವಾಕ್ಯದಂತೆಬಿಂಬಪ್ರತಿಬಿಂಬಭಾವವೆಂದು। ಔಪಚಾರಿಕಾಭೇದಪರಮೆಂತಲುಂ। ಪದಾರ್ಥಾಂತರಗತಾಭೇದಪರಮೆಂತಲುಂ। ಅಂತರ್ಯಾಮ್ಯಭೇದಪರಮೆಂತಲುಂ। ತಾತ್ವಿಕಭೇದತಾತ್ಪರ್ಯಕಮೆಂತಲುಂ। ಸಂಬಂಧಮಾತ್ರಬೋಧಕಮೆಂತಲುಂ।ವಾದಿಗಳುಹಲವುಬಗೆಯಾಗಿಭೇದಮಂಕಲ್ಪಿಸಿ। ವಾಕ್ಯಾರ್ಥಮಂಅಭಾಸಗೊಳಿಸೆ ಸತ್ಯಮದ್ವೈತಂ। ಅದ್ವೈತಂಪರಮಾರ್ಥತಃ। ನಾನಾಪಶ್ಯನ್ಮೃತ್ಯುಂಗಚ್ಛತಿ। ವಿಭಕ್ತಿರೇವೈನಯೋಸ್ತು। ಯೋವೈಸ್ವೇತರಂ ಮನುತೇನಸವೇದ ತದೇಕಂ। ಸ್ಯೈವನಾನಾಸ್ತಿ।ನಾತ್ರಕಾಚನಭಿದಾಸ್ತಿ ಏಕೋಹವೈ, ಏಕೋರುದ್ರಃ, ಏಕಮೇವಾದ್ವಿತೀಯಂ। ಏಕತ್ವಮನುಪಶ್ಯತಿ। ಶಿವಮದ್ವೈತಂಚತುರ್ಥಂ। ಪೂರ್ಣಮದಃ।ಪೂರ್ಣಮಿದಂ। ಯಥಾಸ್ವಪ್ನಸ್ತಥಾಮೃಷಾ।ಇತ್ಯಾದಿ ಪರಸ್ಪರಸ್ಪಷ್ಟಬಲತರ ಶ್ರುತಿವಾಕ್ಯವಿರೋಧಮಪ್ಪುದರಿಂ। ಉಪ

ಕ್ರಮಾದಿಷಡ್ವಿಧಲಿಂಗಗಳಿಂ ಸರ್ವವೇದಾಂತ ಶಾಸ್ತ್ರದೊಳಗಲ್ಲಿಯು ಮದ್ವೈತವೇ ತಾತ್ಪರ್ಯವಿಷಯವಾಗಿ ಪರಮಾರ್ಥಸತ್ಯವಹುದರಿಂ। ದ್ವೈತಕ್ಕೆ ಮಾಯಾಮಾತ್ರತ್ವಮುಂ ಮಿಥ್ಯಾತ್ವಮುಂ। ನಿಷೇಧಮು ಶ್ರುತಿಸಿದ್ಧಮಪ್ಪಂತೆ। ಅದ್ವೈತಕ್ಕೆ ಮಿಥ್ಯಾತ್ವನಿಷೇಧಗಳಲ್ಲಿಯುಂ ಪೇಳಲ್ಪಡದರಿಂ। ದ್ವೈತಕ್ಕೆ ಸತ್ಯತ್ವಮಂ ಪೇಳ್ವ ಶ್ರುತಿಯೊಂದಾದರುಯಿಲ್ಲದರಿಂ। ಕಮಾದಿವ್ಯವಹಾರ ಪ್ರಕರಣ ಪಠಿತಮಾದ ಸತ್ಯತ್ವವು ಅನಿರುದ್ಧಮಪ್ಪುದರಿಂ। ಭೇದವಾದಿಗಳಗಭಿಮತವಾದ ವಾಕ್ಯಾರ್ಥ ಪ್ರಪತ್ತಿಯು ನಿರಾಕರಿಸಲಕ್ಕುಂ.

—* ತತ್ವಾರ್ಥ. —*

ಬಳಿಕ-ಶ್ರುತ್ಯಾಚಾರ್ಯನಿಜಾನುಭವಯುಕ್ತಿಸಮ್ಮತವಾಗಿ। ತತ್ಪದಾರ್ಥಮಾದಶಿವಲಿಂಗವೇ ತ್ವಂಪದಾರ್ಥವಾದ ಜೀವಲಿಂಗವಾಗಿಪ್ಪುದೇ। ತತ್ವಮೆಂಬಿಯುದಾರ್ಥವೆಂದುದೃಢತರಮಾಗ್ ಪ್ರಮಾಣಿಸೆ ಸಿದ್ಧಾಂತಮಕ್ಕುಂ.

—* ಮಿಥ್ಯಾತ್ವಾವಿರೋಧ. *—

ಬಳಿಕಿಂತು ವಿಶೇಷ್ಯಣಾಂಶಮಾದದ್ವೈತಕ್ಕೆ ಮಿಥ್ಯಾತ್ವಮಂಪೇಳಿ ಸತ್ಯಮಾದವಿಶೇಷ್ಯಚಿನ್ಮಾತ್ರಕ್ಕೆ ಐಕ್ಯಮಂ ಪೇಳ್ದೊಡೆ ಅದ್ವೈತಸಿದ್ಧಿಯಪ್ಪುದೆನಲು। ಮಿಥ್ಯಾತ್ವವೆಂಬುವದಕೆ ಗತಿಯಿಲ್ಲವಾಗಿ। ಅದ್ವೈತಮುಪಪನ್ನಮಲ್ತು ದೆಂತೆನೆ ಜಗವುಮಿಥ್ಯೆಯಾಗೆ। ಮಿಥ್ಯೆಯುಹತನವು ಜಗದೊಳಗಿರಬೇಕದಕೆ ಆಶ್ರಯುವಿಲ್ಲವಾಗಿಯೆಂತಿರ್ಪುದು। ಶಿವನೊಳಗಿಪ್ಪುದೆನಲ್ಕೆ। ಶಿವಂ ಸತ್ಯನಾಗಲದುಘಟಿಸದು। ಮತ್ತಮಾಮಿಥ್ಯೆಯುಹತನವು ಸತ್ಯವೆಂದೊಡೆ ಶಿವನೊಂದುಸತ್ಯ। ಮದೊಂದುಸತ್ಯವೆಂದು ಸತ್ಯವೆರಡಾಗೆ ಏಕಮೆಂಬಶ್ರುತಿ ವಿರೋಧ। ಮೆಂತಲದೆಮಿಥ್ಯೆಯುಹತನವೇಮಿಥ್ಯೆಯೆಂದೊಡೆ। ಸತ್ಯಮಹತನ। ಮಿಥ್ಯೆಯುಹತನವೆಂಬೆರಡರೊಳಗೊಂದುಸತ್ಯವಾಗೆ ಮತ್ತೊಂದುನಿಷೇಧಿಸಲಕ್ಕು। ಮೊಂದು ಮಿಥ್ಯೆಯಾಗೆಮತ್ತೊಂದುಸತ್ಯಮಕ್ಕು। ಮಿಂತು ಶುಕ್ತಿರಜತಂನೋಡಿರಜತಮಹುದೋ ಅಲ್ಲವೋಯೆಂದುಸಂದೇಹಿಸಿ। ಬಳಿಕ ನಿಶ್ಚಯಂಗನುಭವವಿರಲು। ಪ್ರಪಂಚದೊಳಿಪ್ಪ ಮಿಥ್ಯೆಯಾಯಿತಾಗಿ। ಪ್ರಪಂಚವುಸತ್ಯವಾಗಲದರಿಂ। ಸತಾದ್ವೈತಹಾನಿಯಾಗಬೇಕಲ್ಲವೆ। ಅಂತದಲ್ತು ಮೆಂತೆನೆ। ದೂರಸ್ಥಮಾದಗಜಮಂ ಕಂಡರಿಯದೆ। ಮಹಿಷವೋ ಅಶ್ವವೋಯೇಂದು ಸಂಶಯಿಪಂಗೆ। ಮಹಿಷಮಲ್ಲೆಂದುನಿಶ್ಚಯಮಾದೊಡೆ। ಬಳಿಕಾಗಜದೊಳಗಶ್ವತ್ವಮೆಂತು ಸತ್ಯಮಾಗದೋ। ಅಂತುತುಚ್ಛ್ಯಯಹತನ ಮಿಥ್ಯೆಯಾದೊಡೇನು ವಿರೋಧಮಿಲ್ಲ। ಮತ್ತಮಾಮಿಥ್ಯೆಯಾಗದೆ ಅದರಸ್ವ

ರೂಪವೆಂದಿಗುಂ ಸತ್ಯವಾಗ । ದದೇತಕನೆ। ಸುಳ್ಳಿಂಬ ಸಾತುಂ ದಿಟವಾದರುಂ ಸುಳ್ಳು ಸುಳ್ಳಾಗಿಯೆಯುಪ್ಪುದಲ್ಲದೆ । ಸುಳ್ಳ ಸಸ್ವರೂಪವೆಂದಿಗೂ ದಿಟವಾಗಲರಿಯದಾಗಿ । ನಾನಾವಿಕಾರವಾಗಿ ತೋರ್ಪದ್ವೈತವಡಗಲು । ತಜ್ಞಾನಮುಂ ವನವೊಳುದಿಸಿದಗ್ನಿ ವನವಂ ದಹಿಸಿ ತಾನಡಗಿ ಪೋಗಂತೆ ಕ್ಷಯಿಸಿ ಪೋಗಲು। ಆಶ್ರಯಮಾತ್ರವಾದ । ಬೋಧಾಧಿಷ್ಠಾನವರಿಯಲ್ಪಟ್ಟ । ಶಿವಚೈತನ್ಯವೊಂದೇ ಸತ್ಯವೆಂಬುದ । ಕಾವರ ಹಾನಿಯುಂಯಿಲ್ಲವೆಂಬುದೇ ದೃಢಮುಕ್ತಂ ॥

—* ಮಿಥ್ಯೆಯರಿತರಿಸತ್ಯಸಿದ್ಧಿ. *—

ಬಳಿಕ ಸಕಲ ಪ್ರಪಂಚಕ್ಕೆ ಮಿಥ್ಯಾತ್ವವಂ ಪೇಳ್ವವೇದಾಂತಪಕ್ಷದಲ್ಲಿ । ಶ್ರುತಿವಿಚಾರದಿಂದೆಂತು ಸತ್ಯವಾದ ಮುಕ್ತಿ ಘಟಿಸುವದನೆ । ಭ್ರಾಂತಿವಾದ ಸ್ವಪ್ನವನಿತಾಸಂಭೋಗಾದಿಕದಿಂ। ಸತ್ಯವನಿಪವೀರ್ಯಪತನಾದಿಕಮುಂ । ಕಲ್ಪಿತವಪ್ಪ ಶಿಲಾಭೈರವಾದಿಭಜನೆಯಿಂ । ತಥವೆನಿಪ ಸಂಪದಾದಿಸಿದ್ಧಿಗಳುಂ । ಯಥಾರ್ಥವಿಲ್ಲದ ದರ್ಪಣಪ್ರತಿಬಿಂಬಾದಿಗಳಿಂ ಸತ್ಯವೆನಿಪಮುಖ ಲಾವಣ್ಯಾದಿಗಳುಂ। ಮರುಮರೀಚಿಕಾಜಲಾದಿಗಟಿತನವು ದಿಟವೆಂಬುವದಂ । ನಿಶ್ಚಿತಗೃಷ್ಟವಾಪ್ಪಂತೆ। ಮಿಥ್ಯಾಭೂತಜಗತ್ತಿನೊಳಗಂತರ್ಭೂತವಾದ। ಪ್ರಮಾಣಾತ್ಮಕಶ್ರುತಿವಿಚಾರದಿಂ। ಪರಮಾರ್ಥವಾದಮುಕ್ತಿಸಿದ್ಧಿಯುಕ್ತಂ॥

—* ನಿರಂಜನತ್ವಸಿದ್ಧಿ. *—

ಬಳಿಕ ಪ್ರಮಾರ್ಥವಾದಶಿವನು ಜಗಜ್ಜನ್ಮಾದಿಕಾರಣನಾಗೆ । ಆತನರುಹಿಂ ಶುದ್ಧಚಿನ್ಮಾತ್ರಾಜ್ಞಾನ ಪ್ರಯುಕ್ತವಾದ ದುಃಖವೆಂತಳಿವುದು। ಶುಕ್ತಿಯರುಹಿಲ್ಲದರಿಂತೋರುವ ಪ್ರಾತಿಭಾಸಿಕರಜತವು ಶುಕ್ತಿಜ್ಞಾನವಿಲ್ಲದೆ ಸ್ಫಟಿಕಜ್ಞಾನದಿಂದಳಿಯದಂತೆ ಜಗವಳಿಯದ । ಮತ್ತಾವಾವ ಶಿವನೇ ಜ್ಞಾನವಿಷಯನೆಂದೊಡೆ। ಅವಾಙ್ಮನಸಗೋಚರತ್ವಭಂಗ ಮಾಹುವಾಗಿ ಸವಿಶೇಷತ್ವಾಪತ್ತಿಯುಕ್ತಂ ॥ ಇಷ್ಟಾಪತ್ತಿಯೆಂದೊಡೆ। ನಿಷ್ಕಳಂ, ನಿರಂಜನಂ, ಶಿವಂ, ಶಾಂತಮೆಂಬಶ್ರುತಿ ವಾಕ್ಯೋಪಮುಕ್ತ್ಯಮಾದರಿಂದಿಂತು ಸಿದ್ಧಾಂತಿ ತಮಾಸಮುಂಜಸವೆಂ। ಮಧುರವಾದ ರುಚಿಚನ್ನಾಗಿಪ್ಪುದೆನೆ ಚನ್ನಹತನವೆಂತನತಿರಿಕ್ತವೋ । ಅರಿವೆನೆಂದುಕುರುಹಿಡು ಪರುಹನೊಳಕೊಂಬರುಹಿಂಗೆ ಸಾಕ್ಷಿಯಾದರು ಹೆಂತು ನಿರ್ವಿಕಲ್ಪಕವೃತ್ತಿಯಿಂ ನಿರಾಕಾರವಾಗಿದ್ದರುಂ ವೃತ್ತಿಗಳಕುರುಹಿಲ್ಲದೆ ಪಸರಿಸಿಸ್ವಯಂಪ್ರಕಾಶಮಪ್ಪುದೋ। ಅಂತುಸಚ್ಚಿದಾನಂದಾತ್ಮಕ ಸ್ವರೂಪಸ್ವಭಾವವಾದ ಪರಬ್ರಹ್ಮಶಿವಚೈತನ್ಯ

ವು। ಜಲಲೇಪವಿಲ್ಲಗ ಪುಷ್ಕರಪಲಾಶದಂತೆ। ದ್ವೈತಲೇಪವಿಲ್ಲದೆ ನಿರ್ಲಿಪ್ತವಾಗಿರುವದರಿಂ। ದಾಶಿವನೊಳುನಿರಂಜನತ್ವವು ಸಿದ್ಧವಪ್ಪುದಾಗಿ। ಮುನ್ನಸರ್ಪವೆಂದರಿಯಲ್ಪಟ್ಟವಸ್ತುವೆ ರಜ್ಜುವೆಂಬ ಆಪ್ತವಚನಾವಲೋಕ್ತದಂತೆ। ಜಗತ್ತಿಗೆಕಾರಣವಾಗಿ ಮಾಯೆಯು ದೊಡಗೂಡಿದ। ಪರಮೇಶ್ವರನೆಂದರಿಯಲ್ಪಟ್ಟುದೆ। ನಿರುಪಾಧಿಕನಿರಂಜನಾದ್ವಿತೀಯಪರಬ್ರಹ್ಮನಾದ ಶಿವನಿರ್ಗುಣಲಿಂಗವೆಂಬ। ವೇದಾಂತವಾಕ್ಯದಿಂದಾದ। ಶಾಬ್ದಾಪರೋಕ್ಷದಿಂ। ದುಃಖನಿವೃತ್ತಿಯಪ್ಪುದೆ ಜ್ಞಾನಾಜ್ಞಾನಗಳಗೆಸಮಾನವಿಷಯಕತ್ವಮಹುದಾಗಿ ಸಿದ್ಧಾಂತಸಮನ್ವಯಮಕ್ಕುಂ ॥

—* ನಿರ್ಗುಣಸಾಧನೆ. *—

ಮತ್ತಮಾಬ್ರಹ್ಮ ಲೋಕಸ್ಥಾಯಸಹಸ್ರತಾಸು ಮಾನಾದಿಗಳಂ ಸ್ವಗುಣವಾಗಿ ನಿರ್ಗುಣಸಿದ್ಧಿ ದುರ್ಘಟವೆಂಬಪೂರ್ವಪಕ್ಷದೆ ಬಲ್ಲನುಭವಿಗಳಹುದೆಸಂಭವಗಳು ಪರಾಭೂತರಾಗಲು।ಶಾಸ್ತ್ರಯೋನಿಯಾದಬ್ರಹ್ಮ। ಶಬ್ದೈಕಸಮೀಯಮಾಗಿ। ನಿರ್ಗುಣತಾತ್ಪರ್ಯಮುಳ್ಳ। ಸಾಕ್ಷೀಚೇತಾಕೇವಲೋನಿರ್ಗುಣಶ್ಚ। ಯೆಂಬದುಮುಂತಾದಪ್ರಬಲಶ್ರುತಿಗಳಿಂದನು ಗೃಹೀತವಾದಿರ ವಾದಿಕಲ್ಪಿತಾನುಮಾನವು ಪ್ರಮಾಣಮಹುದಾಗಿ। ಬ್ರಹ್ಮಾದಿಬ್ರಹ್ಮವಿದ್ಯಾಸಂಪ್ರದಾಯ ಕರ್ತೃಗಳಗೆಪರಶಿವನಿಂ। ದುಪದಿಷ್ಟಮಾದಮತವಿದು ನಿಸ್ಸಂಶಯದಿಂದಿರಲ್ಕೆ। ನಿರ್ಗುಣಸಿದ್ಧಿಯಿಂ। ನಿಶ್ರೇಯಸವೆಂಬ ಕೈವಲ್ಯಸಿದ್ಧಿಯಕ್ಕುಂ ॥

—* ಜ್ಞಾನಕ್ಕೆಪ್ರತಿಬಂಧಕ. *—

ಬಳಕ ಪರಬ್ರಹ್ಮಚೈತನ್ಯವಾದ ನಿರ್ಗುಣ ಶಿವಜ್ಞಾನವು ಪ್ರಪಂಚಭಾನವಳಿದೊಡಲ್ಲದಸಿದ್ಧಿಸದಾಗಿ। ಪಾಪಶೇಷದಿಂ। ದ್ವೈತಭ್ರಾಂತಿಸಂಶಯಗಳಪ್ಪಪ್ರವೃತ್ತಿಕರ್ಮ ಜಡರಾದಭವಿಗಳಗೆ।ಸತ್ಸಂಗದಿಂಮುಕ್ತಿದೊರಕೊಳ್ಳಲು ಸತ್ಕರ್ಮದೀಕ್ಷೆ। ಶಿವಧ್ಯಾನ ಮಾನಸಪೂಜಾದಿಗಳೇ ಕಾರಣವಾಗಿ। ಅದಿಲ್ಲದಿರುವಿಕೆಯೇಬ್ರಹ್ಮವಿದ್ಯೆಗೆ ಪ್ರತಿಬಂಧಕಮಕ್ಕುಂ ॥

—* ಮುಕ್ತಿಗೆವಿಘ್ನತ್ರಯ. *—

ಬಳಕ ಅಸಂಭಾವನೆ ಸಂಶಯಭಾವನೆ ವಿಪರೀತಭಾವನೆಗಳೇಮುಕ್ತಿಗೆ ಪ್ರತಿಬಂಧಕವಾಗಿರ್ಪವಿಂತೆನೆ।ನೀನೇಪರಬ್ರಹ್ಮವಾದ। ಪರಮಶಿವಚೈತನ್ಯವೆಂದರಿತು। ಶಿವೋಹಂಯೆಂದುಭಾವಿಸಿ। ನಿಶ್ಚಯದಿಂಸುಖಿಯಾಗಿ। ಮೋಕ್ಷವಂಪಡವುದೆಂದು। ಸನಿರ್ಯವಾಗಿ। ಗುರುವಿನುಪದೇಶವಂಕೊಂಡಳಿ

ಷ್ಯನು । ಬ್ರಹ್ಮಧರ್ಮಗಳಾದ। ಸರ್ವಜ್ಞತ್ವಾದಿಗಳೆನ್ನೊಳಿಲ್ಲವಾಗಿ।ನಾನು ಬ್ರಹ್ಮನಲ್ಲವೆಂದು ಭಾವಿಸುವಅಜ್ಞಾನವೇಅಸಂಭಾವನೆಯೆನಿಸುವದು।ಬಳಿಕ ಜಹದಜಹಲಕ್ಷಣೆಯಿಂತತ್ವಮಸ್ಯಾದಿವಾಕ್ಯಾರ್ಥ। ಮಂತಿಳಿದರುಂ।ನಂಬಿಕೆಸಾಲದೆ। ನಾನುಬ್ರಹ್ಮವಹುದೋ। ಅಲ್ಲವೋಯೆಂದು। ಸಂದೇಹಗೊಳ್ಳುವದೇ। ಸಂಶಯ। ಭಾವನೆಯೆನಿಸುವದು। ಶ್ರುತಿಯುಕ್ತಿಗಳಿಂನಾನು।ಬ್ರಹ್ಮನಾದೊಡಂ। ನನಗಿನ್ನು ಜೀವತ್ವಬಿಡಲಿಲ್ಲವಾಗಿ।ಈಗನಾನುಜೀವನೆಯೆಂದರಿತಿಹುವೇ। ವಿಪರೀತಭಾವನೆಯೆನಿಸುವದು ॥

—* ವಿಘ್ನತ್ರಯಪರಿಹಾರ. *—

ಅಂತಾಮುಕ್ತಿಗೆಪ್ರತಿಬಂಧಗಳಾದಮೂರುವಿಘ್ನಂಗಳುಂಯೆಂತುನಿವಾರಿಸಲ್ಕುಮನೆ। ಶ್ರವಣ, ಮನನ, ನಿದಿಧ್ಯಾಸನಗಳೆಂಬ। ಪ್ರಾಯಶ್ಚಿತ್ತ।ರೂಪವಾದಮೂಂಗಳಗಳರಾ ಕ್ರಮವಾಗಿ ವಿಘ್ನತ್ರಯವಳಿವುದು। ಆಪ್ತವಚನದಿಂದ। ಆಶೌಚಶ್ರವಣವಾಗಲು । ತಾನುಸೂತಕಿಯೆಂದು ದೃಢತರವಾಗಿನಂಬುದಂತೆ॥ ಪ್ರತ್ಯಗಾತ್ಮಬ್ರಹ್ಮರಿಗೈಕ್ಯ । ತಾತ್ಪರ್ಯವನವಧರಿಸುವದೇ ಶ್ರವಣವೆನಿಸುವದಾಗಿ। ಇದರಿಂದ। ಅಸಂಭಾವನೆ। ನಿರಾಕೃತವುಕ್ಕುಂ । ಅಂತುಶ್ರುತವಾದವೇದಾಂತಾರ್ಥವುಂ । ಸದ್ಯುಕ್ತಿಸತ್ತರ್ಕಗಳಿಂಚಿಂತನಂಗೈವುದೇ। ಮನನವೆನಿಸುವದು ॥ ಇದರಿಂಸಂಶಯಭಾವನೆನಿವರ್ತಿಯಕ್ಕುಂ।ಆಶ್ರವಣಮನನಗಳದೆಸೆಯಿಂದೆ। ದೃಢತರವಾಗಿ ನಿಶ್ಚಿತವಾದರ್ಥಮುಂ। ನಿಶ್ಚಲಚಿತ್ತದಿಂ ನನು ಸಂಧಾನಗೊಂಡು। ಬ್ರಹ್ಮಾಕಾರಾಂತಃಕರಣನಾಗಿಪ್ಪುದೇ ನಿದಿಧ್ಯಾಸನ ವೆನಿಸುವದು । ಇದರಿಂವಿಪರೀತಭಾವನೆಯೆಂಬವಿಘ್ನವು । ಪರಿಹರವುಕ್ಕುಂ ॥

— ಸಹಕಾರಿಕಾರಣ. —

ಬಳಿಕಿಲ್ಲಿ। ಶ್ರವಣದಿಂದುತನ್ನವಾದಜ್ಞಾನದಿಂದಲೆ। ಆತ್ಮಸಾಕ್ಷಾತ್ಕಾರವುಪ್ಪುದಾಗಿ। ಶ್ರವಣವೇಮುಖ್ಯವುಪ್ಪುದರಿಂ। ಅಂಗಿಯೆನಿಸುವದು ಅಂತುಶ್ರವಣಜನ್ಯವಾದ। ಬ್ರಹ್ಮಜ್ಞಾನವು ॥ ದೃಢತರವಾಗಿವಸ್ತು। ಸಾಕ್ಷಾತ್ಕಾರಕ್ಕುಪಯೋಗಿಸುವಂತದಕ್ಕೆ। ಸಹಕಾರಿಗಳಾಗಿರುವಮನನ। ನಿದಿಧ್ಯಾಸನಗಳು ಅಂಗಗಳಕ್ಕುಮದೆಂತೆನೆ । ಘಟಾದಿವಸ್ತುಸಾಕ್ಷಾತ್ಕಾರಕ್ಕೆ ಚಕ್ಷುಸ್ಸುಕರಣವಾದೊಡು । ಕತ್ತಲೆಯೊಳು। ನಿಷ್ಪ್ರಯೋಜಕವಾಗಿರಲು। ಆಲೋಕಾದಿಗಳುಸಹಕಾರಿಕಾರಣಗಳಾದಂತೆ। ಶ್ರವಣಮನನಗಳು। ತತ್ವಜ್ಞಾನಕ್ಕೆ ಸಹಕಾರಿಗಳಾಗಿರ್ಪ್ಪುಂ॥ ಮತ್ತಮಾ ಮನನವು। ಅರ್ಥಪ್ರ

ಕಾಳಕವಾದ। ದೀಪದಪ್ರಚಲನಾವಸ್ಥೆಯಲ್ಲಿ। ಕಾರ್ಯವಿಲ್ಲವಾಗಿ। ಬಳಿಕ। ವಾಯುಸಂಚಾರಕ್ಕೆ ಮರಿಗಟ್ಟುವತೆರೆಯಂತೆ। ಸಹಕಾರಿಯಹುದು।ನಿಧಿಧ್ಯಾಸನವಾದೊಡೆ।ಆದೀಪವುಕ್ಷೀಣಪ್ರಕಾಶವಾಗಲು।ಬತ್ತಿಯಂನೆರೆನೂಕಿಪ್ರಜ್ವಲಂಮಾಡುವಂತೆ। ಸಹಕಾರಿಯಾಗಿಪ್ಪುದು॥

— ಶ್ರುತಿತಾತ್ಪರ್ಯನಿರ್ಣಯಲಿಂಗ. —

ಬಳಿಕ ಉಪಕ್ರಮೋಪಸಂಹಾರಗಳು। ಅಭ್ಯಾಸ-ಅಪೂರ್ವತೆ-ಫಲ-ಅರ್ಥವಾದ-ಉಪಪತ್ತಿಯೆಂಬ-ಲಿಂಗಷಟ್ಕದಿಂ-ಶ್ರವಣದೋಳ್ ತಾತ್ಪರ್ಯವಂ ನಿರ್ಣಯಿಸಲಪ್ಪುದವುಗಳೊಳು। ಛಾಂದೋಗ್ಯಾದಿಶ್ರುತಿಗಳಲ್ಲಿ ಪ್ರಕರಣಾದಪ್ರಥಮಭಾಗದೊಳು। ಸೃಷ್ಟಿಗಿಂಮೊದಲ್ಜಗತ್ತು। ಸದ್ರೂಪಬ್ರಹ್ಮವಾಗಿತ್ತೆಂದು। ಮತ್ತಾಬ್ರಹ್ಮಕ್ಕೆ। ಸ್ವಗತಾದಿ। ಭೇದತ್ರಯಮಂ। ನಿವಾರಿಸುತ್ತ। ಅಖಂಡೈಕರಸಮಂಪೇಳ್ವುದೇ। ಉಪಕ್ರಮವೆನಿಸುವದು।ಪ್ರಕರಣಪರಿ। ಸಮಾಪ್ತಿಯೊಳು। ನಾಮರೂಪಾತ್ಮಕಪ್ರಪಂಚಕ್ಕೆ। ಆಬ್ರಹ್ಮದೊಳು। ಲಯಮಂಪೇಳಿ। ಪ್ರತ್ಯಗಾತ್ಮಕ್ಕೆಆಬ್ರಹ್ಮದೊಡನೈಕ್ಯಮಂಬೋಧಿಸುತ್ತ। ಬ್ರಹ್ಮಾದ್ವಿತೀಯಮೆಂದು ಪೇಳ್ವುದೇ। ಉಪಸಂಹಾರವೆನಿಸುವದು। ಈ ಉಪಕ್ರಮೋಪಸಂಹಾರಗಳೆರಡೂಕೂಡಿ। ಪ್ರಥಮಲಿಂಗವೊಂದಕ್ಕುಂ। ಮತ್ತಂ। ತತ್ವಮಸ್ಯಾದಿವಾಕ್ಯಗಳಂ। ಪ್ರಕರಣಮಧ್ಯದೊಳು। ಪ್ರತ್ಯಗಾತ್ಮನೇ ಬ್ರಹ್ಮವೆಂದು ಮರಳಿಮರಳಿಪೇಳುವದೇ। ಅಭ್ಯಾಸವೆನಿಸುವದು। ಮತ್ತಂ ಪ್ರತ್ಯಗಾತ್ಮಂಗೆ ಪ್ರತ್ಯಕ್ಷಾದಿಪ್ರಮಾಣಾತೀತತ್ವಮಂ ಪೇಳ್ವುದೆ। ಅಪೂರ್ವತೆಯೆನಿಸುವದು। ಮತ್ತಮಾನೋರ್ವ।ನರಿಯಲ್ಪಡಲಾಗಿ।ಸರ್ವಪೂಅರಿಯಲ್ಪಟ್ಟತೆಂದುಪೇಳ್ವುದೇಫಲವೆನಿಸುವದು।ಮತ್ತಂ ಪ್ರತ್ಯಗಾತ್ಮರೂಪಕನಿರ್ವಿಕಾರ ಬ್ರಹ್ಮಕ್ಕೆ। ಸ್ಥಿತಸ್ಯಗತಿಶ್ಚಿಂತನೀಯಾಯೆಂಬನ್ಯಾಯಮುಂಟಾಗಿ। ಜಗತ್ತಿಸೃಷ್ಟ್ಯಾದ್ಯನು।ಪ್ರವೇಶಾತಿಪಾದ।ಪಂಚಕೃತ್ಯಕರ್ತೃತ್ವಮಂಪೇಳ್ವುದೇ। ಭೂತಾರ್ಥವಾದವೆನಿಸುವದು। ಮತ್ತಂ ಘಟಕ್ಕೆಮೃತ್ತಿಕೆ। ತಂತುವಿಗೆ। ಊರ್ಣನಾಭಿ। ನಿಮಿತ್ತವೆಂಬಂತೆ। ಬ್ರಹ್ಮವೇಜಗತ್ಕಾರಣವೆಂದು। ಪೇಳ್ವುದೇದೃಷ್ಟಾಂತಮಕ್ಕುಂ.

— ಮನನಸಾಮಗ್ರಿ. —

ಬಳಿಕ-ಯುಕ್ತಿ-ತರ್ಕ-ಅನುಮಾನಂಗಳೇ-ಮನನಸಹಾಯಂಗಳವುಗಳಲ್ಲಿ।ಆತ್ಮರನೇಕರು-ಆಸದಾವ್ಯಾಪಕರೆಂಬಸಾಂಖ್ಯಾದಿಮತದೊಳು-ಆಸಮಸ್ತಾತ್ಮರ್ಗೆಯುಂಪ್ರತ್ಯೇಕನೋರೊರ್ವಾತ್ಮನಿಗೆಸರ್ವಶರೀರಂಗಳೊಳಿಹೊ

ರಗೆಯುಂಸಂಬಂಧಮುಂಟಾಗಿ ಸರ್ವಾತ್ಮರು-ಸರ್ವಪೂರ್ಣರೆಂಬಲ್ಲಿ, ಈತನಗೀಶರೀರವೇಭೋಗಸಾಧನವು ಅನ್ಯಶರೀರಗಳವು, ಅನ್ಯರಿಗೆಈಶರೀರ ಭೋಗಸಾಧನವಲ್ಲೆಂಬಲೋಕಾನುಭವವಿರೋಧವಪ್ಪುದು, ಅದೇತಕೆನೆ ಶರೀರಸಂಬಂಧಮುಂಟಾಗಿ, ಅನ್ಯನಶರೀರದೊಳುಬೇರೆವುತಪ್ಪತ್ಸನಿಗೆಸುಖದುಃಖಂಗಳೇತಕೆತೋರವು ಏಕಶರೀರದಲ್ಲವಾತ್ರಾಭಿಮಾನಮಿಕ್ಕಶರೀರಗಳಲ್ಲಿ ಅಭಿಮಾನವಿಲ್ಲದೆ। ವ್ಯಾಪಕತನವಪ್ಪುದರಿಂ ಪೂರ್ಣತೆಯೆಂದೊಡೆ ಅಂಭಿತಮಾನವಾವುದು।ಅಂತಃಕರಣವಲ್ಲನೆ, ಅದುಯಾವಶರೀರದೊಳಗಿಲ್ಲ ಅದಕ್ಕೆಬೇರೆ ಉಪಾಧಿಯಿಪ್ಪುದೆನೆ। ಅದುಯಾವದು, ಮೂಲಾಜ್ಞಾನವೆಂದೊಡೆ, ಅದೂ ಪ್ರತಿಶರೀರದಲ್ಲಿಯೂ ಇರುವದರಿಂದ ಸುಖದುಃಖಾನುಭವ ವ್ಯಾವೃತ್ತಿತೋರದಾಗಿ, ಅನೇಕವಿಭು ಜೀವನಾದಿಗಳಾದ ಸಾಂಖ್ಯಗಣಾದಾದಿಗಳಮತವು ಸಲ್ಲದು-ಇನ್ನು ಯೇಕಜೀವವಾದವೆಂಪೇಳ್ವಪಕ್ಷದಲ್ಲಿ,ಆತ್ಮನಿಗೆಕರ್ತೃತ್ವವುಸಲ್ಲದು, ಯಾತಕ್ಕೆಂದೊಡೆ, ಶರೀರವುಕರ್ಮಸಾಧ್ಯವಾಗಿ ಆಶರೀರಕ್ಕೆಸಾಧಕವಾದ ಕರ್ಮಶರೀರದಿಂಪೆಂತುವಾಳ್ವನು। ಆಯಾಶರೀರಸಾಧಕರ್ಮವಂ ಆಯಾಶರೀರದಪೂರ್ವಶರೀರಗಳಾದ ಭೂತಸೂಕ್ಷ್ಮಗಳಂ ವಾಡಿದನೆನೆ, ಅವುಗಳಿಗೆ ಪರಿಣಾಮೋಪಾದಾನಕಾರಣವಾವುದು, ಆಯಾಮೂಲಾವಿದ್ಯೆಗಳೆನೆ। ಏಕಜೀವನಿಗಾಗಿ ಬ್ರಹ್ಮವಿದ್ಯೆಗಳಂಕಲ್ಪಿಸಿಪೇಳ್ವದು ದೋಷಮಕ್ಕುಂ॥ ಮತ್ತಮಾಅವಿದ್ಯೆಯೊಂದೇ ಆತ್ಮನೋರ್ವನಿಗೆ, ಬಹುಭೋಗಸಾಧಕವಾದ ಬಹುಶರೀರಗಳಾಗಿ ಪರಿಣಮಿಸಿತನೆ, ಅವಿದ್ಯಾನಾಶವೇ ಮೋಕ್ಷವೆಂಬುದರಿಂ, ಒಂದುಶರೀರದಲ್ಲಿ, ಬ್ರಹ್ಮಜ್ಞಾನವಂಪಡಮ ಮುಕ್ತಿಯಾಗಲು, ಸರ್ವಶರೀರಗಳಿಗೂ, ಮುಕ್ತಿಯಾಗಬೇಕಾಯಿತುಅಂತುಇದುವರಿಗೂ ನಡೆಯಲಿಲ್ಲವೆನೆ, ಶಾಸ್ತ್ರವಿರೋಧವಪ್ಪುದರಿಂದುಂನಯುೂ ನಂಬಿಕೆಸಾಲದಾಗಿ, ಮುಕ್ತಿಯೆಂಬಂವದೇ ಇಲ್ಲವಾಗಬೇಕಾಯಿತು ಅದಿಲ್ಲದಿರ್ದೊಡೆ ಮತಪ್ರವೃತ್ತಿಗೇ, ಅವಕಾಶವಿಲ್ಲವಾಯಿತು, ಮಾತ್ರಮಾಜಡಕ್ಕೆ ಕರ್ತೃತ್ವಸಲ್ಲದಾಗಿ, ಏಕಜೀವನಿಗೆ ಏಕಕಾಲದೊಳಗೆ; ಅನೇಕಜ್ಞಾನೇಚ್ಛೆಗಳು ಘಟಿಸದಾದುದಂ ಮೇಕಜೀವದವಾವೂಸಲ್ಲದು ಜೀವನೇ ಇಲ್ಲವೆಂದೊಡೆ। ಸಂಸಾರವಾರಿಗೆ, ಈಶ್ವರನಿಗೆನೆ। ಆತಂಬದ್ಧನಾಗಬೇಕಾಯಿತು, ಈಪರಿಗೆ ಮತದ್ವಯಮುಂ, ಅನುಪಪನ್ನವೆನೆ, ಯುಕ್ತಿಯಿಂದಿನನುಪಪತ್ತಿಗೊಳಿಸಬೇಕೆಂತೆನೆ। ಅನೇಕಜೀವಪಕ್ಷದಲ್ಲಿ ವ್ಯಾಪಕತ್ವಮುಳ್ಳುದೋಷಕ್ಕವಕಾಶವಿಲ್ಲಂ। ಪರಿಚ್ಛಿನ್ನತ್ವದಿಂದ, ನಿತ್ಯತ್ವವೆನೆ; ಉಪಾ

ಥಿ ಪ್ರತಿಸೆಂದೊಡೇನುಹಾನಿಯಿಲ್ಲಂ। ಮತ್ತಮಂತಂಗೀಕರಿಸೆ। ಜೀವಂಗೆ ಪ. ರಲೋಕಗಮನಾಗಮನಾದಿಗಳುಂ ಪ್ರಪನ್ನವಾಕ್ಕು ಮೆಂಬುದೇಯುಕ್ತಿ ಯೇಕಜೀವಪಕ್ಷದಲ್ಲಿ ಅನಾದ್ಯವಿದ್ಯಾನಾನಾತ್ವವು। ಉಪಾಧಿನಾನಾತ್ವಕ್ಕೆ ಪ್ರಯೋಜಕವಾಗೆ। ಉಪಾಧಿಗೆಬಂದಪೇಕ್ಷೆಗಳಪ್ಪುದರಿಂ ಪೂರ್ಣಾತ್ಮ ನೊಳು ಕರ್ತೃತ್ವಾದಿಗಳು, ಘಾತಮಪ್ಪವೆಂಬುದೇಯುಕ್ತಿ ಜೀವೇಶ್ವರ ಭೇದಮುಂ ಅಧಿಕತ್ವಸತ್ಪ್ರಮುಂ. ಅಸಮಂಜಸಮಪ್ಪುದೆನೆ। ಅವುಗಳನಾದಿ ಯೆಂದೊಡೆಹಾನಿಯಿಲ್ಲಂ, ಸಿಥ್ಯವಾಗಲೆಂದೊಡೆಧ್ಯಸ್ತಮೆಂದುದರಿಂದದು, ಘಟಿಸದೆಂಬುದೇಯುಕ್ತಿ॥ ಇಂತು ಶ್ರುತಿವಿರುದ್ಧಗಳಾದ ಸದ್ಯುಕ್ತಿಸಹಸ್ರ ಗಳಿಂ ತತ್ತದ್ವಿಷಯಂಗಳು। ಉಪಪನ್ನವಾಗಿ, ಮನನಂಗೊಳಲಪ್ಪುದು ಬಳಿಕತರ್ಕಾನುಮಾನಂಗಳ, ಲಕ್ಷಣವಾದೊಡೆ। ಶ್ರೀಹರ್ಷಮಿಶ್ರ, ಬ್ರಂ ಹಾನಂದ ಪ್ರಮುಖರಾದ ಆಚಾರ್ಯರಿಂ, ಖಂಡನಾದಿಗ್ರಂಥಗಳಲ್ಲಿ ಪ್ರಸಿದ್ಧ ವಾಗಿರ್ಪುದರಿಂ, ಈಗ್ರಂಥವು ಸುಖಾನುಭವಪ್ರಕರಣಮಪ್ಪುದಾಗಿ ಗ್ರಂ ಥಬಾಹುಳ್ಯಮಹುಸೆಂಬಭೀತಿಯಿಂ, ಕುಲಿಶಕರ್ಕಶತರ್ಕಾದಿಗಳಲ್ಲಿ ಪ್ರತಿಪಾ ದಿಸಲ್ಪಟ್ಟದಿಲ್ಲವಾದೊಡವಾದ ಕಾಂಕ್ಷಿಗಳಗನ್ಯಾತತರ್ಕ ಚಿಂತಾಮಣಿ ಯೊಳುನೋಡಿರ್ಪುದು.

## — ನಿಧಿಧ್ಯಾಸನಪಂಚಯೋಗ. —

ಬಳಿಕ-ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋ ಗ. ಮಹಾಯೋಗವೆಂಬವೇ-ನಿಧಿಧ್ಯಾಸನರೂಪಯೋಗಪಂಚಕಮದರಲ್ಲಿ ಪ್ರಣವಾದಿಮಂತ್ರಾನುಸಂಧಾನದಿಂ, ಪರಮಾತ್ಮನಲ್ಲಿಮನೋಲಯಂಪಡು ದೇ ಮಂತ್ರಯೋಗವೆನಿಸುವದು ಮತ್ತಮಾ ಮಂತ್ರಯೋಗಸಹಿತಪವನ ಜಯಂಗಳೊಂದುಗೂಡಿ, ಮೂಲಾಧಾರದಿಂ, ಸುಷುಮ್ನಾ, ನಾಡೀಮಾರ್ಗ ದೊಳೈದಿ, ಶಿರೋಮಧ್ಯಗತ ಪರಮಾತ್ಮತೇಜಸ್ಸಿನೊಳು, ಆಮನೋಲಯಂ ಪಡುದೇ, ಸ್ಪರ್ಶಯೋಗಮೆನಿಸುವದು, ಮತ್ತಂಮೊದಲು ಸ್ವರ್ಗವೇಮೂ ರ್ಧ್ನ, ದಿಕ್ಕೇಶ್ರೋತ್ರ, ಚಂದ್ರಾರ್ಕರೇನೇತ್ರ, ಅಗ್ನಿಯೇಮುಖ, ಅಂತರಿಕ್ಷ ವೇನಾಭಿ, ಭೂಮಿಯೇ ಪಾದಂಗಳಾದ ಈಶ್ವರನವಿರಾಡ್ರೂಪಮಂನೆನೆದು ಅಲ್ಲನೇಭುಜಸಾಥಭರಣಾದಿಸಹಿತನಾದೀಶ್ವರನದಿವ್ಯಮೂರ್ತಿಯಂಪರಿಭಾ ವಿಸಿ, ಬಳಿಕದರಪದಯುಗಳೊಂದೊಂದಂಬಿಟ್ಟುಳಿದ। ಅಪಯುವಿಸಾತ ಪ ಸದ್ರೂಪಬ್ರಂಹದಲ್ಲಿ, ಮನೋಲಯಂಪಡುದೇ ಭಾವಯೋಗವೆನಿಸುವದು. ಮತ್ತಂ-ಕರಣಗೋಚರವಲ್ಲದಪ್ರಮಾಣತೀತಮಪ್ಪ, ನಿರುಪಾಧಿಕಬ್ರಹ್ಮ.

ದಲ್ಲಿ ಮನೋಲಯವಹುದೇ, ಅಭಾವಯೋಗವೆನಿಸುವದು. ಮತ್ತಮೀ ಜಗದುದಯಲಯಂಗಳಲ್ಲಿಯುಂ, ಅರಿಯೆನರಿದೆನೆಂಬಲ್ಲಿಯುಂ, ತನಗಾಹಾನಿಯುಂ ಇಲ್ಲದೊಂದೇಪ್ರಕಾರವಾದ ಪ್ರತ್ಯಗಾತ್ಮರೂಪಬ್ರಹ್ಮದಲ್ಲಿ, ಮನೋಲಯವಹುದೇಮಹಾಯೋಗಮಕ್ಕುಂ.

— ಪ್ರತಿಬಂಧಕತ್ರಯ. —

ಬಳಿಕ-ಭೂತಪ್ರತಿಬಂಧ, ವರ್ತಮಾನಪ್ರತಿಬಂಧ, ಆಗಾಮಿಪ್ರತಿಬಂಧವೆಂಬವೇ! ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿತ್ರಯಮಪ್ಪುದಲ್ಲಿ-ಮೋಕ್ಷಾಪೇಕ್ಷೆಯಿಂಸರ್ವಸಂಗಪರಿತ್ಯಾಗವಂಮಾಡಿ,ಶ್ರೀಗುರುವನೈದಿ ಶ್ರವಣಾದಿಗಳೊಡಗೂಡಿದೊಡಂಮೊದಲು ಗೃಹಸ್ಥಾಶ್ರಮದಲ್ಲಿ ಸ್ವೀಕರಿಸಿದ್ದವನಿತಾದಿವಸ್ತುಗಳರೂಪ ಯೌವನಶೃಂಗಾರಾದಿ ಸದ್ಗುಣಂಗಳನುಭವದಸವಿಯೇ! ಸಂಸಾರಬಲದಿಂಬಂದುಬಂದು, ಮನವನಿರಿದು, ಅಡಿಗಡಿಗಚಿಂತೆಯಂಪುಟ್ಟಿಸುತ್ತ, ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ ಭೂತಪ್ರತಿಬಂಧವೆನಿಸುವದು ಮತ್ತಂಜಡಬುದ್ಧಿಜನಸಂಗ, ಕುರತಿವಿಷಯಾಸಕ್ತಿ,ಕುತರ್ಕ, ಅಭಿಮಾನಚಪಲತ್ವಾದಿಗಳುಂಟಾಗಿ, ತತ್ವವಿಚಾರಂಗೈಪೊಡಂ, ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ, ವರ್ತಮಾನಪ್ರತಿಬಂಧವೆನಿಸುವದು.ಮತ್ತಂಮುಂದೆ, ಕೆಲವುಜನ್ಮಾಂತರವನಿತ್ತಲ್ಲದೇ ತೀರದಾಪ್ರಾರಬ್ಧವೆಂಬ, ಬ್ರಹ್ಮಾದಿಲೋಕ ವಾಂಛೆಯೆಂಬ, ದೋಷದ್ವಯಯುಕ್ತವಾಗಿರ್ದುಃವೇದಾರ್ಥವನರಿಪೊಡಂ, ಆತ್ಮಸಾಕ್ಷಾತ್ಕಾರವನಾಗಲೀಯದಿಹುದೇ, ಭಾವಿಪ್ರತಿಬಂಧಮಕ್ಕುಂ॥

— ಪ್ರತಿಬಂಧನಿವರ್ತಕ. —

ಬಳಿಕ-ಬಂಧತ್ರಯೆಂಬ ಜಯಿಸಲೋಸುಗವಾಗಿ ಜ್ಞಾನವೈರಾಗ್ಯಉಪರತಿಗಳೆಂಬ ಮುಖ್ಯಸಾಧನಂಗಳನು ಕ್ರಮದಿಂಪಿಡದಭ್ಯಾಸಂಗೈಯಲದು ಸಹಾಯಕಮಪ್ಪುದಾಜ್ಞಾನಾದಿಗಳಿಗೆ ಮೂರುಮೂರಂಗಂಗಳೊಡಗೂಡಿ ಲಕ್ಷಣಮುಪ್ಪುದವುಗಳಂ ಬೇರೆಬೇರೆಪೇಳ್ವೆನದೆಂತೆನೆ.

— ಜ್ಞಾನಲಕ್ಷಣ. —

ಬಳಿಕ-ವೇದಾಂತ ಶ್ರವಣ ಜನ್ಯಾಧ್ಯಾಸವಿವೇಕಪ್ರಯುಕ್ತ ಸಾಕ್ಷಿತ್ವದರ್ಶನವೇ ಜ್ಞಾನಲಕ್ಷಣಮಾಗಿರ್ಪುದು ಇದಕೆಕಾರಣ ಸ್ವರೂಪಕಾರ್ಯಸಂಬಂಧದೇ ಅಂಗತ್ರಯಮಾಗಿರ್ಪುದೆಂತೆನೆ, ಶ್ರವಣಾದಿಕವೇ ಕಾರಣವೆನಿಸುವದು ಆತ್ಮಾಹಂಕಾರಗಳ ಅಧ್ಯಾಸೈಕ್ಯಮಂ ಬೇರ್ಪಡಿಸುವದೇ ಸ್ವರೂಪಮುಂ ಬಳಿಕ ಅಹಂಕಾರಗತಸಾಕ್ಷಿತ್ವವೇಕಾರ್ಯಮಕ್ಕುಂ.

—* ವೈರಾಗ್ಯಲಕ್ಷಣ. *—

ಬಳಿಕ ಭೋಗಾನಿತ್ಯತ್ವದರ್ಶನಜನ್ಯವೈರಸ್ಯ ಪ್ರಯುಕ್ತವಿಷಯವೈ ಮುಖ್ಯವೇವೈರಾಗ್ಯಲಕ್ಷಣವಹುದದಕೆ ವನಿತಾದಿವಿಷಯಂಗಳಲ್ಲಿ ಅನಿತ್ಯ ತ್ವದೋಷದರ್ಶನವೇಕಾರಣವಹುದು । ಮೇಲಾವಪ್ರಕಾರದಿಂದಾದರಾವ ನಂಬಿಡುವದೇ ಸ್ವರೂಪವಹುದು-ಬಳಿಕ ವಿಷಯಾಂಗಳಗೆರಗದಿಹುದೇಕಾ ರ್ಯವುಕ್ಕುಂ.

—* ಉಪರತಿ. *—

ಬಳಿಕ ಯೋಗಜನ್ಯಚಿತ್ತಸ್ಥೈರ್ಯಪ್ರಸಂಚಲಯವೇಉಪರತಿಗೆ ಲಕ್ಷ ಣವುಪ್ಪುದದಕೆ ಯಮನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿಗಳೆಂಬಅಷ್ಟಾಂಗಾಳುಳ್ಳಯೋಗವೇಕಾರಣವುಪ್ಪ ದುಚಿತ್ತವು ಸ್ವಸ್ಥಾನದೊಳೇಕಾಗ್ರವಾಗಿಪ್ಪುದೇ ಸ್ವರೂಪವೆನಿಸುವದು ಬಾಹ್ಯಕರಣಾದಿವ್ಯಾಪಾರಕ್ಕೆರಗದಿಹುದೇ ಕಾರ್ಯವುಕ್ಕುಂ.

—* ಜ್ಞಾನಾದಿಗಳಗವಧಿ. *—

ಬಳಿಕ-ಕುಡ್ಯವೆಂದರೆಗೋಡೆಯೆಂಬರ್ಥವು, ಗೃಹಪಟ್ಟಿರುವಂತೆ ನಾನೆಂ ದರೆ-ದೇಹವೆಂಬಭ್ರಾಂತಿಸ್ಥಿರವಾಗಿಪ್ಪಂತೆ ಸೂರ್ಯನುದಯಿಸಲು ಬೆಳಕಾ ಗುವದುನಿಯತವಾದಂತೆ, ಬ್ರಹ್ಮವೇನಾನೆಂಬ ಅನಾಹಾರ್ಯ್ಯಪ್ರಮಾಣ್ಯ ಜ್ಞಾನಾನಾಸ್ಕಂದಿತ, ಪಟುತಮಸಂಸ್ಕಾರಸಹಕೃತದೃಢತನ ನಿಶ್ಚಯಸಿ ದ್ಧಿಯೇ ಪುರೋಕ್ತಜ್ಞಾನಕ್ಕವಧಿ, ಬ್ರಹ್ಮಲೋಕಪ್ರಾಪ್ತ್ಯದಿಮಹ ತ್ಕಾರ್ಯಗಳಂಬುದ್ಧಿಯೊಳುಸರ್ವಾತ್ಮನಾತೃಣೀಕರಿಸಿ ಅಕಿಂಚಿತ್ಕರವೆಂಬ ಅನ ಪೇಕ್ಷಾಸಿದ್ಧಿಯೇ ವೈರಾಗ್ಯಕ್ಕವಧಿ । ಸುಷುಪ್ತಿನಂತ ಸರ್ವಾವಸ್ಥೆಗಳೊ ಳು ಅವಸ್ಥಾಧರ್ಮಗಳನಿರ್ಬಂಧವಿಲ್ಲದೇ, ಸಕಲಕಾರ್ಯಸ್ಫೂರ್ತಿಹೀನನಾಗಿದಗ್ಧ ಪಟನ್ಯಾಯದಿಂದಿಪ್ಪುದೇ ಉಪರತಿಗವಧಿಯುಕ್ಕುಂ.

— ಮೋಕ್ಷಕಾರಣ. —

ಬಳಿಕವುಗಳೊಳಗೆ ಜ್ಞಾನವೈರಾಗ್ಯೋಪರತಿಗಳೆಂಬ ಸಿದ್ಧಿತ್ರಯವು ನುಕೂಲಿಸೆಮುಕ್ತಿಸಿದ್ಧಿಸುವದು। ಹಾಗಿಲ್ಲದೇಅಂತಾಸಿದ್ಧಿತ್ರಯ ಮಧಿಕಾರಿ ಯುತಪಸ್ಸಿದ್ಧಿಗೆಮಹಾಫಲದಂತಿರಲು ವೈರಾಗ್ಯೋಪರತಿಗಳಿರಡುಂ ಸಂಪೂ ರ್ಣವಾಗಿ ಸಿದ್ಧಿಸಿ। ಜ್ಞಾನವೊಂದುಸಿದ್ಧಿಸದಿರಲಾತಂಗೆ। ಮುಕ್ತಿಘಟಿಸ ದಾದೊಡಂಮಹಾಸುಖಸಾಧವಾದೂರ್ಧ್ವಲೋಕಾವಾಪ್ತಿಯಹುದುಜ್ಞಾ ನವೊಂದು ಸಿದ್ಧಿಸಿವೈರಾಗ್ಯೋಪರತಿಗಳು ಸಿದ್ಧಿಸದಿರುವಾತಂಗೆ ಮೂದ

ಕೊನೆ ಮುರಿದೊಡಲ್ಲಿರ್ಪ ಮನುಜಂಗೆ ಪಕ್ವಸ್ವೇಚ್ಛೆಯಿಲ್ಲದಿರ್ದೊಡಾತನವ ಶನಾಗಿ ಬಾಳ್ವಂತಯೋಗಸಿದ್ಧಿಯಿಲ್ಲದಿದ್ದರುಂ ಜ್ಞಾನಸಿದ್ಧನು ದೇಹಾವಸಾನದಲ್ಲಿ ಮುಕ್ತನಪ್ಪಂ ಮತ್ತಂ ಜೀವನ್ಮುಕ್ತನಾದಗುಂ ವಿದೇಹಕೈವಲ್ಯಪರ್ಯಂತವೂ ಪ್ರಾರಬ್ಧಾರ್ಜಿತ ಭೋಗಮುಂಟೆಂಬುವದೇ ಸಿದ್ಧಮಪ್ಪುದಾಗಿ ಮುಕ್ತಿಗೆ ಬ್ರಹ್ಮಜ್ಞಾನವೇ ಮುಖ್ಯಕಾರಣವೆಂದು ಸಿದ್ಧಾಂತಿತಮಕ್ಕುಂ॥

— ಸಪ್ತಭೂಮಿಕಾಕ್ರಮ. —

ಬಳಿಕ ಶುಭೇಚ್ಛೆ ವಿಚಾರಣಾ ತನುಮಾನಸ ಸತ್ವಾಪತ್ತಿ ಸಂಸಕ್ತಿ ಪದಾರ್ಥಭಾವನೆ ತುರ್ಯಗಾಮಿಯೆಂಬವೇ ಸಪ್ತಜ್ಞಾನಭೂಮಿಕೆಗಳವುಗಳಲ್ಲಿ ನಾನು ಮೂಢನಾಗಿಹಕಾರಣದಿಂ ಶ್ರುತಿಗುರುಗಳಿಂದರಿಯಬೇಕೆಂಬುದೇ ಶುಭೇಚ್ಛೆಯೆನಿಪುದು ಮೇಲೆ ಗುರುಶಾಸ್ತ್ರಾದಿಗಳಿಂ ಜನಿಸಿದ ಕಿಂಚಿದ್ವೈರಾಗ್ಯದಿಂದ ಸದಾಚಾರಪ್ರವೃತ್ತಿಯೇ ವಿಚಾರಣೆಯೆನಿಸುವದು। ಬಳಿಕಾ ಶುಭೇಚ್ಛೆ ವಿಚಾರಣೆಗಳ ಬಲದಿಂ ವಿಷಯಾಸಕ್ತಿ ಕೆಡುವದೇ ತನುಮಾನಸವೆನಿಸುವದು। ಮೇಲಾಭೂಮಿಕಾತ್ರಯದಭ್ಯಾಸಸಾಮರ್ಥ್ಯದಿಂ ಜಾಗ್ರತ್ಪ್ರಪಂಚವೆಲ್ಲವಂ ಕನಸೆಂದು ಕಂಡಾತ್ಮನ ಸನ್ಮಾತ್ರಾನುಸಂಧಾನವೇ ಸತ್ವಾಪತ್ತಿಯೆನಿಸುವದು। ಬಳಿಕಾ ಸಕಲ ಪ್ರಪಂಚಪತ್ತೋರಿಕೆಯಡಗಿ ಸುಷುಪ್ತನಂತಾತ್ಮ ಚಿನ್ಮಾತ್ರಾವಶೇಷತ್ವವೇ ಸಂಸಕ್ತಿಯೆನಿಸುವದು। ಬಳಿಕ ಸರ್ವವಿಷಯವಿಲಯದಿಂ ಗಾಢನಿದ್ರಿತನಂತಾನಂದಾತ್ಮಲೀನತೆಯೇ ಪದಾರ್ಥಭಾವನೆಯೆನಿಸುವದು। ಮೇಲುಂಟೆನಿಸದಿಲ್ಲವೆನಿಸದ ಅಹಂಕೃತಿ ದೂರದತ್ತೂರದು ಕೇವಲಜ್ಞಪ್ತಿರೂಪವಾದ ಅದ್ವೈತಪದದಲ್ಲಿ ಬಯಲಬೆರಗೊಡವಂ ತೊಳಹೊರಗೆ ಶೂನ್ಯವಾಗಿರ್ಪುದೇ ತುರ್ಯಗಾಮಿಯಕ್ಕುಂ॥

— ಷಟ್ಸಮಾಧಿಗಳು. —

ಮತ್ತಮಾ ಉಪರತಿಗನುಸಾರಿಗಳಾದ। ದೃಶ್ಯಾನುವಿದ್ಧ-ಶಬ್ದಾನುವಿದ್ಧ-ನಿರ್ವಿಕಲ್ಪಕವೆಂಬವೇ। ಬಾಹ್ಯಾಭ್ಯಂತರಭೇದದಿಂ। ಷಟ್ಸಮಾಧಿಗಳವುಗಳಲ್ಲಿ। ಘಟಾದಿವಿಷಯಜಾತದೊಳಾವುದಾನೊಂದನಾದರೊಂ ಕುರಿತು। ಅದರ ನಾಮರೂಪಗಳೆಂಬ ಮಾಯಾಂಶಗಳೆರಡನೂ ಮರೆತು। ಅಸ್ತಿ-ಭಾತಿ-ಪ್ರಿಯವೆಂಬ। ಸಚ್ಚಿದಾನಂದ ಬ್ರಹ್ಮಾಂಶತ್ರಯವ ನನುಸಂಧಾನಂಗೈವುದೇ ಬಾಹ್ಯದೃಶ್ಯಾನುವಿದ್ಧವೆಂಬ ಸವಿಕಲ್ಪಕಸಮಾಧಿಯೆನಿಸುವದು। ಮತ್ತಮಖಂಡಸಚ್ಚಿದಾನಂದಾದ್ವಿತೀಯಸ್ವರೂಪವಾದುದೇ ಬ್ರಹ್ಮವೆಂದು ಧ್ಯಾನಿಸಲದೇ ಬಾಹ್ಯಶಬ್ದಾನುವಿದ್ಧ ಸವಿಕಲ್ಪಕಸಮಾಧಿಯೆನಿಸುವದು। ಮೇಲಾಸ

ಪೂರ್ವೋಧಿದ್ವಯದ ಅಭ್ಯಾಸಬಲದಿಂದಲಾದ ಬ್ರಹ್ಮಾನಂದಾಸ್ವಾದನದಲ್ಲಿಯೇ ಮನಸ್ಸುಮಗ್ನವಾಗಿ ನಿಸ್ತರಂಗ ಸಮುದ್ರದಂತೆ ನಿಶ್ಚಲಾತ್ಮಕವಾಗಿಹುದೇ ಬಾಹ್ಯನಿರ್ವಿಕಲ್ಪಕ ಸಮಾಧಿಯಕ್ಕುಂ ॥ ಬಳಿಕ ಮನೋಗತಕಾಮ ಸಂಕಲ್ಪಾದಿಗಳೇ ದೃಶ್ಯಂಶಗಳು । ತಾನದಕೆ ಸಾಕ್ಷಿಕನೆಂಬನು ಸಂಧಾನವೇ। ಅಭ್ಯಂತರದೃಶ್ಯಾನುವಿದ್ಧ ಸವಿಕಲ್ಪಕಸಮಾಧಿಯಕ್ಕುಂ ॥ ಮತ್ತಮಸಂಗ ಸಚ್ಚಿದಾನಂದಸ್ವಯಂ ಪ್ರಕಾಶಾದ್ವಯಸ್ವರೂಪವೇ ತಾನೆಂದು ಚಿಂತನಂಗೈವುದೆ । ಅಭ್ಯಂತರಶಬ್ದಾನುವಿದ್ಧವೆಂಬ ಸವಿಕಲ್ಪಕಸಮಾಧಿಯೆನಿಸುವದು ಮತ್ತಮಾಸ್ವಾನುಭೂತರಸಾವೇಶದಿಂದ । ಆದೃಶ್ಯಶಬ್ದಂಗಳೆರಡನುಳಿದು ನಿವಾತಸ್ಥಿತದೀಪದಂತೆ । ನಿಷ್ಪಂದರೂಪವಾಗಿಹುದೇ ಅಭ್ಯಂತರನಿರ್ವಿಕಲ್ಪಕ ಸಮಾಧಿಯಾಗಿರ್ಕ್ಕುಂ॥ಇಂತೀಆರುಸಮಾಧಿಗಳಿಂದಲೇಕಾಲಪಂಕಳೆಯುತಿರ್ಪ ಯೋಗೀಶ್ವರಂಗೆ ಮನವೆಲ್ಲೆಲ್ಲಸಂಚರಿಸಿದೊಡಲ್ಲಿ ಯೇಸಮಾಧಿಯಕ್ಕುಂ॥

— ಜ್ಞಾನಫಲಚತುಷ್ಟಯ. —

ಬಳಿಕ ದುಃಖಾಪಸರ್ಪ- ಕಾಮಾಪ್ತಿ ಕೃತಕೃತ್ಯತ್ವ- ಪ್ರಾಪ್ಯ ಪ್ರಾಪ್ತಿಗಳೆಂಬ ಚತುರ್ವಿಧಜ್ಞಾನಫಲಂಗಳವುಗಳಲ್ಲಿ। ದುಃಖಭಾವವೆಂಬುವದು।ಇಹಪರಲೋಕಭೇದದಿಂದ। ಇತ್ತೆರನಾಗಿಹುದು । ಅದರೊಳಗೆ ಸ್ಥೂಲಶರೀರದಲ್ಲಿ। ಕುರೂಪ, ದುರ್ಗಂಧ, ವ್ಯಾಧ್ಯಾದಿಗಳುಂ ಸೂಕ್ಷ್ಮತನುವಿನಲ್ಲಿತೋರುವಕಾಮಕ್ರೋಧಾದಿವಿಕಾರಗಳುಂ । ಕಾರಣದೇಹದಲ್ಲಿ ಅಧಿವ್ಯಾಧಿಗಳಿಗೆ ಬೀಜಭೂತವಾದ ಸಂಸ್ಕಾರಗಳೂಯೆಂಬ।ತ್ರಿವಿಧಸಂತಾಪವೇ ಇಹಲೋಕದುಃಖವಹುದು । ಮಿಥ್ಯಾತ್ಮಕಮಾಯಾಕಾರ್ಯವಾದ ಶರೀರಾದಿಗಳತ್ತಣಿಂ। ಬೇರ್ಪಡಿಸಲ್ಪಟ್ಟ। ಅದ್ವಿತೀಯಪ್ರತ್ಯಜ್ಞಾನದಿಂ। ಮೇಲೆಪರಮಾರ್ಥವಾದ। ಭೋಗ್ಯಭೋಕ್ತೃಗಳಿಲ್ಲಾಗಿ । ಜ್ಞಾನಿಗಾದುಃಖತ್ರಯಸಂಬಂಧವಿಲ್ಲದಿರಲು । ಅದೇಇಹಪರಲೋಕದುಃಖಾಭಾವವೆನಿಸುವದು । ಬಳಿಕಪುಣ್ಯವೆಂತುಬರ್ಪುದೋ । ಪಾಪವೆಂತುಪೋಪುದೋ ಯೆಂಬಚಿಂತೆಯೇ । ಪರಲೋಕ ದುಃಖವಹುದಲ್ಲಿಸಮ್ಯಜ್ಞಾನಸಿದ್ಧಿಯಾದಬಳಿಕ । ಆತಿಥ್ಯಪವಾದಿಗಳಿಂದವುಕಳದುಪೋಗೆ। ಮಿಕ್ಕಾಳಿದತನಿಗೆ । ಕಮಲಪತ್ರತೋಯದಂತೆ। ಕರ್ಮದ್ವಯಲೇಪವಿಲ್ಲಾಗಿಯುಂ। ಕಾಷ್ಠದಲ್ಲಿವಹ್ನಿಯಿರಲು ವಹ್ನಿಯಲ್ಲಿ ಕಾಷ್ಠವಿಲ್ಲದಂತೆಯುಂ । ಕರ್ಮದ್ವಯವ್ಯವಹಾರದಲ್ಲಿವಿವೇಕಿಯಿರಲವನೊಳು ವ್ಯವಹಾರವಿಲ್ಲಾಗಿಯುಂ। ದಾವಾನಲವಡಸಿದ ನಗವನಾವಮೃಗಪಕ್ಷಿಗಳುಂ ಪೋಗನಂತೆಜ್ಞಾನಾಗ್ನಿ ಮಯನಾಸುಕೃತಾದಿಗಳುಸೋಂಕಲಮ್ಮ

ವಾಗಿಎಂಬಿವರಿಂದಚಿಂತಿತೆತೋರದಿಹುದೇಪರಲೋಕದುಃಖಾಭಾವವುಕ್ಕುಂ||

— ಕಾಮಾಪ್ತಿ. —

ಮತ್ತು ಸರ್ವೈಶ್ವರ್ಯಸಂಪನ್ನನಾದ ಸಾರ್ವಭೌಮನ ಮೊದಲುಗೊಂಡು |ಹಿರಣ್ಯಗರ್ಭಾಂತವಾದ | ಉತ್ತರೋತ್ತರ ಬಯಸಲ್ಪಟ್ಟ | ಶತಗುಣೋತ್ತರಾನಂದಗಳೆಲ್ಲಂ |ನಿಸ್ಪೃಹನಾದವಿವೇಕಿಗುಂಟಾಗಿಯುಂ|ಬಳಿಕಾನಂದಗಳೆಲ್ಲಂ | ಜ್ಞಾನಿಯಿಂದರಿಯಲ್ಪಟ್ಟ ಬ್ರಹ್ಮಾಂಶಂಗಳಪ್ಪುದರಿಂದ| ಆತಂಗಖಂಡಾನಂದವು ಸಿದ್ಧಿಸಿದಾಗಿಯುಂ | ಅದೇಸರ್ವಕಾಮಾಪ್ತಿಯೆನಿಸುವದು ||

— ಕೃತಕೃತ್ಯತೆ. —

ಮತ್ತಮಾವಿವೇಕಿಗೆ| ತತ್ವಜ್ಞಾನಕ್ಕಿಂಮೊದಲೇ| ಇಹಲೋಕ ಸಂಬಂಧವಾದ | ಇಷ್ಟಪ್ರಾಪ್ತ್ಯನಿಷ್ಟ ನಿವೃತ್ತಿಗಳಗೋಸುಗ | ಕೃಷಿವಾಣಿಜ್ಯಾದಿಕವುಂ |ಸ್ವರ್ಗಾದಿಸಿದ್ಧಿಗೋಸುಗ |ಯಾಗೋಪಾಸನಾದಿಕವುಂ| ಮೋಕ್ಷಸಾಧನಜ್ಞಾನಸಿದ್ಧಿಗೋಸುಗ | ಶ್ರವಣಾದಿಕವುಂಯೆಂಬ| ತ್ರಿವಿಧಕರ್ತವ್ಯವಾಗಿಹುದೀಗಲೀ ತತ್ವಜ್ಞಾನಾನಂತರದಲ್ಲಾದೊಡೆ |ಸಾಂಸಾರಿಕಫಲಭೋಗೇಚ್ಛೆಯಿಲ್ಲಾಗಿ | ಕೃಷಿವಾಣಿಜ್ಯಮೊದಲಾದ ವ್ಯವಹಾರವಿಲ್ಲಂ |ಬಳಿಕಗವಾಕ್ಷಗತಸೂರ್ಯಕರದಲ್ಲಿ ತೋರ್ಪಪರಮಾಣುಗಳಾಟವು ಬಯಲಮಹಾ ಬೆಳಕಿನಲ್ಲಿಕಾಣಿಸದಂತೆ| ಅಲ್ಪಜ್ಞಾನಿಗಳವಿಷಯವಾದಕರ್ಮವೆಲ್ಲಂ| ಸಮ್ಯಜ್ಞಾನಿಗಳಮಧ್ಯದಲ್ಲಿತೋರದಿಹದಲ್ಲವೆಂದು| ಅನುಷ್ಟಿಸಲ್ಪಟ್ಟದಲ್ಲಾಗಿ | ಜ್ಞಾನಿಗೆಯಾಗಾದಿವಾಂಛೆತೋರದು | ಬಳಿಕ ಬ್ರಹ್ಮಾನಂದಸಾಕ್ಷಾತ್ಕಾರವಾಯಿತಾಗಿ ಶ್ರವಣಾದಿಕವೆಲ್ಲಂ | ಕೃತಪ್ರಾಯವಹುದಿಂತಿದೇ ಕೃತಕೃತ್ಯತೆ ಯೆನಿಸುವದು ||

— ಪ್ರಾಪ್ಯಪ್ರಾಪ್ತಿ —

ಮತ್ತು ತನಗೆ, ವಿಶಿಷ್ಟಪುಣ್ಯಪರಿಪಾಕಮುಮುಕ್ಷುತ್ವಗುರೂಪಾಸನೆ, ಶಾಸ್ತ್ರಶ್ರವಣ, ಆತ್ಮಾನಾತ್ಮವಿವೇಕ,ಅಜ್ಞಾನನಿವೃತ್ತಿ, ಆತ್ಮಸಾಕ್ಷಾತ್ಕಾರದುಃಖನಿವೃತ್ತಿ,ನಿಜಾನಂದಾದಿಗಳಸಿದ್ಧಿಯೇಪ್ರಾಪ್ಯಪ್ರಾಪ್ತಿಎನಿಸುವದು.

— ಜೀವನ್ಮುಕ್ತಿ. —

ಬಳಿಕ ಜೀವನ್ಮುಕ್ತಿವಿದೇಹಕೈವಲ್ಯವೆಂಬವೇದ್ವಿವಿಧಮೋಕ್ಷಂಗಳವುಗಳಲ್ಲಿ| ವಿವೇಕಿಗೆಅಹಮಾತ್ಮರ್ಗನ್ಯೋನ್ಯಾಧ್ಯಾಸಲಕ್ಷಣವಾದ ಹೃದಯವುಶಿಥಿಲತೆಯನೈದಿತಾಗಿ ಪರಶರೀರದೊಳಗೆಂತಂತೆ ಸ್ವಶರೀರದಲ್ಲಿಯುಂದ್ಯ

ಹಾಭಿಮಾನವಿಲ್ಲದಿರಲಾಗ ಅನುಭವಸಾಮ್ಯಮಪ್ಪುದರಿಂ ಸಮದರ್ಶನವೆಂಬ ಪ್ರಾರಬ್ಧಭೋಗಸಾಕ್ಷಾತ್ಕಾರದೊಳು ಸಪ್ತಬಾಲಉನ್ಮತ್ತ। ಪಿಶಾಚಕರಂತೆಕ್ರಮದಿಂ ಜಡಲೀನಮೃದುದುರ್ಬಲ ಶಿಥಿಲಾನಾವಶ್ಯಕಸ್ವೈರನಿರಂಕುಶಾನುಸಂಧಾನವಹುದರಿಂ ದೇಹಾದ್ಯಭಿಮಾನತೋರದೆ ಘಟೋತ್ಪತ್ತಿಗಿಂ ಮೇಲೆ ಕೃತಕೃತ್ಯನಾದ ಕುಲಾಲಚಕ್ರಭ್ರಮಣವು ಸಂಸ್ಕಾರಕ್ಷಯಾವಧಿಕ್ರಮದಿಂ ಚಲನಮಾಗುತಿಪ್ಪಂತೆ ಪ್ರಾರಬ್ಧವಾಸನಾವಶದಿಂ ಹೆದೆಯಿಂ ಬಿಡಲ್ಪಟ್ಟ ಗಗನವನೆಯ್ದುವಕೋಲಗತಿಯುಂ ಹೋಲಿಪ್ಪ ಪ್ರಾಪಂಚಿಕನಂತೆತೋರುತ ಬದುಕುತ್ತಿಹುದೇ ಜೀವನ್ಮುಕ್ತಿಯೆನಿಸುವದು॥

— ಜೀವನ್ಮುಕ್ತಿಸಂಗತಿ. —

ಬಳಿಕ ಬ್ರಹ್ಮಜ್ಞಾನೋದಯಾನಂತರದಲ್ಲಿ। ತತ್ಕ್ಷಣವೇ। ಸೂರ್ಯೋದಯದಿಂ ಕತ್ತಲೆಕೆಡುವಂತೆ। ಅಜ್ಞಾನದೊಡನದರಕಾರ್ಯಮಾದ ಶರೀರಾದಿಕವಳಿದು। ವಿದೇಹಕೈವಲ್ಯಮಾಗಬೇಕಂತಾಗದೆ। ಮಧ್ಯದಲ್ಲಿ ಜೀವನ್ಮುಕ್ತಿಕಲ್ಪನೆಯೆಂತಾಗುವದೆಂದೊಡೆ। ವಿವೇಕದಿಂ ರಜ್ಜುವಿನಲ್ಲಿಯಾ ಸರ್ಪಭ್ರಾಂತಿಕೆಟ್ಟೊಡಂ। ತತ್ಕಾರ್ಯಮಾದಭಯಕಂಪಾದಿಗಳಿಪ್ಪಂತೆ। ಜ್ಞಾನದಿಂದಜ್ಞಾನವಳಿದೊಡಂ। ಅದರ ಕಾರ್ಯಮಾದ ಶರೀರಾದಿಗಳಿಗೆಸ್ಥಿತಿಯುಂಟಾಗಿ। ಬ್ರಹ್ಮವಿದ್ಯೋತ್ಪತ್ತಿಸಮಕಾಲದೊಳು ವಿಶೇಷಮಾಗಿ। ಅಜ್ಞಾನದೊಡಗೂಡಿ ದೇಹಪಾತಮಾಗೆ ಬ್ರಹ್ಮವಿದ್ಯಾಸಂಪ್ರದಾಯವಿಚ್ಛಿತ್ತಿಯಹುದಾಗಿಯುಂ ಬಳಿಕೆಂತಾದೊಡೇನಾಯಿತೆನೆ। ಪರಶಿವನಿಂ ಬ್ರಹ್ಮನು। ಬ್ರಹ್ಮನಿಂ ಪ್ರಜಾಪತಿ। ಪ್ರಜಾಪತಿಯಿಂ ಮನು। ಮನುವಿನಿಂ ಪ್ರಜೆಗಳರಿದರೆಂದು। ಬ್ರಹ್ಮವಿದ್ಯಾಸಂಪ್ರದಾಯಪ್ರವರ್ತಕರಪರಂಪರೆಯ ಪೇಳ್ವ। ಛಾಂದೋಗ್ಯಬೃಹದಾರಣ್ಯಶ್ರುತಿ ವಿರೋಧಮಹುದಾಗಿಯುಂ। ಮತ್ತಂ ಬಿಲ್ಲುಗಾರನಿಂ ಬಿಡಲ್ಪಡತಕ್ಕಕೋಲು ಬಿಲ್ಲಿನಹೆದೆಯೊಳು ಸಂಧಾನಮಾಡಿರುವದಂ ಬಿಡದಂತೆ। ಸಂಚಿತಕರ್ಮಭೋಗವಂ ತಪ್ಪಿಸಬಹುದಾದರುಂ। ಬಿಡಬೇಕಾದಕೋಲಂ ಸಂಧಾನವೇಗೊಳಿಸದಂತೆ ಆಗಾಮಿಕರ್ಮಕ್ಕವಕಾಶವೇಯಿಲ್ಲದೆ ಮಾಡಿದೊಡಂ। ಹೆದೆಯಿಂ ತೆಗದೆಚ್ಚಲ್ಪಟ್ಟಿರುವ ದಂತರಾಳದೊಳು ನಿಲ್ಲದೆ। ವೇಗಸಂಸ್ಕಾರಬಲ-ವಿರುಮಪರ್ಯಂತಮುಂ-ಪೋಗಿಬೀಳ್ವಂತೆ। ಫಲಭೋಗಕ್ಕೊಡಂಬಟ್ಟಂಗೀಕರಿಸಲ್ಪಟ್ಟಲದಿರುವೀ ವರ್ತಮಾನ ಜನ್ಮವೆಂಬ ಪ್ರಾರಬ್ಧಕರ್ಮವು-ನಾಭುಕ್ತಂ ಕ್ಷೀಯತೇಕರ್ಮಕಲ್ಪಕೋಟಿಶತೈರಪಿ। ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮಶುಭಾಶುಭಂ। ಯೆಂಬ ಪ್ರಮಾಣದಿಂ- ನಿಯತಾನುಭವ್ಯಮಾಗಿರಲ್ಕೆ

ಜ್ಞಾನಿಗೆಜೀವನ್ಮುಕ್ತಿಸಿದ್ಧಿಸಲೋಸುಗಮಾಗಿ ಪ್ರಾರಬ್ಧವಾಸನೆ। ಅಜ್ಞಾನಲೇಶಭಾನಂಗಳನಂಗೀಕರಿಪುದರಿಂ, ದೇಹಸ್ಥಿತಿಯುಂ, ಶಿಷ್ಯೋಪದೇಶಾದಿಕಮುಂ, ಸಿದ್ಧಿಸುತಿರ್ಕುಂ.

— ಜ್ಞಾನಪ್ರಭಾವ. —

ಮತ್ತಮಾ ಜೀವನ್ಮುಕ್ತಂಗೆ ಪ್ರಾರಬ್ಧವಾಸನೆಯುಮಾತ್ರ ಬಿಡಲಸೆ, ಜ್ಞಾನಾಗ್ನಿಸ್ಸರ್ವಕರ್ಮಾಣಿಭಸ್ಮಸಾತ್ಕುರುತೆಯೆಂಬಪ್ರಮಾಣದಿಂ,ಜ್ಞಾನಾಗ್ನಿಯಾವಾಸನೆಯನುಂಪೋಗೊಳಿಸದಿರ್ಕೆ, ಸಂಚಿತಕರ್ಮವುಜ್ಞಾನಾಗ್ನಿಯಿಂದೆಸುಸುಲ್ಲಸುಂಕಿನಂತುರಿದುಪೋಗೆ-ಪ್ರಾರಬ್ಧಕರ್ಮವುಂಡುತೀರುವದು, ಆಗಾಮಿಕರ್ಮವುಅನಧಿಕಾರಿಯುಪ್ಪುದರಿಂ ಫಲಿಸದೆಂದರಿವುದು,ಮತ್ತಮಾಜ್ಞಾನಾಗ್ನಿಯಿಂ ದಗ್ಧಮಾದಕರ್ಮವೇ ಪ್ರಾರಬ್ಧಭೋಗವನೀವುದರಿಂಮುಂದೆ-ದೇಹೋತ್ಪತ್ತಿಯುಮಾಡಲಾಪ್ಪದೆಂದಡೊಡೆ-ಹುರಿದಬೇಳಕಾದಿಬೀಜಮು-ಭೋಗಮಾತ್ರಕ್ಕೆ ಯೋಗ್ಯವಲ್ಲದೆಅಂಕುರೋತ್ಪತ್ತಿಗೆ ಕಾರಣವಾಗದಂತೆಜ್ಞಾನಿಯಕರ್ಮವುಪ್ರಾರಬ್ಧಭೋಗದಿಂದಲೇ ತೀರುವದಾಗಿ ।ಜನ್ಮಾಂತರಕ್ಕೆಹೇತುವಲ್ಲವೆಂದುತಿಳಿಯಲ್ವೇಳ್ಕುಂ॥

— ಜನ್ಮಾವಧಿ. —

ಮತ್ತಮಾ ಪ್ರಾರಬ್ಧಕರ್ಮವಾದೊಡೆ, ಲೋಕಯಾತ್ರೆಗಳನಧಿಕರಿಸಿದಅಸ್ತ್ರದಾದಿನರರ್ಗೆ, ಏಕದೇಹದಲ್ಲೀಭೋಗದಿಂ ಪರಿಹರಮಹುದು, ಲೋಕಯಾತ್ರೆಯೊಳಗಧಿಕೃತರಾದ, ಮನು, ವ್ಯಾಸಾದಿಮಹಾಪುರುಷರ್ಗೆ;ದಶಸಂಖ್ಯಾಕದೇಹಗಳಿಂದಲ್ಲದೆತೀರದೊಡಂ, ಜ್ಞಾನಕ್ಕೆತೀರೋಧಾನವಿಲ್ಲಾಗಿ ಬಾಲ್ಯಕೌಮಾರಾದಿಭೇದಮುಂಟಾದೊಡಂ, ನರನಿಗೊಂದೇದೇಹಮಿಪ್ಪಂತರಿಯಲ್ವೇಳ್ಕುಂ

— ಜ್ಞಾನಿಗೆಭೋಗಸಿದ್ಧಿ. —

ಬಳಿಕ ಸಕಲವಿಷಯಂಗಳಿಗಂ ಮಿಥ್ಯಾತ್ವಮಂಸಾಧಿಸುತಿರ್ದಜ್ಞಾನಕ್ಕೆಯುಂವಿಷಯಂಗಳಿಗೆ ಸತ್ಯತ್ವಮಂಸಾಧಿಸುತಿರ್ದ ಪ್ರಾರಬ್ಧಭೋಗಕ್ಕೆಯುಂ ಅನ್ಯೋನ್ಯವಿರೋಧಮುಂಟಾಗಿ, ಜ್ಞಾನಿಗೆಂತುಭೋಗಸಿದ್ಧಿಯಹುವೆನೆ,ಮಿಥ್ಯಾತ್ಮಕಸ್ವಪ್ನೇಂದ್ರಜಾಲಾದಿಗಳಲ್ಲಿಕ್ರಮದಿಂವನಿತಾದಿಸ್ವರ್ಗಾದಿತ್ರೋರ್ಕೆಗಳಿಂ ಮೈಥುನಾದಿವಿಸ್ಮಯಾದಿ ನಿಜಭೋಗಮಹುದಂತೆ ವ್ಯಾವಹಾರಿಕಪ್ರಾರಬ್ಧಭೋಗವೊಳುವಿಷಯಗಳಿಗೆ,ಸತ್ಯತ್ವಮುಂಟಂಗಳಿಲ್ಲಲಾಗದೆಂಬ ನಿಷೇಧವಿಲ್ಲಾಗಿ ಪ್ರಾರಬ್ಧಭೋಗಕ್ಕೆಯುಂಜ್ಞಾನಕ್ಕೆ

ಯುಂ, ಅನ್ಯೋನ್ಯವಿರೋಧವಿಲ್ಲದರಿಂ ಜ್ಞಾನಿಪ್ರಾರಬ್ಧಭೋಗಮುಂಟೆಂದುವಿದಿತಮಕ್ಕುಂ॥

— ಭೋಗದೃಷ್ಟಾಂತ. —

ಬಳಿಕಿಲ್ಲಿ ಭ್ರಾಂತಿಕೆಟ್ಟಕ್ಷಣವೇ-ಶುಕ್ತಿಯುರಜತಸ್ವರೂಪಕ್ಕೆ ಹಾನಿಯುಪ್ಪಂತೆ-ಜ್ಞಾನದಿಂದಜ್ಞಾನವಳಿವಾಗಲೆ ಜಗತ್ಪ್ರಪಂಚಕ್ಕೂ ಕ್ಷಯೋಯಿಲ್ಲಾಗಿ-ವಿವೇಕಿಗೆಪ್ರಾರಬ್ಧಭೋಗವೆಂತಪ್ಪುದೆಂದೊಡೆ, ಶುಕ್ತಿಕಾರಜತಭಾನವುಂಬಿದುನಿರುಪಾಧಿಕಭ್ರಮೆಯಪ್ಪುದರಿಂದ-ಅಲ್ಲಿತೋರ್ದಾಗಲೇರಜತಸ್ವರೂಪಮಿಥ್ಯೆಯಹುದು-ಈಸೋಪಾಧಿಕ ಭ್ರಮೆಯೊಳಂತಲ್ಲವದೆಂತೆನೆ ತಿಳಿಗೊಳತೀರದಲ್ಲಿರ್ದ ಮನುಷ್ಯನು ತಾನಾಜಲದೊಳಧೋಮುಖನಾಗಿರ್ಪುದುಪುಸಿಯೆಂದು-ತೀರದಲಿರ್ದ ತನ್ನಲ್ಲಿಯೇವಿವೇಕತತ್ಪರನಾಗಿದ್ದರೂ ಅಂತಧೋಮುಖರೂಪು ತೋರುತಿರ್ಪಂತೆ-ಅಹಂಕಾರಸಂಬಂಧಮಾದ-ಜೀವಭಾವಾದಿಕವೇಮಿಥ್ಯೆ-ಸತ್ಯಮಾದ ಪ್ರತ್ಯಗಾತ್ಮನೇತಾನೆಂದರಿದರೂ ಜೀವತ್ವಾದಿಪ್ರಪಂಚವಿಹುದಾಗಿ-ಜೀವನ್ಮುಕ್ತಂಗೆ ಪ್ರಾರಬ್ಧಭೋಗವ್ಯವಹಾರಮಂಗೀಕೃತಮಕ್ಕುಂ॥

— ಜೀವನ್ಮುಕ್ತಸದ್ಗುಣ. —

ಮತ್ತಮಾಜೀವನ್ಮುಕ್ತಂಗೆ। ಮೈತ್ರಿ, ಕರುಣೆ, ಮುದಿತೆ, ಉಪೇಕ್ಷೆ, ಯೆಂಬ ಸದ್ಗುಣಚತುಷ್ಟಯಮುಂಟದರಲ್ಲಿ-ಸತ್ಪುರುಷರೊಡನೇಸ್ನೇಹವೇಮೈತ್ರಿಯೆನಿಸುವದು-ದುಃಖಾತ್ಮಕರಲ್ಲಿ ಮರುಕವೇಕರುಣೆಯೆನಿಸುವದು-ಪುಣ್ಯಕಾರ್ಯಗಳಲ್ಲಿಸಂತೋಷವೇಮುದಿತೆಯೆನಿಸುವದು - ಪಾಪಿಗಳಲ್ಲಿ ರಾಗದ್ವೇಷಾದಿಕವಿಲ್ಲದಿಹುದೇ ಉಪೇಕ್ಷೆಯೆನಿಸುವದು.

— ಜೀವನ್ಮುಕ್ತಪ್ರಯೋಜನಪಂಚಕ. —

ಬಳಿಕ ಜೀವನ್ಮುಕ್ತಂಗೆ-ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ, ದುಃಖಸಂಕ್ಷಯ, ಸುಖಾವಿರ್ಭಾವವೆಂಬವೇ ಪಂಚಪ್ರಯೋಜನಂಗಳವುಗಳೊಳು ವಾಸನಾಕ್ಷಯಮನೋನಾಶಂಗಳಿಂಬುದ್ಧಿನಿರ್ಮಲವಾಗಿರ್ಪುದೇಜ್ಞಾನರಕ್ಷೆಯೆನಿಸುವದು-ಬಳಿಕದರತ್ರಿಕರಣೈಕ್ಯದಿಂ ಲಕ್ಷ್ಯೈಕಾಗ್ರತೆಯೇತಪಸ್ಸೆನಿಸುವದು-ಬಳಿಕಾತಪೋನಿಷ್ಠನನಾಬಾಲಪಂಡಿತಮಾಗಿಸರ್ವರುಂಯೋಗೀಶ್ವರನೆಂದು ಸ್ತುತಿಸಿನಮಸ್ಕಾರಾದಿಗಳಿಂಬಹುಮಾನಂಗೈವುದೇ ಸರ್ವಸಂವಾದವೆನಿಸುವದು-ಬಳಿಕ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚಕ್ಲೇಶಂಗಳಿಲ್ಲದಿರುವದೇ-ದುಃಖಸಂಕ್ಷಯವೆನಿಸುವದು-

ಬಳಿಕಸಾಧನಗಳಿಂದಾತಗೊಂದು ಪ್ರತಿಬಂಧಕವಿಲ್ಲಿರುವದೇ ಸುಖಾವಿರ್ಭಾವವೆನಿಸುವದು-ಇಂತಿಪ್ರಯೋಜನಂಗಳೈದರೊಳು ಜ್ಞಾನಿಯು ನಿರಂಕುಶ ವೃತ್ತಿಯಪ್ಪುದರಿಂದಡ್ಡಿಯಿಲ್ಲದಿಹುಸುಖಾವಿರ್ಭಾವವೇ ಮುಖ್ಯವೆಂದು ಪೇಳ್ಕುಂ॥

— ಜ್ಞಾನಚಿಹ್ನೆಗಳು. —

ಬಳಿಕ-ಕಾಮಕ್ರೋಧಾದಿ-ಅರಿಷಡ್ವರ್ಗವು- ಮುಮುಕ್ಷುಗಳಿಗನುಗ್ರಹಾರ್ಥವಾಗಿ-ನಟನಮಾತ್ರವಲ್ಲದೆ ಅವುಗಳ ಗೊಳಪಡದೆ ನಿರ್ಲಿಪ್ತನಾಗಿಪ್ಪುದೆಂತೆನೆ ಮುಮುಕ್ಷುಗಳಿಗಭಿರುಚಿಯುಂಟಾಗಬೇಕಾಗಿ ಶಿವಧ್ಯಾನಾದಿಗಳಂ ಮಾಡಬೇಕೆಂಬಕಾಮ. ಅಸದ್ವಿಷಯದೊಳುಕ್ರೋಧ, ಅಪಾತ್ರಂಗೆ ಕೊಡಬಾರದೆಂಬುದರಿಂಬ್ರಹ್ಮವಿದ್ಯೆಯಂಪೇಳ್ವುದರೊಳಾಲೋಭಪರರಿಗುಪಕೃತಿಮಾಡಬೇಕೆಂಬುದರಿಂದುಃಖಿಗಳೊಳು ದಯೆಯೆಂಬಮೋಹ,ಅಸದ್ವಿಷಯಗಳಂ ಪರಿಗ್ರಹಿಸದೆಶಿಷ್ಟನಾಗಿರುವನೆಂಬುದುದ, ಇಂದ್ರಿಯಂಗಳಂಗೆಲ್ವೆನೆಂಬಮಾತ್ಸರ್ಯ, ವೆಂಬವಂನಟಿಸುವಿಕೆ ಸ್ವಭಾವಸಿದ್ಧವಾದ ದೃಢತರಮಪ್ಪಶಾಂತಿ, ಸಾತ್ವಿಕಸಂಪತ್ತು ಸರ್ವಭೂತಸಮತ್ವ, ವೈರಾಗ್ಯ, ಅಧ್ಯಾತ್ಮನಿಷ್ಠೆ, ನಿಶ್ಚಲಸ್ಥಿತಿ, ಅಹಂಕಾರಮಮಕಾರವರ್ಜ, ನಿತ್ಯಸಂತುಷ್ಟ ಭಯಶೋಕರಾಹಿತ್ಯ, ಪಾರಿಶುಧ್ಯ, ತನ್ನಂತೆಶಿಷ್ಯನಂ ಮಾಳ್ಪಶಕ್ತಿ।ಯೆಂಬೀಹನ್ನೆರಡುಗುಣಗಳುಂ ಜ್ಞಾನಿಗೆಚಿಹ್ನಗಳಕ್ಕುಂ॥

— ಗುಣಪ್ರಾಚುರ್ಯ. —

ಬಳಿಕ ಜ್ಞಾನಿಯಾದ ಜೀವನ್ಮುಕ್ತನು ಪ್ರಾಯಿಕವಾಗಿಯಂತವರ-ಸಹವಾಸಮಾಳ್ಪನಾವಾವ-ಗುಣಂಗಳೊಳಗಭಿರುಚಿ, ಲೀಲಾನಟನೆಯಂ-ಮಿಗೆತೋರ್ಪನೆನೆ-ಅಹಿಂಸೆ, ಪರೋಪಕಾರ, ಶೌಚ, ತಪಸ್ಸು. ಸತ್ಯ,ಶಾಂತಿ,ದಾಂತಿ, ತಿತಿಕ್ಷೆ, ದಯೆ, ದಾಕ್ಷಿಣ್ಯ, ಮೃದುತ್ವ, ವಿರಕ್ತಿ, ಪುಣ್ಯ, ವಿವೇಕ,ಪಾರಿ, ಶುಧ್ಯ, ಶ್ರವಣಾದಿಸಾಧನ, ದೀನತ್ವ, ದೈವಭಕ್ತಿ ಮುಂತಾದವುಗಳಂತೋರಿ ಯಂತವರುಗಳಲ್ಲಿಯುಂ ಪ್ರಾಯಿಕವಾಗಿಸುಳದಾಡುತಿರ್ಪಂ

— ಜ್ಞಾನಿಯಿಂದೀಲೋಕಕ್ಕೆ ಪ್ರಯೋಜನ. —

ಮತ್ತಮಾಜೀವನ್ಮುಕ್ತನಿರ್ದದೇಶದೊಳು।ನಿರುಪದ್ರವಮಾಗಿರ್ಪುದಲ್ಲದೆ ಶಿಷ್ಯರು-ಭಕ್ತರು-ಉದಾಸೀನರು-ಪಾಪಿಗಳೆಂಬ, ನಾಲ್ಕುತೆರನಾದಜನಗಳುಂಜ್ಞಾನಿಯಿಂದನುಗ್ರಹಿಸಿಕೊಳ್ಳುವರದೆಂತೆನೆ-ತತ್ವೋಪದೇಶಂಗೈವ ಜೀವನ್ಮುಕ್ತನಲ್ಲಿ ಶಿಷ್ಯಂಗೆವಿಶ್ವಾಸದಿಂ ಜ್ಞಾನಸಿದ್ಧಿಯುಂ ಬಳಿಕನಾರಾಗದಿಂದಾತನಂ ಆರಾಧಿಸುವಭಕ್ತಂಗೆ ಸುಕೃತಾದಿಸಾಧನಮುಂ ಬಳಿಕಾತನ

ಸಚ್ಚರಿತ್ರೆಯೊಳ್‍ಕಂಡ ಉದಾಸೀನಂಗೆ-ಪ್ರತ್ಯುಪಕೃತ್ಯಾಭಿರತಿಯು, ಬಳಿಕಾತನದರ್ಶನಸ್ಪರ್ಶನಾದಿಗಳಿಂ-ಪಾಪಿಗೆಪಾಪಕ್ಷಯಮುಂಸಿದ್ಧಿಸುತಿರ್ಕುಂ॥

—* ಉಪದೇಶಸಂಗತಿ. *—

ಬಳಿಕಿನ್ನಿ-ಕರ್ತೃತ್ವಾದಿಭಾವವಿಲ್ಲದೇ- ಜೀವನ್ಮುಕ್ತನಿಂ- ವೇದಾಂತವಾಕ್ಯಶಕ್ತಿತಾತ್ಪರ್ಯ, ಪ್ರಮಾಣ, ಅನುಕೂಲತರ್ಕ, ದೃಷ್ಟಾಂತ, ಯುಕ್ತಿಗಳಿಂ। ಯತ್ನಪುರಸ್ಸರವಾಗಿ-ಬ್ರಹ್ಮೋಪದೇಶಾದಿಕವೆಂತು ಘಟಿಸುವದೆಸೆ- ಅತಿರೋಹಿತಬ್ರಹ್ಮಸ್ವರೂಪನಪ್ಪುದರಿಂ- ರಾಗದ್ವೇಷಾದಿಗಳಿಲ್ಲದೀಶ್ವರಂಗೆ-ಅನುಗ್ರಾಹ್ಯ। ನಿಗ್ರಾಹ್ಯಜನರಸುಕೃತದುಷ್ಕೃತವಶದಿಂದ-ಅನುಗ್ರಹನಿಗ್ರಹ ಚೇಷ್ಟೆದೊರಕೊಂಬಂತೆ- ಸಾಧಕರಸುಕೃತಾದಿಪ್ರಭಾವದಿಂ ಜ್ಞಾನಿಯುಂದುಪದೇಶಾದಿಗಳಹವೆಂಬುದೇಸಿದ್ಧಮಕ್ಕುಂ.

—* ಜೀವನ್ಮುಕ್ತರಪ್ರಾರಬ್ಧವು. *

ಬಳಿಕಿನ್ನಿ, ಜೀವನ್ಮುಕ್ತರಿಂತು-ಪೇಳ್ದಲಕ್ಷಣದಿಂದಿರದೆ ಪ್ರಾರಬ್ಧಫಲದಿಂ ಬಹುಪ್ರಕಾರವಾಗಿಪ್ಪರದೆಂತೆನೆ-ಪ್ರಾರಬ್ಧಕರ್ಮಸಂಸ್ಕಾರವುಂಬಹುಪಡೆಯೀ ಪ್ರ-ಮಂತಲೂ-ಮಧ್ಯಮಂತಲೂ, ಮಂದಮಂತಲೂ, ನಾಲ್ಕುತರನಾಗಿಹುದದರಲ್ಲಿ-ಸಮ್ಯಜ್ಞಾನಿಯಾದರೂ ಭೋಗದಲ್ಲಿಯೇತತ್ಪರನಾಗಿ-ಪಶುವಿನಂತಾತ್ಮವಿಸ್ಮೃತನಹುದೇ-ತೀವ್ರಸಂಸ್ಕಾರವೆನಿಸುವದು- ಭೋಗವೇಮುಖ್ಯವಾಗಿರೂಗಚ್ಛೇಷ್ಟೆಸ್ವೇಚ್ಛೆಯೊಂಬಂತೆ- ಸರ್ವದಾತ್ಮಾನಾತ್ಮತತ್ಪರನಾಗಿಬಾಲಕನಂತೆ ವಿನೋದದಿಂದಿರ್ಪುದೇಮಧ್ಯ ಸಂಸ್ಕಾರವೆನಿಸುವದು-ಸಕಲಭೋಗವನುಳಿದು- ಪರಮಾತ್ಮನಲ್ಲಿಯೇತತ್ಪರನಾಗಿ ಸುರತಸುಖಿಯಂಥುನದಂತೆ ನಿಜಾನಂದದಿಂದಿರ್ಪುದೇ- ಮಂದಸಂಸ್ಕಾರವೆಂನಿಸುವದು-ಸರ್ವವ್ಯಾಪಾರವಳಿದು- ನಿರುಪಾಧಿಕಾತ್ಮನಲ್ಲಿಯೇತತ್ಪರನಾಗಿ- ಪರಮುಕ್ತನಂತೆಪರಮಸುಖದಿಂತಿರ್ಪುದೇಸುಪ್ತಸಂಸ್ಕಾರಮಕ್ಕುಂ॥ ಬಳಿಕಿನ್ನಿನಾನಾಪ್ರಕಾರಮಾದಪ್ರಾರಬ್ಧಕರ್ಮವಿಚಿತ್ರವಿಲಕ್ಷಣಸಂಸ್ಕಾರವಶದಿಂ- ಜೀವನ್ಮುಕ್ತರು ನಾನಾವರ್ತನಂಗಳಿಂದಿರ್ದರೂ। ಋಜುಕುಟಿಲಗತಿಗಳುಳ್ಳನದಿಗಳು ಕಡಲೊಳಗೊಂದಪ್ಪಂತೆ। ಕಡೆಯೊಳು ಬ್ರಹ್ಮಸ್ವರೂಪವಾಗಿಪ್ಪ ವಿದೇಹಕೈವಲ್ಯಸುಖವೊಂದೇ ಬಗೆಯಾಗಿಪಡೆವರೆಂದೆಸಿದ್ಧಮಕ್ಕುಂ॥

—* ಪ್ರಾರಬ್ಧತ್ರಯವು. *

ಬಳಿಕಿಚ್ಛಾಪ್ರಾರಬ್ಧ। ಅನಿಚ್ಛಾಪ್ರಾರಬ್ಧ। ಪರೇಚ್ಛಾಪ್ರಾರಬ್ಧವೆಂಬ ತ್ರಿವಿಧಪ್ರಾರಬ್ಧಂಗಳು। ಬ್ರಹ್ಮಾದಿಗಳಿಂದಲೂ ನಿವಾರಿಸಲಶಕ್ಯವಾಗಿ

ರ್ದ ಪವ್ರುಗಳಲ್ಲಿಅಪಥ್ಯಸೇವನಾದಿಕದಿಂ ತನಗೆಬಪ್ಪ ನರ್ಥವನರಿತಿದ್ದರುಂ। ರಾಗೋತ್ಕರ್ಷದರಂಬಿಡಲೀಯದೇಪಾಡಿ ಸುವದೇಯಿಚ್ಛಾಪ್ರಾರಬ್ಧ ವೆನಿಸುವದು ॥ ತಾನುಮಾಡಲೊಲ್ಲೆನೆಂದರೂ। ಸಿಟ್ಟಡದ್ದ। ರಾಜಾಜ್ಞೆ ಯೆಂತಿಕ್ಷಿಪಾಣಿವಾರ್ಯವಾಗಿ। ಬಲತ್ಕರಿಸಿಹಿಂಸಾದಿ ಪಾಪಕರ್ಮವಂಮಾ ಡಿಸುವದೇ ಅನಿಚ್ಛಾ ಪ್ರಾರಬ್ಧವೆನಿಸುವದು।ತನಗಿಚ್ಛಾನಿಚ್ಛೆಗಳಿಲ್ಲದಿದ್ದ ರೂಪರದಾಕ್ಷಿಣ್ಯವೆಂಬುವದು। ಬಿಡದೆ ಸುಖದುಃಖಾದಿಕವನುಣಿಸುವದೇ ಪರೇಚ್ಛಾಪ್ರಾರಬ್ಧವೆನಿಸುವದು ॥

—* ಜೀವನ್ಮುಕ್ತರು. *—

ಇಂತು ಬ್ರಹ್ಮಾತ್ಮೈಕ್ಯಾನುಸಂಧಾನ ವಿಧ್ವಸ್ತದ್ವೈತಬಂಧು ರಹಿತ ನದಿಂಬ್ರಹ್ಮಭೂತರಾದಜೀವನ್ಮುಕ್ತರು। ಜ್ಞಾನಕ್ಕೆವಿರುದ್ಧವಾಗಿರುಪವಿ ಲಕ್ಷಣಚರ್ಯೆಗಳಿಂಪ್ರಾರಬ್ಧವನನುಭವಿಸುವರೆಂದೆನೆ॥ ಕೃಷ್ಣೋಭೋಗೀ ಶುಕಸ್ತ್ಯಾಗೀ ನೃಪೌಜನಕರಾಘವೌ। ವಸಿಷ್ಠಃಕರ್ಮನಿರತಃ ಪಂಚೈತೆ ಜ್ಞಾನಸಮ್ಮತಾ ॥ ದತ್ತಾತ್ರೇಯಸ್ತತೋನ್ಮತ್ತಃ ಪ್ರಹ್ಲಾದೋಗಾನ ಲೋಲಸ್ತು ಸನಕಾದ್ಯಾಸ್ತುಯೋಗಿನಃ।ಹನೂಮಾನಪಿದೂತೋಭೂಜ್ಜೀ ವನ್ಮುಕ್ತಾ ಇಮೇಮತಾಃಯೆಂಬಿದಾಗಿ ॥ ಸನಕ. ಜನಕ, ಭಾರತ, ಯಾ ಜ್ಞವಲ್ಕ್ಯ, ಶುಕ, ವಾಮದೇವ ಗೌತಮ ಪ್ರಹ್ಲಾದ, ವಿಶ್ವಾಮಿತ್ರ ವಶಿ ಷ್ಠ, ದೂರ್ವಾಸ, ನಾರದ, ಸೌಭರಿ, ಭೃಗು,ದಧೀಚಿ, ಶ್ವೇತಕೇತು, ದತ್ತಾ ತ್ರೇಯ, ರಾಮಕೃಷ್ಣವಾಯುಪುತ್ರ, ಭರದ್ವಾಜ, ಶಕ್ರ, ರಾವಣ, ಬಾಣ ವೃಷಭ, ಭರತಾದಿಗಳ, ವರ್ತನಾಭೇದಂಗಳೇ ನಿದರ್ಶನವಾಗಿರ್ಕುಂ ॥

—* ಜ್ಞಾನ್ಯಜ್ಞಾನಿಭೇದ. *—

ಬಳಕಿಲ್ಲಿಪ್ರಾರಬ್ಧಭೋಗವನಂಗೀಕರಿಸೆ। ಅಜ್ಞಾನಿಜ್ಞಾನಿಗಳಿಗೇನು ಭೇದಮೆಂದೊಡೆಪ್ರಾತ್ಯಶ್ರೋತ್ರಿಯರ್ಗೆ। ವೇದಾಧ್ಯಯನಪರಿತ್ಯಾಗ। ವೇ ದಾಧ್ಯಯನಯುಕ್ತತೆಗಳಿಂದಲೇ ಭೇದವಲ್ಲದೆ ಸದಾಚಾರಾದಿಗಳಿಂ ಭೇದ ತೋರದಂತೆ ಅಜ್ಞಾನಿಗಳಲ್ಲಿಹೃದಯ ಗ್ರಂಥಿಯಸಂಬಂಧಾಸಂಬಂಧಗಳಿಂ ಭೇದವೈಸೆಭೋಗಸ್ಥಿತಿಯಿಂಭೇದವಿಲ್ಲದಿರ್ಕುಂ ॥

—* ಸ್ವನಾಶಪ್ರಯತ್ನೋಪಪತ್ತಿ. *—

ಬಳಿಕ ತತ್ವಜ್ಞಾನದಿಂ ಬ್ರಹ್ಮಪ್ರಾಪ್ತಿಯಾಗೆ ವ್ಯಾಪ್ರಸಂದಪಟ್ಟಸಂ ತೆಜೀವತ್ವಂಕೆಡುಗುವುದಾಗಿ ತನ್ನ ನಾಶಕ್ಕೆಂತುಜೀವಂ ಪ್ರವರ್ತಿಸಗುದೊ ಡೆ ಯೆಂತು ಲೋಕದಲ್ಲಿದೇವತ್ವದಭಿವಾಂಛೆಯಿಂ ಭೃಗು, ಅಗ್ನಿ, ಗಂಗೆ,

ಪ್ರಯಾಗ,ಕುರುಕ್ಷೇತ್ರಮಹಾಪಥಗಳಲ್ಲಿ ನರತ್ವಪರಿತ್ಯಾಗಮನಂಗೀಕರಿಸು
ತಿರ್ಪನರರಂತೆ ಪ್ರತ್ಯಗಾತ್ಮರೂಪಬ್ರಹ್ಮತ್ವದಿಂದಿರಲೋಸುಗಮಾಗಿ ತತ್ವ
ಜ್ಞಾನದಿಂ ತನ್ನ ನಾಶಮನೊಡಂಬಡುತಿರ್ಪನೆಂಬುದೇ।ಪ್ರಸಿದ್ಧಿಮುಕ್ತ್ಯಂ॥

—* ಜೀವನ್ಮುಕ್ತಿಪ್ರಶಂಸೆ. *—

ಬಳಿಕ ವ್ಯಾಸಾದಿಗಳಂತೆ ಶಾಪಾನುಗ್ರಹಸಾಮರ್ಥ್ಯ ಮಾವಾತಂಗುಂ
ಟಾದೊಡಾತನೇ। ತತ್ವಜ್ಞಾನಿಯಲ್ಲದೆ ಬೇರೊಬ್ಬನಿಲ್ಲೆನಲಾ ಸಾಮರ್ಥ್ಯ
ವು ತಪ್ಪಿಸ್ಸಿನಫಲವೈಸೆ ತತ್ವಜ್ಞಾನದಫಲವಲ್ಲವೆಂದುಕಾಂಬುದು। ಬಳಿಕಂ
ತಾದೊಡೆತತ್ವಜ್ಞಾನಕ್ಕೆ ತಪವೇಮೂಲಮೆಂಬಶ್ರುತಿಯುಂಟಾಗಿತಪ್ಪೋರಹಿ
ತನಿಗೆ ತತ್ವಜ್ಞಾನವೆತ್ತಣದೆನೆ ಶಾಪಾದಿಗಳಿಗೆಕಾರಣಮಾದ ಕಾಮ್ಯತಪ
ದಿಂದನ್ಯಮಾದ ನಿಷ್ಕಾಮ್ಯತಪಸ್ಸಿನಿಂ ತತ್ವಜ್ಞಾನಮಹುದೆಂದು ಪರಿಹಾ
ರ್ಯೈಯುಲಕ್ಕ್ಯಂ ॥ ಮತ್ತಮಾವ್ಯಾಸಾದಿಗಳಿಗೆ ತತ್ವಜ್ಞಾನಸಾಮರ್ಥ್ಯ
ಗಳೆರಡು ಉಂಟೆನಲಾಯುನಲವರ್ಗೆ ಉಭಯವಿಧತಪಮುಂಸಿದ್ಧಿಸಿದಾಗಿಜ್ಞಾ
ನಸಾಮರ್ಥ್ಯಗಳೆರಡೂ ಸಂಭವಿಸುತ್ತಿಹವು ಬಳಿಕೊಂದೇತಪಮ ನಾಚರಿ
ಸಿದೊಡಾತಂಗೊಂದೇ ಸಿದ್ಧಿಸುತ್ತಿಹುದಾಗಿವಿರೋಧಮಿಲ್ಲಂ ॥ಬಳಿಕ ಶಾಪಾ
ದಿಸಾಮರ್ಥ್ಯವಿಲ್ಲದ ವಿಧಿಶೂನ್ಯನಾದತತ್ವಜ್ಞಾನಿಯುಂಕ್ರಿಯಾನಿಷ್ಠರೆಲ್ಲ
ರುಂ ನಿಂದಿಸುತ್ತಿಹರಲಾಯೆನಲಾಕ್ರಿಯಾನಿಷ್ಠರ್ಗೆಯಿಂ ವಿಷಯಲಂಪಟ
ರಾದ ಪಾಮರರಿಂ ನಿಂದ್ಯತ್ವಮುಂಬಪ್ಪುದರಿಂ ದೋಷಮ್ಯಾವಿಲ್ಲಂ॥ ಮತ್ತಮಾ
ವಿಷಯಲಂಪಟರಿಂದಾದ ನಿರಾಕರಣದಿಂಕ್ರಿಯಾನಿಷ್ಠರಾದಶಿಷ್ಟರ್ಗ್ಗೆ ಮಹಾ
ನಿಯೆನೆ। ದೇಹವೇ ಆತ್ಮನೆಂಬ ಬುದ್ಧಿಯುಳ್ಳಕ್ರಿಯಾನಿಷ್ಠರ್ಕ್ಕಳ್ಪದೂಷ
ಣದಿಂ। ತತ್ವಜ್ಞಾನಿಗಾವ ಹಾನಿಯುಮಿಲ್ಲವೆಂಬುದೇ ಯಥಾರ್ಥಮುಕ್ತ್ಯಂ॥
ಮತ್ತಮಾಜೀವನ್ಮುಕ್ತನಲೌಕಿಕನಪ್ಪುದರಿಂ। ಪ್ರಾರಬ್ಧದತವಕದಿಂ ವಿವಿ
ದವಸ್ಥೆಯೊಳಿರ್ದ್ದಡುಂ। ಮಾರುತನಿಂಸ್ಪೃತಾಶ್ರಿತ ಗಗನಪಟಲಮೇಘದಂತೆ
ನಿತ್ಯನಿರ್ಮಲನಪ್ಪಂ ॥ ಮತ್ತಮಾ ಅದೃಷ್ಟವೆಂಬಪರಿಚಾರಕನಿಂದತ್ತಮಾ
ದ ಸ್ರಕ್ಚಂದನಾದಿಭೋಗಸ್ವೀಕಾರವಿರ್ದೊಡಂ।ನಿಜಭರ್ತ್ತೃವಿನೊಡನೆ ಸುರ
ತಂಗೈವಪುಂಶ್ಚಲಿಯಂತೆವಿರಾಗತೆಯುಕ್ತ್ಯಂ ॥ ಮತ್ತಂ ಮೂಢನಂತೆ ಕಲಾ
ಭಿಜ್ಞತ್ವದೊಳ್ ಮಾನಸನಾಗಿರ್ಪೊಡಂ।ಕಲ್ಪಿತದ್ವೈತಪರಶ್ರುತಿ ವಾಕ್ಯ
ವೈಖರೀವಿಷಯಮೇಳಲಸನಪ್ಪಂ॥ ಮತ್ತಂ ಪ್ರಸ್ತುತವನರಿಯದ ಬಹು
ಭಾಷಣಂತೆಯೇನನುಡಿದರದುವೇ ಗೂಢಾಭಿಪ್ರಾಯಗರ್ಭಿತಮಾದ ಸತ್ಯಾ
ದ್ವೈತನಿಷ್ಠಾನಿಗಮಾಭಿಪ್ರಾಯಮುಕ್ತ್ಯಂ॥ ಮತ್ತಮಾಚಾರ್ಯನಂತೆ ಶಿಷ್ಯ

ನುಪದೇಶಿಸುತಿರ್ಪ್ಪುದಾತ್ಮನು ನಿತ್ಯವುಕ್ತನಪ್ಪುದರಿಂ ಬೋಧ್ಯಬೋಧ
ಕತ್ವವೇ ಮಾಯಾರಚನಾತ್ಮಕನೆಂಬ ಕೃತನಿಶ್ಚಯದಿಂಗಗನವಾಣಿಯಂತೆ
ಗುರುತ್ವಾಭಿಮಾನ ರಹಿತನಪ್ಪಂ । ಮತ್ತಮುನ್ಮತ್ತನಂತೆ ಅನುಚಿತವಕ್ತ್ರ
ನಾದೊಡಂ ದ್ವೈತಭಾವವಳಿದಾತ್ಮಾರಾಮನಪ್ಪುದರಿಂ ಸುರತಾಂತದೊಳ
ಗೆರತಿ ಕಾಮಾಸಕ್ತ ಮಿಥುನವಾಕ್ಯದಂತೆ ಅನಭಿಧೇಯವಿಷಯನಕ್ಕಂ ॥
ಮತ್ತಂ ಪುತ್ರವಿಯೋಗಾನುಭವಮುಳ್ಳಗ್ರಾಮ್ಯಜನದಂತೆ ಶೋಕಗ್ರಸ್ತನಲ್ಲ
ದೇ ಸರ್ವೇಂದ್ರಿಯಂಗಳ್ ಬ್ರಹ್ಮಾಂಶಂಗಳೆಂದಾಲೋಚನಂಗೆಯ್ದದೇಕ
ಸ್ಥಿತಸಿದ್ಧಕಾವಸ್ಥೆಯೋಳ್ ದಂಡಿತ ಸರ್ವೇಂದ್ರಿಯಧರ್ಮವಿಷಯಮಾದ
ಕರುಣಾರಸನಕ್ಕಂ॥ ಮತ್ತಂ ವಿಕೃತಬಹುರೂಪದರ್ಶನವಿನೋದದೊಳಟ್ಟ
ಹಾಸಂಗೈದೊಡಂ ವಿಚಿತ್ರ ಪುಣ್ಯಪಾಪಾದಿವ್ಯವಹಾರಮಂ ಸತ್ಯವೆಂದು ಪ್ರ
ತಿಪಾದಿಪ ಮೀಮಾಂಸಾದಿದರ್ಶನವಿಷಯಮಾದಪರಿಹಾಸನಕ್ಕಂ ॥ ಮ
ತ್ತಂ ವಿಟನಂತೆ ಸ್ತ್ರೀಲೋಲನಾಗಿರ್ಪ್ಪುದಂಪೂರ್ಣ್ಣಕಸ್ವಭಾವನಪ್ಪುದರಿಂ
ನಿಜಾನಂದಾನುಭವಯುಪ್ಪಂ ॥ ಮತ್ತಂ ಶತ್ರುವಿನಂತಾಪಾತನಂ ಕ್ರೋಧ
ದಿಂ ಸಂತಾಪಂಬಡಿಪದೊಡಂ ಕ್ಷೇತ್ರದಾಹಕಾಗ್ನಿಯಂತೆ ವಿಶಿಷ್ಟಫಲ ಸಂಪ
ತ್ತಿಗಾತನ ನಾಶ್ರಯಂಮಾಡುವನೆಂದು ವಿಶ್ವಾಸಂಗೈಯಲ್ ಪೇಳ್ಕಂ॥

—* ವಿದೇಹಕೈವಲ್ಯ. *—

ಅನಂತರದೊಳಾವಕಾಲದಲ್ಲಿಯುಂ ಮಾವದೇಶದಲ್ಲಿಯುಂ ಮಾನ್ಯದಾಸೋಂ
ದುಶರೀರಂ ಬಡೆಯದೆ ಸಚ್ಚಿದಾನಂದ ಬ್ರಹ್ಮಸ್ವರೂಪಮಿಂದಿಹುದೇ ವಿದೇ
ಹಕೈವಲ್ಯಮಕ್ಕುಂ। ಬಳಿಕವಿದೇಹಕೈವಲ್ಯವನೈದುವ ಕ್ರಮಮೆಂತೆಂದೊಡೆ
ಆವನಾದಡೋರ್ವ್ವಮುಮುಕ್ಷುವಿಗೆನಿತ್ಯಕರ್ಮಾನುಷ್ಠಾನಬಲದಿಂ ಧರ್ಮ್ಮೋ
ತ್ಕರ್ಷಮುಂಟಾಗಿಯದರಿಂ ಸರ್ವಪಾಪನಿವೃತ್ತಿಯಾಗೆ ಬಳಿಕ ಚಿತ್ತಶುದ್ಧಿ
ಯಪ್ಪುದರಿಂ ಸಂಸಾರದೋಷದರ್ಶನವದರಿಂ ವಿಷಯವಿರಕ್ತಿಯದರಿಂ
ಮೋಕ್ಷಾಪೇಕ್ಷೆಯದರಿಂ ಪ್ರತ್ಯಗಾತ್ಮಾಭಿರತಿಯದರಿಂ ತತ್ವಮಸ್ಯಾದಿಮಹಾ
ವಾಕ್ಯ ವಿಚಾರವದರಿಂದದ್ವೈತಜ್ಞಾನವದರಿಂದ ವಿದ್ಯಾನಾಶವದರಿಂ ಕಲ್ಪಿ
ತಭ್ರಾಂತಿನಷ್ಟವಹುದದರಿಂ ಶುಭಾಶುಭಬುದ್ಧಿಪರಿತ್ಯಾಗವದರಿಂ ರಾಗದ್ವೇ
ಷ ಹಾನಿಯದರಿಂ ಪುಣ್ಯಪಾಪವಿಮೋಚನವದರಿಂ ದೇಹವಿಚ್ಛಿತ್ತಿಯದ
ರಿಂ ಸರ್ವಪಾಪಮೂಲಾಜ್ಞಾನವಾಸನಾನಾಶವಹುದದರಿಂ ಸರ್ವೋತ್ಕರ್ಷ
ಮಾಚರಮುಮಪ್ಪ ಪುನರಾವೃತ್ತಿರಹಿತಮಾದ ಸಕಲಶಾಸ್ತ್ರಪರ್ಯವಸಾನಮ
ಪ್ಪನಾಮ ಜಾತಿಕ್ರಿಯಾವಾಸನೆಪ್ರೋಗದ ಮನೋವಾಗಗೋಚರಮಪ್ಪ

ನಿತ್ಯಾನಂದ ಸ್ವರೂಪವಾದವಿದುಹಕೈವಲ್ಯವುಹುದೆಂದು ನಿಶ್ಚಿಛ್ರದೆಶ್ರುತ್ಯಾಚಾರ್ಯಪ್ರಸಾದ ಸಿದ್ಧಿಯಕ್ಕುಂ ॥

ಇಂತೆಂಬಲ್ಲಿಗೆ ನಿಜಗುಣ ಶಿವಯೋಗೀಂದ್ರ ವಿರಚಿತವಾದ
ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ ಕೈವಲ್ಯೋ
ಪಾಯಕಥನವೆಂಬ ಪ್ರಥಮಪ್ರಕರಣಕ್ಕೆ
ಮಂಗಳಮಸ್ತು.

ಶ್ರೀ ಶಂಭುಲಿಂಗ ಪರಬ್ರಹ್ಮಮೂರ್ತಯೇನಮಃ.

ದ್ವಿತೀಯ ಪ್ರಕರಣ ಪ್ರಾರಂಭಃ.

ಕಂದ॥ ಇಂತಖಿಳನಿಗಮಪದ್ಧತಿ । ಯಂತತ್ತ್ವವನರಿಗುವೇಳ್ದ ಪೆರಡರ ಶಿವ। ಸಿದ್ಧಾಂತವವೇಳುವೆಸಾಧಕ । ರಿಂತ್ರಿಳೆಯುಲ್ತ್ಕಬಗೆಯುನೋಲವಿನಲಿನ್ನು॥ ಅದೆಂತೆಂದೊಡಾ ಸಿದ್ಧಾಂತಶಾಸ್ತ್ರದೊಳೀಲೋಕದಲ್ಲಿ ಪ್ರತ್ಯಕ್ಷಫಲದಿಂವಿಶ್ವಾಸಂಘಟಿಸಲೋಸುಗವಾಗಿ ವಿಜ್ಞಾನಕೇವಲವೆಂಬಾತ್ಮವರ್ಗದೊಳಾಯನಾನಾಮಧೇಯಮುಳ್ಳವರಿಂದುಕ್ತವಾದ ಗಾರುಡದಕ್ಷಿಣ ವಾಮ ಭೂತಂಗಳೆಂಬ ನಾಲ್ಕುತಂತ್ರಗಳವುಗಳಕ್ರಮದಿಂತತ್ಪುರುಷಅಘೋರವಾಮದೇವಸದ್ಯೋಜಾತರೆಂಬ ಚತುರ್ವಿಧಬ್ರಹ್ಮಮೂರ್ತ್ಯುಪಾಸನೆಗಳಂಸರ್ಪಚಿಕಿತ್ಸೆ। ಶತ್ರುಜಯ। ರಸವಾದ। ಗ್ರಹೋಚ್ಚಾಟನಾರ್ಥವಾಗಿ ಕ್ರಮದಿಂಗಾರುಡಮಾರಣವಾದ ಮಂತ್ರೌಷಧಪ್ರಯೋಗಗಳುಂ ಸಮರ್ಥಿತಗಳಕ್ಕುಂ॥

— ಆಗಮಭೇದಗಳು. —

ಮತ್ತಮಾಸಿದ್ಧಾಂತಭೇದಂಗಳಾವಾವವೆಂದೊಡೆಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ, ಸೂಕ್ಷ್ಮಾಗಮ ಸಹಸ್ರಾಗಮ। ಅಂಶುಮದಾಗಮ, ಸುಪ್ರಬೋಧಾಗಮ, ವಿಜಯಾಗಮ, ನಿಶ್ವಾಸಾಗಮ, ಸ್ವಯಂಭ್ವಾಗಮ, ಅನಲಾಗಮ, ವೀರಾಗಮ, ತಾರವಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಬಿಂಬಾಗಮ, ಪ್ರೋದ್ಗೀತಾಗಮ, ಲಲಿತಾಗಮ, ಸಿದ್ಧಾಗಮ, ಶಾಂತಾಗಮ, ಸರ್ವೋತ್ತರಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತೂಲಾಗಮವೆಂಬ, ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ। ಬಳಿಕಾವದೊಡೆ-ಕಾಮಿಕಾದಿ

ಕ್ರಮದಿಂ-ಸದಾಶಿವನಸದ್ಯೋಜಾತಮುಖದಲ್ಲಿಂದು-ಅಘೋರಮುಖದಲ್ಲಿಂದು-ತತ್ಪುರುಷಮುಖದಲ್ಲಿಂದು-ಈಶಾನಮುಖದಲ್ಲೀಟು ಜನಿಸಿದವು ಗಳಲ್ಲಿ-ಕಾಮಿಕಾದಿ ಸುಪ್ರಬೋಧಾಂತವಾದಶೈವಾಗಮಂಗಳೇ। ಶಿವಭೇದ ವೆನಿಸಿಕೊಂಬವು-ವಿಜಯಾದಿವಾತುಲಾಂತವಾದ ಶಡಿಸೆಟ್ಟಾಗಮ ಗಳೇರುದ್ರ ಭೇದವೆನಿಸಿಕೊಳ್ಳುತಿರ್ಕುಂ॥

— ಆಗಮಾವತರಣ. —

ಮತ್ತಮಾ-ಶಿವರುದ್ರಾಗಮಂಗಳವತರಿಸಿದಕ್ರಮವೆಂತೆಂದೊಡೆಸದ್ಯೋಜಾತಮುಖದಿಂ ಕಾಮಿಕಾಗಮವಂ-ಮೊದಲುಕ್ರಣವನು-ಬಳಿಕವನಿಂತ್ರಿಕಲನುಮೇಲವನಿಂಹರನೈದಿದನು। ಯೋಗಜಾಗಮವಂಮೊದಲುಸುಧಾಖ್ಯನುಮ್ಮೇಲವನಿಂಬಾಹು। ಬಳಿಕವನಿಂವಿಭುವರಿದನು।ಚಿಂತ್ಯಾಗಮವಂಮೊದಲುದೀಪ್ತನು-ಮೇಲವನಿಯೋಗಾಹ್ವಯನು-ಮತ್ತವನಿಂದಂಬಿಕೆಕೇಳದಳು। ಕಾರಣಾಗಮವಂಮೊದಲುಕಾರಣಾಖ್ಯನು-ಬಳಿಕವನಿಂಸರ್ವನು।ಮೇಲವನಿಂಪ್ರಜಾಪತಿಕೇಳದನು। ಅಜಿತಾಗಮವಂಮೊದಲುಶಿವನು ಮತ್ತವನಿಂ ಸುಶಿವನು। ಮೇಲವನಿಂದಚ್ಯುತನೈದಿದನು- ಬಳಿಕವಾಮದೇವಾಮುಖದಿಂದೀಪ್ತಾಗಮವಂಮೊದಲೀಶನುಮೇಲವನಿಂತ್ರಿಮೂರ್ತಿ ಬಳಿಕವನಿಂಹುತಾಶವನರಿದನು-ಸೂಕ್ಷ್ಮಾಗಮವಂಮೊದಲುಸೂಕ್ಷ್ಮನು ಮತ್ತವನಿಂವೈಶ್ರವಣನು ಬಳಿಕವನಿಂಸುಪ್ರಭಂಜನನೈದಿದನುಸಹಸ್ರಾಗಮವಂಮೊದಲುಕಾಲರುದ್ರನುಮೇಲವನಿಂಭೀಮನು-ಮತ್ತವನಿಂಧರ್ಮನರಿದನು-ಅಂಶುಮದಾಗಮದಿಂಮೊದಲ-ಬುಬಳಿಕವನಿಂದುಗ್ರನ ಮೇಲವನಿಂದಶಿರಸನರಿದನು- ಸುಪ್ರಬೋಧಾಗಮವಂಮೊದಲುದಶೇಶನು - ಅವನಿಂವಿಘ್ನೇಶ್ವರನು-ಮೇಲವನಿಂಶಶಿಕೇಳದನು-ಇಂತುದಶಶಿವಭೇದಂಗಳಕ್ಕುಂ॥ಬಳಿಕಅಘೋರಮುಖದಿಂ ವಿಜಯಾಗಮವಂಮೊದಲುರುದ್ರನು-ಮತ್ತವನಿಂದನಾದಿಪರಮನವನಿಂದೀಶ್ವರನರಿದನು, ನಿಶ್ವಾಸಾಗಮವಂಮೊದಲುಉದಯನು ಮತ್ತವನಿಂಗಿರಿಜೆಕೇಳದಳು- ಸ್ವಾಯಂಭುವಾಗಮವಂಮೊದಲುನಿಧನೇಶನುಬಳಿಕವನಿಂ ಸ್ವಾಯಂಭುವೈದಿದನು-ಅನಲಾಗಮವಂಮೊದಲುವ್ಯೋಮನುಮತ್ತವನಿಂ ಹುತಾಶನನರಿದನು - ವೀರಾಗಮವಂಮೊದಲುತೇಜಸ್ವಂತನು ಮೇಲವನಿಂ ಪ್ರಜೇಶನುಕೇಳದನು- ಬಳಿಕ ತತ್ಪುರುಷಮುಖದಿಂ ರೌರವಾಗಮವಂಮೊದಲು ಬ್ರಹ್ಮಣ್ಯೇಶನುಮೇಲವನಿಂನಂದೀಶ್ವರನರಿದನು-ಮಕುಟಾಗಮವಂಮೊದಲುಶಶಾಖ್ಯನು-ಬಳಿಕವನಿಂಮಹಾದೈವನೈದಿದನು-ವಿಮ

ಭಾಗಮುಮಂ ಮೊದಲು ಸರ್ವಾತ್ಮಕನು ಮೇಲವನಿಂ ವೀರಭದ್ರನರಿದನು- ಚಂದ್ರಜ್ಞಾನಾಗಮುಮಂ ಮೊದಲನಂತನು ಮತ್ತವನಿಂ ಬೃಹಸ್ಪತಿ ಕೇಳಿದನು- ಬಿಂಬಾಗಮುಮಂ ಮೊದಲು ಪ್ರಶಾಂತನು ಮೇಲವನಿಂ ದಧೀಚಿ ಕೇಳಿದನು- ಬಳಿಕ ಈಶಾನಮುಖದಿಂ ಪ್ರೋದ್ಗೀತಾಗಮುಮಂ ಮೊದಲು ಶೂಲಿ ಮೇಲವನಿಂ ಕವಚಾಖ್ಯನೈದಿದನು - ಲಲಿತಾಗಮುಮಂ ಮೊದಲು ಯಮನು ಮತ್ತವನಿಂ ಲಲಿತನರಿದನು, ಸಿದ್ಧಾಗಮುಮಂ ಮೊದಲಿಂದ್ರನರಿದನು- ಬಳಿಕವನಿಂ ಚಂಡೀಶನೈದಿದನು- ಶಾಂತಾಗಮುಮಂ ಮೊದಲು ವಸಿಷ್ಠನು ಮೇಲವನಿಂ ಶಶಿಧಾಯುಧರಿದನು-ಸುರೊಕ್ತರಾಗಮುಮಂ ಮೊದಲು ಸೋಮನು ಮೇಲವನಿಂ ನೃಸಿಂಹನೈದಿದನು- ಪಾರಮೇಶ್ವರಾಗಮುಮಂ ಮೊದಲು ದೇವಿ ಕೇಳಿದಳು, ಕಿರಣಾಗಮುಮಂ ಮೊದಲು ದೇವಪಿತನು ಬಳಿಕವನಿಂ ಸಂವರ್ತಕನರಿದನು, ವಾತುಲಾಗಮುಮಂ ಮೊದಲು ಶಿವರುದ್ರನು ಮತ್ತವನಿಂ ಮಹಾಕಾಳನೈದಿದನು-ಇಂತಷ್ಟಾದಶರುದ್ರಭೇದಂಗಳಕ್ಕುಂ॥

— ಆಗಮಸಂಖ್ಯೆ. —

ಬಳಿಕಾ - ಇಪ್ಪತ್ತೆಂಟಾಗಮುಗಳ ಪರಿಮಾಣವನೊಂದು ಗೂಡಿದೊಡೆ ೨೦೬೦೦೦೧೦೧೯ ೩೮೪೪೦೦೦॥ ಎರಡು ಶಂಖಮುಂ ಒಂದು ಪದ್ಮಮುಂ ಪಂದರ್ಬುದಮುಂ ಹತ್ತೊಂಭತ್ತು ಕೋಟಿಯುಂ ಮೂವತ್ತೆಂಟು ಲಕ್ಷಮುಂ ನಾಲ್ವತ್ತು ನಾಲ್ಕು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿ।ಆಗಮವೊಂದೊಂದಕ್ಕೆ ೭೧೭೮೫೭೫೦೬೯-೨೩೦೦೦ - ಯೇಳು ಪದ್ಮಮುಂ ಒಂದು ಮಹಾಖರ್ವಮುಂ ಯೇಳು ಖರ್ವಮುಂ ಯೆಂಟು ನ್ಯರ್ಬುದಮುಂ ಐದು ಅರ್ಬುದಮುಂ ಯೇಳುನೂರಐವತ್ತು ಕೋಟಿಯುಂ ಅರವತ್ತೊಂಭತ್ತು ಲಕ್ಷದ ಇಪ್ಪತ್ತು ಮೂರು ಸಾವಿರ ಗ್ರಂಥಸಂಖ್ಯೆಯುಳ್ಳದ್ದಾಗಿ।ಅವುಗಳೊಳಗವಾಂತರಭೇದಗಳಿಂ ದಾಗಮಶಾಸ್ತ್ರವೆಲ್ಲಮುಂ ೧೯೮ ನೂರತೊಂಭತ್ತೆಂಟು ಭೇದಗಳಾಗಿಪ್ಪವೆಂತೆನೆ॥

— ಆಗಮವಿಶೇಷವಿಭಾಗ. —

ಬಳಿಕ ಉತ್ತರಬ್ಬೈರವೋತ್ತರ ನಾರಸಿಂಹವೆಂಬವೇ ಕಾಮಿಕಾಗಮದ ತ್ರಿಬೇದಂಗಳು, ವೀಣಾಶಿರೋತ್ತರ ತಾರಕತಂತ್ರ ಸಾಂಖ್ಯಾಗಮ ಶಾಂತ್ಯಾಗಮ ಆತ್ಮಯೋಗವೆಂದು ಯೋಗಜಾಗಮದೈದು ಬೇಧಂಗಳು।ಸುಚಿಂತ್ಯಾಗಮ ಶುಭಾಗಮ ವಾಮತಂತ್ರ ಪ್ರಾಪನಾಶಕ ಸರೋದ್ಭವ ಅಮೃತಾಗಮವೆಂದು ಚಿಂತ್ಯಾಗಮದಾರು ಬೇಧಂಗಳು। ಕಾರಣತಂತ್ರ ಪಾವನತಂ

ತ್ರದೌಜ್ಞ್ಯತಂತ್ರ ಮಹೇಂದ್ರತಂತ್ರ ಭೀಮತಂತ್ರ ಮಾರಣತಂತ್ರ ಈಶಾ
ನತಂತ್ರವೆಂದು ಕಾರಣಾಗಮದಸಪ್ತಬೇದಂಗಳು॥ ಪ್ರಭೂತಾಗಮವಿರೋ
ದ್ಭೂತಾಗಮ ಪಾರ್ವತೀತಂತ್ರ ಪದ್ಮಸಂಹಿತೆಯೆಂದು ಅಜಿತಾಗಮದನಾಲ್ಕು
ಬೇದಂಗಳು। ಅಮಿಯಾಗಮ ಅಪ್ರತಿಯಾಗಮ ಅಪ್ಯಾಗಮ ಅಸಂಖ್ಯಾ
ಗಮ ಅಮಿತೌಜಸಾಗಮ ಆನಂದಾಗಮ ಮಾಧವೋದ್ಭೂತಾಗಮ ಅ
ದ್ಭುತಾಗಮ ಅಮೃತಾಗಮವೆಂದು ದೀಪ್ತಾಗಮದನವಬೇದಂಗಳು। ಸೂ
ಕ್ಷ್ಮಸಂಹಿತೆಯೆಂದು ಸೂಕ್ಷ್ಮಾಗಮವೊಂದೇಬೇದ-ವಾಗಿಹುದು ॥ ಅತೀ
ತಾಗಮ ಅಮಲಾಗಮ ಶುದ್ಧಾಗಮ ಅಪ್ರಮಾಯಾಗಮ ಜ್ಯೋತಿರ್ಭಾ
ವನಾಗಮ ಪ್ರಬುದ್ಧಾಗಮ ವಿಬುದ್ಧಾಗಮ ಹಸ್ತಾಗಮ ಅಲಂಕಾರಾಗಮ
ಸುಬೋಧಾಗಮವೆಂದು ಸಹಸ್ರಾಗಮದ ದಶಬೇದಂಗಳು॥ ವಿದ್ಯಾಪುರಾಣ
ಭಾಸ್ಕರಾಗಮ ನೀಲಲೋಹಿತತಂತ್ರ ಪ್ರಕರಣಾಗಮ ಭೂತತಂತ್ರ ಆತ್ಮಾ
ಲಂಕಾರಕಾಶ್ಯಪಾಗಮ ಗೌತಮಾಗಮ ಮಹೇಂದ್ರಾಗಮ ಬ್ರಹ್ಮಾಗಮ
ವಾಸಿಷ್ಠಾಗಮ ಈಶಾನೋತ್ತರವೆಂದು ಅಂಶುಮದಾಗಮದದ್ವಾದಶಬೇ
ದಂಗಳು॥ ಸುಬೋಧಾಗಮ ಪ್ರಬೋಧಾಗಮ ಬೋಧಾಂಕುರಾಗಮವೆಂದು
ಸುಪ್ರಬೋಧಾಗಮದ ಮೂರು ಬೇದಂಗಳು॥ ವಿಜಯತಂತ್ರ ಉದ್ಭವತಂ
ತ್ರ ಸೌಮ್ಯತಂತ್ರ ಅಘೋರತಂತ್ರ ಮೃತ್ಯುನಾಶಕತಂತ್ರ ಕುಬೇರೇಶ
ತಂತ್ರ ವಿಮಲತಂತ್ರ ಮಹಾಘೋರತಂತ್ರವೆಂದು ವಿಜಯಾಗಮದೆಂಟು
ಬೇದಂಗಳು॥ ನಿಶ್ವಾಸ ಉತ್ತರನಿಶ್ವಾಸ ನಿಶ್ವಾಸಮುಖೋದಯ ನಿಶ್ವಾಸ
ನಯನ ನಿಶ್ವಾಸಕಾರಕ ಘೋರಸಂಹಿತೆ ಸುಸಾಂಖ್ಯ ಗುಹ್ಯಂಗಳೆಂದು ನಿ
ಶ್ವಾಸಾಗಮದೆಂಟು ಬೇದಂಗಳು॥ ಸ್ವಯಂಭೂತ ಪ್ರಜಾಪತಿಮತ ಪದ್ಮತಂ
ತ್ರವೆಂದು ಸ್ವಯಂಭ್ವಾಗಮದತ್ರಿಬೇದಂಗಳು॥ ಆಗ್ನೇಯವೆಂದು ಅನಲಾ
ಗಮವೊಂದೇ ಬೇದವಾಗಿಹುದು ॥ ಪ್ರಸ್ತರತಂತ್ರ ಪ್ರಸ್ಫುರತಂತ್ರ ಪ್ರ
ಬೋಧಕತಂತ್ರ ಬೋಧಕತಂತ್ರ ಬೋಧತಂತ್ರ ಅಪೋಹತಂತ್ರ ಮೋಹ
ಸಮಯತಂತ್ರ ಶಕಟತಂತ್ರ ಶಾಕಟತಂತ್ರ ಹಲತಂತ್ರ ವಿಲೇಖನತಂತ್ರ ಭ
ದ್ರತಂತ್ರ ವೀರತಂತ್ರವೆಂದು ವೀರಾಗಮದಹದಿಮೂರುಬೇದಂಗಳು॥ ಕಲಾ
ದಹನರೌರವೋತ್ತರ ಕೌಮಾರಕಾಳ ಮಹಾಕಾಳ ಇಂದ್ರಾಗಮವೆಂದು
ರೌರವಾಗಮದಾರುಬೇದಂಗಳು॥ ಮಕುಟಮಕುಟೋತ್ತರವೆಂದು ಮಕು
ಟಾಗಮದೆರಡು ಬೇದಂಗಳು॥ ಅನಂತಬೋಗಾಗಮ ಆಕ್ರಾಂತಾಗಮ ಹ್ಯ
ಡ್ಡಾಹಾಗಮ ಅವಿಕೃತಾಗಮ ಉದ್ಭೂತಾಗಮ ಮಾರಣತಂತ್ರವೆಂದು ವಿಮ

ಲಾಗಮದಾರುಭೇದಂಗಳು॥ ಸ್ಥಿರಸಹಿತೆ ಸ್ಥಾಣು ಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಮ ನೀಲಭದ್ರತಂತ್ರ ಶಿವಭದ್ರಾವಗು ಕಾಲಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವಶೇಖರಾಗಮ ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು॥ ಚತುರ್ಮುಖತಂತ್ರ ಮಲಯತಂತ್ರ ಮಹಾಯೋಗೆ ಸಂಸ್ತೋಭಾಗಮ ಪ್ರತಿಬಿಂಬಾಗಮ ಅರ್ಧಾಲಂಕಾರಮಾಯನ್ಯತಂ ಕೌಟತಂತ್ರ ತೃಟನೀಲಕರತು ಲಾವೃತ್ತ ತುಲಾಯೋಗ ಕುಟ್ಟಮತಂತ್ರ ಸರ್ವಶೇಖರ ಮಹಾವಿದ್ಯೆ ಮಹಾಸಾರವೆಂಬ । ಬಿಂಬಾಗಮದ ಹದಿನೈದು ಭೇದಂಗಳು ॥ ಕವಚಾ ಮ ವರಾಹತಂತ್ರ ಪಿಂಗಳ ಮತ ಪಶುಬಂಧುಸಂಹಿತೆ ದಂಡಧರತಂತ್ರ ಕುಶ ತಂತ್ರ ಧನುರ್ಧಾರಣ ಶಿವಜ್ಞಾನ ವಿಜ್ಞಾನ ತ್ರಿಪಜ್ಞಾನ ಆಯುರ್ವೇದ ಧನುರ್ವೇದ ಸರ್ಪದಂಷ್ಟ್ರ ವಿಭೇದ ಸಂಗೀತ ಭರತ ಅಥರ್ವವೇದ್ಯವೆಂದು ಪ್ರೋದ್ಗೀತಾಗಮದ ಷೋಡಶಭೇದಂಗಳು ॥ ಲಲಿತೆ ಲಲಿತೋತ್ತರ ಕೌಮಾರತಂತ್ರ ವಿಘ್ನೇಶ್ವರಾಗಮವೆಂದು ಲಲಿತಾಗಮದ ನಾಲ್ಕು ಭೇದಂಗಳು ॥ ಸಾರೋತ್ತರ ದೇವೇಶೋತ್ತರ ಶಾಲಭೇದ ಶಶಿಮಂಡಲವೆಂದು ಸಿದ್ಧಾಗಮ ನಾಲ್ಕು ಭೇದಂಗಳು ॥ ಲಿಂಗಾಧ್ಯಕ್ಷ ಸುರಾಧ್ಯಕ್ಷ ಶಂಕರತಂತ್ರ ಮಹೇಶ್ವರಾಗಮ ಅಸಂಖ್ಯತಂತ್ರ ಅನಿಲಾಗಮ ದ್ವಂದ್ವಾಗಮವೆಂದು ಶಾಂತಾಗಮದೇಳು ಭೇದಂಗಳು । ಲಿಂಗಾಧ್ಯಕ್ಷ ಸುರಾಧ್ಯಕ್ಷ ಶಂಕರತಂತ್ರ ಮಹೇಶ್ವರಾಗಮ ಅಸಂಖ್ಯತಂತ್ರ ಅನಿಲಾಗಮ ದ್ವಂದ್ವಾಗಮವೆಂದು ಶಾಂತ್ರಾಗಮದೇಳು ಭೇದಂಗಳು । ಉತ್ತರಾಗಮ ತತ್ವೋತ್ತರಾಗಮ ವಿಷಯೋತ್ತರಾಗಮವೆಂದು ಸರೋತ್ತರಾಗಮದ ಮೂರು ಭೇದಂಗಳು॥ ಮಾತಂಗತಂತ್ರ ಯಕ್ಷಿಣೀಶಾಸ್ತ್ರ ಸದ್ಯಾಗಮ ಪೌಷ್ಕರ ಸುಪ್ರಯೋಗ ಹಂಸಾಗಮ॥ ಸಾಮಾನ್ಯಾಗಮವೆಂದು ಪಾರಮೇಶ್ವರಾಗಮ ದೇಳು ಭೇದಂಗಳು ॥ ಗುರುಡಾಗಮ ನೈರುತಾಗಮ ನೀಲತಂತ್ರ ರೂಕ್ಷಾಗಮ ಭಾನಾಗಮ ವೈಕ್ರಮಾಗಮ ಬುದ್ಧಾಗಮ ಪ್ರಬುದ್ಧಾಗಮ ಕಾಲತಂತ್ರವೆಂದು ಕಿರಣಾಗಮದ ನವಭೇದಂಗಳು॥ ವಾತೂಲ ಉತ್ತರವಾತೂಲ ಕಾಲಜ್ಞಾನ ಪರಾಜಿತ ಸರ್ವಾಗಮ ಸರ್ವಾಪಿಷ್ಟಾಗಮ ಶ್ರೇಷ್ಠಾಗಮ ನಿತ್ಯಾಗಮ ಶುದ್ಧಾಗಮ ಮಹದಾಗಮ ವಿಶ್ವಾಸಾಗಮ ವಿಶ್ವಾತ್ಮಕಾಗಮವೆಂದು ವಾತೂಲಾಗಮದ ದ್ವಾದಶ ಭೇದಂಗಳು.

—* ಆಗಮಸಾರ. *—

ಇಂತೀನೂರತೊಂಭತ್ತೆಂಟು ಭೇದಗಳುಳ್ಳ ಶಿವರುದ್ರಾಗಮಗಳೇ ಸದಾ ಶಿವಪಂಚಮುಖಗಳಿಂದುದಿಸಿದವಾಗಿ ಈಶಾನಸ್ಸರ್ವವಿದ್ಯಾನಾಮೀಶ್ವರಃ ಎಂಬ ಶ್ರುತ್ಯರ್ಥದನುಸಾರವಾಗಿ ಅಷ್ಟಾದಶಪುರಾಣವಿದ್ಯೆಗಳುಂ ಅಷ್ಟಾದಶಉಪವಿದ್ಯೆಗಳುಂ ಚತುಷ್ಷಷ್ಟಿತಂತ್ರಗಳುಂ ಚತುಷ್ಷಷ್ಟಿ ಉಪತಂತ್ರಗಳುಂ ಇಹಪರ ತತ್ವಾರ್ಥಸರ್ವಸ್ವಮುಂ ಸಕಲಮಂತ್ರಕಾಲಕರ್ಮಧರ್ಮ ಶಿಲ್ಪಪ್ರಕಾರರಹಸ್ಯಮುಂ ಶಿವಾಗಮದಿಂದಲೆ ಉಪದಿಷ್ಟವಾಗಿ ಅನುಭವಸಿದ್ಧವಪ್ಪುದರಿಂ ಪ್ರಪಂಚವೆಲ್ಲಮುಂ ಶಿವಾಗಮಾಜ್ಞೆಯುಳ್ಳವಾಗಿ ಜೀವಕೋಟಿಯುಳ್ಳಮುಂ ಶೈವಮಕ್ಕುಂ ॥

—* ಆಗಮಪ್ರತಿಪಾದ್ಯ. *—

ಬಳಿಕ ಸಕಲಾಗಮಂಗಳಲ್ಲಿಯೂ ಕ್ರಿಯಾಪಾದ, ಚರ್ಯಾಪಾದ ಯೋಗಪಾದ, ಜ್ಞಾನಪಾದವೆಂಬ ನಾಲ್ಕು ಪಾದಂಗಳುಂ ಪತಿಕುಂಡಲಿನಿಮಾಯೆ ಪಶುಪಾಶ ಕಾಂಕ್ಷೆಯೆಂಬ ಷಟ್ಪದಾರ್ಥಂಗಳುಂ ಗುರುಮುಖದಿಂದುದಿಸಿದಮಾದಜ್ಞಾನವೆಂಬ ಪತ್ಯಾದಿ ಪದಾರ್ಥವಾದಚರ್ಯೆಯೆಂಬ ಲಿಂಗಾರ್ಚನಲಕ್ಷಣವಾದನುಷ್ಠೆಯೆಂಬ ಭಸ್ಮಧಾರಣಾತ್ಮಕವಾದಧಿಕೃತಂಬ । ಶಿವಮಂತ್ರರೂಪವಾದ ಸಾಧನವೆಂಬ ಶಿವಸಮಾನತಾಮುಕ್ತಿರೂಪವಾದ ಸಾಧ್ಯವೆಂಬಾರುಪದಾರ್ಥಂಗಳುಂ ಪ್ರತಿಪಾದ್ಯಂಗಳಕ್ಕುಂ ॥

—* ಪಾದಾದಿವಿಷಯ. *—

ಬಳಿಕಲ್ಲಿ ಮೊದಲು ಕ್ರಿಯಾಪಾದದೊಳಾತ್ಮಂಗೆ ಪಶುತ್ವಕ್ಷಯ ಶಿವತ್ವಾಭಿವ್ಯಕ್ತಿ ನಿತ್ಯಾದಿ ಕರ್ಮಾದಿಕಾರಿತ್ವಂಗಳಂ ಸಂಪಾದಿಪುದೆ ಲಕ್ಷಣವಾಗಿ ಶಿವನಕ್ರಿಯಾಶಕ್ತಿರೂಪವಾದುದೇ ದೀಕ್ಷೆಯಹುದಾ ದೀಕ್ಷಾಯುಕ್ತವಾದ ಅನಾದಿಶೈವ-ಆದಿಶೈವ ಮಹಾಶೈವ-ಅನುಶೈವ-ಅವಾಂತರಶೈವ-ಪ್ರವರಶೈವ ಅಂತರಶೈವವೆಂಬವೇ ಸಪ್ತಶೈವಂಗಳವುಗಳಲ್ಲಿ ಶಿವನೇ ಅನಾದಿಶೈವನು ಶಿವನಪಂಚವಕ್ತ್ರದಿಂದೀಕ್ಷಿತರಾದ ಕೌಶಿಕಾದಿ ಋಷೀಶ್ವರರೇ ಆದಿಶೈವರು ಆ ಋಷಿವಂಶಜರಾಗಿದೀಕ್ಷಿತರಾದ ದ್ವಿಜರೇ ಮಹಾಶೈವರು ಶಿವಸಂಸ್ಕಾರಿಗಳಾದ ಕ್ಷತ್ರಿಯರೇ ಅನುಶೈವರು ಶಿವದೀಕ್ಷಾಸಂಪನ್ನರಾದ ವೈಶ್ಯರೇ ಅವಾಂತರ ಶೈವರು ಶಿವದೀಕ್ಷಾಯುಕ್ತರಾದ ಶೂದ್ರಾಂಬಷ್ಠಕುಲಾಲಾದಿಗಳೇ ಪ್ರವರ ಶೈವರು ದೀಕ್ಷಾತ್ವದಿಂದುಳಿದಜಾತಿಗಳೇ ಅಂತರಶೈವರೆನಿಸಿಕೊಳ್ಳುವರು ॥

ಮತ್ತಮಾ ಶೈವವೇ ವಾಮದಕ್ಷಿಣಮಿಶ್ರ ಸಿದ್ಧಾಂತವೆಂದು ನಾಲ್ಕುತೆರ

ನಾಗಿರ್ಪುದವುಗಳಲ್ಲಿ ಶಕ್ತಿಪರವಾದುದೇ ವಾಮವೆನಿಸುವದು ಭೈರವಪರ ವಾದುದೇ ದಕ್ಷಿಣವೆನಿಸುವದು ಸಪ್ತಮಾತೃಕಾಪರವಾದುದೇ ಮಿಶ್ರವೆನಿಸು ವವು ಪರಶಿವಪರವಾದುದೇ ಸಿದ್ಧಾಂತಮುಕ್ಕುಂ ॥ ಬಳಿಕಾಶೈವಂಗಳಲ್ಲಿ ಮು ಖ್ಯವಾದ ಸಾಮಾನ್ಯಶೈವ, ಮಿಶ್ರಶೈವ, ಶುದ್ಧ ಶೈವ, ವೀರಶೈವವೆಂದು ಚತು ರ್ವಿಧ ಶೈವಂಗಳವುಗಳಲ್ಲಿ॥

— ಸಾಮಾನ್ಯಶೈವಲಕ್ಷಣ. —

ಆವನಾದಡೋರ್ವನು ಶ್ರೀವಿಭೂತಿಧಾರಣಮಾತ್ರದಿಂ ಶುದ್ಧಾತ್ಮನಾಗಿ ಸ್ವಯಂಭುಲಿಂಗವನಾದೊಡಂದೇವದಾನವರ್ಷಿಮಾನವಾದಿಪ್ರತಿಷ್ಠಿತಲಿಂಗ ವನಾದೊಡಂ ಕಾಣುತಲೆ ನಮಸ್ಕಾರಪ್ರದಕ್ಷಿಣಪೂಜಾದಿಕರ್ಮಯಥಾಶಕ್ತಿ ಮಾಡುತ್ತ ಶಿವಭಕ್ತಜನವಾತ್ಸಲ್ಯಶಿವಪೂಜಾರತಿ ಶಿವಾರ್ಚನ ಶಿವಾರ್ಥಮಾ ದವ್ಯಾಪಾರ ಶಿವಕಥಾಶ್ರವಣೇಚ್ಛೆ ಶಿವಧ್ಯಾನ ಶಿವಕಥಾನುಕೂಲತೆ ಪರಮ ಸಾತ್ವಿಕವೆಂಬಷ್ಟವಿಧಭಕ್ತಿಯುಕ್ತನಾಗಿರ್ಪಾತನೇಸಮಾನ್ಯಶೈವನಪ್ಪಂ॥

— ಮಿಶ್ರಶೈವಲಕ್ಷಣ. —

ಪೀಠಸ್ಥಲಶಿವಲಿಂಗಪೂಜೆಯೊಡನೆ ವಿಷ್ಣು-ಉಮೇ-ಷಣ್ಮುಖ-ವಿಘ್ನೇ ಶ್ವರ- ಸೂರ್ಯರೆಂಬವರಪಂಚಪೂಜೆಗಳಂಮಿಕ್ಕ ಬ್ರಹ್ಮೇಂದ್ರಾದಿ ದೇವತಾ ರಾಧನಗಳಂ ಆಯಾಮಂತ್ರಗಳಂ ಮಾಡುತ್ತ ಶಿವನು ಸರ್ವಾತ್ಮಕನೆಂಬ ಬು ದ್ಧಿ ಯಿಂದಲೂವಿಷ್ಣ್ವಾದಿದೇವತೆಗಳೆಲ್ಲರೂ ಶಿವಭಕ್ತರೆಂಬ ಭಾವನೆಯಿಂ ಲೂಭಕ್ತಿಯುಕ್ತನಾಗಿರ್ಪಾತನೇಮಿಶ್ರಶೈವನಪ್ಪಂ ॥

—ಶುದ್ಧಶೈವಲಕ್ಷಣ. —

ಮತ್ತಮನಾದಿಶೈವನಾದ ಸದಾಶಿವನ ಸದ್ಯೋಜಾತಾದಿಪಂಚಮುಖಗ ಳಂದೀಕ್ಷಿತರಾದ ಕೌಶಿಕ, ಕಾಶ್ಯಪ, ಭರದ್ವಾಜ, ಅತ್ರಿ, ಗೌತಮ, ಪ್ರಮು ಖರಾದ ಶೈವರ್ಷಿಗೋತ್ರ, ಸಂಭವನಾಗಿ ಮಠಾಶೈವನೆನಿಪಶಿವದ್ವಿಜನೇ ಶು ದ್ಧಶೈವನು॥

— ಶುದ್ಧಶೈವವಿಷಯ. —

ಬಳಿಕ ಶುದ್ಧಶೈವನು ವೇದಾಗಮ ಪುರಾಣೇತಿಹಾಸ ಸೂತ್ರಭಾಷ್ಯಾದಿ ಸಕಲ ಶಾಸ್ತ್ರಸಂಪನ್ನನಾಗಿಸ್ಥೂಲಸೂಕ್ಷ್ಮಕಾರಣಗಳೆಂಬ ಶಿವಲಕ್ಷಣಂಗ ಳಂ। ಶುದ್ಧಮಿಶ್ರಸಂಕೀರ್ಣವೆಂಬ ಶಿವಸ್ವರೂಪಂಗಳಂ ದಿವಾಕರ್ಷಣಾದಿ ಸಕಲದೇವತಾಕರ್ಷಣಗಳಂ ಲಿಂಗಪ್ರತಿಷ್ಠೆ ಮೊದಲಾದ ಸಮಸ್ತದೇವತಾ ಪ್ರತಿಷ್ಠೆಗಳಂಲಿಂಗಸ್ಥಾನಾದಿ ಸಕಲ ದೇವತಾ ಸ್ಥಾನಂಗಳಂ ನಿತ್ಯೋತ್ಸ

ಪವಮಾಸೋತ್ಸವ ರಥೋತ್ಸವಾದಿಕ್ರಿಯೆಗಳಂ ಪುಷ್ಪ-ಗಂಧ-ಮಧು-ಇ ಕ್ಷು-ನಾರೀಕೇಳ-ಕ್ಷೀರ ರಜನೀಚೂರ್ಣ-ಸರ್ಪಿತ್ತೈಲ-ಜಲವನವೆಂಬ ಶಿವ ನ ಏಕಾದಶ ವಿಧೋತ್ಸವಂಗಳಂ ಲೇಸಾಗಿ ವಿಚಾರಂಗೈದು-ಬಳಿಕ ಸೂರ್ಯ ನಿಂದಾರೋಗ್ಯಾದಿಗಳು ಇಂದ್ರನಿಂ ಸೌಭಾಗ್ಯಾದಿಗಳು ಅಗ್ನಿಯಿಂದೈಶ್ವ ರ್ಯಾದಿಗಳು ಯಮನಿಂಪಿತೃಯಾಗಾದಿಗಳು ವಾಯುವಿನಿಂಬಲಾದಿಗಳು ದು ರ್ಗಿಯಿಂವಿಜಯಾದಿಗಳು ಸರಸ್ವತಿಯಿಂವಾಕ್ಸಿಧ್ಯಾದಿಗಳು ಲಕ್ಷ್ಮಿಯಿಂ ಸಂಪದಾದಿಗಳು ಷಣ್ಮುಖನಿಂದಿಷ್ಟ ಸಿಧ್ಯಾದಿಗಳು ಚಂದ್ರನಿಂ ಕೀರ್ತಿಚಿ ತ್ತಶುಧ್ಯಾದಿಗಳು ಬ್ರಹ್ಮನಿಂ ಬ್ರಾಹ್ಮಣ್ಯಶಾಂತ್ಯಾದಿ ಸದ್ಗುಣಂಗಳು ವಿ ಷ್ಣುವಿನಿಂದೇವಯಾನ ಮುಮುಕ್ಷುತ್ವಾದಿಗಳು ವಿಘ್ನೇಶ್ವರನಿಂ ಕಾರ್ಯಸಿ ದ್ಧಿ ಗುರುಭಕ್ತ್ಯಾದಿಗಳು ಶ್ರೀಗುರುವಿನಿಂಶ್ರವಣಾದಿಜ್ಞಾನ ಸಾಧನಂಗ ಳು ಶ್ರೀಪಾರ್ವತಿಯಿಂಸಂಪದ್ವಿವೇಕಾದಿಗಳು ಶ್ರೀಶಿವನಿಂ ಭೋಗಜ್ಞಾನ ಮೋಕ್ಷಾದಿಗಳೆಲ್ಲ ಸಕಾಮ ನಿಷ್ಕಾಮ । ಕ್ರಿಯಾಭೇದದಿಂ ಸಿದ್ಧಿ ಸುತ್ತಿಹವೆಂಬುದಂಪರಾಮರ್ಶಂಗೈವುದು ಮತ್ತವಾ ಸಮಸ್ತಶೈವಕ್ರಿಯೆ ಗಳಿಗೆ ಶ್ರೀಮದ್ವಿಭೂತಿಧಾರಣವೇಮುಖ್ಯವಹುದಾಗಿಯದರಭೇದವೆಂತೆನೆ॥

— ವಿಭೂತಿಭೇದಂಗಳು. —

ಬಳಿಕ ವಿಭೂತಿವಿಧಾನಮಂ ಶೈವನರಿಯಬೇಕಲ್ಲಿ ಸದ್ಯೋಜಾತಾದಿಪಂ ಚ ಬ್ರಹ್ಮಪೃಥಿವ್ಯಾದಿ ಪಂಚಭೂತನಿವೃತ್ಯಾದಿಪಂಚಕಲೆಗಳು ಕ್ರಮದಿಂಕ ಪಿಲವರ್ಣದನಂತೆ-ಕೃಷ್ಣವರ್ಣದಭದ್ರೆ ರಕ್ತವರ್ಣದಸುರಭಿಶ್ವೇತವರ್ಣದ ಸುಶೀಲೆ ಚಿತ್ರವರ್ಣದ ಸುಮನೆಯೆಂಬ ಕೃಶಾಂಗಾದಿ ದೋಷವಿಲ್ಲದ ಸಲ್ಲಕ್ಷ ಣದಗೋವುಗಳುದಿಸಿದ ವವುಗಳ ನವೀನವಾದ ದುರ್ಗಂಧಾದಿ ದೋಷವಿ ಲ್ಲದೆಗೋಮಯಂಗಳಲ್ಲಿ ಪ್ರಣವಪೂರ್ವಕವಾದ ಸದ್ಯೋಜಾತಾದಿ ಪಂಚ ಬ್ರಹ್ಮಮಂತ್ರಕ್ರಮವಿಡಿದು ಗ್ರಹಣಕಬಳನಶೋಷಣ ದಹನಶೋಧನವೆಂ ಬ ಪಂಚಕ್ರಿಯೆಗಳಂಭೂತಿಭಸಿತ ಭಸ್ಮಕ್ಷಾರರಕ್ಷೆಗಳೆಂಬಪಂಚವಿಧಭೂಗ ಳ ನಾಮದಿಂಜನಿಸಿ ಐಶ್ವರ್ಯಕಾರಣತ್ವದಿಂ ಸರ್ವಾಘಭರ್ತ್ಸನಕತ್ವದಿಂಪಾಪಕ್ಷ ರಣತ್ವದಿಂ ಭೂತಾದಿಭೀತಿರಕ್ಷಣತ್ವದಿಂದಾಯಾಪೆಸರ್ಪಡೆದುಜಗದ್ಧಿತಾರ್ಥ ವಾಗಿರ್ಪವು ಬಳಿಕಾನಂದ ಮೊದಲಾದ ಪಂಚಗೋವರ್ಣಕ್ರಮಪ್ರಾಪ್ತ ಭೂತ್ಯಾದಿಗಳೆದ್ದು ನಿತ್ಯನೈಮಿತ್ತಕಕಾಮ್ಯಪ್ರಾಯಶ್ಚಿತ್ತ ಮುಕ್ತಿಗಳೆಂಬ ಪಂಚಕ್ರಿಯೆಗಳಿಗೆವರಿವಿಡಿದು ಯೋಗ್ಯವಾಗಿರ್ಪವಾಸಮಸ್ತಭಸಿತಂಗಳಾ ಮೊಡೆ ಕಲ್ಪ ಅನುಕಲ್ಪ ಉಪಕಲ್ಪ ಅಕಲ್ಪವೆಂದು ನಾಲ್ಕುತೆರನಾರ್ಪುದದ

ರಲ್ಲಿ ಪೂರ್ವೋಕ್ತಗ್ರಹಣ ಕಬಳನಾದಿ ವಿಧಿಯಿಂಮಾಡಿದುದೇ ಕಲ್ಪವೆನಿಸುವದು ವನದೊಳಗಿದ್ದ ಗೋಮಯಮಂ ಚೂರ್ಣೀಕರಿಸಿದಹಿಸಿಮಾಡಿಕೊಂಬುದೇ ಅನುಕಲ್ಪವೆನಿಸುವದು । ಮೊದಲು ದಹನಮಾಗಿರ್ದುದನೇ ವಸ್ತ್ರದಿಂಶೋಧಿಸಿ ಗೋಮೂತ್ರದಿಂಕಲಸಿ ಉಂಡೆಯಂಮಾಡಿ ಪೂರ್ವೋಕ್ತವಿಧಿಯಿಂಪಚಿಸಮಾಡಿಕೊಂಬುದೇ ಉಪಕಲ್ಪವೆನಿಸುವದು । ಮೊದಲು ದಹನಮಾಗಿರ್ಪುದಂ ಅನ್ಯರಿಂಮಾಡುವುದೇ ಅಕಲ್ಪವೆನಿಸುವದವುಗಳಲ್ಲಿ ಬ್ರಾಹ್ಮಣ-ಕ್ಷತ್ರಿಯವೈಶ್ಯರ್ಗೆ-ಅಗ್ನಿಹೋತ್ರಜಭೂತಿಯೋಗ್ಯವಾಗಿಹುದು ಗೃಹಸ್ಥಾಶ್ರಮಿಂಗಳಿಗೆ ವಿರಜಾಗ್ನಿ ಔಪಾಸನಾಗ್ನಿಗಳಿಂದುದಿಸಿದ ಭಸ್ಮಯೋಗ್ಯಮಹುದು ಬ್ರಹ್ಮಚಾರಿಗೆ ಸಮಿದಗ್ನಿಯಿಂದಾದ ಭಸಿತಯೋಗ್ಯವಾಗಿಹುದು ಶೂದ್ರರಿಗೆಶ್ರೋತ್ರಿಯಾಗಾರಪಚನಾಗ್ನಿಯಿಂದೊಗೆದ ಭೂತಿಯೋಗ್ಯವಾಗಿಹುದು. ಉಳಿದಜಾತಿಗಳಿಗೆ ದಾವಾಗ್ನಿಯಿಂದುತ್ಪನ್ನವಾದಭಸ್ಮಯೋಗ್ಯವಾಗಿಹುದು,ಯತಿಗಳಿಗೆಯುಲ್ಲಾಯುಡೆಯಭೂತಿಯುಂಯೋಗ್ಯವಾಗಿಹುದು, ಅತ್ಯಾಶ್ರಮಿಗಳಿಗೆ ಸ್ಮಶಾನಭಸ್ಮಯೋಗ್ಯವಾಗಿಹುದು, ಸಮಸ್ತರ್ಗೆಯುಂದೇವಾಲಯಸ್ಥಿತಭಸಿತಯೋಗ್ಯವಾಗಿಹುದು.

— ವಿಭೂತಿಧಾರಣ. —

ಮತ್ತಮಾ ವಿಭೂತಿಗೆ ಸ್ನಾನ ಉದ್ಧೂಳನ ಧಾರಣವೆಂಬ ಮೂರುವಿಧಂಗಳುಂಟು, ಆವನಾದಡಾ ಧರಿಸುವಾತನು ಮೊದಲು ಹಸ್ತಪಾದಪ್ರಕ್ಷಾಳನಂಗೈದು ಸುಸ್ಥಳದಲ್ಲಿಸ್ವಸ್ಥಾಸನದಿಕುಳ್ಳಿರ್ದು ಪ್ರಾಣಾಯಾಮತ್ರಯಮಂಮಾಡಿ ಮೇಲೆಭಸ್ಮಸ್ನಾನಂ ಗೈವುತ್ತಿರ್ಪೆನೆಯೆಂದು ಸಂಕಲ್ಪಿಸಿ-ಬಳಿಕಸ್ವಚ್ಛವಾದ ಚೂತಬಿಲ್ವಅಶೋಕಶಿಲೆವಸ್ತ್ರಾದಿಗಳಿಂ ರಚಿತವಾದಆಧಾರಪಾತ್ರನಲ್ಲಿ ಸುಸ್ಥಿರಮಾಗಿರ್ದ ಶ್ರೀಮದ್ವಿಭೂತಿಯಂ ಕುರಂಗಮುದ್ರೆಯಿಂ ಸದ್ಯೋಜಾತಾದಿ ಪಂಚಬ್ರಹ್ಮಮಂತ್ರಪೂರ್ವಕವಾಗಿತೆಗೆದುವಾಮಹಸ್ತದಲ್ಲಿರಿಸಿ ನಮಸ್ಕಾರಮಂತ್ರವನುಚ್ಚರಿಸಿ ಮೇಲೆ ದಕ್ಷಿಣಹಸ್ತಮಂಮುಚ್ಚಿ ಬಲದತೊಡೆಯಮೇಲಿಟ್ಟುಮೂಲಮಂತ್ರದಿಂದಾದರೂ ಅಗ್ನಿರೀತಿಯೆಂಬುದು ಮೊದಲಾದ ಮಂತ್ರಗಳಿಂದಾದರ ಅಮಂತ್ರಿಸಿ- ಬಳಿಕಮಾನಸ್ತೋಕೇತ್ಯಾದಿಮಂತ್ರದಿಂಪೆತ್ತಿ ಶಿರಸ್ಸುಮುಖ ಹೃದಯ ಗುಹ್ಯಪಾದ ಸರ್ವಾಂಗವೆಂಬಾರು ಸ್ಥಾನದಲ್ಲಿಯೇ ಆಯಾಯಮಂತ್ರೋಚ್ಚಾರಣದಲ್ಲಿ ಕ್ರಮದಿಂ ಈಶಾನಾದಿ ಪಂಚಬ್ರಹ್ಮ । ಪ್ರಣವಮಂತ್ರದಿಂ ಸೃಷ್ಟಿಸ್ಥಿತಿಸಂಹಾರಕ್ರಮವರಿದು ಸಂಪ್ರೋಕ್ಷಣಂ ಗೈವುದೇಸ್ನಾನವಕ್ಕು,

ಮತ್ತಮಾಶಿರಸ್ಸು ಮೊದಲಾದಾರುಸ್ಥಳಂಗಳಲ್ಲಿ ಆಯಾ ಮಂತ್ರೋಚ್ಚಾರಣ ಕ್ರಮದಿಂದ್ಧೈದುವೇಳೆ ನಾಲ್ಕುವೇಳೆ ಒಂದುವೇಳೆ ಅನುಲೇಪನಂಗೈವುದೇಉದ್ಧೂಳನಮಕ್ಕುಂ। ಬಳಿಕಿಲ್ಲ ಬ್ರಾಹ್ಮಣರ್ಗೆ ಚತುರಾಶ್ರಮಿಗಳಿಗೆ ಸರ್ವಾಂಗೋದ್ಧೂಳನಸಲ್ಲುವದು॥ ವೈಶ್ಯರಿಗೆ ಲಲಾಟಮಾತ್ರೋದ್ಧೂಳನಸಲ್ಲುವದು। ಶೂದ್ರರ್ಗೆ ಧಾರಣಮಾತ್ರವೇ ಅಕ್ಕುಂ॥ ಬಳಿಕ ಸುಶೀತ್ರಳ ಮಾದಮಂತ್ರೋದಕಮಿಶ್ರಿತ ವಿಭೂತಿಯಿಂ ಮೂಲಮಂತ್ರತ್ರಿಯಾಯುಷಮಂತ್ರತ್ರಿಯಂಬಕಮಂತ್ರಗಳನುಚ್ಚರಿಸುತ್ತಂ ಶಿವಮೂರ್ತಿ ಧ್ಯಾನಯುಕ್ತಮಾಗಿ ತ್ರಿಪುಂಡ್ರಧಾರಣಂಗಳಲ್ಲಿ ಬೇಕಾದಸ್ಥಾನಂಗಳಾದೊಡೆಮುರ್ಧಲಲಾಟ ಕರ್ಣದ್ವಯಮಾಣನಮುಖ ಬಾಹುದ್ವಯಭುಜದ್ವಯಮಣಿಬಂಧದ್ವಯಸ್ಥನದ್ವಯ ವಕ್ಷಸ್ಸು ಉದರಪಾರ್ಶ್ವದ್ವಯ ನಾಭಿಮೇಢ್ರಪಾಯುಪೃಷ್ಠಂ ಊರುದ್ವಯ ಜಾನುದ್ವಯ ಜಂಘೆದ್ವಯ ಪಾದದ್ವಯಮೆಂಬವೇ ಮೂವತ್ತೆರಡುಸ್ಥಾನಂಗಳು॥ ಬಳಿಕಶಿರಸ್ಸುಫಾಲಕರ್ಣಯುಗ್ಮ ಓಷ್ಠದ್ವಯ ಕಂಠ ಬಾಹುಯುಗ ಭುಜಯುಗಳಮಣಿಬಂಧದ್ವಯಹೃದಯ ಪೃಷ್ಠನಾಭಿಯೆಂಬವೇ ಹದಿನಾರುಸ್ಥಾನಂಗಳು॥ ಬಳಿಕ ಮಸ್ತಕಅಳಿಕಗ್ರೀವಬಾಹುದ್ವಯ ಹೃದಯ ನಾಭಿಪೃಷ್ಠವೆಂಬ ಎಂಟುಸ್ಥಾನಂಗಳಿನಿಸಿರ್ಪವನ್ನುಗಳಲ್ಲಿ ಶಿರಸ್ಸು ಲಲಾಟಶ್ರೋತ್ರದ್ವಯ ಕಂಠಭುಜದ್ವಯವಕ್ಷಸ್ಸುಪೃಷ್ಠನಾಭಿವಲಯಸ್ಕಂಧದ್ವಯವೆಂಬ ಏಕಾದಶಸ್ಥಾನಂಗಳೇ ಮುಖ್ಯಮಾಗಿರ್ಪವುಗಳಲ್ಲಿಸಿತಪದ್ಮಾಸನರಾದ ಶುದ್ಧಸ್ಫಟಿಕಸನ್ನಿಭರಾದೆ ಕಪರ್ದಚಂದ್ರಕಲೆಪ್ರಸನ್ನವದನ ನೀಲಗ್ರೀವಚರ್ಮಾಂಬರಮೊದಲಾದಸರ್ವಾಭರಣಗಳುಳ್ಳ ಮೃಗಟಂಕವರಾಭಯಪಾಣಿಗಳಾದಸರ್ವಲಕ್ಷಣಸಂಪನ್ನರಾದ ಪರಮಾತ್ಮಶಿವಮಹೇಶ್ವರರುದ್ರಶ್ರೀಕಂಠ ಈಶ್ವರಮಹಾದೇವ ಪಶುಪತಿಶಂಕರ ಶಿವವೃಷಧ್ವಜರೆಂಬರುದ್ರನಾಶಿರಸ್ಸು ಮೊದಲಾದೇಕಾದಶಸ್ಥಾನಕ್ರಮದಿಂ ಸ್ಮರಿಸುದವುಯೆಂದು ಧರಿಸುವದೆಧಾರಣಮಕ್ಕುಂ

— ವಿಭೂತಿಧಾರಣಕ್ರಮ. —

ಬಳಿಕ ಲಲಾಟದಲ್ಲಿ ತ್ರಿಪುಂಡ್ರಧರಣಮಂ ದಕ್ಷಿಣಕರ ಮಧ್ಯಮಾನಾಮಿಕಾಂಗುಷ್ಠವೆಂಬಂಗುಳತ್ರಯದಿಂದನುಲೋಮ ವಿಲೋಮದಿಂದಾದರೂ ಅಲ್ಲದೆಅಕಾರವೇಅಂಗುಷ್ಟ। ಉಕಾರವೇಮಧ್ಯಮೆ। ಮಕಾರವೇ ತರ್ಜನಿಯೆಂಬ ಭಾವನೆಯಿಂದಾದರೂ। ಮಧ್ಯಮಾದ್ಯಂಗುಳಕ್ರಮದಿಂದಾದರೂ ಅಗ್ನಿತ್ರಯ। ಅಕ್ಷರತ್ರಯ, ಗುಣತ್ರಯ, ಲೋಕತ್ರಯ, ಆತ್ಮತ್ರಯ,

ವೇದತ್ರಯ, ಕಾಲತ್ರಯ, ದೇಹತ್ರಯ, ಜೀವತ್ರಯ, ಲಿಂಗತ್ರಯ, ಮೂರ್ತಿತ್ರಯ, ಸತ್ವತ್ರಯ, ಅಂಶತ್ರಯ, ರುದ್ರೇಶ್ವರಸದಾಶಿವದೇವತಾತ್ರಯಾತ್ಮಕವೆಂಬನು ಸಂಧಾನಪೂರ್ವಕವಾಗಿ, ತ್ರಿರೇಖೆಗಳಂ। ಷಡಂಗುಳಪ್ರಮಾಣವಾಗಿ। ನೇತ್ರಯುಗ್ಮ ಭ್ರೂಮಧ್ಯದಿಂ ಲಲಾಟಾಂತರಮಾದನೂ। ಕಠಿನ, ಮಲಿನ, ವಕ್ರ, ಛಿನ್ನ, ದೂರ, ಬೆರಿಕೆಯೆಂಬಾರು ದೋಷವಿಲ್ಲದೆ, ನಯ, ಶುಭ್ರ, ನ್ಯಾರ, ಸಾಂದ್ರ, ಸಮೀಪ, ಭಿನ್ನವೆಂಬಾರು ಲಕ್ಷಣಯುಕ್ತವಾಗಿಧರಿಸುವದರಲ್ಲಿ ಬ್ರಾಹ್ಮಣರಿಗಾರಂಗುಳಪ್ರಮಾಣಕ್ಷತ್ರಿಯರ್ಗೆನಾಲ್ಕಂಗುಳಪ್ರಮಾಣ, ವೈಶ್ಯರ್ಗೆಯೆರಡಂಗುಳಪ್ರಮಾಣ, ಶೂದ್ರರ್ಗೊಂದಂಗುಳಪ್ರಮಾಣದಿಂ ತ್ರಿಪುಂಡ್ರಧರಿಪುದೇ ಧಾರಣವಾಕ್ಯಂ॥ ಬಳಿಕಿಲ್ಲಿಗ್ರಹಸ್ಥರೂ। ಸ್ತ್ರೀಯರುಗಳೂ। ತ್ರಿಸಂಧ್ಯೆಗಳಲ್ಲಿಯೂ, ಜಲಮಿಶ್ರವಾದವಿಭೂತಿಯನೇ ಧರಿಸಬೇಕು. ಯತಿಗಳೆಲ್ಲಾಕಾಲದಲ್ಲಿಯೂ ಜಲಮಿಶ್ರವಿಲ್ಲದೆಯಿರುವ ವಿಭೂತಿಯಂ ಧರಿಸಬೇಕು. ವಾನಪ್ರಸ್ಥರೂ, ಕನ್ಯೆಯರೂ, ದೀಕ್ಷಾಹೀನಮನುಷ್ಯರೂ ಮಧ್ಯಾಹ್ನಪರಿಯಂತರಂ ಜಲಮಿಶ್ರವಾಗಿ, ಮೇಲೆ ಕೇವಲವಾಗಿ ವಿಭೂತಿಯಂ ಧರಿಸಲ್ವೇಳ್ಕುಂ॥ ಸ್ನಾನ, ಉದ್ಧೂಳನ, ಧಾರಣ, ಕ್ರಮದಿಂದುದ್ಯುಕ್ತವಾಗಿ ಶ್ರೀಮದ್ವಿಭೂತಿಯಂಧರಿಸುವದೇ ಶಿವವ್ರತವೆಂದು ಪಾಶುಪತವ್ರತವೆಂದುಪೆಸರ್ವಡದು ದೋಷರೋಗಾದಿ ಭೀತಿಯಂಬಿಡಿಸಿ ಭೋಗಮೋಕ್ಷಪ್ರದವೆಂದು ವೇದಾಗಮಪುರಾಣಂಗಳಲ್ಲಿ ಪ್ರಸಿದ್ಧವಹುದಾಗಿಯುಂ ಸಮಸ್ತಮನುಮುನಿ ದೇವತೆಗಳೆಲ್ಲರುಂ ಮಾಹೇಶಿಷ್ಟವೆಂದುಧರಿಸುವರಾಗಿಯುಂ ರಕ್ಷಣಾರ್ಥಮಂಗಳಾರ್ಥ ಪವಿತ್ರಾರ್ಥಶಿವಾರ್ಥಮಾಗಿಯುಂ ಬ್ರಾಹ್ಮಣಾದಿವರ್ಣಂಗಳುಂ ಬ್ರಹ್ಮಚರ್ಯಾದ್ಯಾಶ್ರಮಿಗಳುಂ ಸಾಂಖ್ಯಾದಿಮತಾಭಿಮಾನಿಗಳು ಸರ್ವದಾಶ್ರೀಮದ್ವಿಭೂತಿಯನೇಭಕ್ತಿಯಿಂಧರಿಸಲ್ತಕ್ಕದ್ದು॥

— ರುದ್ರಾಕ್ಷಧಾರಣಕ್ರಮ. —

ಬಳಿಕಿಂತು ಭಸ್ಮಧಾರಣಾನಂತರದಲ್ಲಿ ರುದ್ರಾಕ್ಷಧಾರಣವೇ ಕರ್ತವ್ಯಮಪ್ಪುದಾಗಿ ತದ್ವಿಧಾನಮಂ ಶೈವನರಿಯಬೇಕೆಂತೆಂದೊಡೆ-ತ್ರಿಪುರದಹನಲೀಲಾಸಮಯದೊಳೀಶ್ವರನ ಚಂದ್ರಸೂರ್ಯಾಗ್ನಿಲೋಚನತ್ರಯದ ಜಲಬಿಂದುಗಳಲ್ಲಿ ಕ್ರಮದಿಂಶುಭ್ರವರ್ಣದಷೋಡಶವಿಧಮಾದ॥ ರಕ್ತವರ್ಣದದ್ವಾದಶವಿಧವಾದ ಕೃಷ್ಣವರ್ಣದದಶಪ್ರಕಾರವಾದ- ರುದ್ರಾಕ್ಷಗಳು ತಮ್ಮನಾಮೋಚ್ಚಾರಣ। ದರ್ಶನ, ಸ್ಪರ್ಶನ, ಧಾರಣಮಾತ್ರದಿಂದುತ್ತರೋತ್ತರಮಾ

ದಧಿಕಪುಣ್ಯಂಗಳನೀವುದರಿಂ। ಲೋಕೋಪಕಾರವಾಗಿಜನಿಸಿದವಾ ರುದ್ರಾಕ್ಷಂಗಳಲ್ಲಿ। ಸರಂಗೈವುದಕ್ಕೆ ಮಣಿಗಳಲುನ್ನತಸ್ಥಾನಂಗಳೇ ಪೃಷ್ಟಂಗಳಹವು। ಮುಖದಗಣನೆಯರಿವುದಕ್ಕೆ ರೇಖೆಗಳೇಮುಖಂಗಳಪ್ಪವಂದಾಮಣಿಗಳಮೂಲವೇಬ್ರಹ್ಮನು। ನಾಣವೇವಿಷ್ಣು ಮುಖವೇರುದ್ರನು। ಕೇಸರಂಗಳೆಸಕಲದೇವತೆಗಳಿಂದವುಗಳ ಸಲ್ಲಕ್ಷಣಂಗಳಂಪರೀಕ್ಷಿಸಿ ಮೇಲೆಪ್ರಕ್ಷಾಳನಾದಿವಿಧಿಗಳಂಸರಂಗೊಳಿಸಿ। ಸ್ನಾನಾದಿಗಳಿಂತಾ ಸುಶುಚಿಯಾಗಿ ಕುಳ್ಳಿರ್ದು। ಮರಳಿಸಮಸ್ತಪಾಪಕ್ಷಯದ್ವಾರಕ। ಶಿವಪ್ರಸಾದಜ್ಞಾನಸಿದ್ಧ್ಯರ್ಥವಾಗಿ ಧರಿಸುತ್ತಲಿರ್ಧೇನೆಯೆಂದು ಸಂಕಲ್ಪಿಸಿ, ಬಳಿಕಶಿಖೆಗೆಯೇಕಮುಖದಮಣಿಯೊಂದು। ಶಿರಸ್ಸಿಗೆರಡು, ಮೂರು, ಹತ್ತು, ಮುಖದಮಣಿಗಳಲ್ಲಿ ಮೂರುಮೂರು ಮೂರ್ಧಕ್ಕೆಹನ್ನೊಂದುಮುಖದಮಣಿಗಳೊಂದೊಂದು ಕಂಠಕ್ಕೆಂಟುಮುಖದಮಣಿ ಮೂವತ್ತೆರಡು। ಉದರಕ್ಕೆ ನಾಲ್ಕುಮುಖದ ಮಣಿಗಳೈವತ್ತು। ಬಾಹುದ್ವಯಕ್ಕೆ ಹದಿನಾರುಮುಖದ ಮಣಿಹದಿನಾರು ಮಸ್ತಬಂಧಯುಗಳಕ್ಕೊಂಭತ್ತುಮುಖದ ಮಣಿಹನ್ನೆರಡು। ಯಜ್ಞೋಪವೀತಕ್ಕೆ ಹದಿನಾಲ್ಕುಮುಖದಮಣಿ ನೂರೆಂಟು। ಉದರಬಂಧಕ್ಕೆ ಯಾವ ಮುಖದಮಣಿಯಾದರೂ ಐವತ್ತುನಾಲ್ಕು। ಅಂತೂ (೩೭೮)ರುದ್ರಾಕ್ಷಗಳಂ ಆಯಾಮಂತ್ರಪೂರ್ವಕವಾಗಿ ಧರಿಸುವದು॥ಬಳಿಕ ಈಕ್ರಮದಮಣಿದೊರಿಯದಿರ್ದೊಡೆ ನಿಂತಮುಖದಮಣಿಗಳನಾದರೂ। ಅಥವಾಪರಶಿವಪಂಚಮುಖರೂಪವಾದ ಐದುಮುಖದಮಣಿಗಳನಾದರೂ ಆಯಾಸ್ಥಾನಗಣನೆತಪ್ಪದೆಧರಿಸಬೇಕೆಂದನುಶಾಸನವಕ್ಕುಂ॥

## — ರುದ್ರಾಕ್ಷದೇವತಾ ಫಲ. —

ಬಳಿಕಿಲ್ಲಿ ಏಕಮುಖಮಣಿಗೆ ಪರಶಿವನೇದೇವತೆ। ಬ್ರಹ್ಮಹತ್ಯಾದಿಪಾತಕಗಳಂಕೆಡಿಸಿಸರ್ವಸಿದ್ಧಿಗಳನೀವುದೇಫಲ। ದ್ವಿಮುಖದಮಣಿಗೆ। ಈಶ್ವರೇಶಾನರೇದೇವತೆಗಳು। ಗೋವಧೆಯಪಾಪಪರಿಹಾರವೇಫಲ। ತ್ರಿಮುಖದಮಣಿಗೆ ಅಗ್ನಿದೇವತೆ। ಸ್ತ್ರೀಹತ್ಯಾಪರಿಹಾರವೇಫಲ। ಚತುರ್ಮುಖದಮಣಿಗೆ ಬ್ರಹ್ಮನೇದೇವತೆನರವಧೆಯಪರಿಹಾರವೇಫಲ। ಪಂಚಮುಖದಮಣಿಗೆ ಸದಾಶಿವನೇದೇವತೆ। ಅಭಕ್ಷ್ಯಭಕ್ಷಣದೋಷಪರಿಹಾರವೇಫಲ। ಷಣ್ಮುಖದಮಣಿಗೆ ಕುಮಾರನೇದೇವತೆ। ಆತತಾಯಿತ್ವದೋಷಪರಿಹಾರವೇಫಲ। ಸಪ್ತಮುಖದಮಣಿಗೆ ಅನಂತದೇವತೆ। ಗೋವಧಸ್ವರ್ಣಸ್ತೇಯಾದಿಪಾಪಪರಿಹಾರಫಲ

ಅಷ್ಟಮುಖದಮಣಿಗೆವಿಘ್ನೇಶ್ವರನೇದೇವತೆ। ಸರ್ವದೋಷಪರಿಹಾರ।ಸರ್ವವಿಘ್ನನಿವಾರಣ। ಪರಮಪದಪ್ರಾಪ್ತಿಯೇಫಲ-ನವಮುಖದಮಣಿಗೆ ಭೈರವನುದೇವತೆ। ಸಕಲಕಲ್ಮಷಗಳಂಕಳದು ಭುಕ್ತಿಮುಕ್ತಿಗಳನೀವುದೇಫಲ। ದಶಮುಖದಮಣಿಗೆಮಾಧವನುದೇವತೆ। ಭೂತಭೇತಾಳಮಾರೀಗಣ ಬ್ರಹ್ಮರಾಕ್ಷಸಪನ್ನಗಾದಿ ಭೀತಿಯಂತೊಲಗಿಪುದೇಫಲ। ಏಕಾದಶಮುಖಮಣಿಗೆಏಕಾದಶರುದ್ರರೇದೇವತೆಗಳು।ಅಶ್ವಮೇಧಾದಿಕ್ರತುಪುಣ್ಯಪ್ರಾಪ್ತಿಯೇಫಲ ದ್ವಾದಶಮುಖದಮಣಿಗೆದ್ವಾದಶಾದಿತ್ಯರೇದೇವತೆಗಳು। ಅಗ್ನಿಚೋರವ್ಯಾಘ್ರಖಡ್ಗಾದಿಬಾಧೆಗಳಂ ಪರಿಹರಿಸಿವ್ಯವಹಾರಸಿದ್ಧಿಸುವರ್ಣಾಕರ್ಷಣಾದಿಗಳನೀವುದೇಫಲ।ತ್ರಯೋದಶಮುಖದಮಣಿಗೆಮಹೇಶ್ವರನೇದೇವತೆ।ಮಾತಾಪಿತೃವಧದೋಷಗಳಂನಿವಾರಿಸಿರಸರಸಾಯನವಶ್ಯಾದಿಗಳಫಲಿಸುವಂತೆ। ಮಾಳ್ಪುದೇಫಲ। ಚತುರ್ದಶಮುಖದಮಣಿಗೆ ಚತುರ್ದಶಮನುಗಳೇ ದೇವತೆಗಳು। ಸಕಲಸನ್ಮಾನಸಕಲದೇವತಾ ಪೂಜಾಪುಣ್ಯಲಾಭಾದಿಕವೇಫಲ.

—* ರುದ್ರಾಕ್ಷಧಾರಣಬೀಜಮಂತ್ರ. *—

ಬಳಿಕ ಏಕಮುಖದಮಣಿಯಾದಿಚತುರ್ದಶಮುಖದಮಣಿಪರ್ಯಂತಮಾದ ಹದಿನಾಲ್ಕುಮಣಿಗಳುಂ, ಓಂ। ಹ್ರಾಂ। ಲಾಂ। ಬಂ। ಹ್ರೀಂ। ಹ್ರೂಂ ಹ್ರಾಂ। ಶ್ರೀಂ। ಹ್ರೀಂ। ಮಂ। ವಂ। ಕ್ಷೌಂ। ಕ್ಷ್ರಾಂ। ಊಂ। ಯೆಂಬಕ್ರಮದಿಂ ಆಯಾಮಂತ್ರಪೂರ್ವಕಮಾಗಿಧರಿಸುವದು। ಮತ್ತಮಾಬ್ರಾಹ್ಮಣರುಮುಂತಾದಸಕಲವರ್ಣದವರುಂ। ಆಹ್ನಿಕಜಪಾದಿಕಾಲಗಳಲ್ಲಿಯುಂ।ಶುಚಿರ್ಭೂತರಾಗಿಧರಿಸಲಕ್ಕುಂ

—* ಮಂತ್ರವಿಷಯ. *—

ಬಳಿಕಿಂತು ಭಸ್ಮರುದ್ರಾಕ್ಷಧಾರಣಸಿಷ್ಟನಾದ। ಶುದ್ಧಶೈವನು। ಪಂಚಾಕ್ಷರ್ಯಾದಿಸಪ್ತಕೋಟಿಮಹಾಮಂತ್ರಸಿದ್ಧಿಯಂ ಪಡೆಯನಲು। ತತ್ತನ್ಮಂತ್ರಜಪಮೊಳು। ತತನ್ಮಂತ್ರದೇವತಾಜಪ್ತೃಗಳಿಗೆ। ಋಣಋಣೀಭಾವಮರಿತು। ಧನಾಧಿಕಮಾಗಿರ್ಪುದಂಜಪಿಸಿ। ಋಣಾಧಿಕಮಾಗಿರ್ಪುದಕೆ। ಸಂಪ್ರೋಕ್ಷಣಾದಿಗಳಂಸಿದ್ಧಿಮುಖಗೊಳಿಸಬೇಕಾಗಿಸಿದ್ಧಾರಿಚಕ್ರವಿಧಾನಮೆಂತೆನೆ:

—* ಸಿದ್ಧಾರಿಚಕ್ರವಿಷಯ. *—

ಬಳಿಕ ದಂಡವ ಚತುರ್ಭುಜವನಚತುರಶ್ರದಿಂ ಷೋಡಶಕೋಷ್ಠಮಾದ ಚಕ್ರಮಂಬರದದರೊಳಗೆ। ಸಿದ್ಧ, ಸಾಧ್ಯ, ಸುಸಿದ್ಧ, ಅರಿಗಳೆಂದು ಈಶಾನ್ಯಾದಿ ಸಮಚತುರಶ್ರಚತುಷ್ಕೋಷ್ಠಗಳಾನಾಲ್ಕು ಅಂತಶ್ಚಕ್ರಗಳಂವಿ

ಭಾವಿಸಿ। ಅಕಾರಾದಿಷೋಡಶಸ್ವರಗಳಂ । ಕಕಾರಾದಿದ್ವಾತ್ರಿಂಶದ್ವರ್ಣಗಳಂ ಕ್ರಮದಿಂದುಕ್ತವಚತುಶ್ಚಕ್ರಗಳೊಳುಸಿದ್ಧಪರ್ಯಾಪ್ತಿ। ಸುಸಿದ್ಧಪರ್ಯಾಪ್ತಿ। ಅರಿಪರ್ಯಾಪ್ತಿಗಳೆಂಬ ಕ್ರಮಾವರ್ತನಗಳಂಬರೆದು॥ ಬಳಿಕ-ಕಾದಿನವಟಾದಿನವ ಪಾದಿಪಂಚ- ಯದ್ಯಷ್ಟಾಷ್ಟ್ಪರಾಯಥಾಸಂಖ್ಯಂ ಅಪಶಿಷ್ಟಾಸ್ಸಬಿಂದುಕಾವರ್ಗಸಂಖ್ಯೋಪೇತಾಯೆಂಬದಾಗಿ। ಅಯಾಸ್ವರವರ್ಣಗಳಸಂಖ್ಯೆಗಳಂಬರದು। ಜಪ್ತೃನಾಮಾದಿವರ್ಣ । ಜಪ್ತೃನಾಮನಕ್ಷತ್ರಗಳ ಸಂಖ್ಯೆಗಳಂಕೂಡಿ ಮಂತ್ರಾದಿವರ್ಣಗಳ ಸಂಖ್ಯಾಸಮಷ್ಟಿಯಂಗುಣಿಸಿವರ್ಗಿಸಿ। ಅದರಂ-ಮಂತ್ರವರ್ಣಸಂಖ್ಯಾವಿಲೋಮಮಾಲಾಮೂಲದಿಂಭಾಗಿಸಿ। ಲಬ್ಧವಂಘನಗೊಳಿಸಿ। ಶೇಷವರ್ಗಮೂಲಮಂಕೂಡಲು। ಧನಮಹುದು। ಬಳಿಕಅದೇ ಮಂತ್ರಾದಿವರ್ಗಗಳಸಂಖ್ಯಾಸಮಷ್ಟಿಯಿಂಜಪ್ತೃನಾಮನಕ್ಷತ್ರಸಂಖ್ಯಾಸಮಷ್ಟಿಯಂಗುಣಿಸಿ ಅದೇಕ್ರಮದಿಂ ಗುಣಭಾಗಾದಿಗಳಂಮಾಡಲದುಋಣಮಕ್ಕುಂ॥ ಆಋಣಧನಸಂಖ್ಯೆಗಳೊಳು । ಧನಸಂಖ್ಯೆಅಧಿಕಮಾಗಿರಜಪಿಸಲದುಕ್ಷಿಪ್ರಸಿದ್ಧಿಕರಮಕ್ಕುಂ। ಋಣಮಧಿಕಮಾಗಿರೆಋಣವಿಮೋಚನಾದಿ ಸಂಸ್ಕಾರಗಳಂದಾಮಂತ್ರಮಂ ಶುದ್ಧಿಗೊಳಿಸಿನ್ಯಾಸಧ್ಯಾನಾನುಸಂಧಾನ ಮುದ್ರಾರಕ್ಷಾವ್ರತಗಳಂವೀರ್ಯವಮತ್ತಾಗಿಮಾಡಿ-ಬಳಿಕ ಸಪ್ರೋಪಾಯಗಳಂದಭಿಮುಖಗೊಳಿಸಲಕ್ಕುಂ॥ ಮತ್ತಮಾ ಮಂತ್ರಪ್ರಸಿದ್ಧಮಾಗೆಅರ್ಧಜಪದಿಂಸಿದ್ಧಿ। ಸಿದ್ಧಸಾಧ್ಯಮಾಗೆಪಾದಜಪದಿಂಸಿದ್ಧಿ। ಸಿದ್ಧಸುಸಿದ್ಧಿಯಾಗೆಋಣಪರಿಹರ। ಸಿದ್ಧಾರಿಯಾಗೆಫಲಿಸಿಪ್ರಯೋಜನವಿಲ್ಲ। ಸಾಧ್ಯಸಿದ್ಧಿಯಾಗೆದ್ವಿಗುಣಜಪಸಾಧ್ಯಸಾಧ್ಯಮಾಗೆಪೂರ್ಣಜಪ। ಸಾಧ್ಯಸುಸಿದ್ಧಮಾಗೆಫಲಿಸಿದರೂಭಂಗ । ಸಾಧ್ಯಾರಿಯಾಗೆಫಲಿಸಿವಿರೋಧ । ಸುಸಿದ್ಧಸಿದ್ಧಮಾಗೆಕ್ಷಿಪ್ರಸಿದ್ಧಿ।ಸುಸಿದ್ಧಸಾಧ್ಯಮಾಗೆಪ್ರಯತ್ನಸಾಧ್ಯಮಹುದು । ಸುಸಿದ್ಧಾರಿಯಾಗೆ ಕಷ್ಟಸಾಧ್ಯಮಹುದು। ಅರಿಸಿದ್ಧಮಾಗೆ ಅಸಮರ್ಪಕಫಲ । ಅರಿಸಾಧ್ಯಮಾಗೆಇಂದ್ರಿಯಗಳಂಜಯಿಸಿಸಾಧಿಸಬೇಕು। ಅರಿಸುಸಿದ್ಧಮಾಗೆ। ವಿರೋಧಮಾಗಿ। ಬಳಿಕ ಅನುಕೂಲಿಸುವದು । ಈ ಮೇರೆತತ್ತನ್ಮನುನಕ್ಷತ್ರವರ್ಣಸಮಾಕ್ಷರಮಂ ತ್ರಾದ್ಯಕ್ಷರಕ್ರಮದಿಂ। ಷೋಡಶವಿಧಾನುಲೋಮವಿಲೋಮಸಿದ್ಧಾರಿಚಕ್ರದಿಂ। ಸಪಿಂಡಾಕ್ಷರಮಂತ್ರಗಳಗೂ। ಪ್ರಣವಾದಿಮಂತ್ರಗಳಗೂ।ಸಿದ್ಧಾರಿನೋಡಲಾವಶ್ಯಕವಿಲ್ಲವೆಂಬುದಾದಿ ಯಾಗಿಪರಿಶೋಧಿಸಿತಿಳಿಯಲಕ್ಕುಂ॥

—* ಮಂತ್ರಾದಿಸಾಧನಗಳು. *—

ಬಳಿಕ ಮಂತ್ರಸಿದ್ಧಿಸೂಚಕಮಾದ ।ಮಾತೃಕಾಚಕ್ರ। ಸರ್ವತೋಭದ್ರ

ಕೂರ್ಮಚಕ್ರ! ದಿಗ್ಬಂಧನ!ರಕ್ಷಾಯಂತ್ರಾದಿಗಳಕ್ರಮವರಿತು। ಮತ್ತಮಾ ಸಲರುಂತ್ರಾತ್ಮಕವಾದಲಿಂಗೋದ್ಧಾರವಂ! ಮಂತ್ರಜನನಸ್ಥಾನಮಾದಮ ಹಾ। ಚಕ್ರೋದ್ಧಾರವಂ! ಮಂತ್ರಾರ್ಚನಾಧಿಕರಣವಾದ ಯಂತ್ರೋದ್ಧಾ ರವುಂ! ಮಂತ್ರಾನುಸಂಧಾನಾಶ್ರಯಮಾದಘಟಚಕ್ರಾದಿಗಳಂ! ಮೇಲೆಷ ಡಾಮ್ನಾಯಮೂಲಗುರುಪರಂಪರೆ! ಸಂಪ್ರದಾಯರಹಸ್ಯ! ಋಷಿ-ದೇವ ತೆಛ-ಂದಸ್ಸು-ಹೃದಯಾದಿನ್ಯಾಸ-ಬೀಜ-ಶಕ್ತಿ- ಕೀಲಕ-ಅಕ್ಷರ-ದೇವತೆ-ಅ ಧಿದೇವತೆ-ರೂಪಆಕೃತಿ-ಧ್ಯಾನ-ಸ್ವಭಾವ-ಮೈತ್ರಿ- ಸಮಯ-ಗರ್ಭ-ಪ್ರ ಸವ ನಿಸ್ಸ್ನಿ ಋತು ಜನ್ಮ ಸ್ಥಿತಿ ಅವಸ್ಥೆ ಸ್ವರ ಪ್ರಕೃತಿ ವಿಕೃತಿ ಪ್ರಿಯ- ಮಂತ್ರಪಲ್ಲವ ಮಂತ್ರಪ್ರಯೋಗ ಮಂತ್ರೋಪಸಂಹಾರ ಮಂತ್ರಸಂಸ್ಕಾ ರ ಮಂತ್ರದೀಕ್ಷೆ-ಮಂತ್ರರಕ್ಷೆ-ಕವಚ ಪಂಚಪಾದ ಪಂಚಕೃತ್ಯ ಪಂಜರ ಮಾಲಿಕೆ ಮೂಲಿಕೆ ತಂತ್ರಬಲಿ-ಆತ್ಮೈಕ್ಯಗಳೆಂಬ ಪಂಚಚತ್ವಾರಿಂಶನ್ಮಂ ತ್ರಸಾಧನಂಗಳೊಳುಪ್ರಜ್ಞೆಗೊಂಡು॥ ಬಳಿಕ ಶುದ್ಧಪ್ರಸಾದಮೂಲಪ್ರಸಾ ದಆದಿಪ್ರಸಾದಆತ್ಮಪ್ರಸಾದವೆಂಬಸೃಷ್ಟಿರೂಪಪಂಚಮಂತ್ರಂಗಳ।ಪೋ ಷಅಭಿವೃದ್ಧಿ ಶಾಂತಿ-ಪೌಷ್ಟಿಕಗಳೆಂಬ।ಸದಾಶಿವಸ್ವರೂಪಪಂಚಮಂತ್ರಂಗ ಳಂಸೃಷ್ಟಿಸ್ಥಿತಿಲಯವೆಂಬ॥ ಮಹೇಶ್ವರರೂಪತ್ರಿವಿಧಸಂಹಾರಮಂತ್ರಂಗ ಳಂಸಾಕಲ್ಯಪ್ರಣವ, ಶಾಂಭವಪ್ರಣವ, ಸಾಂಖ್ಯಪ್ರಣವ ಸಾಮಸ್ಯಪ್ರಣವ ಸಾಯುಜ್ಯಪ್ರಣವವೆಂಬ ಪಂಚಪ್ರಣವಮಂತ್ರಂಗಳಂ ಮೂಲಪಂಚಾಕ್ಷ ರೀ ಸೂಕ್ಷ್ಮಪಂಚಾಕ್ಷರೀಮಾಯಾಪಂಚಾಕ್ಷರೀಪ್ರಸಾದಪಂಚಾಕ್ಷರೀಯೆಂ ಬ ಪಂಚಪಂಚಾಕ್ಷರಿಗಳ। ಶಿವಾಸ್ತ್ರಕ್ಷುರಿಕಾಸ್ತ್ರ ಪಾಶುಪತಾಸ್ತ್ರ, ಅ ಘೋರಾಸ್ತ್ರವೆಂಬ ಪಂಚಾಸ್ತ್ರಮಹಾಮಂತ್ರಂಗಳು।ಬ್ರಹ್ಮಾಸ್ತ್ರ, ನಾಗಾಸ್ತ್ರ ಗಾರುಡಾಸ್ತ್ರ ಅನಲಾಸ್ತ್ರ ವಾರುಣಾಸ್ತ್ರಗಳೆಂಬ ಪಂಚಕೋ ಪಾಸ್ತ್ರಮಂತ್ರಂಗಳಂ! ವಿದ್ಯಾಸಂಜೀವನಮೃತಸಂಜೀವನಗಳೆಂಬ ಸಂಜೀ ವನತ್ರಯಮಂತ್ರಗಳಂ। ಜೃಂಭಕಪ್ರಸ್ವಾಪನ ಅಪ್ರತಿಹತವಿಶ್ಲೇಷೀಕರ ಣ। ಜೀವಗ್ರಾಹಗಳೆಂಬಪಂಚಶಕ್ತಿಮಂತ್ರಗಳ।ಕಾಮರೂಪ ಘೋರದರ್ಶ ನಸಂಮೋಹನವಿಶ್ವರೂಪಗುಲ್ಮಸೃಷ್ಟಿಗಳೆಂಬಪಂಚಮಾಯಾಮಂತ್ರಗಳಂ ರುದ್ರ ಶೂಲರುದ್ರ ಶಕ್ತಿರುದ್ರ ಚಕ್ರರುದ್ರ ವಜ್ರರುದ್ರ ಪಾಶರುದ್ರ ದಂಡ ರುದ್ರ ಪಿನಾಕನಾರಾಯಣ ಬಾಣರುದ್ರಗದೇ। ರುದ್ರಖಡ್ಗರುದ್ರಾತ್ಮಕಗ ಳೆಂಬ। ಏಕಾದಶ ರೌದ್ರಾಸ್ತ್ರಮಂತ್ರಂಗಳ। ಸದ್ಯೋಜಾತ ವಾಮದೇವ ಅಘೋರತತ್ಪುರುಷ ಈಶಾನ್ಯವೆಂಬ ಪಂಚಬ್ರಹ್ಮಮಂತ್ರಗಳಂ ಗಾಯ

ತ್ರಿಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ ವಿಘ್ನೇಶ್ವ ರ ವಿಶಾಖ ವಿದ್ಯೇಶ್ವರ ಬ್ರಹ್ಮ ವಿಷ್ಣು ಸೂರ್ಯ ಭೈರವ ಪಾರ್ವತಿ ಕಾಮದೇನ ಕಲ್ಪ ವೃಕ್ಷ ಮಾಯಾ ಸಾವಿತ್ರೀ ಸರಸ್ವತೀ ಅಮೃತೇಶ್ವರೀ ಸಪ್ತಮಾತೃಕಾ ದುರ್ಗಾ ಕಾಳಿ-ಬಗಳಾ-ಬಲಾ-ಲಲಿತಾ-ಶೂಲಿನ್ಯಾದಿ ಮಹಾಮಂತ್ರಂಗಳಂ ಪ್ರತ್ಯಂ ಗಿರಾದಿ ಕೃತ್ಯಾ ಮಂತ್ರಂಗಳಂ ಶಿವ-ಅಗ್ನಿ-ಲಕ್ಷ್ಮೀ- ಇಂದ್ರಾದಿ ಧನಮಂತ್ರಂ ಗಳಂ ಶ್ರೀ ವಾಕ್ ಅನ್ನಪೂರ್ಣಾದಿ ಸಿದ್ಧಿಮಂತ್ರಂಗಳಂ ತ್ರಿಪುರಾದಿ ಶಕ್ತಿಮಂ ತ್ರಂಗಳಂ ಯೋಗಿನೀ ಯಕ್ಷಿಣ್ಯಾದಿ ಉಪಶಕ್ತಿಮಂತ್ರಂಗಳಂ ಶಾಬರತಂತ್ರ ಶಾಕಿನೀತಂತ್ರ, ಡಾಕಿನೀತಂತ್ರ, ಕೂಚಿಮಾರತಂತ್ರ, ಶಲ್ಯತಂತ್ರ ಪಾಲಿ ಕಾತಂತ್ರ ಬಧ್ನಿಕಾತಂತ್ರ ದಹನತಂತ್ರ ದರ್ಶನತಂತ್ರ ಖನನತಂತ್ರ ಬಂಧ ನತಂತ್ರಾದಿ ತಾಂತ್ರಿಕಸಿದ್ಧಿ ಮಂತ್ರಂಗಳಂ ದ್ರಾವಿಡ ವೈಕೃತ ಪ್ರಾಕೃತ ಶವ ಥಾದಿ ಕ್ಷುದ್ರಮಂತ್ರಂಗಳಂ ಬೇರೆಬೇರೆ ಉಪದೇಶ ಅನುಷ್ಠಾನ ಪರೀಕ್ಷೆಗ ಳಂ ವಿವೇಕಿಸಿ ತಿಳಿದಿರಲಕ್ಕುಂ॥

—* ಮಂತ್ರಪಲ್ಲವನ್ಯಾಸಾದಿ. *—

ಮತ್ತಮಾ ಮಂತ್ರಗಳ ಹೃದಯ ಶಿರಸ್ಸು ಶಿಖೆ ಕವಚ ನೇತ್ರ ಅಸ್ತ್ರ॥ ವೆಂಬ ಷಡಂಗಕ್ರಮದಿಂ ನಮಃ ಸ್ವಾಹಾ ವಷಟ್ ಹುಂ ವೌಷಟ್ ಫಟ್ ಯೆಂಬ ಸ್ತಂಭನ ತುಷ್ಟಿ ವಶ್ಯ ವಿದ್ವೇಷ ಆಕರ್ಷಣ ಉಚ್ಚಾಟನ ಪಲ್ಲವ ಪ್ರಯೋಗಂ ಗಳಂ ಶುಭ್ರ ರಕ್ತ ಪೀತ ಸ್ಫಟಿಕ ಶ್ಯಾಮ ಕೃಷ್ಣವೆಂಬ ಹೃದಯಾದ್ಯಂಗವರ್ಣಂ ಗಳಂ ಪಂಚಾಂಗ ಮಂತ್ರಗಳಿಗೆ ನೇತ್ರಪಲ್ಲವ ಬಿಡಬೇಕೆಂಬುವದೆ ಅಂಗಹೀನ ಮಂತ್ರಂಗಳಿಗಂಗಗಳಂ ಕಲ್ಪಿಸಿ ಕೊಳ್ಳಬಹುದೆಂಬುದಂ ನಿಶ್ಚೈಸಿ ಮತ್ತಮಾ ಮಂತ್ರಪಟ್ಪಲ್ಲವಂಗಳಲ್ಲಿ ಕೋಪೋಪಶಾಂತಿ ಪೂಜಾದಿಗಳಿಗೆ ಹೃದಯಪಲ್ಲವ ಮುಂ ಪೋಷಣ ವಶ್ಯಾದಿಗಳಿಗೆ ಶಿರಃಪಲ್ಲವಮುಂ ಲಾಭಾಲಾಭಾದಿಗಳಿಗೆ ಶಿಖಾಪ ಲ್ಲವಮುಂ ಭೇದನ ಮಾರಣ ವಿರೋಧಾದಿಗಳಿಗೆ ಕವಚಪಲ್ಲವಮುಂ ಮೋಹ ನ ಉದ್ದೀಪನ ಸಮುಷ್ಟಿ ವಿಜಯ ಶ್ರೇಯಸ್ಸಂಪಾದನಗಳಿಗೆ ನೇತ್ರಪಲ್ಲ ವಮುಂ ವಿಘ್ನಗ್ರಹೋಚ್ಚಾಟನಾದಿಗಳಿಗೆ ಅಸ್ತ್ರಪಲ್ಲವಮುಂ ಮಂತ್ರಾಂತ್ಯ ದಲ್ಲಿ ಪ್ರಯೋಗಿಸಿ ಕವಚ ಪಂಜರ ಶಸ್ತ್ರಮಾಲಾ ಶಾಪವಿಮೋಚನಾದಿಗ ಳಂ ವಿಧಿಸಲಕ್ಕುಂ॥

—* ಮಂತ್ರಸಂಸ್ಕಾರಗಳು. —*

ಬಳಿಕ ಮಾತೃಕಾ ಶಾರದಾತಿಲಕ ಮಂತ್ರದೇವತಾಪ್ರಕಾಶಿಕೆ ಮಂತ್ರಕ ಲ್ಪಾರ್ಣವ ಪ್ರಪಂಚಸಾರ ಮಂತ್ರಕೌಸ್ತುಭ ಮಂತ್ರಾರ್ಣವ ಮಂತ್ರಚಂ

ದ್ರಿಕೆಮಂತ್ರರತ್ನಮಹೋದಧ್ಯಾದಿ ಮಂತ್ರಶಾಸ್ತ್ರೋಕ್ತಮಾತೃಕಾಚಕ್ರಗತವಾದ ಮಾತೃಕೆಗಳಿಂತೆಗದು ಮಂತ್ರವನುದ್ಧರಿಸುವಜನನವೆಂಬ ಮತ್ತಮಾಮಂತ್ರರಾಭರಣಂಗಳು ಪ್ರಣವಾಂತ್ರರಸಹಿತಂಮಾಡಿ ಜಪಿಸುವಜೀವನವೆಂಬ ಮೂರಳಮಂತ್ರವರ್ಣಂಗಳಬರದು ಬೇರೆಬೇರೆವರ್ಣಂಗಳಂ ಚಂದನೋದಕದಿಂವಾಯುವಿನಿಂಪ್ರೋಡೆವತಾಡನವೆಂಬ ಬಳಿಕಾ ಮಂತ್ರಾಕ್ಷರಂಗಳಗಣನೆಯುನರಿತು ಕರವೀರದಳದಿಂ ವಾಯುವಿಸಿಂಬಿಡುವ ಬೋಧನವೆಂಬಮತ್ತಮಾ ಮಂತ್ರಾಕ್ಷರ ಸಂಖ್ಯೆಯುನರಿತು ಅಶ್ವತ್ಥಫಲವಂಗಳಿಂಮಂತ್ರಾಕ್ಷರಂಗಳಿಗೆಮಂತ್ರರೋದಕವೇ ರವಭಿಷೇಕವೆಂಬ ಬಳಿಕಾಮಂತ್ರವಂ ಮನದಲಿಸ್ಮರಿಸಿತಾರಂವ್ಯೋಮಾಗ್ನಿಮಾನಯುತ್ ದಂಡಿಜ್ಯೋತಿರ್ಮನುರ್ಮತಃಯೆಂಬ ಗ್ರಂಥಾರ್ಥವಾದ ಜ್ಯೋತಿರ್ಮಂತ್ರರದಿಂ ಶಿವಮಂತ್ರವಲ್ಲದುಳಿದ ಮಂತ್ರಗಳಮಲತ್ರಯುವಾದಹಿಂಸಾಮಲಿನೀಕರಣವೆಂಬಮತ್ತಮಾಜ್ಯೋತಿರ್ಮಂತ್ರದಿಂಮೂತ್ರಿತಮಾಡಿಕುಶೋದಕದಿಂ ಮಂತ್ರಾಕ್ಷರಂಗಳಂಪ್ರತ್ಯೇಕಸಂಪ್ರೋಕ್ಷಣಂಗೈವಲಪ್ಯಾಯನವೆಂಬ ಮೂರಳಮಂತ್ರಕ್ಕೆ ಮಂತ್ರರೋದಕದಿಂ ತರ್ಪಣಂಕೊಡುವತರ್ಪಣವೆಂಬ ಮತ್ತು ತಾರಮಾಯಾರಮಾಯೋಗೋಮನೋಂದೀಪನಮುಚ್ಯತೆಯೆಂಬ ಗ್ರಂಥಾರ್ಥವಾದ ದಿಪನವೆಂಬಮೋಲಿಜಪಿಸುವ ಯೋಗ್ಯವಾದ ಪ್ರಸಿದ್ಧಮಂತ್ರವಂ ಪ್ರಕಟಂಗೈಯುದಿರ್ಪಗುಪ್ತಿಯೆಂಬೀ ಮಂತ್ರರದಶಸಂಸ್ಕಾರಂಗಳಂ ವಿಚಾರಿಸಿ॥

— ಪ್ರಣವವಿಚಾರ. —

ಬಳಿಕಾ ಸಕಲಮಂತ್ರಗಳೊಳಗೆ ಮುಖ್ಯವಾದಪ್ರಣವವು। ಪರಪ್ರಣವವೆಂದು। ಅಪರಪ್ರಣವವೆಂದು। ದ್ವಿವಿಧವಾಗಿರ್ಪುದದರಲ್ಲಿ। ಪರಪ್ರಣವವು ವಾಚ್ಯವಾದ ಸತ್ಯಜ್ಞಾನಾದಿಲಕ್ಷಣವುಳ್ಳ ಪರಬ್ರಹ್ಮವೆನಿಸುವದು।ಬಳಿಕ ಅಪರಪ್ರಣವವು। ವಾಚಕವಾದಶಬ್ದರೂಪವಾಗಿ। ಬ್ರಹ್ಮ-ವಿಷ್ಣು-ರುದ್ರ ಈಶ್ವರ-ಸದಾಶಿವ-ರಧಿದೇವತೆಗಳಾದ ರಕ್ತ-ಶುಕ್ಲ-ಕೃಷ್ಣ-ಜ್ಯೋತಿ-ಸ್ಫಟಿಕವೆಂಬ-ಪಂಚವರ್ಣಕ್ರಮವುಳ್ಳ ಅಕಾರ ಉಕಾರ ಮಕಾರಬಿಂದುನಾದವೆಂಬ ಪಂಚಾಕ್ಷರಾತ್ಮಕದಿಂ ಕಾರಕ ದಂಡಕ ಕುಂಡಲಾಕಾರ ಅರ್ಧಚಂದ್ರಾಕಾರ ದರ್ಪಣಾಕಾರ ಜ್ಯೋತಿರಾಕಾರವೆಂಬಾರುರೂಪದಿಂ ಓಂಕಾರವೆಂದು ಬ್ರಂಹವೆಂದು ಜ್ಞಾನವೆಂದು ಶಿವಾತ್ಮಕವೆಂದುಸರ್ವಾತ್ಮಕವೆಂದು ಸರ್ವವಿದ್ಯಾಬೀಜವೆಂದು ತೇಜೋಬೀಜವೆಂದು ಮುಕ್ತಿಬೀಜವೆಂದು ನಿಷ್ಕಲವೆಂದು ನಾದವೆಂದು ನಾದಾದಿಯೆಂದು ಹೃನ್ನಾದವೆಂದು ವೇದಾದಿಯೆಂದು ವೇದ

ಭೂಮಿಯೆಂದು ಮಂತ್ರಪ್ರಾಣವೆಂದು ಬ್ರಹ್ಮಮೂರ್ತಿಯೆಂದು ಅಕ್ಷರವೆಂದು ಮುಖ್ಯಸ್ವರವೆಂದು ವೇದಾದ್ಯಂತವೆಂದು ನಾದಮಂತ್ರವೆಂದುಆತ್ಮಮಂತ್ರವೆಂದು ಮೊದಲಾದ ಪರ್ಯಾಯನಾಮಂಗಳುಳ್ಳದ್ದಹುದು॥

—ಮಂತ್ರಾನುಷ್ಠಾನ.—

ಬಳಿಕಾ ಮಂತ್ರಸಿದ್ಧ್ಯರ್ಥವಾಗಿ ಜಪಪ್ರಾರಂಭದಲ್ಲಿ ಸ್ನಾನಾದಿ ವಿಧಿಯುಕ್ತನಾಗಿ ಬ್ರಹ್ಮಾರಣ್ಯ ದೇವತಾಗಿರಿನದೀತೀರಾದಿ ಸುಸ್ಥಳದಲ್ಲಿರ್ದ ಬ್ರಹ್ಮವೃಕ್ಷವನಾಶ್ರಯಿಸಿ ಪ್ರಾಙ್ಮುಖೋದಙ್ಮುಖನಾಗಿ ಸ್ವಸ್ಥಾನದಲ್ಲಿಕುಳ್ಳಿರ್ದು ಪ್ರಾಣಾಯಾಮಂತ್ರಯಮಂ ಮಾಡಿ-ಬಳಿಕಾ ಮಂತ್ರಕ್ಕೆ ಬ್ರಂಹನೇಋಷಿ ದೇವಿಗಾಯತ್ರೀ ಛಂದಸ್ಸು ಪರಶಿವನಧಿದೇವತೆ ಅಂಬೀಜಂ ಉಂಶಕ್ತಿ ಮಂಕೀಲಕ ಮೋಕ್ಷಾರ್ಥವಾದ ಜಪದಲ್ಲಿ ವಿನಿಯೋಗವೆಂದು ಮೊದಲುಸ್ಮರಿಸಿ॥

— ಮಂತ್ರನ್ಯಾಸಗಳು. —

ಮೇಲಾಮಂತ್ರದಿಂ ಕರನ್ಯಾಸಂಗೈವಲ್ಲಿ ಕರದ್ವಯದಂಗುಷ್ಠಾದಿಕನಿಷ್ಠಾಂತವಾದಂಗುಳಿಗಳ ಆದಿಮಧ್ಯಾಂತರಪರ್ವಗಳಲ್ಲಿ ಬೇರೆಬಿಂದುಯುಕ್ತವಾದ ಅಕಾರ ಉಕಾರ ಮಕಾರಂಗಳಂ ನ್ಯಾಸಂಮಾಡಿ.ಬಳಿಕಾಬಿಂದುಯುಕ್ತಪ್ರಣವನಾಸರ್ವಾಂಗುಳಿಗಳಲ್ಲಿಯೂನ್ಯಾಸಂಗೈದು ಮೇಲಾಪ್ರಣವದಿಂದಲೆಕರತಳಕರಪೃಷ್ಟಗಳಂಸಂಮಾರ್ಜನಮಾಡಿ ಇಂತುಕರನ್ಯಾಸಂಗೈದನಂತರದಲ್ಲಿ ನಾಭಿಹೃದಯಮೂರ್ಧಂಗಳಲ್ಲಿಕ್ರಮದಿಸೊನ್ನೆವೆರಸಿದ ಅಕಾರಉಕಾರಮಕಾರಂಗಳಂ ನ್ಯಾಸಂಮಾಡಿ ಮೇಲಾಮೂರ್ಧಾದಿಪಾದಾಂತವಾಗಿ ಬಿಂದುಸಹಿತ ಪ್ರಣವನ್ಯಾಸಂಗೈದು ಇಂತುದೇಹನ್ಯಾಸಂ ಮಾಡಿ ಓಂಭೂಃಪ್ರಜ್ಞಾನಾತ್ಮನೇ ಹೃದಯಾಯನಮಃಯೆಂದು ದಕ್ಷಿಣಕರದ ದಕ್ಷಿಣಹಸ್ತದ ಚತುರಂಗುಳಿಗಳಂಹೃದಯಸ್ಪರ್ಶನದಿಂದ ಹೃದಯಸ್ಥಿತಮಂತ್ರದೇವತೆಯಂ ನಮಸ್ಕರಿಸಿ-ಬಳಿಕ ಓಂಭುವೋವಾಯ್ವಾತ್ಮನೇ ಶಿರಸೇಸ್ವಾಹಾಯೆಂದು ದಕ್ಷಿಣಕರಾಂಗುಳಿಚತುಷ್ಟಯದಿಂದಲೇಶಿರಸ್ಸಿನಲ್ಲಿರ್ದ ಮಂತ್ರದೇವತಾಸ್ಪರ್ಶನದಿಂದಲ್ಲಿ ಪರಮಚಂದ್ರಾಮೃತಮಂ ನಿಜಮೂಲಾಗ್ನಿಯಲ್ಲಿಬೆಳಗಿ-ಬಳಿಕ ಓಂಸುವಃಸೂರ್ಯಾತ್ಮನೇ ಶಿಖಾಯೈ ವಷಟ್‌ಯೆಂದು ಶಿಖೆಯಲ್ಲಿರ್ದ ಊರ್ಧ್ವಜ್ವಲನ ಸ್ವಭಾವಪರಶಿವಚೈತನ್ಯಮಂಊರ್ಧ್ವಾಂಗುಷ್ಟಮುಷ್ಟಿಯಿಂವಧಿಕರಸಿ-ಬಳಿಕ ಓಂಮಹಃಬ್ರಹ್ಮಾತ್ಮನೇ ಕವಚಾಯಹುಂಯೆಂದು ಅಧೋಮುಖಚೈತನ್ಯಮಂ ತನ್ನ ಶಿರದ ಪ್ರತಿರೋಮಕೂಪಂಗಳಲ್ಲಿ ವಿಜೃಂಭಿಸುವಂತೆ ಕರದ್ವಯದತರ್ಜನಿಗಳಿಂದ

ವಜ್ರಕವಚದಿಂ ನಿರೋಧಿಸಿ ಬಳಿಕ ಓಂ ಜನಃ ಜ್ಞಾನಾತ್ಮನೇ ನೇತ್ರತ್ರಯಾಯ ವೌಷಟ್ ಎಂದು ದಕ್ಷಿಣಕರದ ಮಧ್ಯಾಂಗುಳಿತ್ರಯದಿಂ ನೇತ್ರಸ್ಪರ್ಶನದಿಂದಾ ಪರಶಿವನ ಚೈತನ್ಯಮುಂ ಸರ್ವತ್ರ ಸ್ಫುರಿಸುವಂತೆ ಅಭಿವ್ಯಕ್ತಂ ಮಾಡಿ-ಬಳಿಕ ಓಂ ತಪಸ್ಸತ್ಯಂ ಸತ್ವಾತ್ಮನೇ ಅಸ್ತ್ರಾಯ ಫಟ್ ಎಂದು ಬಾಹುಮೂಲಂಗಳಲ್ಲಿ ಅಂಗುಷ್ಟ ತರ್ಜನಿಗಳಿಂ ಧ್ವನಿಯಪ್ಪಂತೆ ಅಸ್ತ್ರಂಗೈದು ಬಳಿಕ ಪೂರ್ವಾದಿ ದಶದಿಕ್ಕುಗಳಲ್ಲಿ ರಕ್ಷಣಾರ್ಥವಾಗಿ ಪರಶಿವಚೈತನ್ಯ ಸ್ವರೂಪವಾದ ಅಸ್ತ್ರಮಂ ಇಂದ್ರಾದಿಲೋಕಪಾಲಕಹಸ್ತಂಗಳಲ್ಲಿರಿಸಿ-ಬಳಿಕ ಓಂ ಭೂರ್ಭುವಸ್ಸುವಃ ಅಸ್ತ್ರಾಯ ಫಟ್ ಎಂದು ಆ ದಿಕ್ಪಾಲಕರ್ಗನ್ಯೋನ್ಯಸಂಬಂಧಮಾಳ್ಪುದೀ ಷಡಂಗಪಲ್ಲವಾರ್ಥಕ್ರಮವೆಲ್ಲಾ ಮಂತ್ರಂಗಳಗೆಯುಂ ಸಮಾನವಹುದಿದೇ ಬ್ರಹ್ಮಕವಚವೆನಿಸಿಕೊಂಬುದೀ ಬ್ರಹ್ಮಕವಚಮಂ ಧರಿಸಿದಾತನೇ ಬ್ರಹ್ಮಾಸ್ತ್ರ ಕಾಲದಂಡ ವಜ್ರಾಯುಧಾದಿಗಳಿಂದ ಭೇದ್ಯನಾಗಿ ಸುರನರಾದಿಗಳಿಂ ಪೂಜ್ಯನಪ್ಪಂ ॥ ಬಳಿಕೀಕ್ರಮದಿಂ ಕರನ್ಯಾಸ ದೇಹನ್ಯಾಸ ಅಂಗನ್ಯಾಸಂಗೈದನಂತರದಲ್ಲಿ ಜಗವೆಲ್ಲಮಂ ತಪ್ತಯು॥ ಪಿಂಡವಂತೆ ಪ್ರಣವಜ್ಯೋತಿರ್ವ್ಯಾಪಕವೆಂಬನು । ಸಂಧಾನದಿಂದಾದರೂ ಅಲ್ಲದೆ ತನ್ನ ಮೂಲಾಧಾರಾದ್ಯಖಿಲಚಕ್ರಭೇದಿನಿಯಾದ ಸುಷುಮ್ನಾನಾಡೀಮಧ್ಯಗತ ವಿದ್ಯುಲ್ಲೇಖಾತ್ಮಕಬಿಂದುಚಿಂತನೆಯಿಂದಾದರೂ ಮತ್ತೆ ಹೃತ್ಕಮಲಕರ್ಣಿಕಾ ಗತವಿದ್ಯುಲ್ಲೇಖ್ಯಾತ್ಮಕಬಿಂದು ಚಿಂತನೆಯಿಂದಾದರೂ ಮತ್ತೆ ಹೃತ್ಕಮಲ ಕರ್ಣಿಕಾಗತ ಸೋಮಸೂರ್ಯಾಗ್ನಿ ಮಂಡಲತ್ರಯದ ಮಧ್ಯದಲ್ಲಿ ಮಹೇಶ್ವರಧ್ಯಾನಯುಕ್ತವಾಗಾದರೂ ಹತ್ತುಲಕ್ಷಜಪದಿಂ ಪುರಸ್ಚರಣಮಾಡಿದ ಮೇಲೆ ಪ್ರಣವಮಂತ್ರಸಿದ್ಧಿಸಿ ಬಳಿಕ ಪಾಪಕ್ಷಯಮುಂ ಷಟ್ಕರ್ಮಸಿದ್ಧಿಯುಂ ಅಷ್ಟಮಹದೈಶ್ವರ್ಯಂಗಳುಂ ಸರ್ವವಿದ್ಯೆಗಳುಂ ಯಥೇಷ್ಟಫಲಂಗಳನೀವುದೆ ನಿಕ್ಕವೆಂದರಿದು ॥

— ಅಜಪಮಂತ್ರಯೋಗ. —

ಅನಂತರದೊಳ್ ಮಂತ್ರಗಳೊಳಗೆ ಆತ್ಮಪ್ರಸಾದವೆಂಬುದೇ ಸರ್ವಾತ್ಮರ ಹೃದಯದಲ್ಲಿ ರೇಚಕಪೂರಕವೆಂಬ ಪ್ರಾಣಾಪಾನರೂಪ ರವಿಶಶಿಗಳೊಡಗೂಡಿ ಸಂಚರಿಸಿ ಹಂಸಸ್ಸೋಹಂ ಯೆಂದಿತ್ತರನಾಗಿ ಹಂಸಜಪಮಂತ್ರವೆಂದು ಅಜಪಾಗಾಯತ್ರಿಯೆಂದು ಪೆಸರ್ಪಡೆದಿರ್ಪುದದನಾದೊಡೆ ಪ್ರಾಣಾಯಾಮತ್ರಯಪೂರ್ವಕವಾಗಿ ಮೂಲಮಂತ್ರಕ್ಕೆ ಹಂಸಋಷಿ ಅವ್ಯಕ್ತಗಾಯತ್ರೀ ಛಂದಸ್ಸು ಪರಮಹಂಸನೇ ದೇವತೆ ಹಂ ಬೀಜಂ ಸಃ ಶಕ್ತಿಃ

ಸೋಽಹಂಕಿಲಕಂಪರಮಹಂಸಪ್ರಸಾದಸಿದ್ಧ್ಯರ್ಥವಾದ ಜಪದಲ್ಲಿವಿನಿಯೋಗವೆಂದು ಸ್ಮರಿಸಿ-ಬಳಿಕ ಹಂಸಾಂಸೂರ್ಯಾತ್ಮನೇ ಅಂಗುಷ್ಠಾಭ್ಯಾಂನಮಃ ಹಂಸೀಂಸೋಽಮಾತ್ಮನೇ ತರ್ಜನೀಭ್ಯಾಂನಮಃ ಹಂಸೋಂ ನಿರಂಜನಾತ್ಮನೇ ಮಧ್ಯಮಾಭ್ಯಾಂನಮಃ, ಹಂಸ್ಯೈಂನಿರಾಭಾಸಾಯಪರಮಾತ್ಮನೇ ಅನಾಮಿಕಾಭ್ಯಾಂನಮಃ, ಹಂಸೌಂಅವ್ಯಕ್ತಾತ್ಮನೇಕನಿಷ್ಠಿಕಾಭ್ಯಾಂನಮಃ ಹಂಸಃಅತಿಸೂಕ್ಷ್ಮಾತ್ಮನೇಕರತಲಕರಪೃಷ್ಠಾಭ್ಯಾಂನಮಃ। ಯೆಂದುಕರನ್ಯಾಸವಂಮಾಡಿ ಮೇಲಕ್ಕ್ರಮದಿಂದಲೇ ಹೃದಯಾದಿಕರಾಂತವಾದಷಡಂಗಗಳಲ್ಲಿ ಆಯಾಪಲ್ಲವಂಕೂಡಿ ಅಂಗನ್ಯಾಸಗೈದು-ಬಳಿಕ ಹೃತ್ಕಮಲಕರ್ಣಿಕಾಮಧ್ಯದಲ್ಲಿ ಶ್ವೇತವರ್ಣದಿಂ ಪರಶುಮೃಗವರಾಭಯಂಗಳುಳ್ಳಕರಚತುಷ್ಟಯದಿಂದೆಸದು ಸರ್ವಲಕ್ಷಣಸಂಪನ್ನನಾದುಮಾಪತಿಯಧ್ಯಾನಯುಕ್ತವಾಗಿ ಶ್ರೀಗುರೂಪದೇಶದಿಂದ ಉದಯಸಮಯದಲ್ಲಿ ಜಪಂಗೈವುದಾಮಂತ್ರಜಪವೇ ಸೂರ್ಯೋದಯಾದಿ ಸೂರ್ಯೋದಯಾಂತವಾದ ದಿನವೊಂದಕ್ಕೆ ಇಪ್ಪತ್ತೊಂದುಸಾವಿರದಾರುನೂರಾದವು? ಳೊಳಗೆ ಆಧಾರಾದಿ ಬ್ರಹ್ಮರಂಧ್ರಾಂತವಾದ ಸಪ್ತಚಕ್ರಕಮಲಂಗಳಲ್ಲಿ ಕ್ರಮವಿಡಿದಿರ್ದ ಶ್ರೀಗಣಪತಿಗಾರುನೂರು ಬ್ರಹ್ಮನಿಗಾರುಸಾವಿರ ವಿಷ್ಣುವಿಗಾರುಸಾವಿರ್ಮಹೇಶ್ವರಂಗಾರುಸಾವಿರ ಜೀವಾತ್ಮಂಗೆಸಾವಿರ ಪರಮಾತ್ಮಂಗೆಸಾವಿರ ಶ್ರೀಗುರುವಿಂಗೆಸಾವಿರ ಅಜಪಾಗಾಯತ್ರೀಮಂತ್ರವು ನಿವೇದಯಾಮಿಯೆಂದು ಸಂಕಲ್ಪಿಸೇವದು। ಇಂತುಜಪಂಗೈದತಂಗೆ ಸಕಲಪಾಪಗಳಂಕೆಡಿಸಿ ಆಯುರಾರೋಗ್ಯಾದಿಭೋಗಮೋಕ್ಷಗಳನೀವುದೆಂದು ನಿರ್ಧರಿಸಿ॥

## — ಶಿವಪಂಚಾಕ್ಷರಿ. —

ಮತ್ತಮಾಮಂತ್ರಗಳಲ್ಲಿ ಮೂಲಪಂಚಾಕ್ಷರವೆಂಬುದೊಂದೇ ಮುಖ್ಯವಾಗಿವಿದ್ದೈವೆಂದು ಶಿವವೆಂದುಶೈವವೆಂದು ಶಿವಹೃದಯವೆಂದು ಸೂತ್ರವೆಂದುಪರ್ಯಾಯನಾಮಂಗಳುಳ್ಳದ್ದಾಗಿ ವೇದಾಗಮಪುರಾಣಗಳೊಳ್ಪ್ರಸಿದ್ಧಮೆನಿಸಿ ಸೂಕ್ಷ್ಮಮಂತ್ರವಾದರೂವಟಬೀಜದಂತೆ ಮಹಾರ್ಥಮುಳ್ಳದ್ದಾಗಿ ಸಕಲಶಿವಭಕ್ತರ್ಗೆ ತಾನೇಜಪಿಸಲು ಯೋಗ್ಯಮೆನಿಸಿ ಪ್ರಣವಪೂರ್ವಕವಾದ ಭೂತಾದಿಪಂಚವರ್ಗಾತ್ಮಕಮಪ್ಪನಕಾರಾದಿ ಯಕಾರಾಂತವಾದ ಆರಕ್ಷರಂಗಳುಳ್ಳದ್ದಾಗಿ ನಿಷ್ಪ್ರಯಾಸದಿಂ ಭುಕ್ತಿಮುಕ್ತಿಪ್ರದವಾಗಿಹಷಡಕ್ಷರವಂ ಪಂಚಾಕ್ಷರವಂಮೊದಲು ಶ್ರೀಗುರುಮುಖದಿಂದರ್ಥಸಮೇತವಾಗಿತಿಳಿದು ಯಥಾಶಕ್ತಿಗುರುದಕ್ಷಿಣೆಂಕೊಟ್ಟು ಶ್ರೀಗುರುವಿನಾಜ್ಞೆಯಿಂದಮಂತ್ರಸಿದ್ಧ್ಯರ್ಥವಾಗಿ

ಮುಂದೆಪೇಳ್ವ ಶುಭಮಾಸಾದಿ ವಿಧಿಗಳನಾರೈದು-ಬಳಿಕ ಜಲಸ್ನಾನಭಸ್ಮ ಸ್ನಾನಾದಿಗಳಂ ಮಾಡಿ ತನ್ನ ದೇಹದಬಲವನರಿತು ಶಾಕಮೂಲ ಫಲಕ್ಷೀರ ಮೊದಲಾಗಿ ಮಿತಾಹಾರಿಯಾಗಿ ಬಳಿಕಕ್ಷರಕೊಂದೊಂದು ಲಕ್ಷಜಪಮಾಗೆ ಪ್ರತಿಲಕ್ಷಮುಂ ದಿನವೊಂದಕ್ಕೆ ಹನ್ನೆರಡುಸಾವಿರ ಜಪಂಗೈವಾತನಾಗಿ ಹಾಲು ತುಪ್ಪದಿಂದಾದರೂ ಪಾಲಾತ ಕುಸುಮದಿಂದಾದರೂ ಸಾವಿರಹೋಮವನು ಒಂದು ಲಕ್ಷತರ್ಪಣಮಂ ಪುರಾಣೋಕ್ತದಿಂ ಮಾಡುವದು ಅಲ್ಲವೇ ತಂತ್ರಕಲ್ಪೋಕ್ತಮಾ ಇಪ್ಪತ್ನಾಲ್ಕುಲಕ್ಷ ಜಪಮನಾದರೂ ಪೂರ್ವೋಕ್ತ ಸಂಖ್ಯಾಕ್ರಮದಿಂ ಹೋಮತರ್ಪಣಂಗಳಂ ಮಾಡುವದು। ಇಂತು ಪುರಶ್ಚರಣಂಗೈದು ಮೇಲೆ ದಿನವೊಂದಕ್ಕೆ ನೂರೆಂಟನಾದರೂ ಇನ್ನೂರೈವತ್ತನಾದರೂ ಐನೂರನಾದರೂ ಹನ್ನೆರಡ.ಸಾವಿರವನಾದರೂ ಸಂಖ್ಯಾನಿಯಮಪೂರ್ವಕವಾಗಿ ನಿತ್ಯಜಪಂಗೈಯಲ್ತಕ್ಕದಾ ಸಂಖ್ಯಾಹೀನಜಪಮಂ ರಾಕ್ಷಸರಪರಿಹರಿಸುವರೆಂದು ವಿವೇಕಿಸಲಕ್ಕುಂ ॥

## —* ತರ್ಪಣಾದಿಸಂಖ್ಯೆ. *—

ಬಳಿಕಾವಮಂತ್ರಮಂಜಪಿಸಿದರೂ! ಪ್ರತಿದಿನದಲ್ಲೂ ನಿಲ್ಲಿಸಿ। ವೃತ್ತಾನಸ್ಯಾಸದಿಂದ್ವಿಮೇಕಮಾಳ್ಪಕಡೆಗೆ। ಜಪಸಂಖ್ಯೆ। ಪುಂದೇವತಾಮಂತ್ರಗಳಿಗೆ॥ ೨।೪॥ ೮। ೧೬। ೩೨। ೬೪। ೧೨೮। ೨೫೬। ೫೧೨। ೧೦೨೪। ೨೦೪೮। ೪೦೯೬ ೮೧೯೨। ೧೬೩೮೪। ಈಮೇರೆನಿಂತಿರಬೇಕೆಂತಲೂ॥ಸ್ತ್ರೀಮಂತ್ರಗಳಿಗೆ।೧ ೩। ೯। ೨೭। ೮೧। ೨೪೩। ೭೨೯। ೨೧೮೭। ೬೫೬೧ ! ೧೯೬೮೩। ಈಮೇರೆ ನಿಂತಿರಬೇಕೆಂತಲೂ।ನಪುಂಸಕಮಂತ್ರಗಳಿಗೆ।೨। ೬। ೧೨। ೩೬। ೭೨।೨೧೬ ೪೩೨। ಈಮೇರೆನಿಂತಿರಬೇಕೆಂತಲೂ। ನಿಷ್ಕಾಮದಿಂಮಾಳ್ಪ। ಪ್ರಣವ।ಹಂಸ। ಪಂಚಾಕ್ಷರಾದಿಮಂತ್ರಗಳಿಗೆ। ಇಂತೀಸಂಖ್ಯಾನಿಯಮನಿರ್ಬಂಧವಿಲ್ಲದಿದ್ದರೂಯಥೇಚ್ಛವಾಗಿಜಪಿಸಿ । ಆದಲೆಕ್ಕವಂತಿಳಿದೀಶ್ವರಾರ್ಪಣಂಗೈಯಬೇಕೆಂತಲೂ। ಅವುಗಳನೇಸಕಾಮವಾಗಿಜಪಿಸಲುಸಂಖ್ಯಾನಿಯಮವಿರಬೇಕೆಂತಲೂತಿಳಿದು ಅಕ್ಷರಕ್ಕೆ ಲಕ್ಷಜಪದಮೇರೆ ಜಪಿಸಲು ಮಧ್ಯಸಿದ್ಧಿಯೆಂದನುಷ್ಟಿಸಿ। ಜಪ। (೧೦೦೦೦೦) ತದ್ದಶಾಂಶ (೧೦೦೦೦) ತರ್ಪಣ।ತದ್ದಶಾಂಶ (೧೦೦೦) ಹೋಮ ತದ್ದಶಾಂಶ (೧೦೦) ಸಂತರ್ಪಣಜಪಸಮಅಥವಾ ಜಪಾರ್ಧ ಅಥವಾ ಷೋಡಶಾಂಶದಕ್ಷಿಣೆಯೆಂದು ತತ್ತತ್ಸಂಖ್ಯೆಯಮಂ ಸಾಮಾನ್ಯವಾಗಿ ನಿರ್ಧರಿಸಲಕ್ಕುಂ ॥

—* ಜಪವಿಭಾಗ *—

ಬಳಿಕಲ್ಲಿ ಪುರಶ್ಚರಣಂಗೈಯುದೇ ಸಂಖ್ಯಾನಿಯತವಾಗಿ ದೇಹಾಂತಪ ರ್ಯಂತವಾಳ್ಪುದೇನಿತ್ಯಜಪವಹುದು ಕನಿಷ್ಠವೆನಿಸುಸದು ॥ ಪುರಶ್ಚರಣಂ ಮಾಡಿಬಿಡುವದೇಪ್ರರಶ್ಚರಣಜಪವಮುದ್ಧ್ಯಮವೆನಿಸುವದು॥ ಪುರಶ್ಚರಣಂ ಗೈದುಮೇಲೆ ಸಂಖ್ಯಾನಿಯಮದಿಂ ಪ್ರಾಣಾವಧಿವಾಳ್ಪುದೇ ಪುರಶ್ಚರಣ ಪೂರ್ವಕ ನಿತ್ಯಜಪವದುತ್ತಮ ವೆನಿಸುವದೆಂದು ವಿಭಾಗಿಸಿ॥

—* ಜಪಾರಂಭ. *—

ಮೇಲೆ ಮಂತ್ರಜಪಪ್ರಾರಂಭದಲ್ಲಿ ಪ್ರಾಣಾಯಾಮತ್ರಯಮಂ ಮಾಡಿ ಬಳಿಕಾಮಂತ್ರಕ್ಕೆ ವಾಮದೇವನೇಋಷಿ ಪಂಕ್ತಿಛಂದಸ್ಸು ಸದಾಶಿವನೇ ದೇವತೆ, ಪ್ರಣವವೇಬೀಜ ಉಮೆಯೇಶಕ್ತಿ, ಬಂಕೀಲಕಹಂಸವೇಲಕ್ಷ್ಯ, ಸೋಹಂಭಾವನೇ, ಚಿನ್ಮುದ್ರೆ ತಾರಕಸ್ಥಾನ, ಶಾಂಭವೀದ್ವಾರ, ಷಣ್ಮುಖೀ ತಂತ್ರ, ಉದಾತ್ತಸ್ವರ, ಶ್ವೇತವರ್ಣ, ಭೋಗಮೋಕ್ಷಾರ್ಥಪ್ರಾದ, ಉಪಾತ್ತದುರಿತಕ್ಷಯದ್ವಾರಕ ಪರಮೇಶ್ವರಪ್ರೀತಿಯೋಳ್ ವಿನಿಯೋಗವೆಂದು ಮೊದಲುಸ್ಮರಿಸಿ ಬಳಿಕಪಿಂಡಾಂಡಬ್ರಹ್ಮಾಂಡಂಗಳ್ಗೆ ಭೂವ್ಯಾದ್ಯಾತ್ಮಾಂತವಾದ ತತ್ವಗಳಕ್ರಮದಿಂ ನಕಾರಾದಿಪ್ರಣವಾಂತವಾದಅಕ್ಷರಾತ್ಮಕನೆಂದು ಅನುಸಂಧಾನಿಸಿ ಬಳಿಕನ್ಯಾಸಂಗೈಯುಲಕ್ಕುಂ.

—* ಕರನ್ಯಾಸಭೇದಗಳು. *—

ಮತ್ತಮಾ ಮಂತ್ರದಿಂ ಕರನ್ಯಾಸಂಗೈಯುವಲ್ಲಿ ಕರದ್ವಯದ ಅಂಗುಷ್ಠಾದಿಕನಿಷ್ಠಾಂತವಾಗಿ ಯಕಾರಾದಿನಕಾರಾಂತವಾದ ಪಂಚಾಕ್ಷರೀವಿಲೋಮಪಂಚವರ್ಣಂಗಳಂ ಪ್ರತ್ಯೇಕವಾಗಿಬಿಂದುವಿನಿಂಸೇರಿಸಿ ಒಂದೊಂದಕ್ಕೆ ಆದ್ಯಂತಗಳಲ್ಲಿಸಬಿಂದು ಪ್ರಣವದ್ವಯಂಪಂಚಗೊಳಿಸಿ ಅಂಗುಳಮೂಲದಿಂದಂಗುಳಾಗ್ರಪರ್ಯಂತಮುಂ ಸಪಲ್ಲವವಾಗಿಸಂಧಾನಗೊಳಿಸಲದು ಸೃಷ್ಟನ್ಯಾಸವೆನಿಸುವದು ಬಳಿಕ ಕನಿಷ್ಠಾದ್ಯಂಗುಷ್ಠಾಂತವಾಗಿ ನಕಾರಾದಿಯಕಾರಾಂತವಾದ ಪಂಚಾಕ್ಷರಿಯಅನುಲೋಮಪಂಚವರ್ಣಂಗಳಂ ಕ್ರಮದಿಂ ದಂಗುಳಾಗ್ರದಿಂದಾದಿಪರ್ಯಂತವಾಗಿ ಪೂರ್ವೋಕ್ತಕ್ರಮದಿಂ ದನುಸಂಧಾನವಾಳ್ಪುದೇ ಸಂಹಾರನ್ಯಾಸವೆನಿಸುವದು ॥ ಮತ್ತಮಾ ಮಧ್ಯಮಾಂಗುಳ್ಯಾದಿ ತರ್ಜನ್ಯಂತವಾಗಿಶಿಕಾರಾದಿ ನಕಾರಾಂತವಾದಕ್ಷರಂಗಳನಾಪಯಿಂದಂಗುಳ ಸಮಸ್ತಪ್ರದೇಶದೊಳು ನ್ಯಸಿಸುವದೇ ಸಿದ್ಧಿನ್ಯಾಸವೆನಿಸುವದು ॥ ಬಳಿಕ ಅಂಗುಳಗಳಸಂಧ್ಯಂಗಳಲ್ಲಿಯೂ ಮಂತ್ರಾಕ್ಷ

ರಂಗಳ ನಾರೀತ್ರಿಯಿಂದುತ್ಪತ್ಯಾದಿಭೇದಗಳನರಿತು ನ್ಯಾಸಂಗೈದು ಬಳಿಕ ಪ್ರತ್ಯೇಕಾಂಗುಳಿಗಳಲ್ಲಿಯುೂ ಸಮಷ್ಟಿಕರಿಸಿ ಪ್ರಣವನ್ಯಾಸವಂಮಾಡು ವದು॥ ಮತ್ತಮಾಕರದ್ವಯದಚತುರಂಗುಳಿಯುನೇ ಅಂಗುಷ್ಟದಿಂದಂಗು ಷ್ಠವನು ತರ್ಜನಿಯಿಂ ನ್ಯಾಸಂಗೈಯುವದು ಬಳಿಕ ಕರದ್ವಯಕ್ಕೆ ಬಿಂ ದುಯುಕ್ತಪ್ರಣವತ್ರಯದಿಂದ ವಾಮಕರವಂದಕ್ಷಿಣಕರದಿಂ ದಕ್ಷಿಣಕರವಂ ವಾಮಕರದಿಂ ಅನುಲೋಮವಾಗಿ ಸಮ್ಮಾರ್ಜನಂಗೈವುದೇ ಸೃಷ್ಟಿನ್ಯಾಸ ವಿಲೋಮವಾಗಿಸಮ್ಮಾರ್ಜನಂಮಾಳ್ಪುದೇ ಸಂಹಾರನ್ಯಾಸವಹುದಿಂತು ಕರನ್ಯಾಸವಂಮಾಡಿ ॥

—* ಅಂಗನ್ಯಾಸಭೇದಗಳು. *—

ಬಳಿಕ ದೇಹನ್ಯಾಸದಲ್ಲಿ ಮೂರ್ಧಮುಖ ಕಂಠಹೃದಯ ಗುಹ್ಯಪಾದಂ ಗಳಲ್ಲಿ ಕ್ರಮದಿಂ ಪ್ರಣವಾದಿಯಕಾರಾಂತವಾದ ಪ್ರತ್ಯೇಕಬಿಂದುಸಮೇತ ಮುಪ್ಪಮಂತ್ರಾಕ್ಷರಂಗಳಂಬಿಂದುಯುಕ್ತಮಪ್ಪ ಪ್ರಣವದ್ವಯಸಂಘಟಿತ ಮಾಗಿಮಾಳ್ಪುದೇ ಸೃಷ್ಟನ್ಯಾಸಮೆನಿಸುವದು॥ ಬಳಿಕಾಮಂತ್ರದಿಂದಲೇ ಪಾದಾದಿಮೂರ್ಧಪರ್ಯಂತವಾಗಿ ಪ್ರಣವಾದಿಯ ಕಾರಾಂತನ್ಯಾಸಮಾಳ್ಪು ದೇ ಸಂಹಾರನ್ಯಾಸವೆನಿಸುವದು ಬಳಿಕ ಹೃದಯ ಗುಹ್ಯಪಾದಮೂರ್ಧ ಮುಖ ಕಂಠಹೃದಯಗಳಲ್ಲಿ ಕ್ರಮದಿ ಪ್ರಣವಾದಿಯ ಕಾರಾಂತವಾಗಿಮಾ ಳ್ಪುದೇ ಸ್ಥಿತಿನ್ಯಾಸವೇನಿಸುವದು। ಬಳಿಕ ಸದ್ಯಮಂತ್ರದಿ ಶಿರಸಾಸರ್ವಾಂ ಗನ್ಯಾಸಂಗೈಯುವದು॥ಬಳಿಕಾಯಂಗನ್ಯಾಸದಲ್ಲ ಕನಿಷ್ಟಾಂಗುಷ್ಟಯೋ ಗದಿಂಹೃದಯ-ಆನಾಮಿಕಾಂಗುಷ್ಟಯೋಗದಿಂಮೂರ್ಧ ಮಧ್ಯಮಾಂಗು ಷ್ಟಯೋಗದಿಂಶಿಖೆ ಕರದ್ವಯತರ್ಜನಿಗಳಂಕವಚದಕ್ಷಿಣಕರದಮಧ್ಯಾಂಗು ಳಿಕ್ರಯದಿಂನೇತ್ರ ದಕ್ಷಿಣ ಚತುರಂಗುಳಿಗಳಿಂ ವಾಮಕರತಳದಲ್ಲಿ ಕಾಲ ತ್ರಯದಿಂಅಸ್ತ್ರಗಳಂ ಪ್ರಣವಾದಿ ಯಕಾರಾಂತವಾದ ಮಂತ್ರಾಕ್ಷರಂಗ ಳಂಪೂರ್ವೋಕ್ತಕ್ರಮದಿಂಆಯಾಪಲ್ಲವಾರ್ಥವರಿದೊಡಗೂಡಿಸಿ ನ್ಯಾಸಮಾ ಳ್ಪುದೇಸೃಷ್ಟಿನ್ಯಾಸವೆನಿಸುವದು ॥ ಬಳಿಕವರ್ಣಮಂತ್ರ ಭೇದವಿಲ್ಲದೆಅ ಸ್ತ್ರಾದಿಹೃದಯಾಂತವಾಗಿ ಮಾಳ್ಪುದೇಸಂಹಾರನ್ಯಾಸವೆನಿಸುವದು ಕವ ಚಾದಿಶಿಖಾಂತವಾಗಿಮಾಳ್ಪುದೇಸ್ಥಿತಿನ್ಯಾಸವೆನಿಸುವದು ॥ ಈಶಾನಾದಿ ಸದ್ಯೋಜಾತಾಂತವಾದುದೇ ಸೃಷ್ಟಿಸದ್ಯೋಜಾತಾದಿ ಈಶಾನಾಂತವಾದು ದೇ ಸಂಹಾರ ಅಘೋರಾದಿತತ್ಪುರುಷಾಂತವಾದುದೇ ಸ್ಥಿತಿನ್ಯಾಸವಂದ ರಿದೀ ಪಂಚಬ್ರಹ್ಮನ್ಯಾಸಂಗಳಂ ದೇಹಅಂಗತ್ರಯಗಳಲ್ಲಿ ಮಾಳ್ಪುದುಮೇ

ಲಪೂರ್ವಾದಿ ಊರ್ಧ್ವಾಂತವಾದ ಪಂಚದಿಕ್ಕುಗಳಲ್ಲಿ ನಕಾರಾದಿಯಕಾರಾಂತ ವಾದ ಅಕ್ಷರಂಗಳನಾಕ್ರಮದಿಂದಲೇಸ್ಥಾಪಿಸುವದು ॥ ಬಳಿಕಂಗುಪ್ತ ಜನಿಗಳಂಧ್ವನಿಯುಪ್ಪಂತೆ ಇಂದ್ರಾದಿ ದಶದಿಕ್ಕುಗಳಲ್ಲಿ ಅಸ್ತ್ರಪಲ್ಲವಮಂ ಯೋಗಿಸುವದು॥ ಬಳಿಕಯಕಾರಾದಿನಕಾರಾಂತವಾಗಿ ಸೃಷ್ಟಿಮಂತ್ರವೆನಿ ಸುವದು ನಕಾರಾದಿಯಕಾರಾಂತವಾಗಿ ಸಂಹಾರಮಂತ್ರವೆನಿಸುವದು ॥ಯ ಕಾರಾದಿಮಕಾರಾಂತವಾಗಿಸ್ಥಿತಿಮಂತ್ರವೆನಿಸುವದು । ಇಂತು ಅಶೀತಿವಿಧ ನ್ಯಾಸಂಗಳಂನಾಳ್ಪರಾಮಂತ್ರಯೋಗಿಗಳನ್ಯಾಸವಿಕಲ್ಪಮೂಲವಂಪರ್ಯಾ ಲೋಚಿಸಲದುಪ್ರವೃತ್ತಿಮಾರ್ಗ ನಿವೃತ್ತಿಮಾರ್ಗವೆಂದೆರಡು ಬಗೆಯಾಗಿ ಪ್ಪುದಾಗಿ ಅನುಲೋಮವೇಸಂಹಾರ ವಿಲೋಮವೇಸೃಷ್ಟಿಇದು ನಿವೃತ್ತಿ ಮಾರ್ಗಈ ಮೇರೆತತ್ತ್ವಲಕ್ಷ್ಯಭೇದದಿಂಮಂತ್ರಾಕ್ಷರದ ಕ್ರಮವ್ಯುತ್ಕ್ರಮ ಮಧ್ಯದಕ್ಷಿಣ ಮಧ್ಯನಾಮ ಯುಕ್ತಮಧ್ಯಯುಕ್ತವಾಮ ಯುಕ್ತದಕ್ಷಿಣ ಯುಕ್ತವರ್ಣ ಯುಕ್ತಸ್ವರಯುಕ್ತಪದ ಯುಕ್ತವಾಚ್ಯ ಯುಕ್ತಯೋಗ ಯುಕ್ತಾವಯವ ಯುಕ್ತಾಂತವ್ಯುತ್ಕ್ರಮ ಯುಕ್ತಾಂತರ್ಯೋಗದಿ ಗ್ಯೋಗ ಕಾಲಯೋಗ ಅಂಗಯೋಗ ಅಧಿಕರಣಯೋಗ ಲಕ್ಷ್ಯಯೋಗ ಸಮಷ್ಟಿಯೋಗ ಪಿಂಡಾಂಡಭಾವನೆ ಬ್ರಹ್ಮಾಂಡಭಾವನೆಮುಂತಾದ ಕ್ರ ಮಗಳಂನ್ಯಾಸಗಳಭಿನ್ನಿಸಿ ಪಲ್ಲವಯುಕ್ತವಾಗಿನಾನಾವಿಧಫಲಸಾಧಕವಾ ಪ್ಪುದಾಸಿ ಸ್ತ್ರೀಶೂದ್ರರುಗಳಿಗೆ ಪ್ರಣವವಿಲ್ಲದೆನಮೋಂತಮಾದಸ್ಥಿತಿಮಂ ತ್ರವನೇ ಜಪಂಗೈಯಲದಾ ಜಪಮಂತ್ರದಲ್ಲಿ ಸಾಂಬಶಿವನ್ನಾಗಲೀ, ಸದಾ ಶಿವಮೂರ್ತಿಯನ್ನಾಗಲೀ ತಾಂಡವಾಕಾರವನಾಗಲೀ, ಧ್ಯಾನಿಸಬೇಕೆಂದು ನಿಶ್ಚಯಿಸಿ ॥

## — ಪಂಚಾಕ್ಷರೀವಿನಿಯೋಗ. —

ಬಳಿಕೀಕ್ರಮದಿಪುರಶ್ಚರಣಂ ಗೈಯುವದಲ್ಲದೆ ಸಕಲಸಾಂಕವಾಗಿ ಬಿಲ್ವ ವೃಕ್ಷವನಾಶ್ರಯಿಸಿ ಒಂದೇದಿನವಂತರಅವಿಚ್ಛೇದನ್ನೈರಂತರ್ಯತಾದಾತ್ಮ್ಯತನ್ಮ ಯತ್ವಗಳಂಜಪಂಗೈಯಲು ಸರ್ವಮಂತ್ರಪುರಶ್ಚರಣಾಧಿಕಾರ ಸಿದ್ಧಿಯ ಹುದೆಂದು ಈಶ್ವರಗೀತೆಮೊದಲಾದವುಗಳಲ್ಲಿ ಪೇಳಲ್ಪಟ್ಟುದಾದಕಾರಣಅಂ ತಾಪುರಶ್ಚರಣದಿಸಿದ್ಧವಾದ ಪಂಚಾಕ್ಷರೀಮಂತ್ರವಂ ಪರಂತಾಗ್ರದಲ್ಲಿ ಒಂದುಲಕ್ಷ ಮಂಜಪಿಸಲಾಯುರ್ವೃದ್ಧಿ. ಮಹಾನದೀತೀರದಲ್ಲಿ ದ್ವಿಲಕ್ಷಜ ಪಂಗೈಯಲಾಯುರ್ವೃದ್ಧಿ, ವಟಮೂಲದಲ್ಲಿ ಹತ್ತುಸಾವಿರಮಂತ್ರಮಂಜ ಪಿಸಿ ದೂರ್ವತಿಲಘಟಗಳಿಂ ಹೋಮಂಗೈಯಲಾಯುರ್ವೃದ್ಧಿ ಅರಳಿಯಮ

ರವ ನೇರಿಕೊಂಡು ದ್ವಿಲಕ್ಷಮಂಜಪಿಸೆ ಆಯುರ್ವೃದ್ಧಿ ಅಪಮೃತ್ಯುಕ್ಷ
ಯಪ್ರತಿದಿನವು ಆರಳಿಯಮರವನ್ನ ಎರಡುಕೈಯಿಂದಲೂ ಮುಟ್ಟಿಕೊಂ
ಡುನೂರೆಂಟುವೇಳೆ ಜಪಿಸೆ ಮೃತ್ಯುತೊಲಗುವದು। ಆದಿತ್ಯಾಭಿಮುಖನಾಗಿ
ಒಂದುಲಕ್ಷಜಪಂಗೈದು ಅರ್ಕಕುಸುಮಗಳಿಂ ಹೋಮಂಗೈಯೆ ಸಕಲ
ವ್ಯಾಧಿಗಳುಂ ತೊಲಗುವವು॥ ಒಂದುಮಾಸಪರ್ಯಂತವಾಗಿ ಪ್ರತಿದಿನದುದ
ಯಸಮಯದಲ್ಲಿ ನೂರೆಂಟುವೇಳೆ ಉದಕಮಂತ್ರಿಸಿಕೊಳ್ಳಲಾಗಿ ಕುಷ್ಠರೋ
ಗಪರಿಹಾರವಹುದು। ಪಲಾಶಕುಸುಮದಿಂ ಹತ್ತುಸಾವಿರಹೋಮಂಗೈಯೆ
ಸರ್ವವ್ಯಾಧಿಪರಿಹಾರವಹುದು। ನದೀತೋಯಪೂರ್ಣಕುಂಭವಂ ಮುಟ್ಟಿ
ಕೊಂಡು ಹತ್ತುಸಾವಿರಜಪಂಗೈದಾ ಜಲಸ್ನಾನದಿಂ ಸಕಲವ್ಯಾಧಿನಿವೃತ್ತಿ
ಯಹುದು। ಚಂದ್ರಸೂರ್ಯಗ್ರಹಣಂಗಳಲ್ಲಿ ಸಮುದ್ರಗಾಮಿನಿಯಾದ ನದಿ
ಯೊಳು ಉಪವಾಸದಿಂ ಶುಚಿಯಾಗಿ ಕುಳ್ಳಿರ್ದು ಗ್ರಹಣಾಂತವಾಗಿಬ್ರಾ
ಹ್ಮೀರಸವುಂ ನೂರೆಂಟುವೇಳೆ ಮಂತ್ರಿಸಿಕೊಳ್ಳಲಾಗಿ ಶೀಘ್ರದಿಂ ಸರ್ವಶತ್ರು
ನಾಶನವಹುದು। ಪ್ರಾತಃಕಾಲದಲ್ಲಿ ಸ್ನಾನಂಗೈದುನಿತ್ಯಕ್ರಿಯಾಸಂಪನ್ನ
ನಾಗಿ ಪಾಲಾಶಪತ್ರದಲ್ಲಿ ವಿಭೂತಿಯನಾದರೂ ತುಪ್ಪವನಾದರೂ, ಪಂಚ
ಗವ್ಯವನಾದರೂತುಂಬಿ ಹಸ್ತದಿಂಮುಟ್ಟಿಕೊಂಡು ಸಾವಿರದೆಂಟುವೇಳೆಜಪಂ
ಗೈಯಲಾಗಿ ಸಕಲವಿದ್ಯಾಸಂಪನ್ನನಹನು ಬಿಲ್ವಚ್ಛಾಯೆಯನಾಶ್ರಯಿಸಿ
ಹತ್ತುಸಾವಿರಜಪಂಗೈದು ಮೇಲೆಆ ಬಿಲ್ವಪತ್ರ ಕುಸುಮಗಳಿಂದಾದರೂ
ಸಾವಿರದೆಂಟು ಜಪಂಗೈಯೆ ಸಕಲೈಶ್ವರ್ಯಸಮೃದ್ಧಿಯಹುದು। ಛಿದ್ರವಿಲ್ಲ
ದಪಾಲಾಶಕುಸುಮದಿಂ ಹತ್ತುಸಾವಿರಹೋಮಂಗೈಯೆ ಸರ್ವಲಕ್ಷಣಸಂ
ಪನ್ನನಾದ ಪುತ್ರನಹನು। ಆ ಪಾಲಾಶಕುಸುಮದಿಂ ಸಾವಿರದೆಂಟುಹೋ
ಮಂಗೈಯೆ ನಕ್ಷತ್ರಗ್ರಹಪೀಡಾ ನಿವಾರಣವಹುದು। ಸ್ನಾನವಂಮಾಡಿ
ಹತ್ತುಸಾವಿರಜಪಂಗೈದು ಘೃತದಿಂ ನೂರೆಂಟುಹೋಮಂಗೈದು ಸ್ವಪ್ನ
ಶಾಂತಿಯಹುದು।ಚಂದ್ರಸೂರ್ಯಗ್ರಹಣಂಗಳಲ್ಲಿಶಿವಪೂಜೆಯಂವಿಧಿವತ್ತಾಗಿ
ಮಾಡಿ ಆ ಲಿಂಗಸನ್ನಿಧಿಯಲ್ಲಿಯೇ ಹತ್ತುಸಾವಿರಜಪಂಗೈಯೆ ಸರ್ವಕಾ
ಮಾರ್ಥಸಿದ್ಧಿಯಹುದು। ದಿನಪ್ರತಿಯಲ್ಲೂ ಹನ್ನೊಂದುವೇಳೆ ಅನ್ನವುಂ
ಮಂತ್ರಿಸಿಕೊಳ್ಳಲಾಗಿ ಕೃತಿಮಂಸೋಕದು। ಮತ್ತಮಾಮಂತ್ರವಾದೊಡೆ
ನೂರೆಂಟುಜಪದಿಂ ನಿತ್ಯಕರ್ಮಲೋಪನಿಬದ್ಧಾನ್ನ ಸ್ವೀಕಾರದೋಷವಂ
ಪರಿಹರಿಸುವದು ಹತ್ತುಸಾವಿರವಧಿಕವಾದಲಕ್ಷಜಪದಿಂ ಮಹಾಪಾತಕಗ
ಳಂತೊಲಗಿಸುವವು। ಪನತ್ತೈದುಸಾವಿರಜಪದಿಂ ಪಾತಕವಂಕಳೆವುದು।

ಇಪ್ಪತ್ತೇಳುಸಾವಿರವೈನೂರು ಜಪದಿಂದುಪಪಾತಕಂಗಳಂ ಕಳೆವುದು। ಐವತ್ತುಸಾವಿರಜಪವು ಅತಿಪಾತಕಂಗಳನಟ್ಟುವದು। ತತ್ವಂಗಳಗೊಂದೊಂದು ಲಕ್ಷವಾಗಿಪ್ಪತ್ತೈದುಲಕ್ಷಜಪದಿಂ ಭೂಮ್ಯಾದಿಪಂಚವಿಂಶತಿತತ್ವಮಂ ದಾಂಟಿಸುವದು। ಐನೂರುಲಕ್ಷಜಪದಿಂ ಸರ್ವಕಾರಣನಾದೀಶ್ವರನಭಾವವು ದಿಸುವದು। ನೂರುಲಕ್ಷಜಪದಿಂ ರುದ್ರತ್ವವಹುದು। ಹದಿನಾರುಲಕ್ಷಜಪ ದಿಂದುಮಾತ್ವವಹುದು। ಒಂಭತ್ತುಲಕ್ಷಜಪದಿಂ ವಿಷ್ಣುತ್ವವನೀವುದು।ಅರ ವತ್ತುಲಕ್ಷಜಪದಿಂಬ್ರಹ್ಮತ್ವವಹುದು।ಇಪ್ಪತ್ತುನಾಲ್ಕುಲಕ್ಷಜಪದಿಂನಿರಾ ಡಾಕ್ಮ್ಯವನೀವುದು। ಮೂರುಲಕ್ಷಜಪದಿಂ ದೀರ್ಘಾಯುಷ್ಯವೀವುದು। ಲಕ್ಷಜಪದಿಂ ಮಾರಣಾದಿಷಟ್ಕರ್ಮಸಿದ್ಧಿಗಳಹವು। ಮತ್ತಂ ಸಾಪಂಚಾಕ್ಷರೀ ಮಂತ್ರಮಂ ವಾಯುಜಯಿಯಾಗಿ ಮಧ್ಯರಾತ್ರಿಯಲ್ಲಿ ಹತ್ತುಸಾವಿರಜಪಂ ಗೈಯೆ ನಾದಸಿದ್ಧಿಯಹುದು। ತತ್ಸಂಖ್ಯಾಜಪಕ್ರಮದಿಂದಲೇ ಬ್ರಹ್ಮತ್ವಸಿ ದ್ಧಿಯಹುದು।ಆಲಸ್ಯವಿಲ್ಲದೆವಾಯುವಂಜಯಿಸಿಮೌನಿಯಾಗಿಮಧ್ಯರಾತ್ರಿ ಯಲ್ಲಿ ಲಕ್ಷಜಪಂಗೈಯೆ ಸರ್ವಾಂಧಕಾರನಿವರ್ತಕವಾದ ಬಿಂದುದರ್ಶನ ವಹುದು। ಮಧ್ಯರಾತ್ರಿಯಲ್ಲಿ ವಾಯುಜಯಿಯಾಗಿಲಕ್ಷಜಪಂಗೈಯೆಸರ್ವ ಸಿದ್ಧಿಗಳಹವೆಂಬವುಮೊದಲಾದ ವಿನಿಯೋಗಂಗಳುವಿಧಿಸಲ್ಪಟ್ಟುವು॥

— ಜಪಕಾಲಂಗಳು. —

ಬಳಿಕ ಪಂಚಾಕ್ಷರ್ಯಾದಿ ಸಕಲಮಂತ್ರಪುರಶ್ಚರಣಪ್ರಾರಂಭದಲ್ಲಿ ಶುಭ ಮಾಸಾದಿವಿಧಿಕ್ರಮಗಳಂ ವಿಚಾರಿಸಬೇಕಾಗಿಹುದದರಲ್ಲಿ ಚೈತ್ರದೊಳು ದುಃಖ, ವೈಶಾಖದಲ್ಲಿರತ್ನಲಾಭ, ಜ್ಯೇಷ್ಠದಲ್ಲಿಮೃತ್ಯು, ಆಷಾಢದಲ್ಲಿಬಂ ಧುನಾಶ, ಶ್ರಾವಣದಲ್ಲಿಪೂರ್ಣಾಯುಷ್ಯ,ಭಾದ್ರಪದದಲ್ಲಿಪ್ರಜಾಹಾನಿ, ಅಶ್ವ ಯುಜದಲ್ಲಿಶುಭ, ಕಾರ್ತೀಕದಲ್ಲಿಸರ್ವಸಿದ್ಧಿ, ಮಾರ್ಗಶಿರದಲ್ಲಿಮಾಂಗಲ್ಯ, ಪುಷ್ಯದಲ್ಲಿಹಾನಿ, ಮಾಘದಲ್ಲಿಬುದ್ಧಿವೃದ್ಧಿ, ಫಾಲ್ಗುಣದಲ್ಲಿಸಕಲಸಿದ್ಧಿ, ಅಧಿಕಕ್ಷಯಗಳಲ್ಲಿ ನಿಷ್ಫಲಗಳಹವೆಂದು ಮಾಸಂಗಳಂಮನನಗೊಂಡು ಬಳಿಕಮೇಷಾದಿ ಹನ್ನೆರಡುರಾಶಿಗಳೊಳಗೆ ಶೂನ್ಯಮಾಸ, ಮತ್ತಂವೃಷ ಮಿಥುನ ಸಿಂಹತುಲೆ ಧನಸ್ಸುಕುಂಭವೆಂಬಾರುರಾಶಿಗಳೇ ಅಶುಭಂಗಳುಮಿ ಕ್ಕರಾಶಿಗಳಾರುಂ ಶುಭಗಳೆಂದುರಾಶಿಗಳಲೇಸರಿತು।।ಬಳಿಕ ಪಾಡ್ಯಚತುರ್ಥಿ ಷಷ್ಠಿಅಷ್ಟಮಿ ನವಮಿಚತುರ್ದಶಿ ಹುಣ್ಣಿಮೆ ಅಮಾವಾಸ್ಯೆಯೆಂಬೆಂಟು ದಿವಸಗಳೇ ಅಶುಭಂಗಳು, ಉಳಿದೇಳುತಿಥಿಗಳೇ ಶುಭಂಗಳು॥ ಬಳಿಕ ಆದಿ ತ್ಯವಾರ ಮಂಗಳವಾರ ಶನಿವಾರಂಗಳೇ ಅಶುಭಂಗಳು, ಮಿಕ್ಕವೆಲ್ಲ ಶುಭಂ

ಸಳೆಂದು ತಿಳಿವು। ಬಳಿಕ ಅಶ್ವಿನಿಮೊದಲಾದ ಇಪ್ಪತ್ತೇಳುನಕ್ಷತ್ರಗಳೊಳಗೆ ಪುನರ್ವಸು ಮೃಗಶಿರೆ ಹಸ್ತ ಸ್ವಾತಿ ಮೂಲ ಅನೂರಾಧೆ ರೋಹಿಣಿ ರೇವತಿ ಉತ್ತರೆ ಉತ್ತರಾಷಾಢ ಉತ್ತರಾಭಾದ್ರಪದೆಯೆಂದು ಹನ್ನೊಂದು ಶುಭನಕ್ಷತ್ರಂಗಳು ಉಳಿದವೆಲ್ಲಾ ಅಶುಭಗಳೆಂದುತಿಳಿದು ॥ ಬಳಿಕ ವಿಷ್ಕಂಭಾದಿವೈಧೃತಿಕಡೆಯಾಗಿ ಇಪ್ಪತ್ತೇಳು ಯೋಗಂಗಳೊಳಗೆ ವಿಷ್ಕಂಭ ಶೂಲ ಗಂಡ ಅತಿಗಂಡ ವ್ಯಾಘಾತ ವಜ್ರ ಧೃತಿ ಧ್ರುವ ವೈಧೃತಿ ವ್ಯತೀಪಾತ ಪರಿಘವೆಂಬ ಏಕಾದಶ ಯೋಗಂಗಳೇ ಅಶುಭಂಗಳು ॥ ಮಿಕ್ಕ ಹದಿನಾರು ಯೋಗಂಗಳೇ ಶುಭಂಗಳೆಂದು ಯೋಗಂಗಳಂ ತಿಳಿವು॥ ಬಳಿಕ ಶಕುನಿಕರಣ ಮೊದಲು ಭದ್ರಕಡೆಯಾದ ಹನ್ನೊಂದು ಕರಣಂಗಳೊಳಗೆ ಶಕುನಿ ಚತುಷ್ಪಾತ್ ನಾಗ ಕಿಂಸ್ತುಘ್ನ ವಣಿಜ ಭದ್ರವೆಂಬಾರು ಕರಣಂಗಳೇ ಶುಭಂಗಳೆಂದು ಕರಣಂಗಳಂ ಪರೀಕ್ಷಿಸಿ ಬಳಿಕ ಶುಭತಿಥಿಯಿಂ ಶುಭವಾರದಿಂದಾಯುಷ್ಯ ಶುಭನಕ್ಷತ್ರದಿಂ ಪಾಪಕ್ಷಯ। ಶುಭಯೋಗದಿಂ ರೋಗನಿವೃತ್ತಿ। ಶುಭಕರಣದಿಂ ಕಾರ್ಯಸಿದ್ಧಿಗಳಪ್ಪವಾಗಿ ಮಂತ್ರಜಪಪ್ರಾರಂಭದಲ್ಲಿ ಇವೆಲ್ಲವಂ ಸರ್ವದಾ ವಿಚಾರಿಸಬೇಕೆಂದಂಗೀಕರಿಸಲ್ಪಲಕ್ಕುಂ॥

## — ಜಪಮಾಲಿಕಾಲಕ್ಷಣ. —

ಉತ್ತಮಾ ಮಂತ್ರಜಪಕ್ಕೆ ಮೊದಲು ಮಾಲಿಕೆಗಳಂ ಸಂಪಾದಿಸಬೇಕಾಗಿ ಹುದದರಲ್ಲಿ ಉತ್ತರೋತ್ತರಗುಣವಿಶಿಷ್ಟಗಳಾದ ಮಾಲಿಕೆಗಳೊಳಗೆ ಅಂಗುಳಿಗಳಿಂದಲಾದರೂ ಅಲ್ಲದೆ ಅಂಗುಳಿಗಳಲ್ಲಿ ಮಧ್ಯಮೆ ಅನಾಮಿಕೆಗಳೆರಡರ ಮಧ್ಯದೆರಡು ರೇಖೆಗಳಂ ಮೀರುವಾಗಿ ಮಿಕ್ಕ ಮಧ್ಯಾಂಗುಳಿಯ ಅಗ್ರದರೇಖೆಯಿಂ ತೊಡಗಿ ಪ್ರದಕ್ಷಿಣವಾಗಿ ಹತ್ತು ರೇಖೆಗಳನಂಗುಷ್ಟಾಗ್ರದಿಂ ಮುಟ್ಟಿ ಯಾವರೂ ಜಪಿಸುವದೇ ರೇಖಾಜಪವೆಂತಲೂ, ಅಂಗುಳಜಪವೆಂತಲೂ ತಿಳಿಯಲಕ್ಕುಂ॥ ನಿತ್ಯಕರ್ಮಕ್ಕೆ ಶಂಖಮಣಿಮಾಲಿಕೆ ಆಯುರಾರೋಗ್ಯೈಶ್ವರ್ಯಗಳಿಗೆ ಸ್ಫಟಿಕಮಣಿಮಾಲಿಕೆ ಲಕ್ಷ್ಮೀಪ್ರಾಪ್ತಿ ವೈಭವ। ಪ್ರಜ್ಞೆಗಳಿಗೆ ರುದ್ರಾಕ್ಷಮಾಲಿಕೆ। ಪುಷ್ಟಿ ಲಕ್ಷ್ಮ್ಯಾದಿಗಳಿಗೆ ಪುತ್ರಜೀವಿಯಮಣಿಮಾಲಿಕೆ। ಪುತ್ರ ಶುಭಧಾನ್ಯಾದಿಗಳ ವೃದ್ಧಿಗೆ ಪವಳದಮಣಿಮಾಲಿಕೆ। ಧನಧಾನ್ಯ ಸೌಭಾಗ್ಯ ಪಾಪಮೋಕ್ಷಾದಿಗಳಿಗೆ ಮುತ್ತಿನ ಮಣಿಮಾಲಿಕೆ ವಿದ್ಯಾಭಿವೃದ್ಧಿಗೆ ಮಾಣಿಕ್ಯದ ಮಣಿಮಾಲಿಕೆ। ಲೋಕವಶ್ಯ ಸ್ತ್ರೀವಶ್ಯಾದಿಗಳಿಗೆ ಮರಕತ ಮಣಿಮಾಲಿಕೆ। ಶತ್ರುಜಯಾದಿಗಳಿಗೆ ಕುಶಗ್ರಂಥಿಮಾಲಿಕೆ। ಪಾಪಕ್ಷಯ ಪಿಪ್ರಪ್ರಾಪ್ತ್ಯಾದಿಗಳಿಗೆ ಸುವರ್ಣಮಣಿಮಾಲಿಕೆ। ಸ್ತ್ರೀವಶ್ಯಾದಿಗಳಿಗೆ ಪುತ್ರ(?)ಜೀ

ಶನಮಾಲಿಕೆ। ವಾಕ್ಸಿದ್ಧ್ಯಾದಿಗಳಿಗೆ ಪಾದರಸಸ್ಫಟಿಕಾಮಾಲಿಕೆ। ಸಕಲಕಾರ್ಯಸಿದ್ಧಿಗಳಿಗೂ ಬಿಲ್ವಕಾಷ್ಠಮಣಿಮಾಲಿಕೆ। ಕಷ್ಟಪರಿಹಾರಕ್ಕೆ ಭಸ್ಮಗೋಳಕಮಾಲಿಕೆ। ಅಷ್ಟಭೂತಿಸಿದ್ಧಿಗಳಿಗೂ ಅಷ್ಟಾಂಗಯೋಗಸಿದ್ಧಿಗೂ ಸರ್ವಮಂತ್ರಸಿದ್ಧಿಗೂ ಸಕಲಕಾರ್ಯಸಿದ್ಧಿಗೂ ಜ್ಞಾನಕ್ಕೂ ಮೋಕ್ಷಕ್ಕೂ ರುದ್ರಾಕ್ಷಮಾಲಿಕೆ। ಯೆಂದು ಕಾಮ್ಯಫಲಸಿದ್ಧಿಗಳಂತಿಳಿದು ಸಕಾಮನಿಷ್ಕಾಮ ಜಪಗಳೆಲ್ಲದರಲ್ಲಿಯುಂ ಸುರಕ್ಷಿತವಾಗಿಯುಂ, ಸುಖಕರವಾಗಿಯುಂ, ಶಂಭುಪ್ರಸಾದಕರವಾಗಿಯುಂ, ಕ್ಷಿಪ್ರಸಿದ್ಧಿಕರವಾಗಿಯುಂ, ಸರ್ವೋತ್ತಮವಾಗಿಯುಂ ರುದ್ರಾಕ್ಷಮಾಲಿಕೆಯೆ ಅಂಗೀಕರಿಸಲ್ಪಟ್ಟು ಸಕಲದೇವರ್ಷಿ ಬ್ರಹ್ಮರ್ಷಿಮನುಜರ್ಷಿ ಸಿದ್ಧಯೋಗಿಪ್ರಮಥಗಣಪ್ರಮುಖರಿಂಗೆಯೋಗ್ಯವಾಗಿಸರ್ವದಾಧರಿಸಲ್ಪಟ್ಟಿರುವದರಿಂದಾರುದ್ರಾಕ್ಷಿಮಾಲಿಕೆಯೊಳು ಮೇರುಶೂನ್ಯವಾದಹನ್ನೊಂದು ಮಣಿಯಮಾಲಿಕೆಯಿಂದೇಕಾದಶರುದ್ರಪ್ರೀತಿಯಹುದು। ಹದಿನೈದುಮಣಿಗಳ ಮಾಲಿಕೆಯಿಂದ ಅಭಿಚಾರಿಕಕ್ರಿಯಾಸಿದ್ಧಿ ಇಪ್ಪತ್ತೈದುಮಣಿಗಳಮಾಲಿಯಿಂದಿಪ್ಪತ್ತೈದು ತತ್ವಗಳಸಿದ್ಧಿ। ಇಪ್ಪತ್ತಾರುಮಣಿಗಳ ಮಾಲಿಕೆಯಿಂದಿಷ್ಟಸಿದ್ಧಿ। ಇಪ್ಪತ್ತೇಳುಮಣಿಗಳನಕ್ಷತ್ರಮಾಲಿಕೆಯಿಂ ಸರ್ವಾರ್ಥಸಿದ್ಧಿ। ಇಪ್ಪತ್ತೆಂಟು ಮಣಿಗಳಮಣಿಗಳ ಮಾಲಿಕೆಯಿಂ ಪ್ರತಿಷ್ಟೆಮೂವತ್ತುಮಣಿಗಳಮಾಲಿಕೆಯಿಂದರ್ಥಪ್ರಾಪ್ತಿ। ಮೂವತ್ತೆರಡುಮಣಿಗಳಮಾಲಿಕೆಯಿಂಜಯಪ್ರಾಪ್ತಿ ಐವತ್ತುಮಣಿಗಳಮಾಲಿಕೆಯಿಂ ಕಾಮ್ಯಕರ್ಮಸಿದ್ಧಿ। ಐವತ್ತುನಾಲ್ಕುಮಣಿಗಳಮಾಲಿಕೆಯಿಂ ಸರ್ವಾರ್ಥಸಿದ್ಧಿ। ನೂರುಮಣಿಗಳಮಾಲಿಕೆಯಿಂ ಕಾರ್ಯಸಿದ್ಧಿ। ನೂರೈದುಮಣಿಗಳಮಾಲಿಕೆಯಿ ಭೋಗಮೋಕ್ಷಗಳು। ನೂರೆಂಟು ಮಣಿಗಳಮಾಲಿಕೆಯಿಂ ಭುಕ್ತಿಮುಕ್ತಿಗಳಿಂದರಿತು ಬಳಿಕ ಮೇರುಸಹಿತವಾದರುದ್ರಾಕ್ಷಮಾಲಿಕೆಗಳು ಸಕಾಮನಿಷ್ಕಾಮಜಪಾರ್ಹವಪ್ಪುದರಿಂ॥ ೧೬ ಮಣಿ। ೩೨। ೪೮। ೬೪। ೧೦೮। ೧೨೮। ಈ ಮೇಲಿನಮಣಿಗಳಿಂಮಾಲೆಯುರಚಿಸಿ ಅದಕೆಮೇರು ಶಿಖಾಮಣಿಯೆಂಕಟ್ಟಿಜಪಿಸುವದು॥

— ಅಕ್ಷಮಾಲಾಫಲತಾರತಮ್ಯಂ —

ಮತ್ತಮಾಜಪಾಕ್ಷಮಾಲಿಗಳೊಳಗಂಗುಳಿಜಪದಿಂದೇಕಗುಣಫಲ। ರೇಖಾಜಪದಿಂದಷ್ಟಗುಣಫಲ। ರೌಪ್ಯಮಣಿಮಾಲಿಯಿಂದಶಗುಣಫಲ। ಶಂಖಮಣಿಮಾಲಿಯಿಂ ಶತಗುಣಫಲ। ಪವಳದಿಂಸಹಸ್ರ। ಸುವರ್ಣದಿಂದಶಸಹಸ್ರ। ಮುತ್ತುಗಳಿಂಲಕ್ಷ। ಕಮಲಮಣಿಗಳಿಂದಶಲಕ್ಷ। ಸ್ಫಟಿಕಮಣಿಗಳಿಂ

ಕೋಟಿ। ಬಿಲ್ವಕಾಷ್ಠಮಣಿಗಳಿಂ ದಶಕೋಟಿ। ಅಕ್ಷರಮಾಲೆಯಿಂ ಶತಕೋಟಿ। ಮಾನಸಜಪದಿಂದರ್ಬುದ। ರುದ್ರಾಕ್ಷದಿಂದಮಿತವೆಂದು ಫಲಾಧಿಕ್ಯಮಂ ತಿಳಿಯಲ್ವೇಳ್ಕುಂ.

— ಮಣಿಪರಿಮಾಣಾದಿಗಳು. —

ಬಳಿಕ ಮಾಲಿಕೆಗಳಿಗೆ ಆಮಲಕಮಾತ್ರಪರಿಮಾಣಮುಳ್ಳ ಮಣಿಗಳೇ। ಉತ್ತಮ, ಬದರೀಫಲಪರಿಮಾಣಮುಳ್ಳ ಮಣಿಗಳೇ ಮಧ್ಯಮ। ಚಣಕಪರಿಮಾಣಮುಳ್ಳ ಮಣಿಗಳೇ ಅಧಮಮಹುದದರಲ್ಲಿ। ಅತಿಸ್ಥೂಲ ಅತಿಸೂಕ್ಷ್ಮ ಭಿನ್ನ, ಶಿಥಿಲ, ಲಘು, ವ್ರಣ, ಕಂಟ, ವಕ್ರ, ಧೃತಶೇಷತೆ, ಸಾಂಕರ್ಯಾದಿ ದೋಷಗಳಿಲ್ಲದ, ದೃಢ, ವೃತ್ತ, ಕಾಂತಿ, ಗೌರವ, ಪಾಟವ, ದೃಷ್ಟಿಪ್ರೀತಿ ಪಾರಿಶುದ್ಧ್ಯ, ನವೀನಮಂಬ ಸಲ್ಲಕ್ಷಣಾಂಗಗಳುಳ್ಳ ಮಾಲಿಕೆಗಳಿಂ। ಚಿನ್ನ, ಬೆಳ್ಳಿ, ತಾಮ್ರ, ಸೀಸ, ಕಬ್ಬಿಣ, ಸರಿಗೆಳಾಗಲಿ, ಪಂಚವರ್ಣದಪಟ್ಟೆಯ ನೂಲಾಗಲಿ, ಕಾರ್ಪಾಸದೆಳೆಯಾಗಲಿ, ಶುದ್ಧವಾದನಾರಾಗಲಿ, ನವಪವಿತ್ರ ಸೂಕ್ಷ್ಮವಾದ ಇಪ್ಪತ್ತೆಳೆಗಳಿಗೆ। ಸಮಭಾಗದಿಂ ಮುಪ್ಪುರಿಗೂಡಿಸಿ ಪೋಣಿಸುವದಿದು ಉತ್ತಮ। ಇಪ್ಪತ್ತೊಂದೆಳೆಯು ಮಧ್ಯಮ. ಹದಿನೈದೆಳೆಯಿಂದಧಮವೆಂದು ತಿಳಿಯಲಕ್ಕುಂ॥

— ಮಾಲಿಕಾರಚನಾದಿಮಂತ್ರಗಳು —

ಬಳಿಕ ಓಂ ಸರ್ವಪ್ರೋತಾಯ ಶುಭಾತ್ಮಕಾಯ ಪರಮಾತ್ಮನೇನಮಃ। ಯೆಂಬಮಂತ್ರದಿಂ ಹೊಸದು ಸೂತ್ರಮಂ ರಚಿಸಿ। ಮೂಲಮಂ ಹುರಿಗೊಳಿಸಿ ಕೊನೆಗಳಸೇರುವಕೆಯಂ। ಅಗ್ರಮಂದನಕೆ ಪ್ರಣವಶೂಲಗಳಂ ಕೀಲಿಸಿ ಓಂ ಹೃದಯಾಧಿಷ್ಠಾನಾಯ ಪ್ರಾಣಲಿಂಗಾಯನಮಃ। ಯೆಂಬ ಮಂತ್ರದಿಂ ಸೂತ್ರಮಂ ಗಂಧಾದಿಗಳಿಂ ಸಂಸ್ಕರಿಸಿ। ಬಳಿಕ ಓಂ ಭವಾತ್ಮನೆ ಅಬ್ಲಿಂಗಾಯನಮಃ ಯೆಂದು ಉದಕಮಂ ಅಭಿಮಂತ್ರಿಸಿ। ಬಳಿಕ ಸದ್ಯೋಜಾತಾದಿ ಅಭಿಷೇಕಮಂತ್ರಗಳಿಂದಾ ಮಣಿಗಳಂ ತೊಳದು, ವಾಮದೇವಾದಿ ಅಲಂಕಾರ ಮಂತ್ರಗಳಿಂ ಮಣಿಗಳಂ ಮರಸಿ ಅಲಂಕರಿಸಿ। ಅಘೋರಾದಿಮಂತ್ರಗಳಿಂ ಧೂಪವಸಿಕ್ಕಿ। ತತ್ಪುರುಷಾದಿಮಂತ್ರಗಳಿಂ ಮಣಿಪ್ರಂಜಮನರ್ಚಿಸಿ। ಈಶಾನಾದಿ ಶಂಭವಮಂತ್ರಗಳಿಂ ಅಭಿಮಂತ್ರಿಸಿ ಪ್ರಾರ್ಥಿಸಿ। ಪ್ರತ್ಯೇಕಮಾಗಿ ಶಿವಸಾನ್ನಿಧ್ಯಂಗೊಳಿಸಿದ ಬಳಿಕ। ಓಂ ಶಿವಚೈತನ್ಯರೂಪಾಯ ಪ್ರಣವಜ್ಯೋತಿಷೇನಮಃ। ಯೆಂಬದಾಗಿ ಸ್ಥೂಲಮಣಿಗಳಂ ಸೂತ್ರದ ಮೂಲದಲ್ಲಿ ಪೋಣಿಸಿ। ಸೂಕ್ಷ್ಮಮಣಿಗಳಂ ತಾರತಮ್ಯವರಿತು ಕ್ರಮದಿಂದಗ್ರಭಾಗದೊಳು

ಪ್ರೋಕ್ಷಿಸಿ । ಸಹಿತಾಗ್ರದಲ್ಲಿಗೋಪುಚ್ಛದಾಕಾರಮಪ್ಪಂತೆ ಸೇರುವೆಯು ರಿತು । ಮುಖಮುಖಂಗಳಂ ಸಂಯೋಗಿಸಿ ಸರಗೊಳಿಸಿ । ಮೇಲೆ ಮಣಿ ಗಳೊಳರಸದಂತೆ ವಿರಳಗೊಳಿಸಿ । ಓಂಬ್ರಹ್ಮಸ್ವರೂಪಾಯ ಸಂಸ್ಕೃತಾ ಜಪಿಜ್ಞಾನಾಯನಮಃ ಯೆಂಬ ಮಂತ್ರದಿಂದೆರಡು ಸುತ್ತಿನಗಂಟಿಕ್ಕಬೇಗಿದು। ಮೇಲೆಮೂಲಾಗ್ರಂಗಳ ನೊಂದುಗೂಡಿಬೇಗಿದು । ಮೇಲೆಗಣನೆಯೊಳಗಲ್ಲ ದೊಂದುಮಣಿಯನು ಓಂಶಿಖಾಮಧ್ಯಸ್ಥಿತರೂಪಾಯನಮಃ॥ಯೆಂಬಮಂ ತ್ರದಿಂಮೇರುಮಣಿಯಂ ಪ್ರೋಕ್ಷಿಸಿ । ಅದರಮೇಲೆರಡುಸುತ್ತಿನಗಂಟನಿಕ್ಕಿ। ಬಂಧಿಸಿ। ಜಪಮಾಲಿಕೆಯಂರಚಿಸಿ। ಬಳಿಕಶ್ರೀಗುರುವಿನಹಸ್ತದಿಂದಾಮಾಲೆ ಗೆಪಂಚಗವ್ಯ ಪಂಚಾಮೃತಂಗಳಂ ಓಂ ಯೆಂಬಮಂತ್ರದಿಂದಲೇ ಜಲಸ್ನಾನ ವಂಮಾಡಿಸಿ। ಮೇಲೆಗಂಧಪುಷ್ಪಾದಿಗಳಂ ಪ್ರತ್ಯೇಕಮಣಿಗಳಂ ಮುಟ್ಟಿಮು ಟ್ಟಿ। ಓಂಯೆಂಬಮಂತ್ರದಿಂದರ್ಚಿಸಿ। ನೈವೇದ್ಯ ತಾಂಬೂಲಾದಿಗಳಂ ಸಮ ರ್ಪಿಸಿ ಮೇಲೆದಂಡನಮಸ್ಕಾರ ದಕ್ಷಿಣಾದಿವಿಧಿಗಳಂ ಗುರೂಪದೇಶಾನುಗ್ರಹ ಪೂರ್ವಕಮಾಗಿ ಜಪಮಾಲೆಯಂ ಪರಿಗ್ರಹಿಸಿ । ಬಳಿಕತಾನು ಜಪಂಗೈವಲ್ಲಿ ಮೊದಲು ಜಪಮಾಲೆಗೆ ಜಲಪುಷ್ಪಂಗಳಿಂದರ್ಘ್ಯಮಂ ಶಕ್ತಿಮುದ್ರೆಯಿಂ ಮಂತ್ರಸಹಿತಮಾಗಿಕೊಟ್ಟು । ಮೇಲಾಜಪಮಾಲೆಯಂಸ್ಥೂಲಾದಿ ಸೂ ಕ್ಷ್ಮಾಂತಮಾಗಿ ಜಪಂಗೈವುದೇಉತ್ಪತ್ತಿ। ಸೂಕ್ಷ್ಮಾದಿಸ್ಥೂಲಾಂತಮಾಗಿಜಪಿ ಸುವದೇಸಂಹಾರವೆಂದರಿತು । ಪರನೃಷ್ಟಿಗೋಚರವಾಗದಂತೆ। ಶೀಘ್ರವಲ್ಲ ದೆ । ಮಂದವಲ್ಲದೆ। ಪ್ರತ್ಯೇಕಮಣಿಗೊಮ್ಮೊಮ್ಮೆ ಮಂತ್ರೋಚ್ಚಾರಣದಿಂ ಜಪಿಸಬೇಕಾಗ ಪ್ರಮಾದವಶದಿಂ ಮಾಲಪತನವಾಗೆ। ಮಂತ್ರಹಾನಿಯಹು ದಾಗಿ। ಮತ್ತೆಮೊದಲಿಂಪ್ರಾರಂಭಿಸಿಜಪಿಸಿ। ಮೇರುವನುಲ್ಲಂಘಿಸದೆ। ಪ್ರದಕ್ಷಿ ಣಮಾಗಿ ತಿರುಹಿಕೊಂಡು ನಮಸ್ಕರಿಸಿ। ಮೇಲೆಮೊದಲಂತೆ ಪ್ರಾರಂಭಿಸುತ್ತೆ। ಇಂತುತನ್ನ ನೇಮದಜಪಸಮಾಪ್ತಿಯಾದಮೇಲೆಯುಂಜಪಮಾಲೆಗರ್ಘ್ಯ ಕೊಟ್ಟು। ವಾಮಹಸ್ತದಿಂಜಪಮಾಲೆಯಂಮುಟ್ಟದೆ। ಕಂಠಾದಿಗಳೊಳ್ ಧರಿಸ ದೆ। ಜಪಕಾಲಂಗಳಲ್ಲಿಯೇ ಜಪಂಗೈದು । ಸದಾಶುದ್ಧಸ್ಥಳದಲ್ಲಿರಿಸಬೇಕೆಂ ಬುದನರಿತಂಗೀಕರಿಸಲಕ್ಕುಂ॥

—* ಜಪಾದಿಗಳಿಗೆ ಸ್ಥಾನಾದಿಗಳು. *—

ಬಳಿಕ- ಗೃಹ-ಗೋಷ್ಟ-ನದೀತೀರ-ಸಮುದ್ರತಟ-ಮಹಾಗಿರಿ-ಪುಣ್ಯಾ ಶ್ರಮ ದೇವಾಲಯ-ಮನೋಹರವನ್ನಸ್ಥಾನಗಳು-ಉತ್ತರೋತ್ತರಪುಣ್ಯ ಫಲ ಮುಂಟಾಗಿಹವನ್ನುಗಳಲ್ಲಿ । ಜಲಸನ್ನಿಧಿ- ದೀಪಸನ್ನಿಧಿ-ಸೂರ್ಯಸನ್ನಿಧಿ

ಶಿವಸನ್ನಿಧಿಗಳೇ। ಜಪವಿಧಿಗುತ್ತರೋತ್ತರಪ್ರಕೃಷ್ಟವಿಶಿಷ್ಟ ಸನ್ನಿಧಿಗಳೆಂಬುದಂತಿಳಿವುದು। ಬಳಿಕಲ್ಲಿಪೂರ್ವಾಭಿಮುಖದಿಂವಶ್ಯ। ಅಗ್ನಿಯಿಂವ್ಯಾಧಿ। ದಕ್ಷಿಣಾಯಿಂದಭಿಚಾರದೋಷ। ನೈರುತ್ಯದಿಂಜನದ್ವೇಷ। ಪಶ್ಚಿಮದಿಂಧನಲಾಭ। ವಾಯುವ್ಯದಿಂದಾಕರ್ಷಣ।ಉತ್ತರದಿಂದೋಷಶಾಂತಿ।ಈಶಾನ್ಯದಿಂಮೋಕ್ಷಸಿದ್ಧಿಗಳಹವೆಂದು।ದಿಗ್ವಿಚಾರಮಂಮಾಡಿ ಜಪಿಸಲಕ್ಕುಂ॥

—* ಜಪಾಸನಫಲ. *—

ಬಳಿಕ ಬಿದರಿನಆಸನದೊಳು ಕುಳಿತು ಜಪಿಸದಾರಿದ್ರ್ಯ। ಪಾಷಾಣಾಸನದಿವ್ಯಾಧಿ। ಭೂಮ್ಯಾಸನದಿದುಃಖ। ದಾರ್ವಾಸನದಿದೌರ್ಭಾಗ್ಯ। ಮರದ ಆಸನದೊಳು ಸೋಲ। ತೃಣಾಸನದಲ್ಲಿಯಶೋಹಾನಿ।ತಳಿರಾಸನದಿಚಿತ್ತಚಾಂಚಲ್ಯ। ತ್ವಗಾಸನದಲ್ಲಿಮೋಹ। ಕಂಬಳಿಯಾಸನದಿದುಃಖಮೋಚನ। ವಸ್ತ್ರಾಸನದಿವ್ಯಾಧಿನಿವೃತ್ತಿ।ಶ್ವೇತಾಸನದಿಸಂಪದವೃದ್ಧಿ।ಕೃಷ್ಣಕಂಬಳವಸ್ತ್ರಾದಿಗಳಲ್ಲಿ ಸನ್ನಿಪಾತ। ರಕ್ತವಸ್ತ್ರದೊಳುಶತ್ರುಜಯ। ಧೂಮ್ರವಸ್ತ್ರದಲ್ಲಿಶತ್ರುಮರಣ। ಸಿಂಧೂರವಸ್ತ್ರದಲ್ಲಿವಶ್ಯ। ಧವಳವಸ್ತ್ರದಲ್ಲಿಸ್ತ್ರೀವಶ್ಯ। ಪಟ್ಟೆಯೊಳುಪುಷ್ಟಿ। ಪುಷ್ಪಾಸನದಲ್ಲಿ ದೇವತಾದಿವಶೀಕರಣ।ಧೌತವಸ್ತ್ರದಲ್ಲಿಮಂತ್ರಪ್ರಸಾದ। ಚಿತ್ರಾಸನದಲ್ಲಿಕಾರ್ಯಸಿದ್ಧಿ। ಕೃಷ್ಣಾಜಿನದಲ್ಲಿಜ್ಞಾನಸಿದ್ಧಿ। ಲೋಹಾಸನಗಳಲ್ಲಿ ಕ್ಷಣಿಕಫಲ।ವೃಕ್ಷಾಗ್ರಗಳಲ್ಲಿದೀರ್ಘಕಾಲಕ್ಕೆಫಲ। ಉದಕದಲ್ಲಿಸರ್ವದೋಷಶಾಂತಿ। ದೇವತಾನುಗ್ರಹ। ಶ್ಮಶಾನದಲ್ಲಿಭೂತವಶ್ಯ। ಮಳಲ್ಲಿನುಸೋವ್ಯಥೆ। ಉಯ್ಯಾಲೆಯೊಳುಚಿತ್ತದುಪರತಿ। ವ್ಯಾಘ್ರಚರ್ಮದೊಳು ಸಕಲಮಂತ್ರತಂತ್ರಯಂತ್ರಸಿದ್ಧಿ। ಜ್ಞಾನಸಿದ್ಧಿ। ಶಿವಾನುಗ್ರಹ ಮೋಕ್ಷಗ್ರಹವೆಂದು ನಿರ್ಧರಿಸಲಕ್ಕುಂ॥

—* ಆಸನಬಂಧಭೇದಂಗಳು. *—

ಬಳಿಕಾಯೆಂಭತ್ತುನಾಲ್ಕಾಸನಬಂಧಗಳೊಳಗೆ। ಸಿದ್ಧಾಸನ। ಪದ್ಮಾಸನ ಸ್ವಸ್ತಿಕಾಸನ।ವೀರಾಸನ।ಗೋಮುಖಾಸನ। ಸುಖಾಸನಂಗಳೇ ಜಪಸಿದ್ಧಿಗೆ ಯೋಗ್ಯಗಳಾದ ಷಡಾಸನಂಗಳು॥ ಮಿಕ್ಕ ಕುಕ್ಕುಟಾಸನ ಮುಂತಾದ ಯೆಪ್ಪತ್ತೆಂಟಾಸನಂಗಳುಂ ತಯಾಯೋಗಂಗಳಿ ಗುಪಯುಕ್ತವಾದರುಂ ಮಂತ್ರಜಪಕ್ಕುಚಿತವಲ್ಲವಾಗಿ। ಅವುಗಳೊಳಗೆ। ಸರ್ವಾಸನ। ದೇಶಿಕಾಸನ। ಶಿವಾಸನ। ದಕ್ಷಿಣಾಸನ! ನಿಜಾಸನ। ಧ್ಯಾನಾಸನವೆಂಬ ಪರ್ಯಾಯ ನಾಮಂಗಳುಳ್ಳ। ಭೂನಿಕ್ಷಿಪ್ತಸಮಪಾದದ್ವಯಯುಕ್ತವಾದ ಋಜ್ವಂಗಾಸ

ನವೆ| ಅಂಗೀಕರಿಸಲ್ತಕ್ಕದ್ದೆಂತ ಲುಂತತ್ಪ್ರಲಕ್ಷಣಂಗಳುಂಉಪದೇಶಸುಲಭ ಸೌಂತ್ರಲುಂತ್ರಿಳಯುಲಕ್ಕುಂ ॥

—* ಜಪಕಾಲದಲ್ಲಿಯಿತರತಕ್ಕ ಬಗೆ. *—

ಇಂತು ಸುಸ್ಥಿತಾಸನನಾಗಿ। ವಾಹನದಲ್ಲಿಯುಂ। ಮಂಚದಲ್ಲಿಯುಂ।ತಿರಿಗಾಡುವಿಕೆ। ಕವಚಕುಪ್ಪಸಮುಂತಾದವುಗಳ ತೊಟ್ಟಿರುವಿಕೆ।ವಸ್ತ್ರವಿಲ್ಲದೆ ದಿಗಂಬರನಾಗಿರುವಿಕೆ।ತಲೆಗಂಟುಬಿಚ್ಚಿ ಕೂದಲುಕೆದರಿರುವಿಕೆ।ಯೆಂಜಲು। ಪೈಲಿಗೆ। ಕೊಳೆಮುಂತಾದವುಗಳಿಂದ ಶುಚಿಯಾಗಿರುವಿಕೆ। ವಾಜ್ಞೆಯುಮಿಲ್ಲದೆ ಮಾತಾಡುವಿಕೆ। ಆಕಳಿಕೆ ಸೀನು।ತೂಕಡಿಕೆ।ಮಲಗುವಿಕೆ।ಎದ್ದುನಿಲ್ಲುವಿಕೆ।ನ್ಯೆರೆಮುರಿದುಕೊಳ್ಳುವಿಕೆ ಸಿಟ್ಟಿಯಾಗಿಕೂಡುವಿಕೆ। ಅಪಾನವಿಸರ್ಜನಮೂತ್ರ ರೇತೋವಿಸರ್ಜನ। ನಿಷ್ಠೀವನ।ಭಕ್ಷಣ।ಜಲಪಾನ।ಶಸ್ತ್ರ ತಾಂಬೂಲಚರ್ವಣ ಗಂಧ ಮಾಲ್ಯಾದಿಸ್ವೀಕಾರ। ಇತರವಿಷಯ ಪರಿಗ್ರಹ। ಲಕ್ಷ್ಯ ಚಲಿಸುವಿಕೆ। ಚಾಂಡಾಲದರ್ಶನ। ಚಾಂಡಾಲಸ್ಪರ್ಶನ। ಮೂರ್ಖಾರ್ಜವೋಕ್ತ್ಯಾದಿಗಳು। ಕಾಮುಕ್ರೋಧಾದಿಗಳು॥ ಗ್ರಹಸ್ಥಸ್ಪರ್ಶನ।ನಿಷಿದ್ಧ ವಿಷಯಸ್ಮರಣ। ಕ್ರಮಭಂಗವಿಸ್ಮೃತಿ। ಇತರ ಕರ್ಮಸಾಂಕರ್ಯಗಳೆಂಬ ಮಾಪತ್ತು ಮೂರಾದ ದೋಷಗಳಿಲ್ಲದೆ ಸ್ವಸ್ಥಚಿತ್ತದಿಂ ಸ್ಥಿರವೃತ್ತಿಯುಂ ಪ್ರಸನ್ನ ಚಿತ್ತೇಂದ್ರಿಯನ್ನು ಸುಗ್ರೀವಶಿಕ್ಷಾ ರೀತಿಯಾಗಿ। ಲಕ್ಷ್ಯಕ್ರಮಾಗ್ರತೆಯುಳ್ಳ ಮುದ್ರಾಸಹಿತನಾಗಿ। ಭಸ್ಮರುದ್ರಾಕ್ಷಾದಿಜಪಾಭರಣಸಂಪನ್ನನಾಗಿ।ಶ್ರೀಗುರು ಲಿಂಗ ಪರಮೇಶ್ವರ ಚರಣಪದನಾರಾಧನೆಗಳಿಂ ಮಾಡಿ।ಧ್ಯಾನಯೋಗಾದಿಗಳಿಂ ತನ್ನೊಳಹೊರಗೆಲ್ಲಮುಂ। ದೇವತಾದಾತ್ಮ್ಯವಮಂಪಡೆದು। ನೈರಂತರ್ಯಾನುಸಂಧಾನದಿಂ ಸ್ವಪಾತ್ರಶಾಸ್ತ್ರವಾಗಿಯುಂ। ಸ್ಫುಟರೀತ್ಯುಚ್ಚಾರವಾಗಿಯುಂ। ಸಸ್ವರವಾಗಿಯುಂ। ಅರ್ಥಯುಕ್ತವಾಗಿಯುಂ। ನಿರ್ದುಷ್ಟವಾಗಿಯುಂ। ಮಂತ್ರಜಪಂಗೈಯಲದು ಫಲಕಾರಿಯಪುದೆಂದು। ತಿಳಿಯಲ್ವೇಳ್ಕುಂ॥

—* ಪ್ರಾಣಾಯಾಮಯೋಗ. *—

ಬಳಿಕ ಪ್ರಾಣಿಯುಶರೀರದೊಳು ಅವಸ್ಥಾತ್ರಯದಲ್ಲಿಯುಂ। ಕ್ರಮದಿಂ ಶಿವಜೀವಸಂಬಂಧಮುಣ್ಣ। ಪ್ರಾಣಪಾನಗಳಗತಿಯು ನಿರಂಕಶವಾಗಿರ್ಪುದರಿಂ ಲೋಕಯಾತ್ರೆನಡೆವುದಾಗಿ। ಶರೀರಕಪಾಪಕ್ಕೆ ಶ್ವಾಸಗತಿಯೇ ಮೂಲವೆಂದರಿತು। ಆ ಪ್ರಾಣವಂ ಅಪಾನದೊಳು। ಅಪಾನವಂ ಪ್ರಾಣದೊಳು।ಪ್ರಾಣಾಪಾನಗಳೆರಡಂ ಹಂಸಪ್ರಣವಾಗ್ನಿಯೊಳು ಹೋಮಂಗೈದು। ಪರಿಶುದ್ಧ

ನಾಗುವಿಕೆಯೇ ಪ್ರಾಣಾಯಾಮಯೋಗವೆಂದರಿತು । ಸೂರ್ಯಭೇದ ಸ್ವರಗಳೆಂಬ। ದಕ್ಷಿಣವಾಮನಾಸಾರಂಧ್ರನಿರ್ಗಮನಾಗಮನಪ್ರಶ್ವಾಸಾಯುಗಳಾದ ಇಡಾಪಿಂಡಗಳಗಳಗತಿಗಳಂ। ನಿರೋಧಿಸಿ। ದಶಪ್ರಣವ। ಏಕಮಂತ್ರ।ತ್ರಿಬೀಜಗಳಂಸನಾನಸ್ಥಿತಿಯಿಂಬಲಪಾಗಿನಲ್ಲಿರೇಚಿಸಿ। ದ್ವಾದಶಪ್ರಣವಗಳಂ ದೇಕಮಂತ್ರದಿಂಪಂಚಬೀಜಗಳಿಂದೆಡವಮೂಗಿನಲಿಪೂರಿಸಿ । ಷೋಡಶಪ್ರಣವಗಳಂ ೩ಕಮಂತ್ರದಿಂ। ಸಪ್ತವ್ಯಾಹೃತಿಗಳಂ।ಗಾಯತ್ರೀತುರೀಯಮಂತ್ರಬೀಜಗಳಂ । ಭ್ರೂಮಧ್ಯಸಂಷುಮ್ನಾಸ್ಥಾನವಾ ಜ್ಯೋತಿರ್ಮಂಡಲದಲ್ಲಿ ಕುಂಭಿಸಿ। ಇಂತಾರೋಹಣ ಕ್ರಮದಿಂಸಾಧಿಸಿದೊಡೆ। ಕುಂಭಕದೊಳುದೀವಿತಾದರ್ಶನ। ಲಕ್ಷ್ಯಸ್ಥ್ಯ ಶಿವಾರ್ಚನೆಗಳಂಮಾಡಲುಪಯುಕ್ತವೆಂದರಿತು! ಬಳಿಕತತ್ಸಾಧನಗಳೊಳು । ದಕ್ಷಿಣಕರದಕನಿಷ್ಠ। ಅನಾಮಿಕೆ।ಅಂಗುಷ್ಠವೆಂಬಂಗುಳಿತ್ರಯದಿಂದ। ವಾಮದಕ್ಷಿಣನಾಸಾಪುಟಗಳಂಪಿಡಿದು।ಮೇಲೆ ಬ್ರಹ್ಮವಿಷ್ಣುರುದ್ರಾಧಿದೈವತಮಪ್ಪ। ಅಕಾರ ಉಕಾರ ಮಕಾರಾತ್ಮಕವಾದ ಪ್ರಣವದಲ್ಲಿ। ಬ್ರಹ್ಮದೇವತಾಕವಾದಪ್ರಣವಾದ್ಯಕಾರಮಂಚಿಂತಿಸುತ ಇಡೆಯೊಳ್ ಪವನನಅಥಾಶಕ್ತ್ಯಾನುಸರಣದಿಂದುದರಲ್ಲಿಪೂರಿಸಿ। ಬಳಿಕ ವಿಷ್ಣ್ವಾಧಿದೇವತಾಕವಾದ ಪ್ರಣವಮಧ್ಯಮಪ್ಪ ಉಕಾರಮಂ ಸುಷುಮ್ನೆಯೊಳ್ ಧ್ಯಾನಿಸುತ। ಪೂರಿತವಾಗಿದ್ದ ಪ್ರಾಣವಾಯುವನಲ್ಲಿಯೇ ಕುಂಭಿಸಿ । ಬಳಿಕ ರುದ್ರಾಧಿದೇವತಾ ಕವಾದಪ್ರಣವದಂತ್ಯಮಪ್ಪಮಕಾರಮಂಸ್ಮರಿಸಿ। ಕುಂಭಿತವಾಗಿದ್ದವಾಯುವಂ ಮೆಲ್ಲನೆ ಪಿಂಗಳೆಯಿಂರೇಚಿಸಿ ಮೇಲಾಯಮಂತ ಕ್ರಮವಿಡಿದು । ಮತ್ತೆಪಿಂಗಳೆಯಿಂಪೂರಿಸುತ್ತುದದರಲ್ಲಿ ಕುಂಭಿಸುತ್ತಿಡೆ ಯಿಂರೇಚಿಸುತಿಂತುಪ್ರಾಣಾಯಾಮಂತ ಯಮಂ ಮಾಡಲು। ಸರ್ವಪಾಪಪರಿಹರವಾಗಿ।ಶಿವಪ್ರಸಾದಮಂ ಪಡೆಯಲುಯೋಗ್ಯತೆಸಿದ್ಧಿಸುವದೆಂದು ತಿಳಿಯಲಕ್ಕುಂ ॥

## — ಮಂತ್ರಾಂಗಗಳು. —

ಮೇಲೆ ಸಕಲ ಮಂತ್ರಗಳಿಗೂ ಸಾಧಾರಣವಾಗಿ । ಆಯಾಮಂತ್ರಗಳಿಗೆ ಋಷಿ-ದೇವತೆ-ಛಂದಸ್ಸು-ಬೀಜ-ಶಕ್ತಿ-ಕೀಲಕ-ಸ್ವರ-ವರ್ಣ-ಸ್ಥಾನ-ಅಕ್ಷರ-ಕಲೆ-ತತ್ವ-ಲಕ್ಷ್ಯ-ಅರ್ಥ-ಚಿಂತನಾದಿಗಳೆಂಬಂಗಗಳಲ್ಲಿ। ಮುಖ್ಯವಾಗಿ-ಮಂತ್ರಕ್ಕೆಪ್ರಥಮದ್ರಷ್ಟವಾದಋಷಿಯುನೇಮಸ್ತಕದಲ್ಲಿ।ಮಂತ್ರಾಕ್ಷರಸಂಖ್ಯಾರೂಪಮಪ್ಪ ಛಂದಸ್ಸಿನಂಮುಖದಲ್ಲಿ! ಮಂತ್ರವಾಚ್ಯವಾದಧಿದೇವತೆಯುನೇಹೃದಯದಲ್ಲಿ। ಮಂತ್ರದೇವತಾನಾಮವರ್ಣ ವಿಶೇಷ

ವಾದ ಬೀಜವನೇನಾಭಿಯಲ್ಲಿ। ಮಂತ್ರಸಿದ್ಧಿಪ್ರದವಾದಕುಂಡಲಿನ್ಯಾದಿ ಶಕ್ತಿಯನೇಗುಹ್ಯದಲ್ಲಿ। ಮಂತ್ರವಿಘ್ನನಿವರ್ತಕವಾದಕೀಲಕವಂ ಪಾದದಲ್ಲಿ ಬೇರೆಮಂತ್ರರಕ್ಷಕರಾದಉಮಾ ವಿಘ್ನೇಶ್ವರರನೇಕ್ರಮದಿಂ ವಾಮದಕ್ಷಿಣ ಭುಜ ದ್ವಯದಲ್ಲಿ। ಋಷಿಯೇನವುಮಿತೆಂಬಕ್ರಮದಿಂ ಚತುರ್ಥ್ಯಂತವು ಸ್ವರಪೂರ್ವಕವಾಗಿ। ಆಯಾಸ್ಥಾನಂಗಳಂ ಮುಟ್ಟಿಮುಟ್ಟಿಸ್ಮರಣಂಗೈದು। ಮತ್ತೆ ಮಾಮಂತ್ರಂಗಳಂ। ಕರನ್ಯಾಸ। ದೇಹನ್ಯಾಸ। ಅಂಗನ್ಯಾಸವೆಂಬನ್ಯಾಸತ್ರಯಮಂ ಉತ್ಪತ್ತಿಸಂಹಾರಭೇದಗಳಂ। ಪೂರ್ವೋಕ್ತ ಕ್ರಮದಿಂದರಿತು ಮಾಳ್ಪುದದರಲ್ಲಿ। ಗೃಹಸ್ಥಂಗೆ। ಮುತ್ತೈದೆಗೆಯುಂ ವಿಧವೆಗುಂ। ಸ್ಥಿತಿನ್ಯಾಸವಹುದು। ಬ್ರಹ್ಮಚಾರಿಗುತ್ಪತ್ತಿನ್ಯಾಸವಕ್ಕುಂ। ವಾನಪ್ರಸ್ಥಯತಿಗಳಿಗೆಸಂಹಾರನ್ಯಾಸಯೋಗ್ಯವೆಂದುತಿಳಿಯಲ್ವೇಳ್ಕುಂ.

— ಜಪಾಂಗುಳೀ ವಿನಿಯೋಗಾದಿ. —

ಬಳಿಕ-ಅಂಗುಷ್ಠದಿಂಮೋಕ್ಷ। ತರ್ಜನಿಯಿಂಶತ್ರುಹಾನಿ। ಮಧ್ಯಾಂಗುಳಿಯಿಂದರ್ಥಸಿದ್ಧಿ। ಅನಾಮಿಕೆಯಿಂಶಾಂತಿ। ಕನಿಷ್ಠಿಕೆಯಿಂರಕ್ಷಣಗಳಹವವ್ರುಗಳಲ್ಲಿ ಮಧ್ಯಾಂಗುಷ್ಠಯೋಗದಿಂ ಮಾಲೆಯಂಪಿಡಿದು। ಜಪಂಗೈವು ದೇಶಷ್ಠವೆನಿಸುವದು। ತರ್ಜನ್ಯಂಗುಷ್ಠಯೋಗದಿಂ ಜಪಿಸುವದೇಮಧ್ಯಮವೆನಿಸುವದು।ಅನಾಮಿಕಾಂಗುಷ್ಠಯೋಗದಿಂ ಜಪಂಗೈವುದೇಉತ್ತಮವೆನಿಸುವದು। ಬಳಿಕಲ್ಲಿ ಮಧ್ಯಂಗುಷ್ಠದಿಂ ಬಾಹ್ಯಜಪಂಗೈದು।ತರ್ಜನ್ಯಂಗುಷ್ಠಗಳಿಂದುಪಾಂಶುಜಪವಂಮಾಳ್ಪುದು। ಅನಾಮಿಕಾಂಗುಷ್ಠಗಳಿಂಮಾನಸಜಪಂಗೈಯಲ್ವವದರಲ್ಲಿ।ಪರಶ್ರುತಿಗೋಚರವಪ್ಪಂತೆ ಉಚ್ಚರಿಪುದೇ ವಾಚಕಜಪವೆನಿಸುವದು। ಸ್ವಶ್ರುತಿಗೋಚರವಾಗಿಓಷ್ಠಸ್ಪಂದಮಾತ್ರದಿಂದುಚ್ಚರಿಪುದೇ ಉಪಾಂಶುಜಪವಪ್ಪುದು। ಮಂತ್ರವಾಕ್ಯಾರ್ಥಚಿಂತನಂಗೈಯಲ್ವವದೇ ಮಾನಸಜಪವಹುದು। ಅದರೊಳಗೆವಾಚಕಜಪವೇ ಕ್ಷುದ್ರಕಾರ್ಯಂಗಳಿಗುಪಯುಕ್ತವಾಗಿಪ್ಪುದು। ಉಪಾಂಶುಜಪವು ಸಕಲಸಿದ್ಧಿಗಳಿಗೂ ಕಾರಣವಾಗಿಹುದು। ಮಾನಸಜಪವುಮುಕ್ತಿಸಾಧನವಪ್ಪುದೆಂದು ನಿಶ್ಚಯಿಸಲಕ್ಕುಂ॥

— ನವಾವರಣಗಳು. —

ಮತ್ತೆ ಮಾಮಂತ್ರಗಳಿಗೆ ವಾಚ್ಯವಾಚಕಸಂಬಂಧಗಳಸರಿತು ಪೇಳ್ವೆ ಪಂಚಬ್ರಹ್ಮಷಡಂಗಗಳೇ ಪ್ರಥಮಾವರಣ-ಅನಂತಾದ್ಯಷ್ಟವಿದ್ಯೇಶ್ವರರು ದ್ವಿತೀಯಾವರಣ। ಉಮೆ, ಚಂಡೀಶ್ವರ, ನಂದಿಕೇಶ್ವರ, ಮಹಾಕಾಳ, ಭೈರ

ಗಿರಿಶ, ಗಣಪತಿ, ವೃಷಭ, ಷಣ್ಮುಖರೆಂಬ ಅಷ್ಟಗಣೇಶ್ವರರೇ ಮೂರನೆ ಆವರಣ। ಇಂದ್ರಾದ್ಯಷ್ಟದಿಕ್ಪಾಲಕರು-ಬ್ರಹ್ಮವಿಷ್ಣುಗಳೆಂಬ ದೇವತಾದಶಕವು ನಾಲ್ಕನೇ ಆವರಣ। ವಜ್ರಪದ್ಮಚಕ್ರಾದಿದಶಾಯುಧಂಗಳು ಐದನೆ ಆವರಣ। ಬ್ರಾಹ್ಮ್ಯಾದಿಸಪ್ತಮಾತೃಕೆಗಳಾರನೆಯಾವರಣ। ಅಷ್ಟವಸುಗಳೇಳನೇ ಆವರಣ। ಏಕಾದಶರುದ್ರರೆಂಟನೇ ಆವರಣ। ಆದಿತ್ಯಾದಿಸಪ್ತಗ್ರಹಗಳೊಂಭತ್ತನೇ ಆವರಣ। ಮಹದಾಗಿ ಪಂಚಾಕ್ಷರಿಮಂತ್ರಾಧಿದೇವತೆಯಾದ ಸದಾಶಿವಮೂರ್ತಿಯಂ ಆವರಣಸಹಿತವಾಗಾದರೂ । ನಿರಾವರಣವಾಗಾದರೂ ಧ್ಯಾನಿಸುತ್ತ ಜಪಿಸಬಹುದಾದರೂ। ಸದ್ಯೋಜಪ, ನಿಷ್ಕಾಮಜಪ ಸಾತ್ವಿಕಜಪ, ಮಾನಸಿಕಜಪಗಳಿಗೆ ನಿರಾವರಣವಾಗಿಯುಂ। ಚಿರಕಾಲಜಪ ಸಕಾಮಜಪ, ರಾಜಸತಾಮಜಪಗಳಿಗೆ ಆವರಣಸಹಿತವಾಗಿಯುಂ ಧ್ಯಾನಿಸಬೇಕೆಂದು ತಿಳಿಯಲ್ವೇಳ್ಕುಂ।

— ಧ್ಯಾನಲಕ್ಷಣ. —

ಬಳಿಕ ಮಂತ್ರಜಪಿಯು । ಮಂತ್ರವಾಚ್ಯವಾದ ದೇವತಾಕೃತಿಯಂ ಶಾಸ್ತ್ರದಿಂದರಿತು । ಲೋಕದೃಷ್ಟವಾದ ಪ್ರತಿಮಾದಿಗಳಂತೆಯಾಗಲಿ, ಜ್ಯೋತಿರಾಕಾರವಾಗಿಯುಂ, ಸಾಂಗವಾಗಿಯುಂ, ಸಾಲಂಕಾರವಾಗಿಯುಂ, ತನ್ನ ಧಾರಣೆಗೆತಕ್ಕಂತೆ । ನಾಸಾಗ್ರಸಮೀಪದಲ್ಲಿ ಬಾಹ್ಯದೃಷ್ಟಿಯಿಂದಲಾದರುಂ, ಸೂರ್ಯಚಂದ್ರದೇವತಾಲಯ ವಿಗ್ರಹಚಿತ್ರಾದಿಬಿಂಬಗಳಲ್ಲಿ ದೂರದೃಷ್ಟಿಯಿಂದಲಾದರುಂ। ಅಂತರ್ಲಕ್ಷ್ಯದಿಂ ಭ್ರೂಮಧ್ಯ।ಕಂಠ, ಬಿಂದು, ಸಹಸ್ರಾರ, ಮೂಲಾಧಾರಾದಿಗಳಲ್ಲಾದರು, ಉಕ್ತವರ್ಣದಿಂ ಪರಿಭಾವಿಸಿ। ಅಭ್ಯಾಸವಶದಿಂ ದೃಢವಾಗಿಪ್ಪ ಲಕ್ಷ್ಯದೋಳ್ ಮನಮಂ ಪರಿಚಾರಕಂ ಗೊಳಿಸಿ। ಮಂತ್ರಾಕ್ಷರಗಳೆಂಬ ಪೂಜೋಪಹಾರಂಗಳಂ। ತತ್ತ್ವಪ್ರಕರಣಗಳಂ ಸಭಕ್ತಿಕವಾಗಿ ಸಮರ್ಪಿಸುತ। ತದ್ದರ್ಶನಜನಿತಾನಂದಮಗ್ನನಾಗಿ। ಹೇಯವಂ ಮರೆತು । ದೇವತಾಜ್ಞಪ್ತಿಮಾತ್ರಾವಶಿಷ್ಟನಾಗಿರ್ಪ್ಪದೇ ಧ್ಯಾನವೆನಿಸುವದಾಗಿ ಧ್ಯಾನಯೋಗವೇ ಸರ್ವಯೋಗಗಳೊಳಂ ಮುಖ್ಯವೆಂದು ತಿಳಿಯಲ್ವೇಳ್ಕುಂ॥

— ಧ್ಯಾನಕ್ರಮಫಲಾದಿಗಳು. —

ಬಳಿಕಾ ಧ್ಯಾನಕ್ರಮದಲ್ಲಿ, ಪಂಚಾಕ್ಷರಮಂತ್ರಾಧಿದೇವತೆಯಾಗ ಪರಶಿವಂಗೆ ಅಘೋರಾದಿ ಘೋರಮೂರ್ತಿಯೆಂದು। ಸದಾಶಿವಾದಿಮಿಶ್ರಮೂರ್ತಿಯೆಂದು। ಸಾಂಬಶಿವಾದಿಶಾಂತಮೂರ್ತಿಯೆಂದು। ತ್ರಿವಿಧಮೂರ್ತಿಗಳುಂಟು

ವುಗಳಲ್ಲಿ ಘೋರಮೂರ್ತಿಧ್ಯಾನದಿಂ ಪಾಪ ರೋಗ ಶತ್ರುದುಃಖಾದಿಗಳ್ ಕ್ಷಿಪ್ರವಾಗಿ ನಿವಾರಣವಹುದು। ಮಿತ್ರಮೂರ್ತಿಧ್ಯಾನದಿಂ ಚಿರಕಾಲಕ್ಕೆ ಸಕಲ ಸಿಧ್ಯಾದಿಗಳಹವು। ಶಾಂತಮೂರ್ತಿಧ್ಯಾನದಿಂ ಶೀಘ್ರ ಚಿರಕಾಲವಿಲ್ಲದೆ ಶಾಂತಿ ಪ್ರಜ್ಞಾದಿಸಿದ್ಧಿಗಳಹವೆಂದು ನಿರ್ಧರಿಸಲಕ್ಕುಂ.

— ದ್ವಿವಿಧಜಪ. —

ಮತ್ತಮೀಮಂತ್ರಯೋಗದಲ್ಲಿ ಭಾವನಾಚಿತ್ರಸ್ಥೈರ್ಯಾದಿಗಳಿಲ್ಲದೆಯುಂ ಜಪಮಾತ್ರಫಲಾಪೇಕ್ಷೆಯಿಂದಲುಂ-ಫಲಾಭಿಸಂಧಿಯಿಲ್ಲದೇ ಯಥಾಲಾಭ ಸಂತುಷ್ಟಿಯಿಂದಲಾದರುಂ, ದೇವತಾಮೂರ್ತಿಧ್ಯಾನವಿಲ್ಲದೆ-ಮಂತ್ರಮಾತ್ರಮಂ ಕ್ರಮದಿಂಜಪಿಸಲದು ಅಗರ್ಭಜಪವೆನಿಸುವದು.-ಪೂರ್ವೋಕ್ತಧ್ಯಾನ ಲಕ್ಷಣಾದಿಗಳನರಿತುಸಾಧಿಸಿ। ವಿಧಿವತ್ತಾಗಿಧ್ಯಾನದಿಂದೊಡಗೂಡಿ ಜಪಿಸುವದೇ ಸಗರ್ಭಜಪವೆನಿಸುವದಾಗಿ। ಅಗರ್ಭಜಪಕ್ಕಿಂತಲೂ। ಸಗರ್ಭಜಪವೇಕೋಟಿಗುಣಫಲಾಧಿಕವೆಂದು ವಿವೇಕಿಸಲಕ್ಕುಂ॥

— ಮಂತ್ರಗರ್ಭಗಳು. —

ಬಳಿಕಾಮಂತ್ರಗಳಿಗೆ। ಆತ್ಮಗರ್ಭ, ಶಿವಗರ್ಭ, ಶಕ್ತಿಗರ್ಭಗಳೆಂಬಗರ್ಭತ್ರಯಮುಂಟದರಲ್ಲಿ- ಆತ್ಮಗರ್ಭಮಾಗೆಫಲಿಸಲುಸಮರ್ಥಮಹುದು। ಶಿವಗರ್ಭಮಾಗೆಫಲಿಸದೆ ನಪುಂಸಕವಹುದು।ಶಕ್ತಿಗರ್ಭಮಾಗೆ ಭುಕ್ತಿಮುಕ್ತಿಪ್ರದಮಹದೆಂದು ಜಪರಹಸ್ಯಂಗಳಂಸಂಪ್ರದಾಯಜ್ಞರಾದಮಾಂತ್ರಿಕರಿಂದುಪದೇಶಪೂರ್ವಕಮಾಗಿ ತಿಳಿಯಲಕ್ಕುಂ॥

— ಜಪೋಪಸಂಹಾರ. —

ಇಂತು ವಿಧ್ಯುಕ್ತಮಾಗಿ ಜಪಂಗೈದಬಳಿಕ-ಜಪಸಮಾಪ್ತ್ಯರ್ಥಮಾಗಿ ಪೂರ್ವೋಕ್ತಮಾದವಿಧಿಗೆ ವಿಪರೀತವಾದ-ವಿಲೋಮಪ್ರಾಣಾಯಾಮಂತ್ರಯದಿಂ-ಮೊದಲಂತೆಛಂದಸ್ಸು ಋಷಿದೇವತೆಗಳಂಸ್ಮರಿಸಬೇಕೆಂತಲುಂ। ಧ್ಯಾನಲಕ್ಷ್ಯನ್ಯಾಸಾದಿಗಳಿಂದಿಗ್ಬಂಧನಮಾಡಲ್ಪಟ್ಟದ್ದ। ಉಪಾಸ್ಯವಾದ ದೇವತೆಯುಂ ದಿಗ್ವಿಮೋಕಂಗೊಳಿಸಿ। ಮರಳಿದೇವತೆಯುಂ ಅಭಿಮುಖಿಮಾಡಲೋಸುಗವಾಗಿ ಪ್ರಾರ್ಥಿಸಬೇಕೆಂತಲುಂ। ತತ್ತನ್ಮಂತ್ರಜಾಪಿಯುತತ್ತದ್ದೇವತಾ ಸಂಧ್ಯಾವಂದನಾರ್ಘ್ಯಬಲಿಯಂತ್ರಬಿಂಬಪೂಜಾಸ್ತಪರ್ಯಾಯ ಣತರ್ಪಣಹೋಮಾದಿಗಳಂ ಮಾಡುತ್ತಿರಬೇಕೆಂತಲುಂನಿರ್ಧರಿಸಿ- ಮಂತ್ರಯೋಗವೆನಿಂತುಬಿಡದೆ ಭ್ಯಾಸಂಗೈವಾತಂಗೆ। ಯಜ್ಞದಿಂ ಸರ್ವಪಾತಕಗಳೂಪರಿಹರಮಪ್ಪವೆಂತಲುಂ। ಸರ್ವಕಾಮ್ಯಾರ್ಥಗಳೂ ಸಿದ್ಧಿಸುವವೆಂತ

ಲುಂ-ಶಿವಾನುಗ್ರಹದ್ವಾರಾಜ್ಞಾನಕಾರಣವಾಗಿ ಮೋಕ್ಷವೆನಿಪ್ಪುದೆಂತಲುಂ ಸಿದ್ಧಾಂತಿತಮಹುದರಿಂ। ಗುರುಕೃಪೆಯಿಲ್ಲದೆ। ಶಾಸ್ತ್ರಾಭ್ಯಾಸಯುಕ್ತಮಾದಬಲದಿಂ ದನುಷ್ಠಿಸಲಾಗದೆಂತಲುಂ-ಉಪದೇಶವಿಲ್ಲದೇ ಜಪಿಸಿದಮಂತ್ರಗಳುಬುನ್ಮಾದಾದಿಕೇಡುಗಳಂ ಮಾಳ್ಪುದೆಂತಲೂ ಉಪದೇಶಪ್ರಸಂಜಿಕೆಯುಂ ಪ್ರಯೋಜಕವಹುದೆಂತಲೂ ನಿರ್ಧರಿಸಲಕ್ಕುಂ॥

—* ಶಿವಪೂಜಾವಿಷಯ. *—

ಅನಂತರಮೊಳಂತು। ಭಸಿತರುದ್ರಾಕ್ಷ ಪಂಚಾಕ್ಷರಮಂತ್ರಸಿದ್ಧನಾದ ಶೈವಂಗೆ, ಶಿವಪೂಜನವೇಕರ್ತವ್ಯಮಹುದದರಲ್ಲಿ ಮೂಲಾಭಿಷೇಕದಿಂ ತರುಶಾಖೋಪಶಾಖಪಲ್ಲವ ಕುಸುಮ ಫಲಾದಿಗಳೆಲ್ಲಂ ಉಜ್ಜೀವಿಸಿ ರಸಯುಕ್ತಮಪ್ಪಂತೆ! ಪ್ರಾಣೋಪಹಾರದಿಂದಿಂದ್ರಿಯ ಸಮೂಹವೆಲ್ಲಂ ಪರಿಪ್ರೀಣಿಸಲ್ಪಡುವಂತೆ। ಗೃಹಪತಿಯಂತೃಪ್ತಿಗೊಳಿಸಲು ಗೇಹವಾಸಿಗಳೆಲ್ಲರೂ ತೃಪ್ತರಪ್ಪಂತೆ। ಸರ್ವದೇವತಾಮೂಲಭೂತಶಿವಾರ್ಚನೆಯೊಂದರಿಂದಖಿಲದೇವತಾಸಂತುಷ್ಟಿಯುಂ। ಸಕಲಪುರುಷಾರ್ಥಗಳುಂಸಿದ್ಧಿಸುತ್ತಿಪ್ಪವಾಗಿ ಚಂದ್ರಮಂಡಲ ಸೂರ್ಯಮಂಡಲವಹ್ನಿ ಗಂಗೆ, ಸ್ಥಂಡಿಲ ಕಲಶ ಪುಸ್ತಕ ಸಾಲಗ್ರಾಮಗಳೆಂಬಿವರಲ್ಲಿಯುಂ ವಿಗ್ರಹ ಚಿತ್ರ ಮಾನುಷರೆಂಬಮೂರುಸ್ಥಾನಂಗಳಲ್ಲಿಯುಂ, ಪೃಥಿವಿ ಅಪ್ಪುತೇಜಸ್ಸು ವಾಯು ಆಕಾಶ ಸೂರ್ಯ ಚಂದ್ರ ಜೀವರೆಂಬ ಅಷ್ಟಮೂರ್ತಿಗಳಲ್ಲಿಯುಂ। ಶರೀರ ವೃಕ್ಷ ಪರ್ವತಾದಿ ಉಪಾಧಿಗಳಲ್ಲಿಯುಂಶಬ್ದಸ್ಪರ್ಶರೂಪರಸಗಂಧಗಳೆಂಬ ಪಂಚತನ್ಮಾತ್ರಗಳಲ್ಲಿಯುಂ ವಿವೇಕಿಸಲು ಪ್ರಪಂಚದೊಳಗುತ್ತಮವಸ್ತುಗಳೆಲ್ಲದರಲ್ಲಿಯುಂ ಶಿವಶಕ್ತಿಗಳಸಾನ್ನಿಧ್ಯವಿಪ್ಪುದಾಗಿ ಜಗತ್ತೇಶಿವಲಿಂಗಾಕಾರವಾದರುಂ, ಪೂಜಾಧಿಷ್ಠಾನಬಿಂಬಗಳಲ್ಲಿಲಿಂಗಾಧಿಷ್ಠಾನವೇ ಮಹಾವಿಶೇಷವಾಗಿ ಶಿವಲಿಂಗಾರ್ಚನವೇ ಸರ್ವೋತ್ತಮವೆಂದುನಿಗಮಾಗಮಂಗಳು ಸಾರುತಿರಲ್ಕೆ। ಶಿವಾರ್ಚನಾಂಗ್ಯೆಯೊಲೋಸುಗಶೈವನುಮೊದಲು ಶಿವಲಿಂಗಸ್ವರೂಪಮಂತಿಳಿದಿರಬೇಕವೆಂತೆಸೆ॥

—* ಶಿವಲಿಂಗಸ್ವರೂಪ. *—

ಬಳಿಕ ಸರ್ವಮಯನಾಗಿಯುಂ ಪೂರ್ಣನಾಗಿಯುಂ ಇರುವ ಪರಶಿವನಂ ತಾತ್ವಿಕವಾಗಿ ಆರಾಧಿಸಲರಿಯದೆಯುಂ, ಅಸ್ವಾರ್ಥರಾಗಿಯುಂಇರುವ। ಬ್ರಹ್ಮ ವಿಷ್ಣು ಮೊದಲಾದೆಲ್ಲದೇವತೆಗಳುಂ। ಋಷಿ ಮುನಿ ಯಕ್ಷ ಸಿದ್ಧಾದಿಗಳುಂ. ಪ್ರಮಥಗಣಂಗಳುಂ। ತಮ್ಮ ತಮ್ಮ ಶಕ್ತಿಗೆತಕ್ಕಂತೆ ಯೋಗ್ಯ

ಮಾಗಿ ಶಿವಲಿಂಗಬಿಂಬಗಳಂಭಾವಿಸಿಶಿವಪೂಜನಂಗೈವರಾಗಿ । ತತ್ತದಭಿಮತ ಮಾದಶಿವಲಿಂಗವು ತತ್ತನ್ನಾಮಕವಾಗಿಯುಂ ತತ್ತದೇವತಾತ್ಮಕವಾಗಿಯುಂ ತಿಳಿಲ್ಪಕ್ಕುದೆಂತೆನೆ॥

—* ಶಿವಲಿಂಗಭೇದ. *—

ಸ್ಫಟಿಕಶಿಲಾಮಯಲಿಂಗವಂಬ್ರಹ್ಮನು। ಇಂದ್ರನೀಲಮಯ ಲಿಂಗವಂವಿಷ್ಣುವು ಮರಕತರತ್ನಮಯಲಿಂಗವಂ ಉಪೇಂದ್ರನು ಚಿಂತಾಮಣಿಮಯ ಲಿಂಗವಂಇಂದ್ರನು ಸುವರ್ಣಮಯಲಿಂಗವಂಕುಬೇರನು ರಜತಮಯಲಿಂಗವಂ ವಿಶ್ವೇದೇವರ್ಕಳು ಪಿತ್ತಳಮಯಲಿಂಗವಂವಾಯುವು ಕಾಂಸ್ಯಮಯಲಿಂಗವಂವಸುಗಳು ಮೃಣ್ಮಯಲಿಂಗವಂ ಅಶ್ವಿನೀದೇವತೆಗಳು-ಧವಳಶಿಲಾಮಯಲಿಂಗವಂವರುಣನು-ಅನ್ನಮಯಲಿಂಗಅಗ್ನಿ-ತಾಮ್ರಮಯಲಿಂಗವಂಸೂರ್ಯನು ಮೌಕ್ತಿಮಯಲಿಂಗವಂ ಚಂದ್ರನು-ಚಿತ್ರವರ್ಣದಲಿಂಗವಂ-ನಕ್ಷತ್ರಗಳು- ಪಚ್ಚೆಯಲಿಂಗವಂ ಬುಧನು-ಕಾಂಚನ್ನಲಿಂಗವಂ ಶುಕ್ರನು-ಸೀಸ್ಯವುಲಿಂಗವಂ ಮಂಗಳನು-ಮಾಣಿಕ್ಯಲಿಂಗವಂ ರಾಹುಕೇತುಗಳು-ಗೋಮಯಲಿಂಗವಂನಿರರುತಿ ಕುಶಮಯಲಿಂಗವಂ ಸಮಸ್ತಋಷಿಗಳು ರುದ್ರಾಕ್ಷಮಯಲಿಂಗವಂ ಪ್ರಮಥರು- ಭಸ್ಮಗೋಳಕಮಯಲಿಂಗವಂಸಿದ್ಧರು- ಮೂಲಿಕಾಮಯಲಿಂಗವಂಧನ್ವಂತರಿ- ಶಂಕುಮಯಲಿಂಗವಂ ಮಾರ್ಕಂಡೇಯನು ಪವಿತ್ರಮಯಲಿಂಗವಂವಸಿಷ್ಠನು ದರ್ಭಸ್ತಂಭಮಯಲಿಂಗವಂ ವಿಶ್ವಾಮಿತ್ರನು ಕೂರ್ಚಮಯಲಿಂಗವಂ ವಾಮದೇವನುಸ್ವಸ್ವರೂಪಮಯ ಸದಾಶಿವಲಿಂಗವಂಸನಕಾದಿಜ್ಞಾನಯೋಗಿಗಳು-ಶಿರೋರತ್ನಮಯಲಿಂಗವಂ ನಾಗರ್ಕಳು ॥ ಅಯಃಕಿಟ್ಟಮಯಲಿಂಗವಂ ಬ್ರಹ್ಮರಾಕ್ಷಸಭೇತಾಳಪಿಶಾಚಾದಿಗಳು । ತ್ರಿಲೋಹಮಯಲಿಂಗವಂಗುಹ್ಯಕರುಪಂಚಲೋಹಮಯಲಿಂಗವಂಶಾಬರಾದಿಮಾತೃಕರು । ವಜ್ರಮಯಲಿಂಗವಂಸಪ್ತಮಾತೃಕೆಗಳು। ಪ್ರಸೂನಮಯಲಿಂಗವಂ ಮನ್ಮಥನು । ಇಚ್ಛಾಜ್ಞಾನಕ್ರಿಯಾಮಯ ಲಿಂಗಗಳಂ ಲಕ್ಷ್ಮೀ ಪಾರ್ವತೀ ಸರಸ್ವತೀಯರು। ಪತಿಮಯಲಿಂಗವಂ ಅರುಂಧತ್ಯನಸೂಯಾಸಾವಿತ್ರ್ಯಾದಿ ಪತಿವ್ರತೆಯರು।ಬಿಲ್ವಫಲಮಯಲಿಂಗವಂ ಧರ್ಮದೇವತೆ । ಜಂಬೂಫಲಮಯಲಿಂಗವಂ ಮೃತ್ಯುಮೃತ್ಯುದೇವತೆ । ನಿಂಬಫಲಮಯಲಿಂಗವಂಆರೋಗ್ಯದೇವತೆ। ಗಿರಿಮಯಲಿಂಗವಂ ಪರ್ಜನ್ಯನು । ಆಕಾಶಲಿಂಗವಂ ದಿಗಂಬರರು । ಧ್ವಜಮಯಲಿಂಗವಂ ಗಗನಚಾರಿಗಳು । ನೋಹಮಯಲಿಂಗವಂಪಶ್ವಾದಿಗಳು । ಬೀಜಮ

ಯೆಲಿಂಗವಂಕರ್ಷಕರು। ಇಂತುನಾನಾವಿಧಶಿವಲಿಂಗಗಳಂ ಯಥಾಶಕ್ತಿಪೂಜಿಸಿ ಇಷ್ಟಾರ್ಥಗಳಂ ಪಡವರೆಂದು ಶಿವಲಿಂಗವಿಭೂತಿ ವಿಸ್ತರಮುಂತಿಳಿದು ॥

—* ಕರ್ಮತನುಪೂಜಿಸತಕ್ಕದ್ದು. *—

ಬಳಿಕ ಮನುಷ್ಯರೊಳು ದ್ವಿಜನು ಅಗ್ನಿಲಿಂಗವಂ ಅರಸು ಖಡ್ಗಲಿಂಗವಂವರ್ತಕನು ಧನಲಿಂಗವಂ- ಶೂದ್ರನ-ಧ್ಯಾನಲಿಂಗವಂ ಪೂಜಿಸಲಪ್ಪುದೆಂದು ಸಹಜಮಾದೊಡಂ । ಶಿವಪೂಜಾಲದೊಳು ವಿಶೇಷಮಿಪ್ಪುದಾಗಿ। ನಿಗಮಾಗಮೋಕ್ತಮಪ್ಪಂತೆ। ಮನುಷ್ಯರೊಳಗಿನರವಳೆನ್ನದೆಲ್ಲರುಂ। ಸ್ವಯಂವ್ಯಕ್ತಮಾದ ಸ್ವಯಂಭುಲಿಂಗವಂ। ಸಾಧಾರಣವಾಗಿ ಪೂಜಿಸಲಪ್ಪುದಾದರುಂ। ಶೈವಸಿದ್ಧಾಂತಸಮ್ಮತಮಾದ ಪಂಚಲಿಗಾರ್ಚನದೊಳು । ಸ್ವಯಂಭುಲಿಂಗ- ಬಾಣಲಿಂಗಚರಲಿಂಗ ಸಂಕೀರ್ಣಲಿಂಗ-ಪ್ರಾಣಲಿಂಗವೆಂಬ್ರದರೊಳಗೆ। ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನತತ್ಪರಾಗಬೇಕೆಂದುನಿಶ್ಚಯಿಸಲಕ್ಕುಂ॥

—* ಪಂಚಶುದ್ಧಿಗಳು. *—

ಮತ್ತಮಾ ಶಿವಪೂಜಾವಿಧಿಗೆ । ದೇಶ ಕಾಲ ಸ್ಥಾನ ದ್ರವ್ಯ ಪ್ರಯೋಜನಾದಿಗಳಂ । ತಾಂತ್ರಿಕವೈದಿಕವೆಂಬೆರಡು ಪೂಜಾಭೇದಂಗಳಂ। ಶೋಷಣದಾಹನಪ್ಲಾವನಗಳೆಂಬ। ಮೂರುಕ್ರಿಯೆಗಳಂ। ಆತ್ಮಶುದ್ಧಿ,ಸ್ಥಾನಶುದ್ಧಿ ದ್ರವ್ಯಶುದ್ಧಿ ಲಿಂಗಶುದ್ಧಿ ಮಂತ್ರಶುದ್ಧಿಗಳೆಂಬ ಪಂಚಶುದ್ಧಿಗಳಂ। ವಿಸ್ತರಿಸುವದರಲ್ಲಿ। ಶೌಚ,-ಆಚಮನ ಸ್ನಾನ, ಭಸ್ಮ, ರುದ್ರಾಕ್ಷ, ನ್ಯಾಸ, ಮಂತ್ರ ಕಾಲಾನುಸಂಧಾನ, ಧ್ಯಾನ,ಸ್ತವಾದಿಗಳಂ ಶಿವಾತ್ಮಕನಾಪ್ಪುದೇ ಆತ್ಮಶುದ್ಧಿಯೆಂತಲುಂ। ಶೋಧನ, ಸಮ್ಮಾರ್ಜನ, ಅನುಲೇಪನ ವರ್ಣಕ,ಗಂಧ ಪುಷ್ಪ, ಧೂಪ, ದೀಪ, ಪೂಜೋಪಕರಣ, ವಾಸ್ತುಶುಧ್ಯಾದಿಗಳಂ ಚೌಕವನಲಂಕರಿಸುವದೇಸ್ಥಾನಶುದ್ಧಿಯೆಂತಲುಂ। ಜಲ-ಗಂಧ ಅಕ್ಷತ-ಭಸ್ಮ ಪುಷ್ಪ-ಮಂತ್ರೋದಕಾದಿಗಳಂಸಂಪ್ರೋಕ್ಷಣಂಗೈವುದೇದ್ರವ್ಯಶುದ್ಧಿಯೆಂತಲುಂ। ಅನಾಮಿಕಾ ಮಧ್ಯಮಾಂಗುಳಿಪಳಮಧ್ಯದಲ್ಲಿ। ನವೀನಕುಸುಮವಿಡಿದು । ಅಂಗುಷ್ಠತರ್ಜನಿಗಳಿಂ ಮೊದಲಿದ್ದನಿರ್ಮಾಲ್ಯವಂತ್ಯಜಿಸಿ। ಲಿಂಗಪೀಠಮುಂವಾರಿಯಿಂ ಪ್ರಕ್ಷಾಳನಗೈದು। ಲಿಂಗಕ್ಕೆಸಪ್ರಣವ ಪಂಚಾಕ್ಷರಾಭಿ ಮಂತ್ರಿತ ಭಸಿತವಂತೊಡವುದೇಲಿಂಗ ಶುದ್ಧಿಯೆಂತಲುಂ। ಕೇಶಪೂಜಾದ್ಯರ್ಥವಾಗಿ ತತ್ತತ್ಸೂಕ್ತಮಂತ್ರಗಳಂ ವಿನಿಯೋಗಿಸಲು ಮೊದಲು ದಶವಾರಪ್ರಣವಮಂ। ಏಕವಾರಸಪ್ರಣವ ಪಂಚಾಕ್ಷರಮಂ। ಬಳಿಕ ಓಸ್ತ ಮತ್ತಿ

ವಾಯಸ್ವಾಹಾಯೆಂದುಅಷ್ಟಾಕ್ಷರಮಂತ್ರಮಂ! ಉದಾತ್ತಮಧ್ಯಸ್ವರಿತಾಂತಮಾಗಿ ಪಠಿಸುವದೇ ಮಂತ್ರಶುದ್ಧಿಯೆಂತಲುಂತಿಳಿದೊಡಂಬಡಲಕ್ಕುಂ॥

— ಮುದ್ರಾವಿವೇಕ. —

ಬಳಿಕ ವಸ್ತ್ರಮುದ್ರೆ-ಚಕ್ರಮುದ್ರೆ-ಮಹಾಮುದ್ರೆ-ಶೋಧಿನೀಮುದ್ರೆ ಸಂಹಾರಮುದ್ರೆ-ಪಂಚಮುಖೀಮುದ್ರೆ ಸುರಭಿಮುದ್ರೆ- ದ್ರವ್ಯಮುದ್ರೆ- ಮುಸುಳಿಕಾಮುದ್ರೆ-ಪದ್ಮಮುದ್ರೆ-ಶಶಕರ್ಣಮುದ್ರೆ- ಶಕ್ತಿಮುದ್ರೆ-ಬೀಜಮುದ್ರೆ-ಶಾಂತಿಮುದ್ರೆ- ಆವಾಹನಮುದ್ರೆ-ಮನೋರಮಮುದ್ರೆ- ಧ್ವಜಮುದ್ರೆ-ಲಿಂಗಮುದ್ರೆ-ಗಾಯತ್ರೀಮುದ್ರೆ- ಕಾಲಕಂಠಮುದ್ರೆ-ಶೂಲಮುದ್ರೆ-ನಮಸ್ಕಾರಮುದ್ರೆ- ಯೋನಿಮುದ್ರೆ- ಉಚ್ಚಾಟನಮುದ್ರೆ-ಅಚ್ಛಾದನಮುದ್ರೆ- ಸಂಹಾರಮುದ್ರೆ-ಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಂಗಳಂ ಗುರುಮುಖದಿಂದರಿತು ಅರಿತದಂ। ಬಳಿಕ ಗುರುವಿಗಾವರುಂತೋರಿಸದ ಅತ್ಮೈಕಗ್ರಾಹ್ಯವಾಗಿ ಅಯಾಯೋಗ್ಯ ಕ್ರಿಯೆಗಳಲ್ಲಿ ಅವಶ್ಯಕವಾಗಿ ಪ್ರಯೋಗಿಸಬೇಕೆಂತಲುಂ ಮುದ್ರಾಸ್ವರೂಪ ಮರಿಯದಾತಂಗೆ ಮಂತ್ರಶಕ್ತಿಯಿಲ್ಲದೆಂತಲುಂ ನಿರ್ಧರಿಸಲಕ್ಕುಂ॥

— ಶಿವಪೂಜಾಯೋಗಪೀಠ. —

ಬಳಿಕಂ ಶಿವಾರ್ಚನೆಗುಪಯುಕ್ತವಾಗಿ-ಅನಂತಪೀಠ-ಕಮಠಪೀಠ-ಶೇಷಪೀಠ-ಸಿಂಹಪೀಠ- ಪದ್ಮಪೀಠ-ವಿಮಲಪೀಠ- ಭದ್ರಪೀಠ ಯೋಗಪೀಠ ಪ್ರಣವಪೀಠಗಳ ಭಾವನೆಯೆಂದು ಪ್ರಕಲ್ಪಿತವಾದ। ದಿವ್ಯಮಂಟಪಮಧ್ಯಗತಸಿಂಹಾಸನಕ್ಕೆ। ಶ್ವೇತ, ರಕ್ತ, ಪೀತ, ಶ್ಯಾಮವೆಂಬ। ವರ್ಣಚತುಷ್ಟಯ ರಚಿತಸಿಂಹಾಕಾರವಾದ। ಧರ್ಮ ಜ್ಞಾನ। ವೈರಾಗ್ಯ ಐಶ್ವರ್ಯಗಳೆಂಬವಿಭೂತಿಚತುಷ್ಟಯರೂಪ। ಈಶಾನ್ಯಾದಿವಿದಿಕ್ಕಿನಚಿತ್ಪಾದ ಚತುಷ್ಟಯಮಂ। ರಾಜಾವರ್ತಪ್ರಭಾರಂಜಿತವಾದ। ಅಧರ್ಮ ಅಜ್ಞಾನ ಅವೈರಾಗ್ಯ ಅನೈಶ್ವರ್ಯಗಳೆಂಬ ಇಂದ್ರಾದಿದಿಕ್ಕಿನಜಡಪಾದಚತುಷ್ಟಯಮಂ। ಪರಿಭಾವಿಸಿ ಮೇಲೆ ಅಣಿಮಾದ್ಯಷ್ಟಸಿದ್ಧಿಗಳೇ ಪೂರ್ವಾದ್ಯಷ್ಟದಿಕ್ಕಿನದಳಂಗಳು ವಾಮದೇವಾದಿ ಸರ್ವಭೂತದಮನಾಂತವಾದ ರುದ್ರರೇಕೇಸರಂಗಳುಳ್ಳವೈರಾಗ್ಯವೇಮಧ್ಯಕರ್ಣಿಕೆ। ವಾಮೆಮೊದಲುಮನೋನ್ಮನಿಕಡೆಯಾದ ಪ್ರಕಾದಶಕ್ತಿಗಳೇ ಅಂತರ್ಬಹಿರಾದಿಮಧ್ಯಾಂತಾಂತರಾಳ ಪೂರ್ಣವ್ಯಾಪ್ತಪ್ರಕಾಶಕನಿತ್ಯಸುಖ ಕರ್ಣಿಕಾಬೀಜಂಗಳು। ಬಳಿಕಗರಮೇಲೆ ಅಗ್ನಿರವಿ ಶಶಿತ್ರಯಮಂಡಲಂಗಳು। ಬಳಿಕಗರಮೇಲೆ ಅಂತರಾತ್ಮ ಪರಮಾತ್ಮರುಗಳು। ಅವರ

ಮೇಲೆ ಆತ್ಮತತ್ವ- ವಿದ್ಯಾತತ್ವ- ಶಿವತತ್ವಂಗಳು-ಇಂತು ಷಟ್ತ್ರಿಂಶದ್ಭು ವನಾಂತವಾಗಿಶಂಭುಲಿಂಗಸ್ಥಾನವುಂಪರಿವಿಡಿದು ಆಯತವಾದಸಿಂಹಾಸನಮುಂಕಲ್ಪಿಸಿ ಮತ್ತಮಾ ಸಿಂಹಾಸನಾಗ್ರದಲ್ಲಿಯಥಾವಿಭವವಿಸ್ತರವಾಗಿ ಶ್ರೀಶಿವಲಿಗಗಮಂಸ್ಥಾಪಿಸಿಯಥಾವಿಧಿಯಾಗಿಪೂಜಿಸುವದೇತೆನೆ ||

— ಶಿವಾರ್ಚನಸಂಗ್ರಹ. —

ಬಳಿಕ ಸಮಾಹಿತಶುದ್ಧಾತ್ಮಮನಃ ಕರಣಾದಿಗಳಿಂಯಥಾಯೋಗ್ಯಪೂಜಾಸಂಭಾರಸಂಪನ್ನನಾಗಿ ಪ್ರಣವಪಂಚಾಕ್ಷರೀಪಂಚಬ್ರಹ್ಮಮಂತ್ರಶಾಂಭವೋಪನಿಷದುದ್ರಾಧ್ಯಾಯಸ್ತವಾಗಮಶ್ರವಣ ಸಸ್ವರವಂಗಳವಾದ್ಯಘೋಷದಿಂ| ಶಿವೈಕಾಯತ್ತಚಿತ್ತನಾಗಿ| ಸಹಸ್ರ| ಅಷ್ಟೋತ್ತರಶತ|ಚತುಷ್ಷಷ್ಟಿದ್ವಾತ್ರಿಂಶತ್| ಚತುರ್ವಿಂಶತಿ| ಷೋಡಶ| ನವ| ಪಂಚ| ಉಪಚಾರಂಗಳಲ್ಲಿ ಯಥಾಶಕ್ತ್ಯುಪಚರಣಗಳಿಂ| ಶ್ರದ್ಧಾಭಕ್ತಿಧ್ಯಾನಜ್ಞಾನಸಮೇತನಾಗಿ ಶಿವನಂ ಭಜಿಸುತ ಆವಾಹನ-ಸ್ಥಾಪನ-ಸನ್ನಿಧಾನ-ಸನ್ನಿರೋಧನ-ಸಮ್ಮುಖೀಕರಣಾದಿ ಮುಖ್ಯಕ್ರಿಯೆಗಳಿಂದೊಡಗೂಡಿ ಪೂಜಾಪರಿಸಮಾಪ್ತಿಪರಿಯಂತರ ಪ್ರತ್ಯುಪಚಾರಮುಂ ಕ್ಷಾಳನಪಾತ್ರ ಜಲಮಂ ಮರಳಿಮರಳಿಸ್ಪರ್ಶಿಸುತ ಅರ್ಘ್ಯಾದ್ಯುಪಚಾರಸಾಂಕರ್ಯವಿಲ್ಲದೆ ಸಕಲಕ್ರಿಯೆಗಳನೀಶ್ವರಾರ್ಪಣಂಗೈವುದೇ ಶಿವಪೂಜನವೆಂದು ತಿಳಿಯಲ್ಪೇಳ್ಕುಂ||

— ಶಿವಪೂಜಾಸಾಮಗ್ರಿ. —

ಬಳಿಕನದೀತಟಾಕಕೂಪಂಗಳಲ್ಲಿ ಸ್ವಾದುಮಿಶ್ರಲವಣಂಗಳಾದಕ್ರಮದಿಂದುತ್ತಮಮಧ್ಯಮಕನಿಷ್ಟವೆಂಬ ಪೂಜಾಯೋಗ್ಯವಾದುದಕಭೇದಂಗಳಂ ವಿವರಿಸಿ-ಬಳಿಕ ಬಿಳಿಯಸಾಸುವೆಕುಸುಮದೂರ್ವೆ ಕೋಷ್ಟಲಾಮಂಚಪಚ್ಚಕರ್ಪೂರವೆಂಬ ಆರುಪಾದ್ಯದ್ರವ್ಯಗಳಂ| ಕುಶಾಗ್ರತಿಲ ಬಿಳಿಯಸಾಸುವೆಯನೆಲ್ಲು ಕ್ಷೀರವೆಂಬಾರು ಅರ್ಘ್ಯದ್ರವ್ಯಗಳಂ| ಮುಖಾಂಬುಜಕ್ಕೆ ಘೃತದಧಿ ಮಧುಮಿಶ್ರಮಾದಮಧುಪರ್ಕದ ದ್ರವ್ಯಂಗಳಂ| ಫಲಕಚೋರಕರ್ಪೂರಕೋಷ್ಠ ಕುಂಕುಮ ಯಾಲಕ್ಕಿಯೆಂಬಾರು ಆಚಮನೀಯದ್ರವ್ಯಂಗಳಂ ಪಂಚಗವ್ಯಪಂಚಾಮೃತಂಗಳಂ| ಗೋಧೂಮಚೂರ್ಣ|ಮುದ್ಗಚೂರ್ಣಗಂಧದದ್ಯುದ್ವರ್ತನದ ದ್ರವ್ಯಂಗಳಂ | ಮಂದೋಷ್ಣಾದಿಸ್ನಾನೋದಕ ಲಕ್ಷಣಮುಳ್ಳ| ಗಂಧೋದಕ| ಪುಷ್ಪೋದಕ| ಸ್ವರ್ಣೋದಕ|ರತ್ನೋದಕ| ಮಂತ್ರೋದಕಗಳೆಂಬ ಮಹಾಸ್ನಾನೋದಕಂಗಳಂ| ವಿದಿಲಬ್ಧ| ನಯ|ಮೃದು|| ಧವಳ| ಮುಂತಾದಗುಣಗಳುಳ್ಳಭಸಿತಂಗಳಂ| ಪಟ್ಟ| ದೇವಾಂಗ| ಶುಭ್ರ

ಚಿತ್ರಾದಿಸುವಸ್ತ್ರಂಗಳಂ। ವ್ಯಾಘ್ರಾಜಿನಾದ್ಯುಪದಾಸನಂಗಳಂ। ಸುವರ್ಣ ರಜತ ಪಟ್ಟಕಾರ್ಪಾಸದರ್ಭಾದಿರಚಿತ ಯಜ್ಞೋಪವೀತಂಗಳಂ। ಕಿರೀಟ ಹಾರಕವಚನಾಗವಲಯ ಚಂದ್ರಕಲಾಗಳಗರಳರುಂಡಮಾಲಾರುದ್ರಾಕ್ಷ ಮಾಲಾದಿ ದಿವ್ಯಾಭರಣಂಗಳಂ। ಚಂದನಾಗರುಕಸ್ತೂರಿಕರ್ಪೂರಕೇಸರ ಕಚೋರಲಾವಂಚಕೋಷ್ಠಂಗಳೆಂಬ ಅಷ್ಟಗಂಧಗಳಂ। ಜವೆ। ಸಾಸುವೆ। ಬಿಳಿಸಾಸುವೆ। ತಿಲ ಕುಂಡಲ ಮುಕ್ತಾಫಲರತ್ನಾದ್ಯಕ್ಷತಂಗಳಂ।ಶುಭ್ರರಕ್ತಕೃಷ್ಣವರ್ಣಕ್ರಮದಿ ನಂದ್ಯಾವರ್ತಮಲ್ಲಿಕಾದ್ರೋಣ ಕುಮುದ ಶ್ವೇತಸಾಮಂತ್ರಿಕಾ ಸುಗಂಧರಾಜ ಶ್ವೇತಾರ್ಕ ಪ್ರಮುಖಸಾತ್ವಿಕವಾದ ಕೋಕನದ ಕಮಲಕುಶೇಶಯ ರಕ್ತಜಪಾದಿರಾಜಸವಾದ। ನಿಲೋತ್ಪಲ ತಮಾಲ ನೀಲೋನ್ಮತ್ತಾದಿತಾಮಸವಾದ ಕೇತಕೀವರ್ಜಪುಷ್ಪ ನಾನಾ ವಿಧಪುಷ್ಪಂಗಳಂ ದೂರ್ವಾಬಿಲ್ವ ತುಲಸೀ ಮರುವಾದಿಪತ್ರಂಗಳಂ ರೂಪ ರಸಗಂಧಾದಿಗಳಿಂ ರಮಣೀಯಂಗಳಾಗಿ ನಿಷಿದ್ಧವಲ್ಲದೇ ಯೋಗ್ಯವಾದ ಭೋಗ್ಯವಸ್ತುಗಳಂ ಕೃಷ್ಣಾಗರು- ಶ್ವೇತಾಗರು- ಶ್ವೇತಗುಗ್ಗುಲ-ಶ್ರೀಗಂಧ-ಲಾಕ್ಷಾಬಿಲ್ವ ಘೃತ-ಮಧು-ಸರ್ಜರಸ ಕರ್ಪೂರವೆಂಬ ದಶಾಂಗಗಳಂ ತೈಲವರ್ತಿ-ಘೃತವರ್ತಿ-ಕರ್ಪೂರವೆಂಬ ತ್ರಿವಿಧದೀಪಗಳಂ। ಹರಿದ್ರಾನ್ನ-ಪರಮಾನ್ನ-ಮುದ್ಗಾನ್ನ-ಕೃಸರಾನ್ನ-ದಧ್ಯನ್ನ-ಗುಡಾನ್ನ-ಶುದ್ಧಾನ್ನ-ಶಾಲ್ಯನ್ನವೆಂಬ ಅಷ್ಟವಿಧಾನ್ನಂಗಳಂ। ಭಕ್ಷ್ಯ-ಭೋಜ್ಯ-ಲೇಹ್ಯ-ಚೋಷ್ಯ ಶಾಕ-ವ್ಯಂಜನ-ದಧಿ-ಕ್ಷೀರ-ಮಧು-ಶರ್ಕರಾ- ನಾರೀಕೇಳೋದಕ-ಇಕ್ಷು-ಖರ್ಜೂರ-ನಾರಿಕೇಳ-ಕದಳೀ-ಚೂತ-ಪನಸ- ದಾಡಿಮ-ಕಿತ್ತಳೆ ಜಂಬೂ ದ್ರಾಕ್ಷಾದಿ ರುಚ್ಯಪರಿಶುದ್ಧನೈವೇದ್ಯಗಳಂ-ನಾಗವರ್ಣ। ಕ್ರಮುಕಚೂರ್ಣ, ಸುಧಾ, ಕರ್ಪೂರ, ವಿಲಾಜಾತಿ, ಲವಂಗಾದಿಯೋಗ್ಯತಾಂಬೂಲಗಳಂ ಏಕಾರ್ತಿ, ಪಂಚಾರ್ತಿ, ನಕ್ಷತ್ರಾರ್ತಿ, ಕಲಶಾರ್ತಿ,ರಥಾರ್ತಿ, ವಸಂತಾರ್ತಿ, ಪಂಕ್ತಿನೀರಾಜನಕರ್ಪೂರನೀರಾಜನಾದಿ ಆರಾರ್ತಿಕದ್ರವ್ಯಂಗಳಂ। ದರ್ಪಣ ವ್ಯಜನಶ್ವೇತಛತ್ರಚಾಮರ ಸೂರ್ಯಚಂದ್ರಪಾನನಂದಿಧ್ವಜತೋರಣಪತಾಕ ದಂಡ, ವೇತ್ರ, ಪಟಾಂಚಲ, ವೃಷಭ, ಶೂಲ, ಭಸಿತ, ಗೋರುದ್ರಾಕ್ಷ ಪ್ರಮಥ, ವೀರ, ವೀರಭದ್ರ, ಖಡ್ಗ, ಪಟ್ಟಕಾದಿವಿವಿಧೋಪಚಾರಬಿರುದಾವಳಿಗಳಂ। ಪೂರ್ಣಕುಂಭ ಬೀಜಪೂರ ಕುಶಸ್ತಂಭ ಕರ್ಣಪೂರಕಮಾಲ ಗುಂಜರೀಪುಷ್ಪಮಾಲಾದಿ ದೃಶ್ಯನಿಕರಂಗಳಂ। ಡಮರುಡಿಂಡಿಮಜರ್ಝರ ಝಲ್ಲರೀಶಂಖ। ಪಣವವೇಣು, ಮೃದಂಗ, ಕಾಹಳ, ತಮ್ಮಟ ಭೇರಿಘಲ

ಟಾದಿವಾದ್ಯಂಗಳಂ। ಪಟ್ಟವೃಷಭ, ಪಟ್ಟಾಶ್ವ, ಪಟ್ಟಗಜ, ರಥ, ದೋಲಾ ಆಂದೋಳಿಕಾದಿವಿಹಾರಂಗಳಂ। ಭಿಂಡಿವಾಲ, ತೋಮರ, ಮುದ್ಗರ,ಮುಸಂಡೀ, ಗದಾ, ಟಂಕಕರವಾಲ, ಪಿನಾಕ, ಶೂಲ, ಚಕ್ರ, ಡಮರುಗ, ಹರಿಣ, ಪಾಶ, ಅಂಕುಶಾದಿದಿವ್ಯಾಯುಧಂಗಳಂ । ಅರ್ಘ್ಯಪಾತ್ರ, ಪಾನೀಯಪಾತ್ರ, ಅಭಿಷೇಕಪಾತ್ರ, ಸೋಮಸೂತ್ರ, ಧಾರಾಪಾತ್ರ, ಶಂಖ, ಗೋಶೃಂಗ, ಕರಜಲ, ಶುದ್ಧಿ, ಕೂರ್ಚಮಯೂರಪಿಂಛ; ರಕ್ಷಾಮಯೂಖ, ನವಪವಿತ್ರ, ಆತ್ಮರಕ್ಷಾಕರಂಡಾದ್ಯುಪಾಯಂಗಳಂ । ಯಥಾಶಕ್ತಿ ಸಂಪಾದಿಸಿಕೊಂಡು। ಪರಿಶುದ್ಧಿಗೊಳಿಸಿ । ಭಕ್ತಿಶ್ರದ್ಧೆಗಳಿಂ ಶಿವಾರ್ಚನಮಂಮಾಡಬೇಕೆಂದು ಪ್ರೇರಿಸಲಕ್ಕುಂ॥

— ಉಪಚಾರಸಂಗ್ರಹ. —

ಬಳಿಕ ಪರಮಪವಿತ್ರದ್ರವ್ಯಂಗಳಿಂಮಾಳ್ಪ ಶಿವೋಪಚಾರಂಗಳೊಳು-ಆವಾಹನ। ಅರ್ಚನ। ನಿವೇದನಗಳೆಂಬತ್ರಿವಿಧೋಪಚಾರಂಗಳುಂ। ಅಷ್ಟೋಪಚಾರಂಗಳಂ-ದಶೋಪಚಾರಂಗಳುಂ। ಷೋಡಶಚಾರ ಚತುರ್ವಿಂಶತ್ಯುಪಚಾರ-ದ್ವಾತ್ರಿಂಶತ್ಯುಪಚಾರ-ಚತುಷ್ಷಷ್ಟ್ಯುಪಚಾರ- ಅಷ್ಟೋತ್ತರಶತೋಪಚಾರ- ಸಹಸ್ರವಿಧೋಪಚಾರಂಗಳೆಂಬ ಭಕ್ತಜನಭಾವನೋಪಕಲ್ಪಿತಲೀಲೋಪಚಾರಂಗಳಲ್ಲಿ।ಸ್ಮೃತ್ಯಾಗಮಸಮ್ಮತವಾಗಿ-ದ್ವಾತ್ರಿಂಶದುಪಚಾರಂಗಳೇಮುಖ್ಯವಾಗಿರ್ಪವೆಂತೆನೆ।ಧ್ಯಾನ-ಆವಾಹನ-ಆಸನ-ಪಾದ್ಯಅರ್ಘ್ಯ ಆಚಮನ-ಸ್ನಾನ-ವಸ್ತ್ರ ಯಜ್ಞಸೂತ್ರ-ಭೂಷಣ-ಗಂಧ-ಅಕ್ಷತೆ-ಪುಷ್ಪ ಧೂಪ-ದೀಪ-ನೈವೇದ್ಯ-ಮುಖವಾಸನ-ನೀರಾಜನ-ದರ್ಪಣ-ಫಲಾರ್ಪಣ ತಾಂಬೂಲ-ಪ್ರದಕ್ಷಿಣ-ನಮಸ್ಕಾರ- ಸ್ತೋತ್ರ-ಪುರಾಣಾದಿಪಠನ-ಛತ್ರ-ಚಾಮರ-ವ್ಯಜನ- ಶಯ್ಯಾ-ಸಂಗೀತ-ನೃತ್ಯವಾದ್ಯ-ಆತ್ಮಾರೋಪಣಮೆಂಬವೇ ಉಕ್ತಗಳಾಗಿ-ಪ್ರಾಣಪ್ರತಿಷ್ಠಾಪೂರ್ವಕ ಶಿವಮಂತ್ರಗಳಿಂ। ಶಂಭುಲಿಂಗವನುಪಚರಿಸಿ । ಬಳಿಕಸಮಸ್ತಪೂಜಾದ್ರವ್ಯಂಗಳಿಲ್ಲದಿರೆ ಜಲಪಾತ್ರದಿಂದರ್ಚಿಸಲಾ ಸಕಲಸಾಂಗಿಕವಾದರ್ಚನೆಗೆಸಮಾನವಹುದಾಗಿ। ಪೂಜೆಗೆ। ವಿವೇಕಶ್ರದ್ಧಾ। ಭಕ್ತಿ। ಧ್ಯಾನ। ನಿಷ್ಟೆಗಳೇಮುಖ್ಯವಹುವಾಗಿ । ಅವುಗಳೊಳಗುಂ । ಅರ್ಚನೆಗೆ ಮುಖ್ಯತಪಮಾದಭಕ್ತಿಯುಂ। ಈಶ್ವರವಿಷಯಕಶ್ರವಣ। ಕೀರ್ತನ। ಸ್ಮರಣ। ಪಾದಸೇವೆ। ಪೂಜೆ।ವಂದನೆ। ದಾಸ್ಯ । ಸಖ್ಯ। ಆತ್ಮಾರ್ಪಣವೆಂಬ ನವವಿಧವಾಗಿರ್ಪುದೆಂದರಿತಂಗೀಕರಿಸಿ। ಶ್ರೀಶಿವಲಿಂಗದ ಬಹಿರಂಗಪೂಜೆಯುಂ ಮಾಳ್ಪುದೆಂತಲುಂ। ತತ್ತನ್ಮಂತ್ರಗಳೆ

ಲ್ಲಂ। ಅರ್ಥಾನುಗುಣಮಾಗಿನಿಗಮಾಗಮಂಗಳಲ್ಲಿ ಪ್ರಸಿದ್ಧಮೆಂತಲುಂ ಸರ್ವತ್ರಮೂಲಮಂತ್ರವು ವಿನಿಯೋಜ್ಯಮೆಂತಲುಂ ತಿಳಿಯಲ್ಪೇಳ್ಕುಂ॥

— ಅಂತರಂಗಶಿವಾರ್ಚನೆ. —

ಬಳಿಕಿಹಲೋಕ ಫಲಮಂಕಾಂಕ್ಷಿಸುವಾತನಾದೊಡಂ। ಪರಲೋಕಫಲಮಂ ಬಯಸುವಾತನಾದೊಡಂ। ಸರ್ವಜನ ಹಿತಮಂಹಾರೈಸುವಾತನಾದೊಡಂ ಪೂರ್ವೋಕ್ತ ಪ್ರಕಾರದಿಂ ಬಾಹ್ಯಪೂಜೆಯಂಮಾಳ್ಪುದೆಂದು ವಿವೇಕಿಸಲು ಪರಮೇಶ್ವರಮುಖೋಲ್ಲಾಸಮಾತ್ರಾರ್ಥಿಯಾಗಿ। ನಿಷ್ಕಾಮದಿಂಮುಮುಕ್ಷುವಾಗಿರ್ಪಧಿಕಾರಿಗೆ। ಆಭ್ಯಂತರದಲ್ಲಿ। ಸನ್ಮಯಮಾದಪೀಠದೊಳು। ಆನಂದಮಯಲಿಂಗಮಂಪ್ರತಿಷ್ಠಿಸಿ ಚಿನ್ಮಯದ್ರವ್ಯಗಳಿಂ ಸಾರ್ವಕಾಲಿಕಮಾಗಿ ಕುಂದಿಲ್ಲದೆ ಶಿವಾರಾಧನಂಗೈವುದೇ ಕರ್ತವ್ಯಮಾಗಿ। ಅಂತುಚಿನ್ಮಯಪೂಜೋಪಚಾರಂಗಳಲ್ಲಿ। ಉಪಚರ್ಯಮಾದದೇವತೆಯಗುಣಂಗಳೊಳು। ಉಪಚಾರಂಗಳಂಆರೋಪಿಸಿ ಗುರುಮುಖದಿಂದುಪದಿಷ್ಟನಾಗಿ। ಯೋಗಾಭ್ಯಾಸಬಲದಿಂ ಮಾಡಲ್ತಕ್ಕದದೆಂತೆಂದೊಡೆ॥

— ಅಂತರಶಿವಯೋಗಸಂಗ್ರಹ. —

ಮೊದಲಂತರಂಗದಲ್ಲಿ। ಧರ್ಮವೇಕಂದ- ಸುಜ್ಞಾನವೇನಾಳ-ಅಷ್ಟಮಹದೈಶ್ವರ್ಯಗಳೇದಳಗಳು-ರುದ್ರೇಶ್ವರಾದಿಗಳೇಕೇಸರಗಳು-ವೈರಾಗ್ಯವೇಕರ್ಣಿಕೆ। ಚಂದ್ರಪ್ರಭಾಮಯಮೆನಿಸಿಮೆರೆವಹೃದಯಕಮಲವಂ। ಸೋಮಸೂರ್ಯಾಗ್ನಿಮಂಡಲತ್ರಯಮಧ್ಯದಲ್ಲಿ। ಸತ್ತೆಂಬದಿವ್ಯಮೂರ್ತಿಯಿಂ।ಚಿತ್ತೆಂಬಕಾಯಕಾಂತಿಯಿಂ। ಆನಂದಮೆಂಬಲಾವಣ್ಯದಿಂ। ತತ್ವಪರಿಕಲ್ಪಿತಾಭರಣಾಯುಧಾದಿಗಳಿಂದಲಂಕೃತಮಾಗಿ। ಸ್ಫಟಿಕಘಟದೊಳಗಣದೀಪದಂತೊಳಹೊರಗೆ ಬೆಳಗುತಿರ್ದಪರಮೇಶ್ವರನಂ ಪರಿಭಾವಿಸಿ ಗೃಹಗೊಂಡು-ಬಳಿಕಸರ್ವಾಧಾರನೀಶ್ವರನೆಂಬಬುದ್ಧಿಯೆ ಆಸನ। ಪರಮಾತ್ಮನುಪರಿಪೂರ್ಣನೆಂಬಮತಿಯೇಆವಾಹನ। ಜಗತ್ತೆಲ್ಲಂಶಿವನ ಶ್ರೀಪಾದವೆಂಬತಿಳಿವೇಪಾದ್ಯ। ಸುಖಾಂಬುಧಿಶಂಭುವೆಂಬನುಸಂಧಾನವೇಅರ್ಘ್ಯ। ಪರಮಪವಿತ್ರಸ್ವರೂಪಾನುಭವಿಯೆಂಬರಿವೇಆಚಮನ।ನಿತ್ಯನಿರ್ಮಲನೀಶ್ವರನೆಂಬುಪಲಂಬಿಯೆಸ್ನಾನಜಗವಿಲ್ಲವನತಿಕ್ರಮಿಸಿರ್ದವಿದ್ಯೆಯೇವಸ್ತ್ರ। ತ್ರಿಗುಣಾಗಮಾತೀತಮಾದಜ್ಞಾನವೇ ಯಜ್ಞೋಪವೀತ ಚೈತನ್ಯವು ಜಗದಲಂಕಾರವೆಂಬ ಪ್ರತಿಭೆಯೇಆಭರಣ। ಶುದ್ಧಚಿಚ್ಛಕ್ತಿಯೇಅನುಲೇಪ-ಕಾರುಣ್ಯವೇಅಕ್ಷತೆ। ಪ್ರಣವಾತ್ಮಕಸತ್ಯವಚನವೇಪುಷ್ಪ। ವಿಷಯವಾಸನಾವಿಲಯವೇಧೂಪ।ಜಗ

ದ್ವರ್ತಿವಿಡಿದುಜ್ವಲಿಪಪರಜ್ಯೋತಿಯೇದೀಪ । ಜಗವೆಲ್ಲವಂಕಬಳಸಿಕೊಂಡಿರ್ಪಾತನೇನಿತ್ಯತೃಪ್ತನೆಂಬಸುವಿಶ್ವನೈವೇದ್ಯ । ತ್ರಿಗುಣಂಗಳನೊಳಕೊಂಡನಿಂದಜಜ್ಞಪ್ತಿಯೇತಾಂಬೂಲ। ಸೋಹಂಭಾವದಪ್ರವೃತ್ತಿಯೇಪ್ರದಕ್ಷಿಣ। ಸಮಸ್ತತತ್ವಂಗಳನತಿಕ್ರಮಿಸಿನಿಂದನಿಜನೇ ನಮಸ್ಕಾರ । ಶಿವೈಕ್ಯಸ್ಥಿತಿಯೇವಿಸರ್ಜನವೆಂಬೀಉಪಚಾರಂಗಳಿಂದಂತಃಪೂಜೆಯಂರಚಿಸಿಬಳಿಕಂತುಹೃತ್ಕಮಲಕರ್ಣಿಕಾಮಧ್ಯದಲ್ಲಿ ಗುರುವಿತ್ತಿಷ್ಟಲಿಂಗದೊಳಗೆಸಿಂಹಾಸನದಲ್ಲಿಮಾಡುವಾತ್ಮಾರ್ಥಮಾದ ಪೂಜಾಭೇದಂಗಳಂ । ಗ್ರಾಮಾರಾಮನದೀತೀರಂಗಳಲ್ಲಿಯುಂ-ಪುಣ್ಯಾಶ್ರಮಕ್ಷೇತ್ರಗಿರ್ಯಾದಿಗಳಲ್ಲಿಯುಂ।ದೇವದಾನವಮಾನವಾದಿಪ್ರತಿಷ್ಟಿತಮಾದಲಿಂಗಗಳಲ್ಲಿಮಾಳ್ಪಪರಾರ್ಥಪೂಜೆಗಳಂ ಬಿಡದಾಚರಿಸಬೇಕೆಂದು ತಿಳಿಯಲ್ವೇಳ್ಕುಂ॥

—* ಪರಾರ್ಥಪೂಜಾದಿಪ್ರಾಯಶ್ಚಿತ್ತಾಂಗಗಳು. *—

ಬಳಿಕ ಪರಾರ್ಥವಾಗಿಮಾಳ್ಪಪೂಜೆಯೊಳು । ಈಶ್ವರಾಂಗಣಮಾದ। ವೃಷಭ-ಭಾಸ್ಕರ-ವೀರಭದ್ರ ಮಾತೃಕೆ-ಸ್ಕಂಭ-ಕ್ಷೇತ್ರಪಾಲ- ಬ್ರಹ್ಮ-ವಿಷ್ಣು-ರುದ್ರರೆಂಬದೇವತೆಗಳ। ನವರಪರಸ್ಥಾನಕ್ರಮಪರಿಹಾರಾಧಿಸುತ್ತ । ಬೇರೆಸ್ಥಾಪಿತಂಗಳಾದವಿಷ್ಣ್ವಾದಿದೇವತಾಭಜನಂಗಳಂತ್ಯಜಿಸಿ। ತನ್ನಿಷ್ಟಲಿಂಗಪುಚೋರಾದಿಗಳಿಂಪೋಗಿ ಮರಳಿತನ್ನವಶಕ್ಕೆ ಬಾರದಿರ್ದೊಡಂದುಲಕ್ಷಅಘೋರಮಂತ್ರಜಪದಿಂಶುದ್ಧಾತ್ಮನಾಗಿಮೂಲಬಾಹ್ಯವಿದ್ಯೆಗತ್ರಮಾಗಿಮತ್ತೆಪಡೆವು। ಪ್ರತನೀಯುನಾಟಲಿಪ್ರಮಾಣಗಳಷ್ಟೋತ್ತರಶತಗಾಯತ್ರೀಜಪದಿಂ ಪರಿಶುದ್ಧಿಯುಂಪಡೆವು-ಬಳಿಕಪರಮಪವಿತ್ರಮಾದ । ಶಿವಪಾದೋದಕಸ್ವೀಕಾರ, ಶಿವಪ್ರಸಾದಸೇವನ । ಶಿವಪ್ರಸಾದಾಭಿಮಾನ-ಶಿವನಿರ್ಮಾಲ್ಯಕುಸುಮಬಿಲ್ವಾದಿಧಾರಣ । ಶಿವೇತರವರ್ಜನ । ಶಿವಕಥಾಶ್ರವಣ ಶಿವಭಕ್ತಸಲ್ಲಾಪ । ಶಿವಧರ್ಮನಿಷ್ಠಾದಿಗಳೆಲ್ಲವುಂ ಸದ್ಬ್ರಾಹ್ಮಣಕ್ಷತ್ರಿಯರು। ಸದ್ವೈಶ್ಯರುಸಚ್ಛೂದ್ರರು ಮೊದಲಾದ ಮಾನವರ್ಗೆಲ್ಲರಿಗೆಯುಂ ಕರ್ತವ್ಯಮಹುದಾಗಿ। ವಿಕ್ಕಮಪಾತ್ರರಿಗೆ। ಶಿವೇತರಪರಾಯಣರಾದಪಾಷಂಡಿಗಳಿಗೆ। ಸಂದಿದಧೀಚ್ಯಾದಿಶಾಂಭವರಿಂಶಾಪದಗ್ಧರಾದವರಿಗೆ ಶಿವಸಂಸ್ಕಾರಹೀನರ್ಗೆ-ನಾಸ್ತಿಕರ್ಗೆ ವೇದಬಾಹ್ಯರ್ಗೆ-ದುರ್ಲಭಮೆಂತೆಲುಂ ಅರುಹಬಾರದೆಂತೆಲುಂ-ಪರಿಭಾವಿಸುತ್ತಿಂತುಸಕಲಸತ್ಕ್ರಿಯೆಗಳಿಂ । ನಿರ್ಮಲಾಂತಃಕರಣನಾಗಿರ್ಪಾತನೇಸರ್ವಸಂಪೂಜ್ಯಶುದ್ಧಶೈವನಪ್ಪಂ ॥

—* ವೀರಶೈವಲಕ್ಷಣ. *

ಮತ್ತಮಾಪರಮೇಶ್ವರ ನಿರ್ಮಿತವಾದಜಗತ್ತಿನಲ್ಲಿ। ವೀರಶೈವ। ಚರಮ ಶರೀರ, ಸರ್ವೋತ್ತಮವೃತ್ತಿ, ಅಪ್ರತಿಹತಶಿವವ್ರತನುಲೋಕಪಾವನನೆಂದು ಸಮಸ್ತಸಜ್ಜನರಿಂಕೊಂಡಾಡಲ್ಪಟ್ಟ। ಸಮಸ್ತಶೈವರೊಳಗೆವರಿಷ್ಟನಾಗಿ। ಇತರಶೈವರಂತೆಕ್ರಿಯಾಬಾಹುಳ್ಯದಿಂದಲ್ಪ ಫಲವಂಪಡೆಯದೆ।ಅಲ್ಪ ಕ್ರಿಯೆಯಿಂದನಂತಫಲವಂಪಡೆವಾತನಾಗಿ। ಶಿವದೀಕ್ಷೆಯಿಂಮೇಲೆ। ಸ್ನಾನ ಭೋಜನ ನಿದ್ರಾ ಜಾಗರಣ ಮಲಮೂತ್ರವಿಸರ್ಜನಕಾಲಂಗಳಲ್ಲಿ ಅಶುಚಿಯಭಾವನೆಯಂತೊರೆದು ಸದಾಲಿಂಗಾಂಗಾನುಬಂಧಿಯಾಗಿ ಲಿಂಗಭೋಗೋಪಭೋಗಿಯಾಗಿ॥ ತನ್ನಿಷ್ಟಲಿಂಗದಕ್ಕೆ-ಆವಾಹನವಿಸರ್ಜನಕ್ರಿಯೆಗಳಂಮಾಡದಾತನಾಗಿ॥ತ್ರಿಕಾಲಲಿಂಗಾರ್ಚನಾಸಕ್ತನಾಗಿ-ಅಂಗಲೋಪಂಗಳಲ್ಲಿಪ್ರಾಣತ್ಯಾಗವಲ್ಲದೇ। ಬೇರೊಂದುಪ್ರಾಯಶ್ಚಿತ್ತವಿಲ್ಲದಾತನಾಗಿ ಗುರುನಿಂದೆ॥ ಶಿವನಿಂದೆ ಶಿವಕಥಾನಿಂದೆಶೈವನಿಂದೆ, ಪ್ರಮಥನಿಂದೆ, ಜಂಗಮನಿಂದೆ ಶಿವಪಾದೋದಕನಿಂದೆ, ಶಿವನಿರ್ಮಾಲ್ಯನಿಂದೆಗಳಂಸೈರಿಸದ। ಕೇಳದಕಿವಿಗಳಗೆಪ್ರಾಯಶ್ಚಿತ್ತಮಂಮಾಡಿಕೊಂಡು। ನುಡಿದನಾಲಿಗೆಯಂಶೀಳುವಾತನಾಗಿ। ಸರ್ವಮುಂಶೈವಮೆಂಬಮಳಯೆ। ಬೆರೆಯಿಂದೊಡೆವಿಷ್ಣ್ವಾದಿದೇವತೆಗಳಂತೃಣೀಕರಿಸಿಲೆಕ್ಕಿಸದಾತನಾಗಿ। ಬಾಹ್ಯನಲ್ಲಿಲಿಂಗಲಾಂಛನವಿಲ್ಲದಕ್ಷಪಗಳೊಡನೆ॥ ಏಕಾಸನ, ಶಯನ,ಯಾನ,ಸಹವಾಸ, ಸಂಭಾಷಣ- ಸಂಭೋಜನಸೌಹಾರ್ದಗಳಿಲ್ಲದಾತನಾಗಿ, ಭಸ್ಮಮಾತ್ರಲಾಂಛನ ಮುಖ್ಯಪ್ರಾಣಿಗಳೊಳುದಯೆಯಂ ಪಡದಾತನಾಗಿ ಶೈವಚಿಹ್ನಮೇಯಿಲ್ಲದಪಾಪಿಷ್ಠರಂಶಿಕ್ಷಿಸಲಿಚ್ಛೆಯುಳ್ಳಾತನಾಗಿ, । ಶಿವಧರ್ಮಾಭಿವೃಧಿಗೋಸುಗ ತನ್ನತನುಮನಧನಗಳಂ ಸೂರೆಗೊಡುವಾತನಾಗಿ,ಅಸ್ಪೃಶ, ಅಸ್ಥಿರವಾಕ್ಯ ವಂಚನೆವಜ್ರಭೇದ। ಉದಾಸೀನತೆ। ನಿರ್ದಯವೆಂಬ ಆರುದೋಷಗಳಿಂದಾರುತರವಾದಭವಿಗಳಾಗದಾತನಾಗಿ।ವೀರಶೈವಮಹೇಶ್ವರರಂಕಾಣುತ್ತಲೇ।ಪ್ರತ್ಯುತ್ಥಾನವೆಂಬುಮೇಳುವದು। ಅಭ್ಯುದ್ಗಮನವೆಂಬಯಿದಿರಾಗಿನಡೆವುದು ।ಅವಗೂಡಿತಿರುಗುವದು। ಪ್ರಿಯವಚನಮಂನುಡಿವುದು।ಗದ್ದುಗೆಯನಿಕ್ಕುವದು।ಅನ್ನಪಾನಾದಿಗಳಂ ಸಮರ್ಪಿಸುವದೆಂಬಷಡ್ಭಕ್ತಿಸೋಪಾನ ಸಪ್ತಕಕ್ರಮಯುಕ್ತನಾಗಿ।ಶಿವಧರ್ಮವಿರುದ್ಧಮಾದುದೆಲ್ಲವಂಸರ್ವಾತ್ಮನಾವರ್ಜಿಸುವಾತನಾಗಿ। ಜಾತಿಸೂತಕ। ಜನನಸೂತಕ। ಪ್ರೇತಸೂತಕ। ಉಚ್ಛಿಷ್ಟಸೂತಕ। ಪ್ರಜಾಸೂತಕವೆಂಬವಂಚಸೂತಕಗಳನಳಿದಾತನಾಗಿ। ಲಿಂಗಾಚಾರ। ಸದಾಚಾ

ರ। ಭಕ್ತ್ಯಾಚಾರ। ಶಿವಾಚಾರ। ಗಣಾಚಾರ ವೆಂಬ ಪಂಚಾಚಾರನಿಷ್ಠನಾಗಿ ದಾಸತ್ವ। ವೀರದಾಸತ್ವ। ಭೃತ್ಯತ್ವ। ವೀರಭೃತ್ಯತ್ವ। ಸಮಯಾಚಾರತ್ವ।ಸಕಲಾವಸ್ಥಿತ್ವಂಗಳೆಂಬ ಷಡ್ವಿಧಸಜ್ಜನತ್ವಯುಕ್ತನಾಗಿ। ದೇಶಕಾಲಕಲ್ಪಿತ ಲೌಕಿಕಾಚಾರಂಗಳಂವಿಚಾರಿ। ಸ್ವತಂತ್ರಶೀಲನಾಗಿ। ಶಿವಾತ್ಮರ್ಗೆ ಭೇದಭ್ರಾಂತಿತೊರದಾತನಾಗಿ। ಜೀವಲಿಂಗಮಂಶಿವಲಿಂಗದೊಳೈಕ್ಯಗೊಳಿಸಿಮೆರವಾತನಾಗಿ।ವೀರಶೈವಧರ್ಮಗಳಿಂ ಕೃತಕೃತ್ಯನಾಗಿ।ಲಿಂಗಾಂಗಸಂಗಾದ್ವೈತಭಾವನೆಯಿಂ ಭಯವರ್ಜಿತನಾಗಿ। ಸರ್ವಶಕ್ತಶಿವೋಪಾಶ್ರಯಬಲದಿಂ ಅಘಟನಾಘಟನಸಮರ್ಥಮಪ್ಪ ಧೈರ್ಯಸಂಪನ್ನನಾಗಿ। ಹರ್ಷವಿಷಾದಗಳಿಗೆಗಗದಾತನಾಗಿ। ಶಾಂಭವವಿದ್ಯೆಯಲ್ಲಿರಮಿಸುವಶೈವನಪ್ಪುದರಿಂ ತತ್ಸಂಜ್ಞೆಯುಳ್ಳಾತನಾಗಿ। ಜಗತ್ಪೂಜ್ಯನಪ್ಪಾತನೇವೀರಶೈವನಪ್ಪಂ ॥

## —* ವೀರಶೈವಭೇದಗಳು. *—

ಅಂತಾವೀರಶೈವನೇ। ಕ್ರಿಯಾಭೇದದಿಂ। ಸಾಮಾನ್ಯವೀರಶೈವನೆಂದು।ವಿಶೇಷವೀರಶೈವನೆಂದು। ನಿರಾಭಾರಿವೀರಶೈವನೆಂದು। ತ್ರಿವಿಧವಾಗಿರ್ಪನವರಲ್ಲಿ। ಶ್ರೀಗುರುವಿನ ಹಸ್ತನಿಜಮಸ್ತಸಂಯೋಗದಿಂ ವಿಭೂತಿಯಪಟ್ಟದಿಂ।ಶಿವಮಂತ್ರೋಪದೇಶದಿಂ। ಲಿಂಗಸಂಗಿಯಾಗಿ ।ಹಸ್ತಮಸ್ತಕಕಂಠವಕ್ಷಸ್ಥಲಾದಿಗಳಲ್ಲಿಶಿವಲಿಂಗಧಾರಕನಾಗಿ।ಏಕಕಾಲದೊಳುಂತ್ರಿಕಾಲಗಳಲ್ಲಾದರುಂ।ಲಿಂಗಾರ್ಚನಾಸಕ್ತನಾಗಿ।ಗುರುಲಿಂಗಜಂಗಮಂಗಳಲ್ಲಿಭಕ್ತನಾಗಿರ್ಪಾತನೇಸಾಮಾನ್ಯವೀರಶೈವನಪ್ಪಂ ॥

## —* ದೀಕ್ಷಾಕ್ರಮ. *—

ಅನಂತರದಲ್ಲಿ ಶಾಂತಿದಾಂತ್ಯಾದಿ ಸಾಧನಸಂಪನ್ನನಾಗಿ। ಶ್ರೀಗುರುವಿನಿಂ ಶಾಸನೀಯನಪ್ಪುದರಿಂ। ಶಿಷ್ಯನಾದಾತನು ಶುಭಕಾಲದೇಶಾದಿಗಳಂ ಪರೀಕ್ಷಿಸಿ ಬಳಿಕ ಆಚಾರ್ಯಸಂಪ್ರದಾಯಸಿದ್ಧನಾದಸಕಲಸದ್ಗುಣಸಹಿತನಾದಶ್ರೀಗುರುವ ನೈದಿ ಮತ್ತಮಾಗುರುವಿನಮತದಿಂ। ಶಿವಪೂಜಾಪರಾಯಣರಾದ ಕೀರ್ತಿಮಯರಾದ ನಾಲ್ವರುಋತ್ವಿಕ್ಕುಗಳಂ। ಸ್ನಾನ ಧವಳಾಂಬರ ಆಭರಣ ಗಂಧ ಪುಷ್ಪಾದಿಗಳಿಂದಲಂಕರಿಸಿ। ಬಳಿಕ ಶ್ರೀಗುರುವಿನಾಜ್ಞೆಯಿಂದಾನಾರಾತ್ರಿಯಲ್ಲಿ ಕ್ಷೀರಾಹಾರಿಯಾಗಿರ್ದು ಮೇಲೆ ಪ್ರಭಾತಸಮಯದಲ್ಲಿ ದಂತಧಾವನಂಗೈದು। ಮಂಗಳಸ್ನಾನಮಂಮಾಡಿ। ಧವಳಾಂಬರಮಂಪೊದ್ದು। ಭಸಿತೋದ್ಧೂಳನಮಂರಚಿಸಿ। ತ್ರಿಪುಂಡ್ರಧಾರಣಮಂವಿಸ್ತರಿಸಿ ।ರುದ್ರಾಕ್ಷಮಾಲೆಗಳಂಧರಿಸಿ। ಸುವರ್ಣಾಭರಣಶೃಂಗಾರಮಂಪಡೆದು। ಬಳಿಕಾಚಾರ್ಯನ

ಸಮೀಪಕ್ಕೆ ಬಂದು। ಭಯಭಕ್ತಿಯಿಂದಷ್ಟಮಂತ್ರಪೂರ್ವಕದಿಂ । ವಿನಯ ವಿನಮಿತನಾಗಿ । ಸುವರ್ಣಪುಷ್ಪಾದಿಗಳಂ । ವಿತ್ತಾನುಸಾರವಾಗಿ ಗುರುಪೂಜನಂಗೈದು। ಮರಳಿ ಗಂಧಪುಷ್ಪಾದಿಗಳಿಂ ಋತ್ವಿಕ್ಕುಗಳಂಭಜಿಸಿಮೇಲೆ ಶ್ರೀಗುರುಮುಖ್ಯ ಸಕಲ ಶಿವಮಾಹೇಶ್ವರರಬಲವಂವಿಭೂತಿವೀಳಯದಿಂದುಪಚರಿಸಿ ಖನನ ದಹನಶೋಧನ, ಸಂಪ್ರೋಕ್ಷಣ, ಮರ್ಧನ, ಅನುಲೇಪನವೆಂಬ ಷಟ್ಕರ್ಮಂಗಳಂ। ಸಾರಣೆಕಾರಣೆ, ತಳಿರ, ದೋರಣ, ಕುಸುಮಸರವಿಸರ, ಬಳವಳಿಗಿ। ಧೂಪಾದಿಗಳಿಂಪರಿಶೋಭಿಪಮನೋಹರಮಂಟಪದಲ್ಲಿ। ಗೋಚರ್ಮಮಾತ್ರ ಭೂಮಿಯಂ ಚೌಕವಾಗಿ।ಗೋರೋಚನಗೋಮಯ ಗೋಮೂತ್ರ ಗೋದಧಿ-ಗೋಘೃತ ಗೋಕ್ಷೀರವೆಂಬ । ಷಟ್ಸಂಮಾರ್ಜನಂಗೈದು। ಬಳಿಕ ಚೌಕಮಧ್ಯದಲ್ಲಿ। ಪ್ರವಾಳ-ಮೌಕ್ತಿಕ-ಶುಭ್ರಪಾಷಾಣ-ಸುವರ್ಣ ಶ್ವೇತಾಭ್ರಕ- ತಂಡುಲಾದಿಗಳಚೂರ್ಣಂಗಳಿಂದಷ್ಟದಳಕಮಲಮಂರಚಿಸಿ। ಮತ್ತದನಾವರಿಸಿ। ಶಂಖ- ಚಕ್ರ ಶೂಲ-ಡಮರುಗಪರಶು-ಘಂಟೆ-ಛತ್ರ-ಚಾಮರ-ವೃಷಭ-ಚರಣಾದಿವಿಚಿತ್ರವರ್ಣಕಮಂತ್ರಂಬಿತ್ತರದಮೇಲೆ ।ಯುಳ್ಳು-ಜೀರಿಗೆ-ಗೋಧಿ-ಅಕ್ಕಿ-ಉದ್ದುಗಳೆಂಬ ಧಾನ್ಯವಂನಾದರೂ । ಕೇವಲತಂಡುಲವನ್ನಾದರೂ। ಮೂವತ್ತೆರಡಂಗುಳಪ್ರಮಾಣದಚತುರಶ್ರವಾಗಿ। ಹರವುತ್ತದರಮೇಲೆ । ತೀರ್ಥಾಂಬುಪೂರ್ಣವಾದಸುವರ್ಣಾದಿನವೀನ ಪಂಚಕಲಶಂಗಳಂ। ಪೂರ್ವ- ದಕ್ಷಿಣ-ಪಶ್ಚಿಮ-ಉತ್ತರ-ಮಧ್ಯಕ್ರಮದಿಂದಾಚಾರ್ಯನೇಸ್ಥಾಪಿಸುತ್ತ । ಕಲಶಂಗಳ್ಗಂ ಬೇರೆಬೇರೆನೂತನವಸ್ತ್ರಂಗಳಂಸುತ್ತಿ।ನವಪಂಚತಂತುಗಳಂಪರಿವೇಷ್ಟಿಸಿ। ಸುವರ್ಣಾದಿಗಳದರೊಳಗಿರಿಸಿ । ಬಳಿಕಾಮ್ರಪಲ್ಲವ ।ದೂರ್ವಾಂಕುರ । ಪೂಗಕುಸುಮ-ನಾಗವಲ್ಲೀ-ದಳಾದಿಗಳಿಂದಲಂಕರಿಸಿ ಪೂರ್ವಾದಿ ದಿಕ್ಕುಗಳಲ್ಲಿತತ್ಪುರುಷ-ಅಘೋರ-ಸದ್ಯೋಜಾತ- ವಾಮದೇವ-ಈಶಾನವೆಂಬಪಂಚಬ್ರಹ್ಮವೆಂದುಪರಿಭಾವಿಸಿ। ಮತ್ತಮಾ ಕಲಶಗಳಮಧ್ಯದಲ್ಲಿ । ಪರಶಿವನಂಭಜಿಸಿ । ಮೇಲನಗ್ರಾಸನದಲ್ಲಿ ಪೂರ್ವಾಭಿಮುಖನಾಗಿ।ಪರಶಿವಸಂಜ್ಞಾತನಾಗಿಕುಳ್ಳಿರ್ದ್ದಾಚಾರ್ಯನಮಧ್ಯೆಕಲಶವನುಳಿದು । ಪೂರ್ವಾದಿನಾಲ್ಕು ಕಲಶಂಗಳನೇಕ್ರಮದಿಂ । ರೇವಣಸಿದ್ಧ । ಮರುಳುಸಿದ್ಧ । ರಾಮದೇವಪಂಡಿತಾರಾಧ್ಯರೆಂಬಾಚಾರ್ಯಸಾಂಪ್ರದಾಯಿಕರಾದ । ಬೇರೆಬೇರೆ ಮಠ ಪೀಠ ಆಸನಾದಿಲಕ್ಷಣಲಕ್ಷಿತರಾದ ಆಯಾಋತ್ವಿಕ್ಕುಗಳಂ ಅರ್ಘ್ಯ ಗಂಧಪುಷ್ಪಾಕ್ಷತಾದಿಗಳಿಂ ಶ್ರೀಮತ್ಪಂಚಾಕ್ಷರಪೂರ್ವಕವಾಗಿ ಭಜಿಸುತ್ತನಂತರದಲ್ಲಿ ತನ್ನಶರೀರಧನ

ಪಾನಪಾತ್ರಾದಿಗಳಂಸದ್ಗುರುವಿಗೋಸುಗನಿವೇದಿಸಿ ಸಾಷ್ಟಾಂಗಪ್ರಣು
ತನಾಗಿ ಶಿಷ್ಯನುಉತ್ತರಾಭಿಮುಖನಾಗಿ ಶ್ರೀಗುರುವಿನ ದಕ್ಷಿಣಭಾಗದಲ್ಲಿ
ಚೌಕದಸನ್ನಿಧಿಯೊಳು ಸ್ವಸ್ತಿಕಮಂಡಲದಮೇಲೆ ಪದ್ಮಾಸನಾಸೀನನಾಗಿ
ರುಜುಕಾಯನಾಗಿ ನಾಸಾಗ್ರನಿರೀಕ್ಷಿತಲೋಚನಂಗಳುಳ್ಳಾತನಾಗಿಮುಕು
ಳಿತಕರಕಮಲನಾಗಿ ಶಿವಮಂತ್ರೋಚ್ಚಾರಣ ಶಿವಧ್ಯಾನಾದಿಗಳಿಂಕುಳ್ಳಿರ್ದ
ಶಿಷ್ಯನಂಶ್ರೀಗುರುತನ್ನ ಕೃಪಾಲೋಚನದಿಂ ನಿರೀಕ್ಷಿಸಿಮೇಲೆ ಸಕಲಮಾ
ಹೇಶ್ವರರಾಶೀರ್ವಾದನಾದಂಪೊಣ್ಮೆಮಂಗಳವಾದ್ಯಧ್ವನಿಯುಂಪೊಣ್ಮೆ ವೀರಮಾ
ಹೇಶ್ವರಮಂತ್ರಭವಸೂಕ್ತಾದಿಗಳೊಡನಾಚಾರ್ಯನು ಋತ್ವಿಕ್ಕುಗಳುಂ
ತಮ್ಮತಮ್ಮಕಲಶಂಗಳಂ ಕ್ರಮದಿಂದೆತ್ತಿ ಬಳಿಕಾ ಕಲಶೋದಕಗಳಂ ದೂ
ರ್ವಾಂಕುರದರ್ಭಾಂಕುರಾಮ್ರಪಲ್ಲವ ಬಿಲ್ವಗುಚ್ಛಾದಿಗಳಿಂ ಗುರುವರ್ಯನು
ತನ್ನಶಿಷ್ಯನಶಿರಸ್ಸಿನಲ್ಲಿ ದೇವಸ್ಯತ್ವಾಸಿಧನಪತಯೆಶಾಂತಾಪೃಥಿವೀ ಇಮಂ
ಮೇಗಂಗೆ ಪಂಚಬ್ರಹ್ಮ ರುದ್ರಸೂಕ್ತ ಬ್ರಹ್ಮಶಾಂತಿ ಪಂಚಾಕ್ಷರ ಕಲಾಭಿ
ಷೇಕಮಂತ್ರಗಳಿಂ ಸಂಪ್ರೋಕ್ಷಿಸಿ ಶಾಂಭವವ್ರತಪಟ್ಟಾಭಿಷೇಕಂಗೈದು
ಮತ್ತಮಾ ಕಲಶಂಗಳನಲ್ಲಿಯೇಸ್ಥಾಪಿಸಿ ಬಳಿಕಾಕ್ರಮದಿಂ ಮತ್ತೆಸಂಗ
ಹುತ್ತಾ ಕಲಶೋದಕಗಳಂ ಮೊದಲಂತೆ ಶಿಷ್ಯನಮಸ್ತಕದಮೇಲೆ ತಳಿದು
ಇಂತು ಮೂರುವೇಳೆ ಅಘಮರ್ಷಣಶುದ್ಧಿಪಟ್ಟಾಭಿಷೇಕಗಳಂಮಾಡಿಅನಂ
ತರದೊಳಾಚಾರ್ಯನು। ಶಿಷ್ಯನಲಲಾಟಾದಿಸ್ಥಾನಗಳಲ್ಲಿ ಜಪಸಿದ್ಧಶ್ರೀಮ
ತ್ಪಂಚಾಕ್ಷರೀ ಮಹಾಮಂತ್ರದಿಂದಭಿಮಂತ್ರಿತವಾದ ಶ್ರೀಮದ್ವಿಭೂತಿ
ಯಂತಿರ್ಯಕ್ತ್ರಿಪುಂಡ್ರವಾಗಿ ಧರಿಸಿ ವಿಧಿದುರ್ಲಿಪಿಗಳಂತೊಡೆದು ಕಾಯ
ಶುದ್ಧ್ಯಾತ್ಮಶುದ್ಧ್ಯಾದಿಗಳಂಮಾಡಿ ಕಲಾನ್ಯಾಸಮಂತ್ರನ್ಯಾಸಾದಿಗಳಂ
ವಿಸ್ತರಿಸಿ ಅಣವಾದಿಮಲತ್ರಯಮಂಕಳೆದುಲೌಕಿಕವಾಸನೆಗಳಂಪರಿಹರಿಸಿ
ಶುದ್ಧಾತ್ಮನಂಮಾಡಿ ಮೇಲೆಶ್ರೀಗುರು ತನ್ನದಕ್ಷಿಣಹಸ್ತಮಂ ಗಂಧಾಕ್ಷತ
ಪುಷ್ಪಾದಿಗಳಿಂ ಶಿವಮಂತ್ರದಿಂದರ್ಚಿಸಿ ಬಳಿಕ ತೇಜೋಮಯವಾದ ಶಿವ
ಹಸ್ತಮಂ ಶಿಷ್ಯನಮಸ್ತಕದಲ್ಲಿ ಮೂಲಮಂತ್ರೋಚ್ಚಾರಣದಿಂದಿರಿಸುತ್ತ
ಶಿಷ್ಯನಮಸ್ತಕದಲ್ಲಿಯೇ ಅಧಿಷ್ಠೇಯಮಾದ ಕ್ರಿಯಾಶಕ್ತ್ಯಾತ್ಮಕಪಿಂ
ಡಮೆಂಬ ಪೀಠದೊಡನೆ ಲಿಂಗಲಕ್ಷಣಚಿಚ್ಛಕ್ತಿಯೆಂಬ ಕಾರಣಯುಕ್ತನಾ
ದಅಧಿಷ್ಠಾತೃವಪ್ಪ ಪರಶಿವನಂಆಹ್ವಾನಿಸಿ ಲಿಂಗಪ್ರತಿಷ್ಠೆಯಂಮಾಡಿಮಾ
ನಸಪೂಜೆಯಂವಿಸ್ತರಿಸಿ ಮೇಲಾಚಾರ್ಯಂಗೆ ತನ್ನ ಕರಕಂಜವಂಮುಗಿದು
ಇಲ್ಲಿಯೇ ಸನ್ನಿಹಿತವಾಗಿರೆಂದು ಈಶ್ವರಂಗೆ ಬಿನ್ನಪಂಗೈದು ಶಿಷ್ಯಂಗ

ಚರಧಾರಣವಪ್ಪಂತೆ ಹಸ್ತದಿಂದೊತ್ತಿ ತಿಳಿಸುವದೇ ವೇಧಾದೀಕ್ಷೆಯೆನಿಸುವದು। ಬಳಿಕ ಪ್ರಣವಪಂಚಾಕ್ಷರಮಂತ್ರಮಂ ಶಿಷ್ಯನದಕ್ಷಿಣಕರ್ಣದಲ್ಲಿ ಮೆಲ್ಲನುಚ್ಚರಿಸುತ್ತ ಮಂತ್ರದ ಋಷಿಛಂದೋದೇವತಾದಿಗಳಂ ತಿಳಿಸುವದೇ ಮಂತ್ರದೀಕ್ಷೆಯೆನಿಸುವದು॥

## — ಕ್ರಿಯಾದೀಕ್ಷೆ. —

ಬಳಿಕ ಮಂತ್ರಾನುಸಂಧಾತೃವಾಗಿರ್ಪ ಶಿಷ್ಯನಮಸ್ತಕಸ್ಥಿತವಾದ ಜ್ಞಾನಕ್ರಿಯಾತ್ಮಕಶಂಭುಲಿಂಗವನೇ ಶ್ರೀಗುರು ತನ್ನ ಭಾವಮನೋದೃಷ್ಟಿಗಳಿಗೆ ಯಥಾಕ್ರಮದಿಂದಾಕರ್ಷಿಸಿ ಸೆಳೆತಂದಾದೃಷ್ಟಿಯಿಂ ಮೇಲೆ ಸ್ಫಟಿಕ ಸುವರ್ಣ ಶಿಲೆ ರತ್ನಾದಿಲಿಂಗಗಳಲ್ಲಿ ಲಿಂಗಾಧಿಕ್ಯವಾಗೆ ಮೃತ್ಯುತೊಲಗೆದಪಿ ದ್ರೂಪೋಗೆ ಲಿಂಗಶಕ್ತಿಯಿಂ ಪ್ರೋಕ್ಷಿಸುಪ್ಪುದರಿಂ ಆಲಿಂಗವೃತ್ತಮಂ ಬಿಳಿಸಿಸುರಾತ್ರದಿಂತಳೆದಾಸೂತ್ರಮಂ ಗೋಮುಖದತುದಿಗೆ ಲಿಂಗಸಮಮಸ್ತಕಕ್ಕೆ ಪಿಡಿದು ಸರಿಗೊಂಡು ಮೇಲಾಸೂತ್ರದಿಂ ಶಕ್ತಿಯಧಃಪೀಠಮಂ ಪರಿಮಾಣಿಸಿ ಮೇಲಣಪೀಠದಿಂ ಲಿಂಗದಮಸ್ತಕಕ್ಕೆ ಹವಣಿಸಿ ಮೇಲೆ ಸೂತ್ರಾರ್ಧದಿಂ ಗೋಮುಖವನಳೆದು ಸಮಾನಪರಿಧಿಂತು ಪಂಚಸೂತ್ರಂಗಳುಕ್ತಸಿತಲಿಂಗಗಳೊಂದೆ ಜಾತಿ ಶಿಲಾದಿಗಳಾದ ಕಾಂತಿಮಯಮಪ್ಪ ಲಿಂಗಸ್ಥಳಮಂ ತೀರ್ಥಾಂಬುಪಂಚಗವ್ಯಭಸಿತ ಮಂತ್ರೋದಕಗಳಿಂ ಪರಿಪೂರಿತಮಾದ ತ್ರಿವಿಧಕುಂಭಗೊಳಗೊಂದೊಂದು ರಾತ್ರಿಯಲ್ಲಿ ಪ್ರತ್ಯೇಕವಾಗಷ್ಟೋತ್ತರಶತಪಂಚಾಕ್ಷರಮಂತ್ರದಿಂದಭಿಮಂತ್ರಿಸಿ ಇರಿಸುತ್ತ ನಾಲ್ಕನೇ ರಾತ್ರಿಯೊಳು। ಆ ಪಂಚಕಲಶಸ್ಥಾನಕ್ಕೆ ಉತ್ತರದೊಳು ಭೂಮಿಯಂ ಪರಿಶುದ್ಧಿಗೈದು ಅಷ್ಟದಳಪದ್ಮಮಂಬರದು ಬಳಿಕೇಳುಮೊಳ ಉದ್ದದನವೀನವಸ್ತ್ರಮಂ ತಂದು ಆ ಪದ್ಮದಮೇಲೆ ಒಂದು ಮೊಳವಂ ಮುಚ್ಚಿ ಅದರ ಮೇಲೊಂದೊಂದಂಗುಳ ಪರಿಮಾಣಶ್ಯಾಮಕಧಾನ್ಯಮಂ ಪಸರಿಸಿ ಅಷ್ಟದಳನಳಿನಮಂಬರದು ಆ ವಸ್ತ್ರಮಂ ಬಾಸಣಿಸಿ ಮತ್ತದರಮೇಲೆ ತಿಲಮಂ ಹರಹುತ್ತ ಅದರವಲ್ಲಿ ಅಷ್ಟದಳಕಮಲವಂಬರದು ವಸ್ತ್ರಮಂ ಪೊದ್ದಿಸಿ ಮತ್ತದರ ಮೇಲೆ ಗೋಧಿಯಂ ಹರಹಿ ಅಷ್ಟದಳವಾರಿಜಮಂ ನಿರ್ಮಿಸಿ ವಸ್ತ್ರಮಂ ಕವಚಿಸಿ ಅದರಮೇಲೆ ವ್ರೀಹಿಯಂ ಪಸರಿಸುತ್ತ ಅಷ್ಟದಳಕಂಜಮಂ ರಚಿಸಿ ವಸ್ತ್ರಮಂ ಮುಚ್ಚುತ್ತ ಮತ್ತದರಮೇಲೆ ತಂಡುಲಮಂ ಹರಹುತ್ತ ಅಷ್ಟದಳಸರಸಿಜಮಂಬರದು ವಸ್ತ್ರವನಾಪರಿಸಿ ಮತ್ತದರಮೇಲೆ ಚೂತಬಿಲ್ವಅಮ ಲಕ[illegible]ಮಾರಣ್ಯವೆಂಬ ಪಂಚಪತ್ರಗಳಂ ವಿಸ್ತರಿಸುತ್ತ ಮನಾಚ್ಛಾದಿ

ಸಿವಸ್ತ್ರದಿಂ ಹೀಗೆ ಳು ಲೆಯೂದಾಧಾರವಂ ಕಲ್ಪಿಸುತ್ತದರಮೇಲೆ ಆ ಲಿಂಗಸ್ಥಳವಂ ಗೋಮುಖದುತ್ತರಭಾಗದಲ್ಲಿರಿಸಿ ಮೇಲೆ ಸಂಸ್ಕಾರಮಾರ್ಗಾಯೊಮದಿಂ ಸಹಸ್ರಮೂಲಮಂತ್ರವಂ ಜಪಿಸುತ್ತ ಲಿಂಗಸ್ಥಳಕ್ಕೆ ಮಾತೃಕಾನ್ಯಾಸಕಲಾನ್ಯಾಸ ಮಂತ್ರಾನ್ಯಾಸಾದಿಗಳಿಂ ಪ್ರಾಣಪ್ರತಿಷ್ಠೆಯಂ ಮಾಡಿ ಮರಳಿ ಕಲಶೋದಕದಿಂ ಸ್ನಾನಂಗೈದು ಅಷ್ಟವಿಧಾರ್ಚನವಂ ಮಾಡುವದಿಂತು ಮುನ್ನವೇ ಪರಿಶುದ್ಧಿಯಂ ಪಡೆದಿರ್ದ ಲಿಂಗಸ್ಥಳವನಾಚಾರ್ಯನು ತನ್ನ ವಾಮಕರಸ್ಥಳಕ್ಕೆ ಬಿಜಯಂಗೈಸಿಕೊಂಡು ಬಳಿಕದರೊಳ್ ಪೂರ್ವಕ್ರಮದಿಂ ಸೃಷ್ಟಿಸ್ಥಿತ್ಯಾದಿ ದೃಷ್ಟಿಸ್ಥಿತಶಿವಕಳಾಪ್ರತಿಷ್ಠೆಯಂ ಮಾಡಿ ಮತ್ತಮಾ ಶಿಷ್ಯನಂ ಅಯಂ ಮೇ ಹಸ್ತೋ ಭಗವಾನೆಂಬ ಶ್ರುತಿಸಿದ್ಧವಾದ ವಾಮಹಸ್ತಪೀಠದೊಳು ಶಿವಲಿಂಗವಂ ಗೋಮುಖವಾಮಭಾಗಮಪ್ಪಂತೆ ಸಂಸ್ಥಾಪಿಸುವದೇ ಕ್ರಿಯಾದೀಕ್ಷೆಯೆನಿಸುವದು॥

## — ಸಪ್ತವಿಧದೀಕ್ಷೆಗಳು. —

ಬಳಿಕ ಶ್ರೀಗುರು ತನ್ನ ಶಿಷ್ಯನಂ ಕರದು ಎಲೇ ಮಗನೇ। ನಿನ್ನ ಪ್ರಾಣಲಿಂಗವಿದುತಾನೆ। ತತ್ವಾತೀತವಾದ ಪರವಸ್ತುವಿದುತಾನೆ। ಹರಿಬ್ರಹ್ಮರರಸಿ ಕಾಣದನಿಜತತ್ವವಿದುತಾನೆ। ನಿಜವಾಗಿ ನಿನ್ನ ಸೋಹಂಭಾವನೆಯೊಳ್ ಪೊಳವಸ್ವರೂಪಬಿಂಬವಿದುತಾನೆ। ಇದು ನಿನ್ನ ನಿಮಿಷಾರ್ಧವಾದರೂಪ ನಿನ್ನ ಶರೀರದಿಂ ವಿನಿಯೋಗವಾದಂತೆ ಸಾವಧಾನದಿಂ ದೃಢವಾಗಿ ನಿಯತವ್ರತದಿಂ ಧರಿಸು। ತ್ರಿಕಾಲದೊಳು ತಪ್ಪದರ್ಚಿಸುತ್ತಿರು! ಲಿಂಗಾರ್ಪಿತವಲ್ಲದೆ ಯಾವದೊಂದನೂ ಸ್ವೀಕರಿಸದಿರು। ಸಕಲಭೋಗಮೋಕ್ಷಂಗಳುಂ ನಿನ್ನ ಕೈಸಾರಿದವೆಂದು ನಂಬು। ಸರ್ವಕ್ಲೇಶಗಳಂ ಬಿಡು। ನಿತ್ಯಸುಖಿಯಾಗು। ನಿತ್ಯವಿಃದೆಂಬವ್ರುಮೊದಲಾದ ಶಿವಕ್ರಿಯೆಗಳನುಪದೇಶಂಗೈದು। ಶಿಷ್ಯನಂ ಅನುಗ್ರಹಿಸಲಪ್ಪುದಾ ವೀರಶೈವದೀಕ್ಷೆಯಾದೊಡೆ। ಆಜ್ಞಾದೀಕ್ಷೆ। ಸ್ವಸ್ತಿಕಾರೋಹಣ। ಕಲಶಾಭಿಷೇಕ ವಿಭೂತಿಯಪಟ್ಟ। ಲಿಂಗಾಯತ। ಲಿಂಗಸ್ವಾಯತವೆಂದು ಸಪ್ತವಿಧವಾಗಿಹುದವರಲ್ಲಿ। ಶ್ರೀಗುರು ತನ್ನಾಜ್ಞೆಯಂ ಶಿಷ್ಯನಲ್ಲಿ ಪ್ರತಿಪಾಲಿಸುವದೇ ಆಜ್ಞಾದೀಕ್ಷೆಯೆನಿಸುವದು। ಪುರಾತನರ ಸಮಯಾಚಾರಕ್ಕೆ ಸಲಶವಾಗಿಮಾಳ್ಪುದೆ। ಉಪಮಾದೀಕ್ಷೆಯೆನಿಸುವದು। ಸ್ವಸ್ತಿಕಮೆಂಬ ಮಂಡಲದಮೇಲೆ ಶಿಷ್ಯನಂ ಕುಳ್ಳಿರಿಸಿ। ಮಂತ್ರನ್ಯಾಸಾದಿಗಳಂ ಮಾಡಿ। ಮಂತ್ರಶರೀರಿಯೆನಿಸುವದೇ ಸ್ವಸ್ತಿಕಾರೋಹಣವೆನಿಸುವದು। ಪಂಚಕಲಶೋದಕಗಳಿಂ ಶಿಷ್ಯಂಗೆ ಸ್ನಾನಂಗೈವುದೇ ಕಲಶಾಭಿಷೇಕವೆನಿಸುವದು। ಆ ಮೇಲೆ

ಕ್ತಸ್ಥಾನಂಗಳಲ್ಲಿ ತತ್ತನ್ಮಂತ್ರಗಳಿಂ ಶ್ರೀವಿಭೂತಿಧಾರಣೆಗೈಯುವದೇ ವಿಭೂತಿಪಟ್ಟವೆನಿಸುವದು। ಆಚಾರ್ಯಂತಾನು ಶಿಷ್ಯಂಗೆಕೊಡಲು ತಕ್ಕ ಲಿಂಗಮಂ ಸಮರ್ಚಿಸಿ। ಶಿಷ್ಯನಂನೋಡಿಸುವದೇ ಲಿಂಗಾಯತವೆನಿಸುವದು॥ ಗುರುವಿತ್ತ ಲಿಂಗವನೇಶಿಷ್ಯನುಸಾವಧಾನದಿಂಮುತ್ತಮಾಂಗಾದಿಸ್ಥಾನಂಗಳಲ್ಲಿ ಧರಿಸುವದೇಲಿಂಗಸ್ವಾಯತವೆನಿಸುವದು। ಇಂತು ಶಾಸ್ತ್ರೋಕ್ತಕ್ರಮದಿಂಸಾಂಗಿಕವಾದ ಶಿವದೀಕ್ಷೆಯಿಂ। ಲಿಂಗಾಂಗಸಂಬಂಧಿಯಾದ ವಿಶೇಷ ವೀರಶೈವನುಮಾಳ್ಪ ಶಿವಲಿಂಗಪೂಜಾಕ್ರಮವೆಂತೆಂದೊಡೆ॥

— ವೀರಶೈವಶಿವಪೂಜಾಕರ್ಮಾನುಷ್ಠಾನ. —

ವೀರಶೈವವೇ ಜಗತ್ತಿನಮಾನವರೊಳು ಶ್ರೇಷ್ಠತಮವಪ್ಪುದರಿಂ ಶ್ರೇಷ್ಠನಾವುದಾಹುದನಾಚರಿಸಿದೊಡೆ। ಇತರಜನಗಳದನೇ ಆಚರಿಸುವರೆಂಬಂತೆ। ತಾನುನಿತ್ಯನಿರ್ಮಲಕೃತಾರ್ಥನಾದರು ಲೋಕಾನುಗ್ರಹಾರ್ಥವಾಗಿ ವೀರಶೈವ ಸತ್ಸಂಪ್ರದಾಯಮಂ ಪರಿಪಾಲಿಸಲು। ಮಂತ್ರನ್ಯಾಸಾದಿಸಕಲಸಾಂಗಿಕವಾಗಿ । ಶಿವಲಿಂಗಾರ್ಚನೆಯಂಮಾಡುವಲ್ಲಿ । ಮೊದಲುಓಂಹಃ ಅನಂತಶಕ್ತಿಧಾಮ್ನೆಜ್ಯೋತಿರೂಪಾಯಶಿವಾಸ್ತ್ರಾಯಫಟ್ ಎಂಬಮಂತ್ರದಿಂ। ಮನಶ್ಶುದ್ಧಿಯನಾಚರಿಸಿ। ಓಂಅಪೋವಾಇದಗ್ಂಸರ್ವಂ ಆಪಃಪುನಂತುಪೃಥಿವೀಂ। ಹಿರಣ್ಯವರ್ಣಾಶ್ಶುಚಯಃಪಾವಕಾಃ। ಯೆಂಬಮೂರು ಮಂತ್ರಗಳಿಂ ಕರಚರಣಮುಖ ಪ್ರಕ್ಷಾಳನಂಗೈದು । ಬಳಿಕ ಸರ್ವಜ್ಞಾಯನಮಃ ಯೆಂಬಮಂತ್ರವನುಚ್ಚರಿಸುತ್ತ ಪೂಜಾಗೃಹಮಂಪ್ರೋಕ್ಷ್ಯ। ಓಂ ಹ್ರಾಂ ಪೃಥಿವ್ಯಾತ್ಮನೇ- ಯೆಂದು ಪಾರ್ಥಿವದೇಹಗತಗಂಧಲಿಂಗಮಂ ಸ್ಮರಿಸಿ। ನಿವೃತ್ತಿಕಲಾಯೈನಮಃಯೆಂಬ ಮಂತ್ರದಿಂ ಸಂಸಾರದಕಾಣಿಕೆಯೊಳು ತಗಿಲಿಸುವ ಪಾಶಬಂಧಮಂ ಪಂಹರಿಸುವಂತೆ ಶರೀರಸ್ಥಾನಗಳಶುದ್ಧಿಯನಾಚರಿಸಿ। ಮೇಲೆ ಶೀಯೈನಮಃಯೆಂಬ ಮಂತ್ರೋಚ್ಚಾರಣದಿಂ ಪೂರ್ವೋತ್ತರಮುಖನಾಗಾದರೂ ಶಂಭುಲಿಂಗಾಭಿಮುಖಪಾರ್ಶ್ವಸಂಮುಖನಾಗಾದರೂ ಸುಖಾಸನದಲ್ಲಿ ಕುಳ್ಳಿರ್ದು॥

— ವೀರಶೈವಭಸ್ಮಧಾರಣ. —

ಬಳಿಕ ಪ್ರೋಂ ಹ್ರೀಂ ಈಶಾನಾಯನಮಃಯೆಂಬ ಮಂತ್ರೋಚ್ಚಾರಣದಿಂದಕ್ಷಿಣಕರಮಧ್ಯಮಾನಾಮಿಕಾಂಗುಷ್ಠಗಳಿಂ।ಶ್ರೀಮದ್ವಿಭೂತಿಯನಾಧಾರದಿಂ ತೆಗೆದುಕೊಂಡು। ಮೇಲೆವಾಮಹಸ್ತದ ಅಂಗುಷ್ಠಾದ್ಯಂಗುಳಿಗಳಲ್ಲಿ। ಯಕಾರಾದಿನಕಾರಾಂತವಾದ ಪಂಚಾಕ್ಷರಗಳನುಚ್ಚರಿಸುತ್ತ। ಅವಿ

ಭೂತಿಯುನರಸಿ। ಬಳಿಕ ಪ್ರೋಂ ಹ್ರಾಂ ಸದಾಶಿವಾಯನಮಃ ಪುನಾತಿಯು
ಜ್ಜಗತ್ಸರ್ವಂತ್ರಿಪುಂಡ್ರಾ ತ್ಮಾಸದಾಶಿವಹಿಐಶ್ವರ್ಯಪ್ರಾಪ್ತಿ ಬೀಜಾಯತಸ್ಮೈ
ಶ್ರೀಭಸ್ಮನೇನಮಃ ಎಂಬಮಂತ್ರದಿಂಭಸಿತಕ್ಕೆನಮಸ್ಕರಿಸಿ ಮೇಲಿದಕ್ಷಿಣಕರ
ದಿಂಮುಚ್ಚಿ ಬಲದತೊಡೆಯಮೇಲಿಟ್ಟು ಓಂನಮಶ್ಶಿವಾಯ ಎಂಬಮೂಲಮಂ
ತ್ರದಿಂ ಏಕಾದಶವಾರಮಂತ್ರಿಸಿ ಅಥವಾ ಅಗ್ನಿರಿತಿಭಸ್ಮ ಎಂಬಭಸ್ಮಸೂಕ್ತ ಕಾ
ಲಾಗ್ನಿರುದ್ರೋಪನಿಷತ್ತು । ಮಾನಸ್ತೋಕ । ತ್ರಿಯಾಯುಷ । ತ್ರ್ಯಂ
ಬಕ ಮಂತ್ರಗಳಿಂದೆತ್ತಿ । ಬಳಿಕಾ ವಿಭೂತಿಯಂ। ಓಂಹ್ರಾಂ ಈಶಾನಾ
ಯನಮಃ ಯೆಂದು ಶಿರಸ್ಸಿನಲ್ಲಿ । ಓಂಹ್ರೀಂ ತತ್ಪುರುಷಾಯನಮಃ
ಯೆಂದು ಮುಖದಲ್ಲಿ। ಓಂಹ್ರೈಂ ಅಘೋರಾಯನಮಃ ಯೆಂದು ಹೃದ
ಯದಲ್ಲಿ। ಓಂಹ್ರೌಂ ವಾಮದೇವಾಯನಮಃ ಯೆಂದು ಗುಹ್ಯದಲ್ಲಿ।
ಓಂಹ್ರೀಂ ಸದ್ಯೋಜಾತಾಯನಮಃ ಯೆಂದು ಪಾದದಲ್ಲಿ ಪ್ರೋಂಹ್ರಾಂ
ಪ್ರೋಂ ಸದಾಶಿವಾಯನಮಃ ಯೆಂದು ಸರ್ವಾಂಗದಲ್ಲಿ ಸಂಪ್ರೋ
ಕ್ಷಿಸಿ। ಬಳಿಕಾ ಜಲಮಂಗೊಂಡು। ಮತ್ತು ವಿಭೂತಿಯಂ ತೆಗೆದುಕೊಂಡು।
ಮೂಲಮಂತ್ರದಿಂ ಹನ್ನೊಂದುವೇಳೆ ಮಂತ್ರಿಸುತ್ತ ಭಸಿತವಂ ಓಂಹ್ರಾಂ
ಯೆಂ ಈಶಾನಾಯನಮಃ ಯೆಂದು ಐದುವೇಳೆ ಶಿರೋದೇಶವನು। ಓಂಹ್ರೀಂ
ಪಾಂತತ್ಪುರುಷಾಯನಮಃ ಯೆಂದು ನಾಲ್ಕುವೇಳೆ ಮುಖವನು। ಓಂಹ್ರೈಂ ಶ್ರೀಂ
ಅಘೋರಾಯನಮಃ ಯೆಂದೆಂಟುವೇಳೆ ಹೃದಯವನು । ಓಂಹ್ರೌಂ ವಾಂ
ವಾಮದೇವಾಯನಮಃ ಯೆಂದು । ಪದಿಮೂರುವೇಳೆಗುಹ್ಯಪ್ರದೇಶವನು।
ಓಂಹ್ರೀಂ ಸದ್ಯೋಜಾತಾಯನಮಃ ಯೆಂದೆಂಟುವೇಳೆ ಪಾದಾದಿ ಸರ್ವಾಂ
ಗವನೂ। ಉದ್ಧೂಳಿಸಿ। ಮತ್ತಮಾ ಭಸಿತಮಂ ಜಲಮಿತ್ರಮಂ ಮಾಡಿ । ಪೂ
ರ್ವೋಕ್ತ ಮೂರ್ಧಲಲಾಟಾದಿಸ್ಥಾನಂಗಳಲ್ಲಿ। ತ್ರಿಯಾಯುಷತ್ರ್ಯಂಬಕಾ
ದಿಪೂರ್ವೋಕ್ತ ಮಂತ್ರಗಳಂ ಜಪಿಸುತ್ತ ತಿರ್ಯಕ್ತ್ರಿಪುಂಡ್ರಧಾರಣಮಂಗೈವುದು॥

## —* ವೀರಶೈವಕಲಾನ್ಯಾಸ. *—

ಬಳಿಕ- ಓಂ ಈಶಾನಸ್ಸರ್ವವಿದ್ಯಾನಾಂಪತಿಸ್ತಸ್ಮೈ ಶಶಿನ್ಯೈ ಚನಮಃ
ಮೂರ್ಧ್ನಿ । ಈಶ್ವರಸ್ಸರ್ವಭೂತಾನಾಂತಸ್ಮೈ ಅಂಗದಾಯೈ ಚನಮಃ ಪ್ರೂ
ರ್ವಮೂರ್ಧನಿ ಬ್ರಹ್ಮಾಧಿಪತಿ ಬ್ರಹ್ಮಣೋಧಿಪತಿಸ್ತಸ್ಮೈ ಜ್ಯೇಷ್ಠಾಯೈ
ಚನಮಃ ದಕ್ಷಿಣಮೂರ್ಧನಿ । ಬ್ರಹ್ಮಶಿವೋಮೇ ಅಸ್ತುತಸ್ಮೈ ಮಾರೀಚ
ಯೈಚನಮಃ ವಾಮಮೂರ್ಧನಿ । ಸದಾಶಿವೋಂತಸ್ಮೈ ಜ್ವಾಲಿನ್ಯೈಚನ
ಮಃ ಪಶ್ಚಿಮಮೂರ್ಧನಿ । ಓಂತತ್ಪುರುಷಾಯ ವಿದ್ಮಹೇತಸ್ಮೈ ಶಾಂತ್ಯೈಚ

ನಮಃ। ಪೂರ್ವವಕ್ತ್ರೇ। ಓಂವಾಮದೇವಾಯಧೀಮಹಿ। ತನ್ನೋವಿದ್ಯಾಯೈ
ಚನಮಃ। ದಕ್ಷಿಣವಕ್ತ್ರೇ। ಓಂತನ್ನೋರುದ್ರಸ್ತಸ್ಯೈಪ್ರತಿಷ್ಠಾಯೈಚನ
ಮಃ। ವಾಮವಕ್ತ್ರೇ। ಓಂಪ್ರಚೋದಯಾತ್ತಸ್ಯೈನಿವೃತ್ತ್ಯೈಚನಮಃ। ಪಶ್ಚಿ
ಮವಕ್ತ್ರೇ। ಓಂ ಈಶಾನವಕ್ತ್ರಾಯನಮಃ ಊರ್ಧ್ವವಕ್ತ್ರೇ। ಓಂಅಘೋ
ರೇಭ್ಯಸ್ತಮಸ್ಯೈನಮಃ। ಹೃದಯೇ। ಓಂಅಥಘೋರೇಭ್ಯೋಮೋಹಿನ್ಯೈ
ನಮಃ। ಕಂಠೇ। ಓಂಘೋರೇಭ್ಯೋಕ್ಷಯಾಯೈನಮಃ। ದಕ್ಷಿಣಾಂಸೇ। ಓಂಘೋ
ರಘೋರತರೇಭ್ಯಃ ಕನಿಷ್ಠಾಯೈನಮಃ। ವಾಮಾಂಸೇ। ಓಂಸರ್ವೇಭ್ಯಃಸ
ರ್ವಮೃತ್ಯವೇನಮಃ। ನಾಭೌ। ಓಂಸರ್ವಸರ್ವೇಭ್ಯೋವಿನಾಯಾಯೈನಮಃ।
ಜಠರೇ। ಓಂನಮಸ್ತೇಅಸ್ತುರುದ್ರ। ಅಭಯಾಯೈನಮಃ। ಪೃಷ್ಠೇ। ಓಂರೂ
ಪೇಭ್ಯೋತಿವೇಭ್ಯಃ ಜ್ವಾಲಾಯೈನಮಃ। ವಕ್ಷಸಿ। ಓಂವಾಮದೇವಾಯನ
ಮೋರಜಾಯೈನಮಃ ಗುಹ್ಯೇ। ಓಂಜ್ಯೇಷ್ಠಾಯನಮೋರಕ್ಷಾಯೈನಮಃ।
ಲಿಂಗೇ। ಓಂಶ್ರೇಷ್ಠಾಯನಮೋ ಜನ್ಯೈನಮಃ। ಮುಷ್ಕೇ। ಓಂರುದ್ರಾಯ
ನಮೋರತ್ಯೈನಮಃ। ದಕ್ಷಿಣೋರಸಿ। ಕಾಲಾಯನಮಃ। ಕಾಲ್ಯಾಯೈನಮಃ
ವಾಮೋರಸಿ। ಓಂಕಲವಿಕರಣಾಯನಮೋಬಂಧ್ಯೈನಮಃ। ವಾಮಜಂ
ಘೇ। ಓಂಬಲಾಯನಮಃ ಕಾರನಿತ್ಯೈನಮಃ। ದಕ್ಷಿಣಜಂಘೇ। ಓಂಬಲಪ್ರ
ಮಥನಾಯನಮೋಧಾತ್ರ್ಯೈನಮಃ। ಊರಸಿ। ಓಂಸರ್ವಭೂತದಮನಾಯ
ನಮೋಗ್ರಾಮಣ್ಯೈನಮಃ। ದಕ್ಷಿಣಪಾರ್ಶ್ವೇ। ಓಂಮನೋನ್ಮನಾಯನಮ
ಸ್ತಮೋ ಮೋಹಾಯೈನಮಃ। ವಾಮಪಾರ್ಶ್ವೇ। ಓಂಸದ್ಯೋಜಾತಂ
ಪ್ರಪದ್ಯಾಮಿಸಿಧ್ಯೈನಮಃ ದಕ್ಷಿಣಪಾದೇ। ಓಂಸದ್ಯೋಜಾತಾಯವೈನಮೋ
ನಮೋಬುದ್ಧ್ಯೈನಮಃ ವಾಮಪಾದೇ। ಓಂಭವೇದೂಕ್ಷ್ಯೈನಮಃ। ದಕ್ಷಿಣಕರೇ
ಓಂಅಭವೇಲಕ್ಷ್ಮ್ಯೈನಮಃ। ವಾಮಕರೇ। ಓಂಅನಾದಿಭವೇಮೇಧಾಯೈನ
ಮಃ। ಘ್ರಾಣೇ। ಓಂಭಜಸ್ವಮಾಂಕಾಂತ್ಯೈನಮಃ। ಶಿರಸಿ। ಓಂಭವ
ಸ್ವಧಾಯೈನಮಃ। ದಕ್ಷಿಣಬಾಹೌ। ಓಂಉದ್ಭವಾಯನಮಃ। ಧೃತ್ಯೈ
ನಮಃ ವಾಮಬಾಹೌ। ಯೆಂದಿಂತುಕಳಾನ್ಯಾಸಮಂ ವಿಸ್ತರಿಸಿ॥

—* ವೀರಶೈವ ಷಡಂಗನ್ಯಾಸ. *—

ಬಳಿಕ ಓಂಹ್ರಾಂಸರ್ವಜ್ಞಶಕ್ತಿಧಾಮ್ನೇ ಹೃದಯಾಯನಮಃ। ಓಂ
ಹ್ರೀಂತೃಪ್ತಿಶಕ್ತಿಧಾಮ್ನೇ ಶಿರಸೇಸ್ವಾಹಾ। ಓಂಹೂಂಅನಾದಿಬೋಧಶಕ್ತಿ
ಧಾಮ್ನೇ ಶಿಖಾಯೈವಷಟ್। ಓಂಹೈಂಸ್ವತಂತ್ರಶಕ್ತಿಧಾಮ್ನೇಕವಚಾ
ಯಹುಂ। ಓಂಹೌಂಅಲುಪ್ತಶಕ್ತಿಧಾಮ್ನೇನೇತ್ರತ್ರಯಾಯವೌಷಟ್

ಫ್ರೋಂಹ್ರಃ॥ ಅನಂತಶಕ್ತಿಧಾಮ್ನೇಅಸ್ತ್ರಾಯಫಟ್‌ಯೆಂದು । ಷಡಂಗನ್ಯಾ
ಸಂಗೈದು ॥ —* ಪಂಚಬ್ರಹ್ಮನ್ಯಾಸರುದ್ರಾಕ್ಷಧಾರಣಾದಿ. *—

ಬಳಿಕ ವ್ರೋಂಯೆಂಹ್ರಃ ವ್ರೀಂಫಟ್ ಈಶನಾಯೆನಮಃಯೆಂದುಶಿಖ
ಸ್ಥಿನಲ್ಲಿ ವ್ರೋಂವಾತ್ಮರಾಂಪವ್ಷಟ್ ತತ್ಪುರುಷಾಯನಮಃ ಯೆಂದು
ಮುಖಗಲ್ಲಿ ವ್ರೋಂಶಿಂಹ್ರೀಂಖುಂಹುಂಅಘೋರಾಯನಮಃ ಯೆಂದು ಹೃದ
ಯದಲ್ಲಿ, ವ್ರೋಂವು ಹ್ರೂಂಇಂವಷಟ್ ವಾಮದೇವಾಯನಮಃಯೆಂದು
ಗುಹ್ಯದಲ್ಲಿ ವ್ರೋಂನಂಹ್ರೀಂಆಂಸ್ವಾಹಾಸದ್ಯೋಜಾತಾಯನಮಃಯೆಂದು
ಪಾದಂಗಳಲ್ಲಿ ಪಂಚಬ್ರಹ್ಮನ್ಯಾಸಂಗಳಂಮಾಡಿ ಮರಳಿ, ಮೂರ್ಧ, ಲ
ಲಾಟ, ಕಂಠ, ಹೃದಯ ನಾಭಿಗಳಲ್ಲಿಕ್ರಮದಿಂ, ಯಕಾರಾದಿನಕಾರಾಂತವು
ಮಾಗಿಪಂಚಾಕ್ಷರನ್ಯಾಸಂಗೈದು, ಅನಂತರದಲ್ಲಿರುದ್ರಾಕ್ಷ ಪ್ರಂಜಮಂಪ
ಸ್ತ್ರದಲ್ಲಿರಿಸಿ । ವ್ರೋಂಹ್ರೂಂಸ್ರೂಂರೂಂಜೂಂವ್ರಾಂ ರೀಮಪಿ, ಶ್ರೀ
ಮಾಂ, ಕ್ಷಾಂ, ಕ್ಷಮಪಿ, ಕ್ರಾಂ, ಕ್ಷಾಂಹ್ರೂಂ, ನಮಃಯೆಂಬಮಂತ್ರದಿಂದ
ಭಿಮಂತ್ರಿಸಿ ಮರಳಿ-ರುದ್ರಾಕ್ಷವೃಕ್ಷಭೀಜಾಯ ಭೂತಿಸಂಭೂತಿಹೇತವೆ
ನೇತ್ರತ್ರಯಾಯರುದ್ರಾಯ ನಮೋಲೋಕಹಿತಾರ್ಥಿನೆ ಯೆಂಬಮಂತ್ರ
ದಿಂನಮಸ್ಕರಿಸಿ- ಬಳಿಕ, ಶಿಖೆ, ಶಿರಸ್ಸು, ಮೂರ್ಧ, ಕರ್ನದ್ವಯ, ಕಂಠ,
ಉರಸ್ಸು ಬಾಹು ದ್ವಯಮಣಿಬಂಧದ್ವಯ, ಯಜ್ಞಸೂತ್ರಸ್ಥಾನ ಉದ
ರಂಗಳಲ್ಲಿ, ಕ್ರಮದಿಂ, ವ್ರೋಂಸದಾಶಿವಾಯನಮಃ ವ್ರೋಂವಹ್ನಿಸೂರ್ಯ
ಸೋಮಾಧಿಪಾಯಶಿವಾಯನಮಃ ವ್ರೋಂಷಟ್ತ್ರಿಂಶತ್ತತ್ವಾತ್ಮಕಾಯ
ಶ್ರೀಪರಶಿವಾಯನಮಃ, ವ್ರೋಂಸೋಮಾಯನಮಃ ವ್ರೋಂತ್ರಿಯಂಬ
ಕಾಯಕಾಲಾತ್ಮಶ್ರೀಕಂಠಾದಿಮೂರ್ತ್ಯಾತ್ಮಕಾಯಶ್ರೀಸರ್ವಜ್ಞಾಯನಮಃ
ವ್ರೋಂಸುಖಾಸನಾದಿ ಮೂರ್ತ್ಯಾತ್ಮಕಾಯಶ್ರೀಕಂಠಾಯನಮಃ, ವ್ರೋಂ
ಸೋಮಕಲಾತ್ಮಕಾಯ ಶ್ರೀಸೋಮನಾಥಾಯನಮಃ ವ್ರೋಂ ದ್ವಾದಶಾ
ದಿತ್ಯಾಧಿಷ್ಠಾನಾಯ ಶ್ರೀಮಹಾದೇವಾಯನಮಃ ವ್ರೋಂಕೇಶವಾದಿಮೂ
ರ್ತ್ಯಧಿಷ್ಠಾನಾಶ್ರೀಉಮಾಪತಯೆನಮಃ ವ್ರೋಂಶತರುದ್ರವಿದ್ಯೇಶ್ವರಾತ್ಮ
ಕಾಯಶ್ರೀವಿಶ್ವೇಶಾಯನಮಃವ್ರೋಂ ಚತುಷ್ಷಷ್ಟಿಕಲಾಧಿಪಾಯವ್ರೋಂ
ಹ್ರೀಂಜನನಸ್ಥಾನಭೂತಯೆಸರ್ವಾತ್ಮನೇಸರ್ವಕಾಲರೂಪಾಯ ಶ್ರೀಉಮಾ
ಪತಯೇನಮಃ ಯೆಂಬಮಂತ್ರಗಳಂ ಪೂರ್ವೋಕ್ತಸಂಖ್ಯಾಕ್ರಮದಿಂರು
ದ್ರಾಕ್ಷಮಾಲಿಗಳಂಧರಿಸಿ ಬಳಿಕಶಿವಾಯನಮಃ ರುದ್ರಾಯನಮಃ ಪಶು
ಪತಯೇನಮಃ ನೀಲಕಂಠಾಯನಮಃ ಮಹೇಶ್ವರಾಯನಮಃ ಹರಿಕೇ

ಶಾಯನಮಃ ವಿರೂಪಾಕ್ಷಾಯನಮಃ ಪಿನಾಕಿನೇನಮಃ ತ್ರಿಪುರಾಂತಕಾಯನಮಃ ಶಂಭವೇನಮಃ ಶೂಲಿನೇನಮಃ ಮಹಾದೇವಾಯನಮಃ ಯೆಂಬಪನ್ನೆರಡುಮಂತ್ರೋಚ್ಚಾರಣದಿಂಪುಷ್ಪಾಂಜಲಿಯಕೊಟ್ಟು ॥

—* ವೀರಶೈವಶಿವಸಮರ್ಚನ. *—

ಬಳಿಕ ಪರಶಿವನುನಿತ್ಯಸಿಪ್ರಾಮಾದೊಡಂ ಭಕ್ತಿಹಿತಾರ್ಥವಾಗಿತ್ರೈಕಾಲಿನ್ಯದಂತೆಮೂರ್ತ್ತತ್ವದಿಂದುಪಚರಿಸಿಕೊಳ್ಳಲುಯೋಗ್ಯವುಳ್ಳದರಿಂದಾಲಿಂಗಮೂಲದಲ್ಲಿಪಾದಂಗಳನು ಲಿಂಗಾಗ್ರಮುಖವನು ಲಿಂಗಪಾರ್ಶ್ವಂಗಳಲ್ಲಿಭುಜಂಗಳನು ಲಿಂಗದಹಿಂದೆಪೃಷ್ಠಾದಿಗಳನುಪರಿಭಾವಿಸಿ ಓಂಹ್ರೌಂ ತತ್ಪುರುಷಾಯನಮಃ ಯೆಂಬ ಮಂತ್ರದಿಂ ಸ್ವಾಭಿಮುಖಂಮಾಡಿ ಮತ್ತಾ ಮಾಲಿಂಗಕ್ಕೆ ಓಂ ಹ್ರಾಂ ಸದ್ಯೋಜಾತಾಯನಮಃ ಪಾದ್ಯಂಸ್ವಾಹಾ ಓಂಹ್ರೀಂ ವಾಮದೇವಾಯನಮಃ ಆಚಮನೀಯಂಸ್ವಾಹಾ ಓಂ ಹೂಂಅಘೋರಾಯನಮಃ ಅರ್ಘ್ಯಂಸ್ವಾಹಾ ಯೆಂಬ ಮಂತ್ರಗಳಿಂ ಪಾದ್ಯಾದಿಗಳಂಕೊಟ್ಟು ಮರಳಿ ಓಂ ಹ್ರಾಂ ಸದ್ಯೋಜಾತಾಯನಮಃ ಗೋಮೂತ್ರಂಸ್ವಾಹಾ ಓಂ ಹ್ರೀಂವಾಮದೇವಾಯನಮಃ ಗೋಮಯಂಸ್ವಾಹಾ ಓಂಹೂಂ ಅಘೋರಾಯನಮಃ ಕ್ಷೀರಂಸ್ವಾಹಾ ಓಂಹ್ರೈಂತತ್ಪುರುಷಾಯನಮಃ ಗೋದಧಿಸ್ವಾಹಾ ಓಂಹ್ರೌಂಈಶಾಯನಮಃ ಗೋಘೃತಂಸ್ವಾಹಾ ಓಂ ಹ್ರಃ ಸದಾಶಿವಾಯನಮಃ ಪಂಚಗವ್ಯಂಸ್ವಾಹಾಯೆಂದು ಆಯಾಮಂತ್ರಗಳಿಂಲಿಂಗಕ್ಕೆ ಪಂಚಗವ್ಯಾಭಿಷೇಕಮಂಮಾಡಿ ಬಳಿಕ ಅಪ್ಯಾಯಯೆಂಬ ಮಂತ್ರದಿಂ ಕ್ಷೀರಸ್ನಾನಂ ಮಾಡಿಸಿ ಮೇಲೆಸದ್ಯೋಜಾತಮಂತ್ರದಿಂಜಲಸ್ನಾನಂಗೈಸಿ ಮೇಲೆದಧಿಕ್ರಾವ್ಣೋಅಕಾರಿಷಯೆಂಬ ಮಂತ್ರದಿಂದಧಿ ಸ್ನಾನಂಮಾಡಿ ಮೇಲೆವಾಮದೇವಮಂತ್ರದಿಂಜಲಸ್ನಾನಂಗೈಸಿ ಬಳಿಕಶುಕ್ರಮಸಿ ಜ್ಯೋತಿರಸಿಯೆಂಬ ಮಂತ್ರದಿಂಘೃತಸ್ನಾನಮಂಮಾಡಿಸಿ ಮೇಲೆ ಅಘೋರಮಂತ್ರದಿಂಜಲಸ್ನಾನಂಗೈಸಿ ಬಳಿಕ ಮಧುವಾತಾಋತಾಯತೇಯೆಂಬಮಂತ್ರದಿಂ ಮಧುಸ್ನಾನಮಂಮಾಡಿಸಿ ಮೇಲೆತತ್ಪುರುಷಮಂತ್ರದಿಂಜಲಸ್ನಾನಂಗೈಸಿ ಓಂಭೂರ್ಭುವಸ್ಸುವಹ ಯೆಂಬಮಂತ್ರದಿಂ ಶರ್ಕರಾಸ್ನಾನಂಮಾಡಿಸಿ ಮೇಲೆಈಶಾನಮಂತ್ರದಿಂಜಲಸ್ನಾನಂಗೈಸಿ ಇಂತು ಪಂಚಾಮೃತಾಭಿಷೇಕಂಮಾಡಿ । ಮುಂದಬಳಿಕ ಗೌಧೂಮಚೂರ್ಣಾದಿಕದಿಂಲಿಂಗಕ್ಕುದ್ವರ್ತನಂಮಾಡಿ ದೋಷಘ್ನವಾರಿಸ್ನಾನಂಗೈಸಿ ಬಳಿಕ ಓಂಹ್ರೌಂ ಈಶಾನಾಯನಮಃ

ಯೆಂದು । ಗಂಧೋದಕವಂಕೊಟ್ಟು ವೋಂ ಹ್ರಾಂತತ್ಪುರುಷಾಯನ
ಮಃ। ಯೆಂದು ಪುಷ್ಪೋದಕವನೆರದು। ಓಂಹ್ರೂಂವಾಮದೇವಾಯನಮಃ
ಯೆಂದುಸ್ವರ್ಣೋದಕವಂಸಮರ್ಪಿಸಿ। ಓಂಹ್ರೀಂವಾಮದೇವಾಯನಮಃ।
ಯೆಂದುರತ್ನೋದಕವನಿತ್ತು। ಓಂಹ್ರಾಂಸದ್ಯೋಜಾತಾಯನಮಃ। ಯೆಂ
ದುಮೂಲಮಂತ್ರೋದಕವಂನಿವೇದಿಸಿ। ಓಂಹ್ರಾಂಹೀಂ। ಹ್ರೂಂಹ್ರೈಂ
ಹ್ರೌಂಹ್ರಃ। ಯೆಂಬಷಾಗಿಶಿವಾಗಮಮಂತ್ರದಿಂತ್ರಿಲೋದಕಾಭಿಷೇಕಂಗೈ
ದುಮೇಲೆ ತೀರ್ಥೋದಕವನೆರದು। ಮತ್ತಮಾತೀರ್ಥೋದಕದಿಂದಲೇ।ಶ್ರೀ
ರುದ್ರ, ಪಂಚಬ್ರಹ್ಮ, ಪುರುಷಸೂಕ್ತ, ಪಂಚರುದ್ರ, ಮಾಂಡೂಕ್ಯ,ರು
ದ್ರಹೃದಯ, ಮೂಲಮಂತ್ರಾದಿಗಳಿಂ।ಮಹಾಸ್ನಾನವಂಮಾಡಿಸಿ। ಬಳಿಕ
ಓಂಹ್ರಾಂಹೃದಯಾಯನಮಃ। ಯೆಂಬ ಮಂತ್ರದಿಂ ಪಾದ್ಯಾದಿಗಳಂಕೊ
ಟ್ಟು। ಬಳಿಕಅಂಗುಷ್ಠಾನಾಮಿಕೆಗಳಿಂವಿಭೂತಿಯಂತೆಗೆದು। ಮಂತ್ರೋದ
ಕದಿಂಕಲಸಿ। ಓಂಹ್ರೀಂತತ್ಪುರುಷಾಯನಮಃ।ಯೆಂಬಮಂತ್ರದಿಂದಾವಿಭೂ
ತಿಯಂಲಿಂಗಕ್ಕೆಧರಿಸಿ । ಮೇಲೆ ಓಂಹ್ರಾಂಹೃದಯಾಯನಮಃ । ವಸ್ತ್ರಂ
ಸ್ವಾಹಾ। ಓಂಹ್ರೈಂಕವಚಾಯಹುಂ।ಉಪವೀತಂಸ್ವಾಹಾ। ಓಂಹ್ರೀಂವಾ
ಮದೇವಾಯನಮಃ। ಗಂಧಂಸ್ವಾಹಾ ಓಂಹ್ರಃ ಅಸ್ತ್ರಾಯಫಟ್। ಅಕ್ಷ
ತಾಂತ್ಸ್ವಾಹಾ। ಓಂನಮಶ್ಶಿವಾಯ। ಪುಷ್ಪಂಸ್ವಾಹಾ। ಯೆಂಬೀಮಂತ್ರ
ಗಳಿಂತತ್ತದ್ದ್ರವ್ಯಂಗಳಂಸಮರ್ಪಿಸಿ। ಮತ್ತಮಾಪುಷ್ಪಂಗಳಿಂದ ಅಂಗುಷ್ಠ
ಮಧ್ಯಮಾನಾಮಿಕೆಗಳಿಂದಲೇ। ಓಂಹರಾಯನಮಃ। ಪಾದೌಪೂಜಯಾ
ಮಿ। ಓಂಶಂಭವೇನಮಃ। ಗುಲ್ಫೌಪೂಜಯಾಮಿ। ಓಂಶುಭಾಯನಮಃ।
ಜಾನುನೀಪೂಜಯಾಮಿ।ಓಂಸರ್ವನಿವಾಸಾಯನಮಃ । ಊರೂಪೂಜಯಾ
ಮಿ। ಓಂಸರ್ವಾಶ್ರಯಾಯನಮಃ । ಕಟಿಂಪೂಜಯಾಮಿ । ಓಂಸರ್ವರಕ್ಷಾಯ
ನಮಃ। ಜಘನಂಪೂಜಯಾಮಿ। ಓಂದಿಗ್ವಾಸಸೇನಮಃ।ಮಧ್ಯಂಪೂಜಯಾ
ಮಿ। ಓಂನಕ್ಷತ್ರಮಾಲಿನೇನಮಃ। ನಾಭಿಂಪೂಜಯಾಮಿ। ಓಂಸರ್ವೇಶ್ವರಾ
ಯನಮಃ। ಕುಕ್ಷಿಂಪೂಜಯಾಮಿ । ಓಂಉಮಾಕಾಂತಾಯನಮಃ। ವಕ್ಷಃ
ಪೂಜಯಾಮಿ।ಓಂನೀಲಕಂಠಾಯನಮಃ। ಕಂಠಂಪೂಜಯಾಮಿ। ಓಂತ್ರಿಪು
ರಸಂಹರ್ತ್ರೇನಮಃ। ಬಾಹೂಪೂಜಯಾಮಿ। ಓಂಶಂಕರಾಯನಮಃ। ಕರಾ
ನ್ಪೂಜಯಾಮಿ । ಓಂವೃಷಾಯನಮಃ । ಬಹಿಃಕಂಠಂಪೂಜಯಾಮಿ।ಓಂ
ಕೃತಫಲದಾಯಿನೇನಮಃ। ಮುಖಂಪೂಜಯಾಮಿ । ಓಂನಾಗಹಾರಾಯನ
ಮಃ। ನಾಸಿಕಾಂಪೂಜಯಾಮಿ। ಓಂಇಂದ್ವರ್ಕವಹ್ನಿನೇತ್ರಾಯನಮಃ।ನೇ

ತ್ರಾಣಿಂಪೂಜಯಾಮಿ। ಓಂಕಳಲಿಶೇನಮಃ। ಲಲಾಟಂಪೂಜಯಾಮಿ।ಓಂ ಫಣಿಕುಂಡಲಾಯನಮಃ।ಕರ್ಣೌಪೂಜಯಾಮಿ।ಓಂಗಂಗಾಧರಾಯನಮಃ ಜಟಾಂಪೂಜಯಾಮಿ।ಓಂಸೋಮಭೂಷಣಾಯನಮಃ। ಕಪರ್ದಂಪೂಜ ಯಾಮಿ। ಓಂಶುಭದಾಯಿನೇನಮಃ। ಸರ್ವಾಂಗಂಪೂಜಯಾಮಿ। ಇಂತು ಲಿಂಗದವಯವಪೂಜೆಗಳಂವಿಸ್ತರಿಸಿ॥

— ಮಾತೃಕಾಕ್ಷರಾದಿನ್ಯಾಸ —

ಅನಂತರದಲ್ಲಿ ಓಂ ಹ್ರಾಂ ಹೃದಯಾಯನಮಃ। ಓಂಹ್ರೀಂಶಿರಸೇಸ್ವಾ ಹಾ। ಓಂಹ್ರೂಂಶಿಖಾಯೈವಷಟ್। ಓಂ ಹ್ರೈಂ ಕವಚಾಯಹುಂ। ಓಂ ಹ್ರೌಂನೇತ್ರತ್ರಯಾಯವೌಷಟ್। ಓಂ ಹ್ರಃ ಅಸ್ತ್ರಾಯಫಟ್‌ಯೆಂಬ ಷಡಂಗಮಂತ್ರಮಂ। ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಯೆಂಬಶಿವಾಂಗಮಮಂತ್ರಮಂ। ಓಂಹ್ರ ಹ್ರಾಂಹಂ ಹಾಂಹ್ಲಾಂಸಃಎಂಬ ಪಂಚಪ್ರಸಾದಮಂತ್ರಮಂ। ನಮಶ್ಶಿವಾಯಯೆಂಬ ಪಂಚಾಕ್ಷರಮಂತ್ರ ಮಂ। ಓಂನಮಶ್ಶಿವಾಯಯೆಂಬ ಮೂಲಪಂಚಾಕ್ಷರಮಂತ್ರಮಂ। ಓಂಹ್ರಾಂ ಹ್ರೀಂ ಹ್ರೂಂ ನಮಶ್ಶಿವಾಯಯೆಂಬ ಸ್ಥೂಲಪಂಚಾಕ್ಷರಮಂತ್ರಮಂ। ಓಂ ಹ್ರೀಂ। ಶಿವಾಯನಮಃ। ಯೆಂಬಸೂಕ್ಷ್ಮಪಂಚಾಕ್ಷರಮಂತ್ರಮಂ। ಓಂ ಹ್ರೀಂ। ನಮಶ್ಶಿವಾಯಯೆಂಬಮಾಯಾಖ್ಯ ಪಂಚಾಕ್ಷರಮಂತ್ರಮಂ। ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ನಮಶ್ಶಿವಾಯಯೆಂಬ ಪ್ರಸಾದ ಪಂಚಾಕ್ಷರಮಂತ್ರಮಂ। ಓಂಹಃ ಅನಂತಶಕ್ತಿಧಾಮ್ನೇಜ್ಯೋತಿರೂಪಾಯ ಶಿವಾಸ್ತ್ರಾಯಫಟ್ ಯೆಂಬಶಿವಾಸ್ತ್ರಮಂತ್ರಮಂ। ಓಂ ಈಂ ಊಂ ವ್ಯೋಮವ್ಯಾಪಿನೇ ವ್ಯೋಮಾಸ್ತ್ರಾಯಫಟ್‌ಯೆಂಬವ್ಯೋಮಾಸ್ತ್ರ ಮಂತ್ರಮಂ। ಓಂಶ್ರೀಪಶುಹುಂಫಟ್ ಯೆಂಬಪಾಶುಪತಾಸ್ತ್ರಮಂತ್ರಮಂ ಓಂಚಿಚ್ಚಿಕ। ಚಿಚ್ಛಿದಕ್ಷುಂಕೃತಕ್ಷುರಿಕಾಸ್ತ್ರಾಯಫಟ್ ಯೆಂಬಕ್ಷುರಿ ಕಾಸ್ತ್ರಮಂತ್ರಮಂ। ಓಂಪ್ರಸ್ಫುರಸ್ಫುರಘೋರಘೋರತರತನುರೂ ಪಚಟಚಟಪ್ರಚಟಪ್ರಚಟಕಹಕಹವಮವಮ ಬಂಧ ಬಂಧ ಘಾತಯ ಹುಂಫಟ್ ಯೆಂಬ ಅಘೋರಾಸ್ತ್ರಮಂತ್ರಮಂ ಲಿಂಗಮಧ್ಯದೊಳನು ಸಂಧಾನಿಸಿ। ಬಳಿಕ ಅಕಾರ ಆಕಾರಂಗಳೇಕ್ರಮದಿಂ ಮೂರ್ಧಲಲಾಟಂಗ ಳು। ಇಕಾರಈಕಾರಂಗಳೇ ದಕ್ಷಿಣವಾಮನೇತ್ರಂಗಳು। ಉಕಾರ ಊಕಾರಂ ಗಳೇ ದಕ್ಷಿಣವಾಮಶ್ರೋತ್ರಂಗಳು। ಋಕಾರ ೠಕಾರಂಗಳೇ ದಕ್ಷಿಣವಾ ಮನಾಸಾಪುಟಂಗಳು। ಌಕಾರ ೡಕಾರಂಗಳೇ ದಕ್ಷಿಣವಾಮನಾಸಾ ಪುಟಂ

ಗಳು। ಏಕಾರಐಕಾರಂಗಳೇ ಊರ್ಧ್ವಾಧರೋಷ್ಠಂಗಳು। ಓಕಾರಔಕಾರಗಳೇ ಊರ್ಧ್ವಾಧೋದಂತಪಂಕ್ತಿಗಳು। ಅಂಕಾರ ಅಃಕಾರಂಗಳೇ ಮೇಲೆ ಕೆಳಗೆ ಯಿಪ್ಪ ನಸಡುಗಳು। ಕಾದಿಪಂಚಾಕ್ಷರಂಗಳೇ ದಕ್ಷಿಣಪಂಚಹಸ್ತಾಂಗಳು। ಚಾದಿಪಂಚಾಕ್ಷರಂಗಳೇ ವಾಮಪಂಚಕರಾಂಗಳು। ಟಾದಿಪಂಚಾಕ್ಷರತಾದಿಪಂಚಾಕ್ಷರಂಗಳೇ ದಕ್ಷಿಣವಾಮಪಾದಂಗಳು।ಪಕಾರವೇ ಉದರ।ಫಕಾರಬಕಾರಂಗಳೇ ದಕ್ಷಿಣವಾಮಪಾರ್ಶ್ವಗಳು । ಭಕಾರವೇ ಸ್ಕಂಧ। ಮಕಾರವೇ ಹೃದಯ। ಯಕಾರಾದಿಸಕಾರಾಂತವಾದಕ್ಷರಂಗಳೇ ತ್ವಗಾದಿಸಪ್ತಧಾತುಗಳು। ಹಕಾರವೇ ಆತ್ಮನು। ಕ್ಷಕಾರವೇ ಪೂಜಕರಜನ್ಮಾದಿರಿಪು ವಿಷಮಾದಕ್ರೋಧನಹುದೆಂದು। ಲಿಂಗಮಧ್ಯದಲ್ಲಿ ಮಾತೃಕಾಕ್ಷರನ್ಯಾಸವನಿಂತು ಸ್ಮರಿಸಿ॥

## — ಕಳಾನ್ಯಾಸಪೂಜಾದಿಗಳು. —

ಮತ್ತಮಾಲಿಂಗಮಧ್ಯದಲ್ಲಿ ಕಳಾನ್ಯಾಸಬ್ರಹ್ಮನ್ಯಾಸಂಗಳಂ ನಡಸಿ। ಮರಳಿ ಓಂಹ್ರಾಂ ನೇತ್ರತ್ರಯಾಯ ವೌಷಟ್ ಧೂಪಂ ಸ್ವಾಹಾ ಯೆಂಬ ಮಂತ್ರದಿಂ ಧೂಪವಂ ಬೀಸಿ। ಓಂ ಹ್ರೈಂ ಕವಚಾಯ ಹುಂ ದೀಪಂ ಸ್ವಾಹಾ ಯೆಂಬ ಮಂತ್ರದಿಂ ನೀರಾಜನಾದಿದೀಪಮಂ ಬೆಳಗಿ । ಓಂ ಶಿವಾಯ ನಮಃ ಯೆಂಬ ಮೂಲಮಂತ್ರದಿಂ ಪರಮಾನ್ನಾದಿನೈವೇದ್ಯಮಂ ಪತ್ರಾಕಪುದ್ಗ್ರಂ ಸಮರ್ಪಿಸಿ । ಮೇಲೆ ಓಂ ನಮಶ್ಶಿವಾಯ ಪಾನೀಯಂ ಸ್ವಾಹಾ। ಓಂ ಹ್ರಾಂ ಹೃದಯಾಯ ನಮಃ ಆಚಮನಂ ಸ್ವಾಹಾ। ಓಂ ನಮಶ್ಶಿವಾಯ। ಅನುಲೇಪನಂ ಸ್ವಾಹಾ। ಓಂ ಹ್ರೀಂ ತತ್ಪುರುಷಾಯ ನಮಃ। ತಾಂಬೂಲಂ ಸ್ವಾಹಾ। ಓಂ ಹ್ರಾಂ ಹಂ ಹ್ರಾಂ ಹುಂ ಸಃ ಆಭರಣಂ ಸ್ವಾಹಾ ಯೆಂದು ತತ್ತನ್ಮಂತ್ರದಿಂದಾಯಾವಸ್ತುವಂ ನಿವೇದಿಸಿ। ಬಳಿಕ ಓಂ ನಮಶ್ಶಿವಾಯ ದರ್ಪಣಂ ಸ್ವಾಹಾ! ಯೆಂದು ದರ್ಪಣಛತ್ರಚಾಮರವ್ಯಜನಾದಿಗಳಂ ಸಮರ್ಪಿಸಿ।ಬಳಿಕ ಲೌಕಿಕವೈದಿಕಾದಿಸ್ತೋತ್ರಗಳಂ ಮಾಡಿ। ಮರಳಿ ಭವಾಯ ದೇವಾಯ ನಮಃ- ಶರ್ವಾಯ ದೇವಾಯ ನಮಃ- ಈಶಾನಾಯ ದೇವಾಯ ನಮಃ-ಪಶುಪತಯೇ ದೇವಾಯ ನಮಃ-ರುದ್ರಾಯ ದೇವಾಯ ನಮಃ ಉಗ್ರಾಯ ದೇವಾಯ ನಮಃ-ಭೀಮಾಯ ದೇವಾಯ ನಮಃ-ಮಹತೇ ದೇವಾಯ ನಮಃ-ಯೆಂಬ ಮಂತ್ರಗಳಿಂದಷ್ಟಪುಷ್ಪಗಳಂ ಸಮರ್ಪಿಸಿ। ಬಳಿಕ ಮರಳಿ ಶಾಂಭವಮಂತ್ರಗಳಿಂ ಪುಷ್ಪಾಂಜಲಿಯಂ ಕೊಟ್ಟು। ನಮೋ ಹಿರಣ್ಯಬಾಹವೇ। ಪ್ರೋರಾಜಾನಾಂ। ತ್ವಮಗ್ನೇ ರುದ್ರೋ। ಪಂಚಬ್ರಹ್ಮ। ವೇದಪಾದಸ್ತವಾದಿಗಳಂ ಪ...

ಕ್ಷಿಣನಮಸ್ಕಾರಾದಿಗಳಂ ಮಾಡಿ। ದಕ್ಷಿಣಕರಾಂಜಲಿಯಿಂ ಪುಷ್ಪೋದಕಗಳಂ ತಳೆದು। ಆ ಚತುರಂಗುಳಗಳಿಂದಾಕುಂಚನಂಗೈದು। ಪೂಜಾಂತರ್ಪರ್ಯಾಮಿಂಯೆಂದು ಪುಷ್ಪೋದಕಗಳಂ ತನ್ನ ಪಾದಮೂಲದೆಡೆಗೆ ಕನಿಷ್ಠಾಂಗುಳಿಯಿಂದೆರೆದು। ಪೂಜಾಸಮಾಪ್ತಿಯಂಗೈಯ್ಯಲ್ವೇಳ್ಕುಂ॥

## — ವಿಶೇಷವೀರಶೈವಷಟ್ಸ್ಥಳವಿಷಯ. —

ಮತ್ತಮಾ ವಿಶೇಷವೀರಶೈವನು ತನಗೆ ಶ್ರೀಗುರುವಿನಿಂದುಪದೇಶಮಾದ ವೇದಪುರಾಣಾಗಮಸಾರಮಪ್ಪ। ಪುರಾತನಮಾರ್ಗಮಾದ। ಸರ್ವೋತ್ಕರ್ಷಮಪ್ಪ ಷಟ್ಸ್ಥಳಗಳಲ್ಲಿ। ಭಕ್ತಿ, ಕರ್ಮಕ್ಷಯ, ನಿರ್ಮಲಮತಿ, ವಿಚಾರ, ದರ್ಪಸಂಕ್ಷಯ, ಸಮ್ಯಜ್ಞಾನವೆಂಬ। ಆರು ಫಲಕ್ರಮಂಗಳುಳ್ಳ। ಭಕ್ತ, ಮಹೇಶ್ವರ, ಪ್ರಸಾದ, ಪ್ರಾಣ, ಲಿಂಗ, ಶರಣ, ಐಕ್ಯವೆಂಬ ಷಟ್ಸ್ಥಳಗಳಂ। ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಆತ್ಮರೆಂಬ ಷಡಂಗಗಳಂ। ಚಿತ್ತ, ಮನಸ್ಸು, ಬುದ್ಧಿ, ಅಹಂಕಾರ, ಜ್ಞಾನ, ಭಾವಗಳೆಂಬ। ಆರು ಹಸ್ತಗಳಂ। ಕರ್ಮಸಾದಾಖ್ಯ, ಕರ್ತೃಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯ, ಮಹಾಸಾದಾಖ್ಯ, ಎಂಬಾರುಸಾದಾಖ್ಯಗಳಂ। ಕ್ರಿಯಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಆದಿಶಕ್ತಿ, ಪರಶಕ್ತಿ, ಚಿಚ್ಛಕ್ತಿಗಳೆಂಬಾರುಶಕ್ತಿಗಳಂ। ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬ ಷಡ್ವಿಧಲಿಂಗಗಳಂ। ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯತೀತೆ, ಶಾಂತ್ಯತೀತೋತ್ತರೆ। ಎಂಬಾರು ಕಳೆಗಳಂ। ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯವೆಂಬಾರುಮುಖಗಳಂ। ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮವೆಂಬಾರು ಪದಾರ್ಥಗಳಂ। ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾರಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಸಮರಸಭಕ್ತಿಯೆಂಬ ಷಡ್ವಿಧಭಕ್ತಿಗಳಂ। ಪರಿಪರಿವಿಧಮರಿದಾಚರಿಸುವದು। ಅವರಲ್ಲಿ ಮೊದಲು ಭಕ್ತಸ್ಥಳದೊಳು। ಆಚಾರಾದಿ ಷಡ್ವಿಧಲಿಂಗಗಳೊಂದೊಂದು ಕ್ರಿಯಾಭೇದದಿಂ ಮೂರುಮೂರಾಗಿ ಹದಿನೆಂಟುತೆರನಾಗಿರ್ಪವದೆಂತೆಂದೊಡೆ.

## —* ಆಚಾರತ್ರಯ. *—

ಸದಾಚಾರ, ನಿಯತಾಚಾರ, ಗಣಾಚಾರವೆಂದು। ಆಚಾರಲಿಂಗತ್ರಿವಿಧಮದರಲ್ಲಿ। ಆವುದಾನೊಂದು ತನ್ನ ಸನ್ಮಾರ್ಗದಿಂ। ಸಕಲಶರ್ಗಸಂತೋಷಮಹುದೇ ಸದಾಚಾರವೆನಿಸುವದು। ಭಕ್ತಿಯಿಂ ತಾನುಪಿಡಿದಾಚಾರಮಂ ಪಾ(

ಣಾಂತವಾಗಿನಡಿಸುವದೇನಿಯತಾಚಾರವೆನಿಸುವದು । ಶಿವಮಾಹೇಶ್ವರರು ಗಳನಿಂದಿಸುವರಶಿಕ್ಷಿಪದೆಂಬುದೇಗಣಾಚಾರವುಕ್ಕ್ಯಂ-

—* ತ್ರಿವಿಧಗುರುಲಿಂಗ. *—

ಬಳಿಕ। ದೀಕ್ಷೆ, ಶಿಕ್ಷೆ, ಸ್ವಾನುಭವವೆಂದು । ಗುರುಲಿಂಗ ತ್ರಿವಿಧವದರಲ್ಲಿ ಆಗಮೋಕ್ತವಿಧಾನದಿಂ । ಕುಂಡಮಂಡಲಾದಿರಚನೆಯಿಂ ಷಡ್ವಿಧಶುದ್ಧ್ಯಾದಿ ಗಳಂಮಾಳ್ಪುದೇದೀಕ್ಷೆಯೆನಿಸುವದು । ಜಂಗಮವೇಲಿಂಗವೆಂಬಿದು ಮೊದ ಲಾದಸಮ್ಯಜ್ಞಾನವು ಸತ್ಪುರುಷರುಗಳಿಂದಹುದೇಶಿಕ್ಷೆಯೆನಿಸುವದು।ಪೂರ್ವ ಜನ್ಮಸಂಸ್ಕಾರಬಲದಿಂ ಭಕ್ತಿಜ್ಞಾನಾದಿಕವು ತಾನೇತೋರ್ಪುದೇ ಸ್ವಾ ನುಭವವುಕ್ಕ್ಯಂ-

—* ತ್ರಿವಿಧಶಿವಲಿಂಗ. *—

ಬಳಿಕ- ಇಷ್ಟಲಿಂಗ, ಪ್ರಾಣಲಿಂಗ,ತೃಪ್ತಿಲಿಂಗವೆಂದು। ಶಿವಲಿಂಗತ್ರಯವು ಭೇದಂಗಳನ್ನುಗಳಲ್ಲಿ॥ ಶ್ರೀಗುರುಶಿವದೀಕ್ಷೆಯಿಂದಿತ್ತುದೇಯಿಷ್ಟಲಿಂಗವೆನಿ ಸುವದು ದೇಹಗುಣವ್ಯಾಪ್ತಿಯಂಬಿಟ್ಟು । ಶಿವಲಿಂಗಸ್ವರೂಪದಲ್ಲಿಷ್ಟಾನವು ಮುಟ್ಟಹುವೇಪ್ರಾಣಲಿಂಗವೆನಿಸುವದು । ಸಕಲಾವಸ್ಥೆಗಳಲ್ಲಿಯೂ ಶಿವ ಲಿಂಗದೊಡನನನ್ಯಭಾವಸೆಯೇತೃಪ್ತಿಲಿಂಗವುಕ್ಕ್ಯಂ-

—* ಜಂಗಮಲಿಂಗತ್ರೈವಿಧ್ಯ. *—

ಬಳಿಕ ಸ್ವಯಲಿಂಗ, ಚರಲಿಂಗ, ಪರಲಿಂಗವೆಂದು। ಜಂಗಮಲಿಂಗತ್ರಿವಿ ಧವದರಲ್ಲಿ। ಶಿವಾಲಾಂಛನವಂಧರಿಸಿದಾತನೇಲಿಂಗವೆಂದುಅರಿತು। ಬಾಹ್ಯಕ ರ್ಮಪರಿತ್ಯಾಗದಿಂಸದಾನಂದಿಯಾಗಿಹುದೇಸ್ವಯಂಲಿಂಗವೆನಿಸುವದು । ಶಿವ ಲಿಂಗದೊಡನೆ ಸರ್ವೇಂದ್ರಿಯಗಳೆರಕವಾಗಿ ಭೇದಭ್ರಾಂತಿ ಮರಳಿ ಪುಟ್ಟದೆ ನಿಜಾನಂದದಿಂಸ್ವೇಚ್ಛೆಯಿಂವಿಹರಿಸುವದೇಚರಲಿಂಗವೆನಿಸುವದು। ಸ್ಥಾವ ರಜಂಗಮಾದಿಸಕಲಾಧಿಷ್ಠಾಕೃತಾನಪ್ಪವೇಪರಲಿಂಗವುಕ್ಕ್ಯಂ-

—ತ್ರಿವಿಧಪ್ರಸಾದಲಿಂಗ—

ಬಳಿಕ ಶುದ್ಧ, ಸಿದ್ಧ, ಪ್ರಸಿದ್ಧವೆಂದು ಪ್ರಸಾದಲಿಂಗ ತ್ರಿವಿಧವದರಲ್ಲಿಗು ರುಭುಕ್ತಶೇಷವೇಶುದ್ಧವೆನಿಸುವದು। ಲಿಂಗಭುಕ್ತಶೇಷವೇಸಿದ್ಧವೆನಿಸುವ ದು ಜಂಗಮಭುಕ್ತಶೇಷವೇಪ್ರಸಿದ್ಧವೆನಿಸುವದು । ಅಥವಾ ಮತ್ತೆ ಪೂರ್ವ ದಲ್ಲಿದ್ದಸಕಲಗುಣಂಗಳಂತ್ಯಜಿಸಿ। ಕಾಮಾದಿಗಳಂಬಿಟ್ಟು । ಲಿಂಗಾನ್ವಿತಿಪಡೆದಿ ಹುದೇಶುದ್ಧವೆನಿಸುವದು। ಶಿವಜ್ಞಾನೋದಯಮಾದುದೆ ಸಿದ್ಧವಹುದು । ಶಿವಾಹಂಭಾವನಿಶ್ಚಲೀಕೃತಮಾದುದೇಪ್ರಸಿದ್ಧವುಕ್ಕ್ಯಂ-

— ತ್ರಿವಿಧಮಹಾಲಿಂಗ. —

ಬಳಿಕ ಪಿಂಡಜಲಿಂಗ ಅಂಡಜಲಿಂಗ ಬಿಂದ್ವಾಕಾಶಲಿಂಗವೆಂದು ಮಹಾಲಿಂಗತ್ರಿವಿಧವದರಲ್ಲಿ ದೇಹವೇದೇಗುಲ ಆತ್ಮನೇ ಲಿಂಗವೆಂಬನಿಶ್ಚಯವೇ ಪಿಂಡಜಲಿಂಗವೆನಿಸುವದು। ಭೂಮಿಯೇ ಪೀಠ। ಆಕಾಶವೇ ಲಿಂಗವೆಂಬ। ವಿಕಲ್ಪರಹಿತಭಾವನೆಯೇ ಅಂಡಜಲಿಂಗವೆನಿಸುವದು। ಆಕಾಶವೇ ತನ್ನೊಡನೆ। ತನ್ನೊಡನಾಕಾಶವೆಂಬ ಅನ್ಯೋನ್ಯವ್ಯಾಪ್ತಸುಸಂಧಾನವೇ ಬಿಂದ್ವಾಕಾಶಲಿಂಗವಾಕ್ಕುಂ.

— ಆಚಾರಲಿಂಗಷಡ್ಭಕ್ತರು. —

ಮತ್ತಮಾಭಕ್ತನೇ ಆಚಾರಾದಿಷಡ್ವಿಧಲಿಂಗಂಗಳಲ್ಲಿ। ವರ್ತನಾಭೇದದಿಂ ಆರಾಗಿಮೂವತ್ತಾರುತೆರನಾಗಿರ್ಪನದೆಂತೆಂದೊಡೆ। ಆಚಾರಲಿಂಗವೊಲಿಹ ಆಚಾರಲಿಂಗಭಕ್ತನು ಆಚಾರಲಿಂಗಪೂಜಕನು। ಆಚಾರಲಿಂಗವೀರನು। ಆಚಾರಲಿಂಗಪ್ರಸಾದಿ ಆಚಾರಲಿಂಗಪ್ರಾಣಿಯೆಂಬು। ಆಚಾರಲಿಂಗದಲ್ಲಿ ಷಡ್ವಿಧವದರೊಳಗೆ। ಆಚಾರಹೀನರಾದ ಸ್ತ್ರೀಪುತ್ರಾದಿಗಳಂ ಬಿಟ್ಟು। ನಿರ್ಮೋಹಿಯಾಗಿರ್ಪಾತನೇ ಆಚಾರಲಿಂಗವೊಲಿಹಿಯೆನಿಸುವದು। ಶಿವಾಚಾರಕ್ಕೆ ವಿರುದ್ಧವಾದ ಪೂರ್ವ್ವಿಕರನಡತೆಗಳಂ ಬಿಟ್ಟಾತನೇ ಆಚಾರಲಿಂಗಭಕ್ತನೆನಿಸುವನು ಅನ್ಯದೇವತಾಭಜನವನುಳಿದು। ಲಿಂಗಾರ್ಚನಾತತ್ಪರನೇ ಆಚಾರಲಿಂಗಪೂಜಕನು। ತಾನಂಪಿಡಿದಾಚಾರಮಂ। ಪ್ರಾಣಾತ್ಯಯವಾದರೂ ಬಿಡದಾತನೇ ಆಚಾರಲಿಂಗವೀರನೆನಿಸುವನು ಶುಚಿತ್ವಾಶುಚಿತ್ವಾದಿಸಂಕಲ್ಪರಹಿತನೇ ಆಚಾರಲಿಂಗಪ್ರಸಾದಿ ಯೆನಿಸುವನು। ಶಿವಮಾಹೇಶ್ವರರನಿಂದೆಗಳನಾಡದಾಲಿಸದಾತನೇ ಆಚಾರಲಿಂಗ ಪ್ರಾಣಿಯೆನಿಸುವನು-

— ಗುರುಲಿಂಗಷಡ್ಭಕ್ತರು. —

ಬಳಿಕ ಗುರುಲಿಂಗವೊಲಿಹ ಗುರುಲಿಂಗಭಕ್ತ ಗುರುಲಿಂಗ ಪೂಜಕ ಗುರುಲಿಂಗವೀರ ಗುರುಲಿಂಗಪ್ರಸಾದಿ ಗುರುಲಿಂಗಪ್ರಾಣಿ ಯೆಂದು ಗುರುಲಿಂಗದೊಳಗಾರುವಿಧಮದರಲ್ಲಿ ಮಾತಾಪಿತೃಗಳಮೋಹಂಗಳಂ ಬಿಟ್ಟು ಗುರುವಿನಲ್ಲಿಪ್ರೀತನೇ ಗುರುಲಿಂಗವೊಲಿಹಿಯೆನಿಸುವನು। ಬಂಧುಗಳಸಂಬಂಧವನುಳಿದು। ಗುರುವಿನೊಳಗನುರಾಗಿಯೇ ಗುರುಲಿಂಗಭಕ್ತನೆನಿಸುವನು। ಬೇರೊಂದು ಪೂಜೆಯನೊಲ್ಲದೆ ಗುರುಭಜನಾನ್ವಿತನೇ ಗುರುಲಿಂಗಪೂಜಕನೆನಿಸುವನು। ಅನ್ಯಮಾರ್ಗಮಂ ತ್ಯಜಿಸಿ ಗುರೂಕ್ತಮಾರ್ಗವರ್ತಿಯೇ ಗುರುಲಿಂಗವೀರನು। ಗುರುವಿನಾಜ್ಞಾವಶಂಗತನೇ ಗುರುಲಿಂಗಪ್ರಸಾ

ದಿಪಿನಿಸುವನು.

— ಶಿವಲಿಂಗಷಡ್ಭಕ್ತರು. —

ಬಳಿಕ ಶಿವಲಿಂಗಮೋಹಿ । ಶಿವಲಿಂಗಭಕ್ತನು । ಶಿವಲಿಂಗಪೂಜಕನು । ಶಿವಲಿಂಗವೀರನು । ಶಿವಲಿಂಗಪ್ರಸಾದಿ । ಶಿವಲಿಂಗಪ್ರಾಣಿಯೆಂದು ಶಿವಲಿಂಗದೊಳಗಾರುಭೇದವಾದರಲ್ಲಿ ಅನ್ಯಮೋಹವಿಲ್ಲದಾತನೇ ಶಿವಲಿಂಗಮೋಹಿ । ಅನ್ಯದೈವನಿರಾಸಕನೇ ಶಿವಲಿಂಗಭಕ್ತನು । ಅನ್ಯದೈವಭಜನೆಯಿಲ್ಲದಾತನೇ ಶಿವಲಿಂಗಪೂಜಕನು । ಬಿರಕ್ತ ಕ್ಷೇತ್ರಯಾತ್ರಾದಿಗಳನುಳಿದಾತನೇ ಶಿವಲಿಂಗವೀರನು । ಸುಖದುಃಖಾದಿಗಳನ್ನೈರಿಸುವಾತನೇ ಶಿವಲಿಂಗಪ್ರಸಾದಿಯೂ । ಸ್ತ್ರೀಸಂಭೋಗಾದಿಕವಿಲ್ಲದಾತನೇ ಶಿವಲಿಂಗಪ್ರಾಣಿಯೆನಿಸುತಿರ್ಪಂ॥

— ಜಂಗಮಲಿಂಗಷಡ್ಭಕ್ತರು. —

ಬಳಿಕ ಜಂಗಮಲಿಂಗಮೋಹಿ । ಜಂಗಮಲಿಂಗಭಕ್ತ । ಜಂಗಮಲಿಂಗಪೂಜಕ । ಜಂಗಮಲಿಂಗವೀರ । ಜಂಗಮಲಿಂಗಪ್ರಸಾದಿ । ಜಂಗಮಲಿಂಗಪ್ರಾಣಿಯೆಂದು । ಜಂಗಮಲಿಂಗದೊಳಗಾರುವಿಧವದರಲ್ಲಿ । ತನ್ನ ಪೂರ್ವಾಚಾರಂಗಳಂ ನಿಷೇಧಿಸಿದಾತನೇ ಜಂಗಮಲಿಂಗಮೋಹಿಯೆನಿಸುವನು । ಜಾತಿಕುಲಾಭಿಮಾನವನರೆಗಳೆದಾತನೇ ಜಂಗಮಲಿಂಗಭಕ್ತನು । ಅನಾಚಾರಂಗಳನೆಸಗದಾತನೇ ಜಂಗಮಲಿಂಗಪೂಜಕನು । ಅರ್ಥಪ್ರಾಣಾದಿಗಳಂ ಜಂಗಮಕ್ಕೆ ತೆತ್ತು ಮನತಳವೆಳಸದಾತನೇ ಜಂಗಮಲಿಂಗವೀರನು । ಜಂಗಮಕ್ಕೆ ಸಕಲದ್ರವ್ಯಗಳಂ ಕೊಟ್ಟಲ್ಲದೆ ಕೊಳ್ಳದಾತನೇ ಜಂಗಮಲಿಂಗಪ್ರಸಾದಿ । ಜಂಗಮವೇ ಸಾಕ್ಷಾಚ್ಛಿವನೆಂಬ ವಿಶ್ವಾಸಿಯೇ ಜಂಗಮಲಿಂಗಪ್ರಾಣಿಯೆನಿಸುವಂ॥

— ಪ್ರಸಾದಲಿಂಗಷಡ್ಭಕ್ತರು. —

ಬಳಿಕ ಪ್ರಸಾದಲಿಂಗಮೋಹಿ । ಪ್ರಸಾದಲಿಂಗಭಕ್ತನು । ಪ್ರಸಾದಲಿಂಗಪೂಜಕನು । ಪ್ರಸಾದಲಿಂಗವೀರನು । ಪ್ರಸಾದಲಿಂಗಪ್ರಸಾದಿ । ಪ್ರಸಾದಲಿಂಗಪ್ರಾಣಿಯೆಂದು । ಪ್ರಸಾದಲಿಂಗದೊಳಗಾರುವಿಧವಾದರಲ್ಲಿ । ಅನ್ಯರುಚಿಯನರಿಯದಾತನೇ ಪ್ರಸಾದಲಿಂಗಮೋಹಿ । ಪೂರ್ವಾಹಾರಂಗಳಂ ಬಿಟ್ಟಾತನೇ ಪ್ರಸಾದಲಿಂಗಭಕ್ತನು । ಅನ್ಯರೊಡನೆ ಸ್ನೇಹಸಂಭಾಷಣಾದಾನಪ್ರತಿಗ್ರಹಾದಿಗಳಿಲ್ಲದಾತನೇ ಪ್ರಸಾದಲಿಂಗಪೂಜಕನು । ಅನ್ಯದ್ರವ್ಯಗಳಂ ಕೈಯಿಕ್ಕಿಮುಟ್ಟದಾತನೇ ಪ್ರಸಾದಲಿಂಗವೀರನು । ಜೀವಹಿಂಸಾದಿಗಳನೆಲ್ಲಿಯೂ ಮಾಡನೆ ಮಾಡಿಸದಾತನೇ ಪ್ರಸಾದಲಿಂಗಪ್ರಸಾದಿ । ಆತ್ಮನಿಗ್ರಹಮಂ ಮಾಡಿದಾತನೇ ಪ್ರಸಾದಲಿಂಗಪ್ರಾಣಿಯೆನಿಪಂ ॥

— ಮಹಾಲಿಂಗಷಡ್ಭಕ್ತರು. —

ಬಳಿಕ ಮಹಾಲಿಂಗ ವಿರೋಹಿ। ಮಹಾಲಿಂಗಭಕ್ತನು। ಮಹಾಲಿಂಗಪೂಜಕನು। ಮಹಾಲಿಂಗವೀರನು। ಮಹಾಲಿಂಗಪ್ರಸಾದಿ। ಮಹಾಲಿಂಗಪ್ರಾಣಿಯೆಂದು ಮಹಾಲಿಂಗದೊಳಗಾರುವಿಧವುದರಲ್ಲಿ। ಲೋಕವೃತ್ತಾಂತವುಂ ನೆನೆಯದಾತನೇ ಮಹಾಲಿಂಗವಿರೋಹಿ। ಪೂರ್ವಭಕ್ತ್ಯಸ್ಯಾನುಸಂಧಾನವಿಲ್ಲದಾತನೇ ಮಹಾಲಿಂಗಭಕ್ತನು। ಅಜ್ಞಾನಿಗಳೊಡನೆ ಸಂಗಸಂಭಾಷಣೆಗಳಂ ಮಾಡಿದಾತನೇ ಮಹಾಲಿಂಗಪೂಜಕನು। ಉತ್ಪತ್ತಿಸ್ಥಿತಿಲಯಗಳಿಗೆಯುಂ ಚಿಂತಿಸದಾತನೇ ಮಹಾಲಿಂಗವೀರನು। ಪಂಕ್ತಿಭೋಜನಾದಿಕನುಳಿದಾತನೇ ಮಹಾಲಿಂಗಪ್ರಸಾದಿ। ಬಾಹ್ಯದರ್ಚನಾರ್ಪಣಾದಿಕವನೊಲ್ಲದಂತರಂಗಕ್ರಿಯಾನಿಷ್ಠನೇ ಮಹಾಲಿಂಗಪ್ರಾಣಿಯೆನಿಸಿಕೊಂಬಂ॥

— ನೂರೊಂದುಸ್ಥಳ. —

ಬಳಿಕಿಂತು ಷಟ್ಸ್ಥಳ ಭೇದೋಪಭೇದಂಗಳನಾಶ್ರೈಸುವರ್ತಿಸ ವಲ್ಲಿ। ಪಿಂಡಾಂಡಜ್ಞಾನಶೂನ್ಯಾಂತವಾದ ಏಕೋತ್ತರಶತಸ್ಥಳ ಕ್ರಮವಾಗಿಹ
ವಾ ನೂರೊಂದುಸ್ಥಳಂಗಳೊಳಗೆ। ಮೊದಲಂಗಸ್ಥಳನಾಲ್ವತ್ತೆ
ಮೇಲೆಲಿಂಗಸ್ಥಳವೈವತ್ತೇಳೆನಿಸಿಕೊಂಬವುಗಳೊಳಗೆ। ಅಂಗಸ್ಥಳನಾಲ್ವ
ತ್ತನಾಲ್ಕುಂ। ಭಕ್ತಾದ್ಯೈಕ್ಯಾಂತವಾದುಗಸ್ಥಳವಾರಕ್ಕೆ ಕ್ರಮದಿಂದಸ
ಗೆಯಾಗಿಹವು। ಮತ್ತಮಾಲಿಂಗಸ್ಥಳವೈವತ್ತೇಳೇ ಆಚಾರಾದಿ ಮಹಾಲಿಂ
ಗಾಂತವಾದಾರುಲಿಂಗಸ್ಥಳಂಗಳಿಗೆ ಪರಿಮಿತಿವಿಭಾಗಪಡದು ಕ್ರಮದಿಂ
ಭಕ್ತ್ಯಾದ್ಯೈಕ್ಯಾಂತವಾದ ಆರಂಗಸ್ಥಳಂಗಳತನುತ್ರಯಂಗಳಮೇ
ಲೆ ಲಿಂಗತ್ರಯಾನುಗುಣ್ಯವಾಗಿ ವರ್ತಿಸುತಿಪ್ಪವೆಂದಿಂತು ಲಿಂಗಾಂಗಸ್ಥಳ
ಕುಳ ಸಂಬಂಧವಿಚಾರವುಳಿದಿಂ ಗುರುಲಿಂಗಜಂಗಮಕ್ಕೆ। ತನುಮನಧ
ನಂಗಳವಂಚಿಸದಾತನೇ ಸಕಲಸದಾಚಾರ ಸಂಪನ್ನನಾಗಿ। ಭಕ್ತಿಸ್ಥಳ
ನಂಗಂಗೊಂಡಿರ್ಪಾತನೇ ವಿಶೇಷವೀರಶೈವನಪ್ಪಂ॥

— ನಿರಾಭಾರಿವೀರಶೈವವಿಷಯ। —

ಬಳಿಕ ವೀರಶೈವರೊಳು ಗೃಹಾದಿಸರ್ವಸಂಸಾರದಸೌಖ್ಯ ಪರಿಗ್ರಹಂಗ
ಳಂಬಿಟ್ಟು। ವಿದ್ಯೆಯೇಸತಿ। ಸಂತೋಷವೇಸುತ। ವಿರಾಗವೇಬಂಧು। ಕ್ಷ
ಮಯೇಪರಿಚಾರಕನು ಶಾಂತಿಯೇಸಖನಂ ಭಕ್ತಿಯೇಮಾತ। ಆಚಾರವೇ
ತಂದೆ। ಸತ್ಯವೇಸುತೆ। ಶ್ರದ್ಧೆಯೇಸೊಸೆ। ವೈರಾಗ್ಯಾದಿಸದ್ಗುಣಗಳೆ
ಗೋತ್ರರು। ಜ್ಞಾನವೇದೇಹ। ವಿಚಾರವೇಕ್ಷೇತ್ರ। ಅಹಿಂಸೆಯೇದಾಸಿ। ಅ

ಸ್ತ್ರೀಯವೇದಾಸನು। ಧರ್ಮವೇವಾಹನು।ದಮವೇಆಚಾರನು।ಮುಕ್ತಿಯೇ ದೇಶವೆಂಬೀವರವಾರ್ಥವಾದ ಕುಟುಂಬಮುಳ್ಳಾತನಾಗಿ। ಕಂಥೆ। ದಂಡ। ಕಮಂಡಲು। ಭಿಕ್ಷಾಪಾತ್ರೆ। ಭಸ್ಮಘಟಿಕೆಯೆಂಬ ಬಾಹ್ಯದಪಂಚಮುದ್ರೆಗಳಂ। ಆಯಾಮಂತ್ರಪೂರ್ವಕವಾಗಿಧರಿಸಿ ಅಂತರಂಗದಲ್ಲಿ ಸಮತಯೇ ಕಂಥೆ। ಜ್ಞಾನವೇದಂಡ। ದಯೆಯೇಕಮಂಡಲು।ವೈರಾಗ್ಯವೇಭಿಕ್ಷಾಪಾತ್ರ ಕ್ಷಮೆಯೇಭಸ್ಮಘಟಿಕೆಗಳುಳ್ಳಾತನಾಗಿ। ತುರುಬುಜಡೆಬೋಳು। ಅಜಿನ। ವಲ್ಕಲದಿಗಂಬರಾದಿ ಸ್ವೇಚ್ಛಾವಿಚಿತ್ರಶಿವವೇಷಂಗಳನಾದರೂ ಸ್ವೀಕರಿಸಿ। ನಿಯತವಾದ ಭಿಕ್ಷಾಹಾರವಂಕೊಂಡು। ಭಸ್ಮೋದ್ಧೂಳನ। ತ್ರಿಪುಂಡ್ರಧಾರಣ। ಶಿವಲಿಂಗಾರ್ಚನ। ಶಿವಮಂತ್ರಜಪ।ಶಿವಸ್ಥಳಕುಳವಿಚಾರ।ಲಿಂಗಾಂಗಸಂಯೋಗಾದಿಜ್ಞಾನಕ್ರಿಯಾಸಂಪನ್ನನಾಗಿ। ರಸ-ರಸಾಯನ-ವಾದವಶ್ಯ-ಜ್ಯೋತಿಷ-ಕ್ರಯವಿಕ್ರಯಾದಿ ಲೌಕಿಕವ್ಯವಹಾರಗಳಂಬಿಟ್ಟು। ವನಿತಾದಿವಿಷಯವಿರಕ್ತನಾಗಿ। ಬಳಿಕೀಭವಾರಣ್ಯಮಧ್ಯದ ಲೋಭವೆಂಬೀದಂಕನುಂಪೋಗದೆ। ಇಂದ್ರಿಯಗಳೆಂಬರಿಪುಗಳಂಲೆಕ್ಕಿಸದೆ।ಮೋಹವೆಂಬಪಿಶಾಚಭಯಮೋರದೆ ಕ್ರೋಧವೆಂಬ ವ್ಯಾಘ್ರಂಗೆಸಿಕ್ಕದೆ। ಮಮತೆಯೆಂಬಸರ್ಪಭೀತಿಯಿಲ್ಲದೆ। ಮನ್ಮಥನೆಂಬಚೋರಂಗೊಳಗಾಗದೆ। ಮದವೆಂಬಂಧಕಾರವಲ್ಲಿಕಂಗೆಡದೆ। ತಾಪತ್ರಯವೆಂಬಗುಳಿಯಲ್ಲಿಬೀಳದೆ। ವಿಷಯಂಗಳೆಂಬ ಕಂಟಕಗಳಮೆಟ್ಟದೆ। ಅಸೂಯೆಯೆಂಬ ವಿಷಯಲತೆಯೊಳು ತೊಡಕದೆ। ಅಹಂಕಾರವೆಂಬ ಮಡುವಿನೊಳೋಲ್ಯಾಡದೆ। ಸರ್ವಾವಧಾನಿಯಾಗಿ। ಜಂಗಮಸ್ಥಳವನಂಗಂಗೊಡು। ಶಿವಜ್ಞಾನಾರೂಢನಾಗಿ ಸಂಚರಿಸುವಾತನೇ ನಿರಾಭಾರಿವೀರಶೈವನಪ್ಪಂ॥

— ಪ್ರಾಣಿಗಳತಾರತಮ್ಯ. —

ಬಳಿಕೀ ಷಟ್ಸ್ಥಳಜ್ಞಾನಿಯಾದ ವೀರಶೈವನೇ ಸರ್ವೋತ್ಕೃಷ್ಟನೆಂಬಲ್ಲಿ ಕ್ರಿಮಿಕೀಟಪತಂಗಜಾತಿಯಿಂ ಪಶುಗಳಧಿಕವಾಪಶುಗಳಂ ಮನುಷ್ಯರಧಿಕವಾಮನುಷ್ಯರಿಂದ್ವಿಜರಧಿಕವಾದ್ವಿಜರಿಂ ವಿಪ್ರರಧಿಕವವರಿಂಕೃತಬುದ್ಧಿಗಳಧಿಕ। ವಾಕೃತಬುದ್ಧಿಗಳಗಿಂತಲುಂ ಕರ್ತಾರರಧಿಕವವರಿಂ ಸನ್ಯಾಸಿಗಳಧಿಕವವರಿಂ ಜ್ಞಾನಿಗಳಧಿಕವಾ ಜ್ಞಾನಿಗಳಗಿಂತಲುಂ ಶಿವಾರ್ಚಕರಧಿಕವಾ ಶಿವಾರ್ಚಕರಿಗಿಂತಲುಂ ಲಿಂಗಾಂಗಸಂಗಿಗಳಧಿಕ ವಾಲಿಂಗಾಂಗಸಂಗಿಗಳಿಂಷಟ್ಸ್ಥಳಜ್ಞಾನಿಗಳಧಿಕವವರಿಗೆ ಮೂರುಲೋಕದಲ್ಲಿಯೂ ಸಮಾನವಿಲ್ಲವಾಗಿ ಮುಮುಕ್ಷುಗಳಂದ ಷಟ್ಸ್ಥಳಜ್ಞಾನಿಗಳಾದ ವೀರಶೈವರ್ಕೀಪಂ

ದಿಸಲು ಪೂಜಿಸಲು ಯೋಗ್ಯರಹುದೆಂಬಿವು ಮೊದಲಾದವೆಲ್ಲಂ ಕ್ರಿಯಾಪಾದದಲ್ಲಿ ಪ್ರತಿಪಾದ್ಯಮುಕ್ಕುಂ॥

ಇತಿಕ್ರಿಯಾಪಾದಸ್ಸಮಾಪ್ತಃ.

## —* ಚರ್ಯಾಪಾದ ಪ್ರಾರಂಭಃ. *—

ಬಳಿಕ ಚರ್ಯಾಪಾದದಲ್ಲಿ ಪ್ರಾಯಶ್ಚಿತ್ತ। ಪವಿತ್ರಾರೋಪಣ। ಉಮಾಮಹೇಶ್ವರಲಕ್ಷಣ। ಸ್ಕಂದನಂದಿಗಣೇಶ್ವರಲಕ್ಷಣ। ಜಪಮಾಲಾಲಕ್ಷಣ। ಸಕಲಾಶ್ರಮಲಕ್ಷಣಾದಿಗಳೆಲ್ಲಂ। ಪ್ರತಿಪಾದ್ಯಗಳವುಗಳೊಳಗೆ। ಆಶ್ರಮಂಗಳಂ ಪುರಾಣವಿರೀತಿಯಿಂ ಪ್ರತಿಪಾದಿಸುವೆನದೆಂತೆಂದೊಡೆ॥

### — ಆಶ್ರಮಚತುಷ್ಟಯಮು. —

ದಧೀಚಿ-ಗೌತಮ-ಅಗಸ್ತ್ಯ-ದೂರ್ವಾಸರೆಂಬ ಋಷಿಚತುಷ್ಟಯಕ್ಕೆ ಕ್ರಮದಿಂದನುಮತವಾದ ಬ್ರಹ್ಮ ವಿಷ್ಣು ಸೂರ್ಯ ಮಹೇಶ್ವರರೆಂಬವರೇ ಪವಿವಿಡಿದಧಿದೇವತೆಯಾದ। ಬ್ರಹ್ಮಚಾರಿ-ಗೃಹಸ್ಥ-ವಾನಪ್ರಸ್ಥ-ಯತಿಗಳೆಂಬವರೇ ಚತುರಾಶ್ರಮಿಗಳವರಲ್ಲಿ॥

### — ಬ್ರಹ್ಮಚರ್ಯಾಶ್ರಮಂ —

ಉಪನೀತನಾಗಿ ಶಿಖಾಯಜ್ಞೋಪವೀತಾದಿಗಳಂ ವಹಿಸಿ। ಕಟಿಸೂತ್ರ। ಕೌಪೀನ। ಶುಭ್ರವಸ್ತ್ರ। ಕೃಷ್ಣಾಜಿನ। ಪಾಲಾಶಾದಿದಂಡ। ಭಸ್ಮರುದ್ರಾಕ್ಷಗಳಂ। ತತ್ತನ್ಮಂತ್ರಗಳಿಂಧರಿಸಿ। ಏಕಕಾಲಸ್ನಾನ। ಉದಯಾಸ್ತಮಯ ಸಂಧ್ಯಾವಂದನೆ। ಪಿತೃಮಾತೃಸೇವೆ। ಬಾಂಧವಮೈತ್ರಿ। ಗುರುಕುಲವಾಸ। ವೇದಾಧ್ಯಯನ। ಇಂದ್ರಿಯನಿಗ್ರಹ। ಗುರುದೇವತಾಭಕ್ತಿ। ವಿದ್ವಜ್ಜನೋಪಾಸ್ತಿ। ಆಚಾರ್ಯಪರಿಚರ್ಯ। ಅಗ್ನಿಕಾರ್ಯ। ನಿತ್ಯನೈಮಿತ್ತಿಕಕರ್ಮಾನುಷ್ಠಾನ। ಸತ್ಯಶೌಚಾದಿಗಳಿಂ ಯುತನಾಗಿ। ಸ್ರಕ್ಚಂದನತಾಂಬೂಲವನಿತಾಪರಿಧಾನಪಾದುಕಾದಿಗಳಿಲ್ಲದೆ। ಕಾಮಕ್ರೋಧಾದಿಗಳಂ ಬಿಟ್ಟು। ಬ್ರಹ್ಮ ಕ್ಷತ್ರಿಯವೈಶ್ಯರಲ್ಲಿ ಕ್ರಮದಿಂಸಿದ್ಧಾನ್ನ। ಘೃತಪಕ್ವ ಕ್ಷೀರತಂಡುಲ ಫಲಾದಿಗಳಂ। ಪತಿವ್ರತೆಯರಾದ ಸುವಾಸಿನಿಯರಂ। ಭವತಿಭಿಕ್ಷಾಂದೇಹಿಯೆಂದು। ಕರ್ಮಲೋಪವಿಲ್ಲದ ಗೃಹಸ್ಥರಂ ಭವಾನ್‌ಭಿಕ್ಷಾಂದದಾತುಯೆಂದು ಯಾಚಿಸಿ। ಪಂಚಾಷ್ಟಗೇಹಯಾತ್ರೆಯೊಳ್ ಯಥಾಲಾಭತೃಪ್ತನಾಗಿತಂದು। ಬಳಿಕಕರಚರಣಾದಿಕಮಂತೊಳೆದು ದ್ವಿರಾಚಮನಂಗೈದು। ಪೇಲಾಭಿಕ್ಷಾನ್ನಮಂ

ತನ್ನ ಶ್ರೀಗುರುವಿಗೆ ಸಮರ್ಪಿಸಿ। ಮರಳಿ ತದನುಜ್ಞೆಯಿಂ ತಾನು ಪೂರ್ವೋ
ತ್ತರಮೊಳೊಂದು ದಿಕ್ಕಿಗಭಿಮುಖನಾಗಿ ಕುಳ್ಳಿರ್ದು। ಪ್ರೋಕ್ಷಣಪರಿಷೇಚ
ನಾನಂತರದಲ್ಲಿ। ಚಿತ್ರಬಲಿವರ್ಜವಾಗಿ। ಪ್ರಾಣಾಯ ಸ್ವಾಹಾ ಯೆಂಬುದು
ಮೊದಲಾದ ಮಂತ್ರಗಳಿಂ ಪ್ರಾಣಾಹುತಿಗಳಂ ಕೊಟ್ಟು। ಬಳಿಕ ಕಬಳಗಣನೆ
ಯಿಲ್ಲದೆ ಯಥೇಷ್ಟವಾಗಿ ಭೋಜನಂಗೈದು। ಸ್ವಶಾಖಾದಿ ವೇದವೇದಾಂ
ಗಮಂತ್ರನಿಯಮಾಧ್ಯಯನದೀಕ್ಷಿತನಾಗಿ। ಇತರ ಮಂತ್ರಾನುಷ್ಠಾನವನು
ಳಿದು। ಲೌಕಿಕ ವೈದಿಕಾಧ್ಯಾತ್ಮಿಕಾದಿ ಶಾಸ್ತ್ರಾಭ್ಯಾಸಮಂ ಮಾಡುತ್ತ। ಜ್ಞಾ
ನತಪಸ್ಸಂಪತ್ತಿಯಿಂ ಬ್ರಹ್ಮಚರ್ಯವ್ರತಮಂ ಪೋಷಿಸಿ। ಗಾಯತ್ರೀಜಪನಿ
ರತನಾಗಿ। ಸೂರ್ಯಾಗ್ನಿ ಗುರುಗಳೇ ದೇವತೆಗಳೆಂದುಳ್ಳಾತನಾಗಿ। ಆಶೌಚಾ
ದಿಗಳಿಂದಶುಚಿಯಾಗದೆ। ಸಂಪ್ರದಾಯಗಳಂ ತಿಳಿದು ವರ್ತಿಪದಾಗಿ। ಗುರು
ತುಲ್ಯವಾಗಿ ಗುರುಪತ್ನೀಪುತ್ರರಂ ಸತ್ಕರಿಸುತ್ತ। ಉಪಾಕೃತ್ಯುತ್ಸರ್ಜನಗ
ಳಂ ವೇದಖಂಡಗಳಂ ಸವಿಸ್ತರವಾಗಿ ಮಾಡಿ। ಪ್ರಾಜಾಪತ್ಯಾದಿವ್ರತಯೋಗ್ಯ
ತೆಯಿಂ ಗಾಯತ್ರೀಬ್ರಹ್ಮಚಾರಿ-ಪ್ರಾಜಾಪತ್ಯಬ್ರಹ್ಮಚಾರಿ-ವೈದಿಕಬ್ರಂ
ಹಚಾರಿ-ನೈಷ್ಠಿಕಬ್ರಹ್ಮಚಾರಿಯೆಂದು ನಾಲ್ಕುತೆರನಾಗಿ। ವೇದಪೂರ್ವಕ
ಬ್ರಹ್ಮವಿದ್ಯಾಧಿಕಾರಿಯಹುದರಿಂ ಬ್ರಹ್ಮಲೋಕಾರ್ಹನಾಗಿ ಸುಖಸು
ಖಾಶ್ರಯಿಯಾಗಿರ್ಪಾತನೇ ಬ್ರಹ್ಮಚಾರಿಯಪ್ಪಂ॥

— ಗೃಹಸ್ಥಾಶ್ರಮ. —

ಮತ್ತಮಾ ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನಾದಿಕಮಂ ಲೇಸಾಗಿ
ಮಾಡಿದ ಬ್ರಹ್ಮಚಾರಿಯು। ತನಗೆ ವಿರಾಗವುಟ್ಟವಾನ ವ್ರಸ್ಥಾಶ್ರಮವನಾದೊ
ಡಂ। ಯತ್ಯಾಶ್ರಮವನಾದೊಡಂ ಸ್ವೀಕರಿಸಬಹುದಾದರೂ। ಆಚಾರ್ಯನಿಗೆ
ಪ್ರಿಯಧನಮಂ ಕೊಟ್ಟು। ಬಳಿಕ ಪ್ರಜಾತಂತುವಿಚ್ಛೇದವಾಗದಂತೆ। ಧರ್ಮ
ಪ್ರಜಾಸಂತತ್ಯರ್ಥವಾಗಿಯುಂ। ಪಿತೃಋಣಮೋಚನಾರ್ಥವಾಗಿಯುಂ।
ಗೃಹಸ್ಥನಾಗಬೇಕೆಂಬ ವೇದಾನುಶಾಸನದಿಂ ಪ್ರವೃತ್ತಿಪರರಾದ ಬ್ರಹ್ಮ,
ಕಶ್ಯಪ, ಮನು, ಗೌತಮಾದಿ ಮಹರ್ಷಿಗಳ ಮತದಿಂ। ಬ್ರಹ್ಮಚರ್ಯಾನಂತ
ರದಲ್ಲಿ ಗಾರ್ಹಸ್ಥ್ಯವು ವಿಧಿಸಲ್ಪಡುವದಾಗಿ। ಯುಕ್ತವಾಗಿಹಾ ಪಂಚಿಕವಿ
ಷಯಗಳಂ ಭೋಗಿಸಲು- ರಾಗಯುಕ್ತನಾದೊಡೆ ಆಚಾರ್ಯನಾಜ್ಞೆಯಿಂ
ವ್ರತಸಮಾವರ್ತನಸ್ನಾತಕಾದಿಗಳಂ ಮಾಡಿ। ಬ್ರಹ್ಮಚರ್ಯನುಳಿದು-ಸ್ವ
ಜಾತಿಯಲ್ಲಿ - ಶಕುನಾದಿಗಳಂ ನೋಡಿ - ಶಾಸ್ತ್ರೋಕ್ತಲಕ್ಷಣಮುಳ್ಳ ಕನ್ಯಕೆ
ಯಂ-ಯಥಾವಿಧಿಯಾಗಿ ಪರಿಗ್ರಹಿಸಿ-ನಿತ್ಯಾಗ್ನಿಹೋತ್ರಯಜ್ಞದ. ನತ್ವಪ।

ಸಾಧ್ಯಾಯಮಾಡಿಲೋಪವಿಲ್ಲದೆ- ಇತರಾಶ್ರಮಿಗಳಂ ಪೋಷಿಸುತ್ತ -ಧರ್ಮಲೋಪವಾಗದೆ- ಸದಾಚಾರಸಂಪನ್ನನಾಗಿ ಸಕಲಪುರುಷಾರ್ಥಗಳಂ ಪಡೆಯಲು ಯೋಗ್ಯನಾಗಿರ್ಪಾತನೇ ಗೃಹಸ್ಥಾಶ್ರಮಿಯೆನಿಸುತಿರ್ಕುಂ॥

### — ಕನ್ಯಾದುರ್ಲಕ್ಷಣ. —

ಅಂತುಮಾಡುವಗೋಸುಗ ಕನ್ಯೆಯಂ ವರಿಸುವಲ್ಲಿ- ಕನ್ಯಾಲಕ್ಷಣಮಂ ತಿಳಿಯಬೇಕದೆಂತೆಂದೊಡೆ- ಮರ, ಪಕ್ಷಿ, ತೊರೆತಿಪ್ಪೆ, ಗಿರಿನದಿ, ನಕ್ಷತ್ರ, ಈ ಪರ್ಯಾಯಶಬ್ಧಗಳೇ ಹೆಸರಾಗಿಉಳ್ಳಹೆಂಗಳುಂ- ರೇಫ ಲಕಾರಗಳೇಉಪಾಂತಗಳಾದಸಮಾಕ್ಷರದ ಹೆಸರುಗಳುಳ್ಳಹೆಂಗಳುಂ- ಅನ್ಯರಿಗೆ ಮನೋದತ್ತ, ವಾಗ್ದತ್ತ, ಧಾರಾದತ್ತಮಾದಹೆಂಗಳು- ಸ್ಥೂಲಾಂಗಿ ದೀರ್ಘಕಾಯೆ ಕುಬ್ಜೆ, ಕೆಂಚುತಲೆ ಕುಳಿಗಣ್ಣು, ಸ್ಥೂಲನಾಶ, ಉಬ್ಬುಹಲ್ಲು, ಶಿರವಾಯಿವಿಕಾರ, ಜವಳಿಬೆರಳು, ಅಂಗಲೋಪ, ಅಪಸವ್ಯಸುಳಿ, ಯೆದುರುರೋಮ, ಸಣ್ಣಕತ್ತು, ಜಬ್ಬುಕಂಕುಳು, ಜೋಲುತುಟಿ, ಮಹೋದರ, ಸೊಟ್ಟಗಾಲುಮಾಂದ್ಯ, ಅಪಸ್ವರ, ಪ್ರೌಢತರಬುದ್ಧಿ, ನಿರ್ಭಯ, ನೆರೆಗೂದಲು, ರೋಗಗಳು, ಬಿರಿಗುಡ್ಡು, ನೆಲನೊದರಿನಡೆವುದು ತೊಡಿಕೆಕಲಹಅತ್ಯಾಶೆ ವೈಧವ್ಯಲಕ್ಷಣ ಮುಂತಾದವುಗಳುಳ್ಳ- ನಕ್ಷತ್ರ-ಗೋತ್ರ-ಬಾಂಧವ್ಯಸಂಬಂಧಗಳುಸರಿಬಾರದ-ದುಸ್ಸಂಪ್ರದಾಯದ ಮನೋಹರ್ಷವಿಲ್ಲದಿರುವಕನ್ಯೆಯರಂ ಮದುವೆಯಾಗದೆತೊರೆದು॥

### — ಕನ್ಯಾಸಲಕ್ಷಣ. —

ಬಳಿಕ ಅಪರುಷಶಾಸ್ತ್ರವ್ಯಸದರ್ಥವಿಷಮಾಕ್ಷರಮಾದ ನಿಷಿದ್ಧಮಲ್ಲದಹೆಸರುಳ್ಳ। ರೋಗವಿಲ್ಲದದೃಢಗಾತ್ರ-ಬಂಧುಶೀಲಲಕ್ಷಣಸಂಪನ್ನತೆ-ಸಾಂಪ್ರದಾಯಿಕವೃತ್ತಿ-ನಕ್ಷತ್ರಗೋತ್ರಸಂಬಂಧಾನುಕೂಲ್ಯ।ಅನಸೂಯಾದಿಸಮಾಧಾನವೃತ್ತಿ-ಸ್ಮೈರಣೆ-ಭಯಭಕ್ತಿಗಳು-ಮಾನಲಜ್ಜೆ-ಕಾರ್ಯಚಾತುರ್ಯಜಾಗರೂಕತೆ-ಮೃದುಮಧುರಸ್ವರ- ವಿಶಾಲಲೋಚನ-ಸಮಸುಳಿ-ಸರಿವಸೆ-ಪಲ್ಲು-ಸಮಕಾಯ-ನೀಲದೀರ್ಘಮೃದುಳಕುಟಿಲಕುಂತಳ-ಸ್ವರ್ಣಕಾಂತಿ-ಮೃದುಸ್ಪರ್ಶಸೌಂದರ್ಯವಿಶಾಲವಕ್ಷಸ್ಥಳ। ಕೃಶಮಧ್ಯ-ದುಂಡುದೊಡೆ-ಲಘುಮಂದಗಮನ ಸೌಮಂಗಲ್ಯಲಕ್ಷಣ ಪುತ್ರರೇಖೆ ಪಾತಿವ್ರತ್ಯಚಿಹ್ನ ಅಂಕುಶಶಂಖಧ್ವಜಪದ್ಮಾದಿ ಸೌಭಾಗ್ಯರೇಖೆಗಳುಸಣ್ಣಬೆರಳು-ಕೆಂದುಟಿ-ನೃತ್ತ ಜನನಖಅಲ್ಪಾಹಾರ-ಅಲ್ಪನಿದ್ರೆ- ಸಮಚಾತುರ್ಯನಿರ್ಭಯತೆ ಶ್ರದ್ಧೆಅಭಿಮಾನಆವಶ್ಯಕತೆಮುಂತಾದ ಸಕಲಶುಭಲಕ್ಷಣಸಮನ್ವಿತಳಾದ-ವ ಪರಾಪರ

ನ್ಯೆ-೯ ವರುಷದರೋಹಿಣಿ-೧೦ ವರುಷದಗೌರಿಯಾದ ಕನ್ಯಕೆಯಂಸ್ವ
ಗೃಹಸೂತ್ರೋಕ್ತಪ್ರಕಾರದಿಂ ವಿವಾಹವಾಗಿ॥

—* ಗೃಹಸ್ಥಸಾಮಗ್ರಿಗಳು. *—

ಗೃಹಸ್ಥಾಶ್ರಮ ಪ್ರಯುಕ್ತವಾದ ಸ್ಮಾರ್ತಶ್ರೌತಾಗ್ನಿಗಳು ನಿತ್ಯಾ
ರ್ಚನವೇಪತ್ರಪಂಚಾಗ್ನಿಗಳು ಪಂಚಾತಿಥಿಗಳು ಧರ್ಮಪತ್ನಿ ಅರಳಿಯ
ಜ್ಞೋಪಕರಣ ಗೃಹಗೃಹೋಪಕರಣ ಆತಿಥ್ಯೋಪಕರಣ ಜೀವನಸಾಧನ
ಯಜನಾದಿಷಟ್ಕರ್ಮಗಳು ವಸ್ತ್ರದ್ವಯ ಉಪವೀತದ್ವಯ ವೇಣುದಂಡ
ಛತ್ರಉಪಾನಹ ದರ್ಪಣಕುಂಡಲಹಾರಗಂಧಕಜ್ಜಲಪುಷ್ಪತಾಂಬೂಲ ಶ
ಯ್ಯಾ ಪುಸ್ತಕಧ್ಯಾನಸಂಗ್ರಹಲೋಕಸಂಗ್ರಹಾದಿಗಳುಳ್ಳಾತನಾಗಿ।ಶಿವಾ
ರ್ಚನೆಯಿಂಗೃಹಸ್ಥನು। ನಿತ್ಯಕರ್ಮಲೋಪವಿಲ್ಲದೆ ನೈಮಿತ್ತಿಕಕಾಮ್ಯಕ
ರ್ಮಗಳಂನಿರ್ವಹಿಸಲಪ್ಪುದದರೊಳು ನಿತ್ಯಕರ್ಮಸಂಗ್ರಹವೆಂತೆಂದೊಡೆ॥

—* ಶೈವನಿತ್ಯಕರ್ಮವಿಚಾರ. *—

ಬಳಿಕ ಬ್ರಾಹ್ಮೀಮುಹೂರ್ತದೊಳೆದ್ದು ಶುಚಿರ್ಭೂತನಾಗಿ ಶಿವದಿವ್ಯ
ಮಂಗಳನಾಮಸ್ಮರಣಂಗೈದು ಶಿವಲಿಂಗಮಂಗಳಮೂರ್ತಿಯಂಧ್ಯಾನಿಸಿ।
ಅಂತರ್ಮಲಮೋಚನಂಮಾಡಿ ಬಾಹ್ಯದೊಳು ಬಹಿರ್ಗ್ರಾಮವಾದಿನಿರ್ಭಯ
ಮಾದವಿರುದ್ಧನಿರ್ಜನಪ್ರದೇಶದಲ್ಲಿಮೌನಾದಿವಿಧಿಗಳಂಯಥೋಕ್ತವಾಗಿ
ಮಲಮೂತ್ರಗಳಂ ತ್ಯಜಿಸಿಗುದಗುಹ್ಯಕರಪಾದಂಗಳಿಗೆ ವಾಲುಕಾಕೀಟ
ದೂರ್ವಾದಿ ಮುಕ್ತವಾದ ಮೃತ್ತಿಕೆಯಂಗಂಧಾದಿಮಲನಿರ್ಲೇಪಾರ್ಥವಾಗಿಮ
ನಶ್ಶುದ್ಧಿಪರ್ಯಂತಮುಂಲೇಪಂಗೈದುಜಲದಿಂಕ್ಷಾಳಿಸುತ್ತ ಶೌಚಂಗೈದುಗಾ
ತ್ರಾದಿಶುದ್ಧಿಗೊಂಡು ಶುದ್ಧಾಚಮನಂಮಾಡಿ ಉದಯಮಾಗದಮುನ್ನ
ಅಪಾಮಾರ್ಗಮೊದಲಾದ ಕಾಷ್ಠಗಳಂ ವಿಧ್ಯುಕ್ತವಾಗಿದಂತಧಾವನಂಗೈ
ದು ಮೇಲೆರಡುವೇಳೆ ಆಚಮನಂಮಾಡಿ ವಸ್ತ್ರದ್ವಯದಿಂಸದ್ಯಾದಿಗಳಲ್ಲಿಅ
ಘಮರ್ಷಣವಾರುಣಾದಿ ಮಲಮೋಚನಸ್ನಾನಂಗೈದು ಧೌತವಸ್ತ್ರಮಂ
ಪೊದ್ದುಬಳಿಕಶುದ್ಧಾಸನದಲ್ಲಿಮಂತ್ರೋಕ್ತವಿಧಿಸ್ನಾನಮಂಮಾಡಿಪೂತನಾ
ಗಿತ್ರಿಯಂಬಕಾದಿ ಮಂತ್ರಗಳಂಯಥೋಕ್ತವಾಗಿ ಭಸ್ಮೋದ್ಧೂಳನತ್ರಿ
ಪುಂಡ್ರಧಾರಣಾದಿಗಳಂಮಾಡಿ ರುದ್ರಾಕ್ಷಮಾಲಾದಿಗಳಂ ಯಥಾಸ್ಥಾನದಲ್ಲಿ
ಸಂಖ್ಯಾಕ್ರಮದಿಂಧರಿಸಿ ಪವಿತ್ರಪಾಣಿಯಾಗಿ ಪ್ರಾಣಾಯಾಮಂಗೈದುಸ
ಮಂತ್ರಕ ಕುಂಭಕಧಾರಣ ಪ್ರದಕ್ಷಿಣಾಂತಮಾದಬಳಿಕ ಶಾಖೋಕ್ತಸಂ
ಧ್ಯಾವಂದನಂಗೈದರ್ಘ್ಯದನಂತರದಲ್ಲಿ ಪ್ರತ್ಯಹಮುಂ ಸಹಸ್ರಾದಿಗಾಯ

ತ್ರೀಜಪಮಾಡಲ್ತಕ್ಕದೆಂತೆನೆ॥

—* ಗಾಯತ್ರೀಜಪವಿಧಾನ. *—

ಬಳಿಕ ಗಾಯತ್ರೀಮಂತ್ರಕ್ಕೆ ಗಾಯತ್ರೀಛಂದಸ್ಸು ವಿಶ್ವಾಮಿತ್ರಋಷಿ ಸವಿತೃಸಂಜ್ಞಕ ಸದಾಶಿವದೇವತೆ ಅದಕ್ಕೆ ಅಗ್ನಿಮುಖ ಬ್ರಹ್ಮಶಿರಸ್ಸು ವಿಷ್ಣುಹೃದಯ ರುದ್ರಶಿಖೆ ಪೃಥಿವಿಯೋನಿ ಪ್ರಾಣಾದಿವಾಯುಗಳೇ ಪ್ರಾಣ ಶ್ವೇತವರ್ಣ ಸಾಂಖ್ಯಾಯನಸಗೋತ್ರ ಚತುರ್ವಿಂಶತ್ಯಕ್ಷರ ತ್ರಿಪದ ಷಟ್ಕುಕ್ಷಿ ಪಂಚಶೀರ್ಷ ದಶಭುಜ ಶಾಂಭವಶಕ್ತಿಸ್ವರೂಪ ಮಂತ್ರ ಜಪ್ಯ ರವಿದೇವತೆ ಮಂತ್ರಲಕ್ಷ್ಯ ಶಿವದೇವತೆ ಪ್ರತ್ಯಕ್ಷರವುಂ ಪ್ರಣವಯುಕ್ತ ಬಿಂದು ಕೂಡಿಸಿ ಸಪ್ತವ್ಯಾಹೃತಿನ್ಯಾಸಧ್ಯಾನಪೂರ್ವವೆಂದು ತಿಳಿದು ಋಷಿದೇವತಾದಿಗಳಂ ಶೀರ್ಷಿಸಿ ತುರೀಯಗಾಯತ್ರೀ ವರ್ಜವಾಗಿ ಯಥಾವಿಧಿಯಾಗಿ ನ್ಯಾಸಂಗೈದು ಸಗರ್ಭವಾಗಿ ಉಪಚರಿಸಿ ಪ್ರತ್ಯಕ್ಷರಮುದ್ರಾಧ್ಯಾನಾದಿಗಳಂ ಗಾಯತ್ರಿಗೆ ತಾತ್ಪರ್ಯವಿಷಯವಾದ ಪರಮಾರ್ಥವು ಪರಶಿವನೆಂದು ಉಪದೇಶಿಸಿ ಅಕ್ಷರಮಾಲಾದಿಗಳಂ ಜಪತ್ರಿಲಕ್ಷಣ ಲೋಪವಿಲ್ಲದೆ ನಿತ್ಯವೂ ಪ್ರಾತಃಕಾಲದಲ್ಲಿ ಸಾವಿರ ಜಪಕ್ರಮದಿಂ ಇಪ್ಪತ್ತುನಾಲ್ಕುಲಕ್ಷ ಜಪಮಂ ಮಾಡಿ ಯೆರಡುಲಕ್ಷ ಪೂಸಲವತ್ತುಸಾವಿರ ಕ್ಷೀರತರ್ಪಣಂಗೈದು ಕಲ್ಪೋಕ್ತಪ್ರಕಾರದಿಂ ಇಪ್ಪತ್ನಾಲ್ಕು ಸಾವಿರದ ಆಜ್ಯಾಹುತಿಯಂ ಕೊಟ್ಟು ಯೆಂಟುಸಾವಿರದ ನಾನೂರು ಬ್ರಾಹ್ಮಣಭೋಜನಂ ಮಾಡಿಸಿ ತದಲಾಭದಲ್ಲಿ ಇಪ್ಪತ್ತುನಾಲ್ಕು ಸಾವಿರ ಗೋವುಗಳಂ ತೃಪ್ತಿಗೊಳಿಸಿ ತದಲಾಭದಲ್ಲಿ ಇಪ್ಪತ್ನಾಲ್ಕುಲಕ್ಷ ಭೂತತೃಪ್ತಿಯಂ ಮಾಡಿ ಪಲಾಶಕುಸುಮ ಕುಂಶಾಗರು ಕಮಲ ಕ್ಷೀರಾದಿಗಳಂ ಬಳಿಯಂ ಕೊಟ್ಟು ಈ ಪರಿಯಿಂ ಪಂಚವಾರಂಗಳು ಬ್ರಹ್ಮಚರ್ಯವ್ರತದಿಂ ಯಥಾಕಲ್ಪವಾಗಿ ಪುರಶ್ಚರಣಂಗೈದು ಅನಂತರದಲ್ಲಿ ಪ್ರಣವವ್ಯಾಹೃತಿ ವಷಟ್ಕಾರಾದಿಗಳಂ ಸಾಧಿಸಿ ಸಿದ್ಧಿಗೊಂಡು ಬಳಿಕ ಬೇರೆಬೇರೆ ಕ್ಷೀರಾದಿಹೋಮಸಂಖ್ಯಾನಿಯತವಾದ ಫಲಗಳಂ ಸಕಲಸಿದ್ಧಿಪ್ರದವಾದಬಳಿಕ॥

—* ಗಾಯತ್ರೀಮೂರ್ತಿಸ್ವರೂಪ *—

ಗಾಯತ್ರಿಯಂ ಧ್ಯಾನಿಸಲು ಋಗ್ವೇದ ಯಜುರ್ವೇದ ಸಾಮವೇದಂ ತ್ರಿಪಾದವಾಗಿರುವದು। ಪೂರ್ವ ದಕ್ಷಿಣ ಪಶ್ಚಿಮ ಉತ್ತರ ಊರ್ಧ್ವ ಅಧಃಪ್ರದೇಶಗಳೆಂಬ ಆರುದಿಕ್ಕುಗಳೇ ಆರುಕುಕ್ಷಿಗಳಾಗಿರುವವು। ಆಕಾಶವೇ ಕುಕ್ಷಿಯೊಳಗಿಹುದು। ಅಷ್ಟಾದಶಪುರಾಣತತ್ವವೇ ನಾಭಿಯಾಗಿಹುದು। ಸ್ಥಾವರಜಂಗಮಪ್ರಪಂಚವೆಲ್ಲವುಂ ಶರೀರವಾಗಿಪ್ಪುದು। ವೇದಾಂತಶಾಸ್ತ್ರ ಪ್ರ

ಸೂಕ್ಷ್ಮಶರೀರ।ಶಿಕ್ಷಾದಿಕವೇಅಂಗವೆನಿಸುವದು । ಸ್ಮೃತ್ಯಾದಿವಿದ್ಯೆಗಳೇರೋಮಂಗಳು। ಧರ್ಮವೇಹೃದಯ। ಅಂತರಬಾಹ್ಯ ಕರ್ಮಬಂಧಗಳೇ ಸ್ತನಂಗಳು । ಸೂರ್ಯಾಗ್ನಿ । ಜಠರಾಗ್ನಿ । ವೈದಿಕಾಗ್ನಿ। ಲೌಕಿಕಾಗ್ನಿ। ಜ್ಞಾನಾಗ್ನಿಗಳೆಂಬ ಪಂಚಾಗ್ನಿಗಳೇಪಂಚಮುಖಂಗಳುನಕ್ಷತ್ರಾದಿಖಚರಜ್ಯೋತಿದಹನಾದಿಭೌಮಜ್ಯೋತಿ ಪ್ರಣವಾದಿಜ್ಞಾನಜ್ಯೋತಿಗಳೆಂಬಜ್ಯೋತಿಯೇನಯನತ್ರಯ ವೆಂತಲುಂವೇದನಾತೆಯಾದಗಾಯತ್ರಿಗೆಗಾಯತ್ರೀಛಂದಸ್ಸೇಮೂರ್ತಿ।ವ್ಯಾಕರಣಶಿಕ್ಷಾಕಲ್ಪನಿರುಕ್ತಜ್ಯೋತಿಷ ಛಂದೋನುಶಿರಂಗಳುಬ್ರಹ್ಮದೇವತಾಕಮಂತ್ರಗಳೇಶಿರಸ್ಸುರುದ್ರದೇವತಾಕಮಂತ್ರಗಳೇಶಿಖೆ। ವಿಷ್ಣುದೇವತಾಕಮಂತ್ರಗಳೇ ಆತ್ಮ । ಈಶ್ವರದೇವತಾಕಮಂತ್ರಗಳೇ ಅಂತರಾತ್ಮ। ವಿಷ್ಣೋಮಾಂಸೆಯೇಲಕ್ಷಣ। ಅಥರ್ವಣವೇಚೇಷ್ಟೆಯಾಗಿ। ಅಧಿಕಾರಿಪರ್ಯವುಪ್ಪಗಾಯತ್ರೀವಿದ್ಯೆಗೆ। ಸಮುದಾಸ್ಯವುಪ್ಪಗಾಯತ್ರೀ ನಾಮನಿರ್ದೇಶ್ಯ ದೇವತೆಯು ಛಾಂದೋಗ್ಯಾದಿಗಳಲ್ಲಿ ಭೂತಾದಿಪಾದವ್ಯಪದೇಶವುಪ್ಪುದರಿಂ। ತದನನ್ಯಸಾಧಾರಣವಾಗಿ ಪರಶಿವನೆಂದು ನಿರ್ಧರಿಸಲಕ್ಕುಂ ॥

— ಉದಯಕಾಲ ಗಾಯತ್ರೀಧ್ಯಾನ. —

ಬಳಿಕ ಗಾಯತ್ರಿಯಂ। ಉದಯಕಾಲದೊಳು ನಾಭಿಸ್ಥಾನದಲ್ಲಿ। ರಕ್ತಪದ್ಮಾಸನ। ರಕ್ತವರ್ಣ । ವಸ್ತ್ರಾಭರಣಗಂಧಮಾಲ್ಯಾದಿಗಳಿಂದ ಲಂಕೃತವಾಗಿ ಚತುರ್ಮುಖಗಳಿಂ। ದ್ವಾದಶಾಕ್ಷರಗಳಿಂ । ದಂಡಕಮಂಡಲಕ್ಷಸೂತ್ರಚಿನ್ಮುದ್ರೆಗಳಂಪಿಡಿದ ವಾಮದಕ್ಷಿಣಾಧಃಕರಚತುಷ್ಟಯದಿಂ । ಕಮಲಕಲಶವರಾಭಯಗಳುಳ್ಳ ವಾಮದಕ್ಷಿಣೋರ್ಧ್ವಕರಚತುಷ್ಟಯದಿಂ। ಹಂಸವಾಹನವಾಗಿ। ಋಗ್ವೇದಮಯವಾಗಿ । ರಜೋಗುಣಬಹಿರಾಧಿಕ್ಯದಿಂಬ್ರಹ್ಮಾದಿದೇವತೆಯೆನಿಸಿ । ಗಾಯತ್ರೀ । ಬ್ರಾಹ್ಮಿಯೆಂಬಹೆಸರುಪಡದುದೆಂದು। ಕರ್ಮಜ್ಞಾನಾರ್ಥವಾಗಿಧ್ಯಾನಿಸಲಹುದೆಂದನುಸಂಧಾನಿಸಿ.

— ಮಧ್ಯಾಹ್ನ ಗಾಯತ್ರೀಧ್ಯಾನ. —

ಬಳಿಕಮಧ್ಯಾಹ್ನಕಾಲದಲ್ಲಿಹೃದಯಸ್ಥಾನದೊಳುಶ್ವೇತಪದ್ಮಾಸನದಲ್ಲಿ ಶ್ವೇತವರ್ಣ ಶ್ವೇತಾಭರಣಗಂಧಮಾಲ್ಯಾನುಲೇಪನಾದಿಗಳಿಂ ದಲಂಕೃತವಾಗಿ। ಏಕಮುಖತ್ರಿಲೋಚನಗಳಿಂ। ಶಂಖಚಕ್ರಶೋಭಿತವಾಮದಕ್ಷಿಣೋರ್ಧ್ವಕರದ್ವಯದಿಂ । ಕಮಂಡಲ ಪಕ್ಷಮಾಲಾಶೋಭಿತವಾಮದಕ್ಷಿಣಾಧಃಕರದ್ವಯದಿಂ। ಸುವರ್ಣವಾಹನವಾಗಿ।ಯಜುರ್ವೇದಮಯಮುಪ್ಪ। ಸತ್ವಾಧಿಕ ಬಹಿರ್ಗುಣಾಧಿಕ್ಯದಿಂ ವಿಷ್ಣುವಧಿದೇವತೆಯೆನಿಸಿ। ಸರಸ್ವತಿ। ವೈಷ್ಣ

ವಿಯೆಂಬ ಪೆಸರ್ವಡೆದು। ಕರ್ಮಜ್ಞಾನಾರ್ಥವಾಗಿ ಧ್ಯಾನಿಸಲು । ಯೋಗ್ಯವಾಗಿಹುದೆಂದು ಚಿಂತನಂಗೈದು॥

— ಸಾಯಂಕಾಲಗಾಯತ್ರೀಧ್ಯಾನ. —

ಬಳಿಕ ಸಾಯಂಕಾಲದಲ್ಲಿ। ಭ್ರೂಮಧ್ಯದೊಳಂ ಕೃಷ್ಣಪದ್ಮಾಸನದಲ್ಲಿ ಕೃಷ್ಣವರ್ಣಕೃಷ್ಣವಸ್ತ್ರಾಭರಣಗಂಧಮಾಲ್ಯಾದಿಗಳಿಂದಲಂಕೃತವಾಗಿ। ಪಂಚಮುಖಪಂಚದಶಲೋಚನಂಗಳಂ ತ್ರಿಶೂಲಾಕ್ಷಮಾಲಾಕಮಂಡಲು ಸುರಭಿಚಿನ್ಮುದ್ರೆಗಳಿಂ ವರಾಭಯಪಾಶಾಂಕುಶಚತ್ರುಳಿಂ ಪಿಡಿದವಾಮದಕ್ಷಿಣ ಕರದಶಕದಿಂ। ಕಾರ್ಯರುದ್ರರೂಪದೊಳು ಏಕಮುಖತ್ರಿಲೋಚನಗಳಂ।ಶೂಲಾಕ್ಷಮಾಲಾ ಕಮಂಡಲುಸುರಭಿಗಳಂ ಪಿಡಿದ ಕರಚತುಷ್ಟಯದಿಂ ವೃಷಭವಾಹನವಾಗಿ ಸಾಮವೇದಮಯಮಪ್ಪತಮೋಗುಣಬಹಿರಾಧಿಕ್ಯದಿಂಕಾರ್ಯರುದ್ರನಧಿದೇವತೆಯೆನಿಸಿ । ಸಾವಿತ್ರಿ ಮಾಹೇಶ್ವರಿಯೆಂಬ ಪೆಸರ್ವಡೆದು। ಕರ್ಮಜ್ಞಾನಾರ್ಥವಾಗಿಧ್ಯಾನಿಸಿ । ಕೊಳ್ಳಲು ಯೋಗ್ಯವಾಗಿಹುದೆಂದು ಮನನಂಗೈದು॥

— ಗಾಯತ್ರೀನಿಜಸ್ವರೂಪ. —

ಬಳಿಕ ಗಾಯತ್ರೀವಿದ್ಯೆಯಂ। ತಾತ್ವಿಕವಾಗಿತಿಳಿದು । ಪರಶಿವಶುದ್ಧಬ್ರಹ್ಮವಿದ್ಯಾಸಂದ್ಯೈಕರಸಮಪ್ಪುದರಿಂ ಪಂಚಬ್ರಹ್ಮಮಂತ್ರಪ್ರತಿಪಾದ್ಯ ಪಂಚಮುಖಗಳಿಂ। ಪಂಚಕೋಶೋಪಲಕ್ಷಿತಜೀವಸಾಕ್ಷಿ ಶಿವಸ್ವರೂಪವಾದ ಪಂಚೈಕ್ಯಶಿರದಿ ಕೂಟದಿಂ ಪಂಚೇಂದ್ರಿಯಪ್ರವೃತ್ತಿ ಭೇದರೂಪವಾದ ಪಂಚವಕ್ತ್ರಗಳಂ। ದಶದಿಗ್ದೇಶೇಂದ್ರಿಯಪಶ್ರವಿಷಯರೂಪ ದಶಭುಜಂಗಳಿಂ।ಪಂಚಮಹಾಭೂತತತ್ರಿಪೃಕ್ತ್ಯವಾಗಿಯುಂ । ಚಿತ್ಸಾಕ್ಷಿ। ಚಿತ್ತು । ಚಿದಾಭಾಸ ಪ್ರಕೃತಿ ವಿಕೃತಿಗಳೆಂಬ ಐದುಭೇದಗಳಂ ಪದಿನೈದಾಗಿ ಪೊಳೆವ ಗುಣತ್ರಯವಾಗಿಯುಂ। ಸೂರ್ಯಾಗ್ನಿ ಚಂದ್ರಾತ್ಮಕವಪ್ಪ ಪಂಚದಶನೇತ್ರಂಗಳಂ। ಕಾಮಾದಿಷಟ್ಕ । ಸೃಷ್ಟಿ ಸ್ಥಿತಿಲಯಪ್ರಜ್ಞೆಗಳೆಂಬ ವರದಾಭಯಾಂಕುಶ ಕಪಾಲ ಗದಾಶಂಖಚಕ್ರಾರವಿಂದಯುಗಳವೆಂಬ ದಿವ್ಯಾಯುಧಗಳಂಪೊಳೆವ ಮುಕ್ತಾವಿದ್ರುಮಹೇಮನೀಲಧವಳ ಕಾಂತಿಕಾಂತವಾದ। ಪ್ರಜ್ಞಾನಚಂದ್ರಕಲಾಲಂಕೃತಶಾಂತಕಿರೀಟಮಂಡಿತವಾಗಿ ಸರ್ವಸಮುಪಾಸ್ಯಮಪ್ಪ।ಜಗತ್ಕಾರಣತ್ವಾದಿಲಕ್ಷಣದಿಂ ಸವಿತೃಶಬ್ದ ವಾಚ್ಯಶುದ್ಧಸತ್ವಪ್ರಧಾನತುರೀಯಪಂಶಿವಸ್ವರೂಪತಯಿಂ ವೇದಮೂಲಪ್ರಣವಾತ್ಮಕವಾಗಿ। ತತ್ವಸಾಜ್ಞಿಕ ಚತುರ್ವಿಂಶತ್ಯಕ್ಷರ ಮಯವೆಂದು । ಕಾಲೋಪಾಧಿಯಿಲ್ಲದೆ । ಯ

ಜ್ಞೋಪವೀತಧಾರಿಗಳೆಲ್ಲರುಂ ಕರ್ಮಾಂಗವಾಗಿಯುಂ। ಮುಮುಕ್ಷುಗಳೆಲ್ಲರು ಜ್ಞಾನಾಂಗವಾಗಿಯುಂಗಾಯತ್ರಿಯಂಜಪಿಸಿ। ಬಳಿಕ ಪಂಚಾಕ್ಷರಾದಿಗಳಂ ಜಪಿಸಬೇಕೆಂತಲುಂ।ಗಾಯತ್ರ್ಯುಪಾಸನೆಯಿಲ್ಲದಿರಲ್ಕೆ। ಮಾಡಿದಸತ್ಕರ್ಮವೆಲ್ಲಮುಂ ಷಟ್ಕುಕ್ಷಿಯುಹತನದಿಂಗಹಿಸುವದೆಂತಲುಂ। ಅಂಥಾ ಗಾಯತ್ರಿಯುಂಜಪಿಸಲು ವಿಧಿವದುಪವೀತನಲ್ಲದನಿರ್ವೀಜನು ನಿರರ್ಥಕ. ೮ ಯಾಪೊತ। ಮಂತ್ರಯೋಗದಿಂ ಮುಮುಕ್ಷುವಾಗಲ್ಕೆ। ಪಂಚಾಕ್ಷರಸಂಸ್ಕೃತನಪ್ಪದರಿಂತಳಲಪ್ಪುದೆಂತಲುಂನಿವೇಕಿಸಿ। ಗಾಯತ್ರಿಯಂಜಪಿಸಿದ ಬಳಿಕ। ಸೂರ್ಯೋಪಸ್ಥಾನಬ್ರಹ್ಮಯಜ್ಞತರ್ಪಣಾದಿಗಳಂಮಾಡಿ ಶೈವ ಸಿದ್ಧಾಂತಸಮ್ಮತಮಪ್ಪಶಿವಪೂಜನಂಗೈದು। ಪಂಚಬ್ರಹ್ಮಯಜ್ಞಗಳಂ ಮಾಳ್ಪದೆಂತೆನೆ॥

— ಪಂಚಬ್ರಹ್ಮಯಜ್ಞಾದಿಗಳು. —

ಬಳಿಕಃ ದೇವಯಜ್ಞ-ಪಿತೃಯಜ್ಞ- ಮನುಷ್ಯಯಜ್ಞ-ಭೂತಯಜ್ಞ-ಬ್ರಹ್ಮಯಜ್ಞಾದಿಗಳಂಮಾಳ್ಪತನಾಗಿ। ಸಪ್ತಪಾಕಯಜ್ಞಸಪ್ತಹವಿರ್ಯಜ್ಞಾನಾನಂತರದಲ್ಲಿ ಆಧ್ಯಾನದಿಂಶ್ರೌತಾಗ್ನಿಯಂ ಬಡದು। ಪ್ರಕೃತಿವಿಕೃತಿಯಾಗಗಳ ಲೋಪವಿಲ್ಲದೆ। ಅಗ್ನಿಷ್ಟೋಮು। ಅಪ್ತೋರ್ಯಾಮ।ಅತಿರಾತ್ರ। ಉಕ್ಥ್ಯ। ಷೋಡಶಿ। ವಾಜಪೇಯು ಪೌಂಡರೀಕಾದಿಮಹಾಕ್ರತುಗಳಂ। ನಿತ್ಯೇಷ್ಟಿ। ಕಾಮ್ಯೇಷ್ಟಿಮೊದಲಾದವುಗಳಂ। ಪ್ರತಿವರ್ಷಪೂರ್ವಮಾಳ್ಪವರ್ಷಸಸ್ಯಾದಿಗಳಂ। ಪ್ರಾಯಶ್ಚಿತ್ತೇಷ್ಟ್ಯಾದಿಗಳಂ।ಕ್ಷತ್ರಿಯನಾದೊಡೆ। ಅಧಿಕೃತವಾಗಿಮಾಳ್ಪುದಲ್ಲದೆ।ರಾಜಸೂಯ। ಅಶ್ವಮೇಧಾದಿಗಳಂ। ಆಯುಷ್ಯೇಷ್ಟಿ।ಕುಂಡಶೇಷ್ಟಿಪುತ್ರಕಾಮೇಷ್ಟಿ।ನಕ್ಷತ್ರೇಷ್ಟ್ಯಾದಿಗಳಂ। ಯಥಾಲಾಭವಾಗಿಮಾಳ್ಪಲ್ಲಿ॥

— ಯಜ್ಞಪ್ರಕ್ರಿಯಾ —

ಯಥಾವಿಹಿತವಾಗಿ ಮಂತ್ರಮಂತ್ರಾರ್ಥಗಳಂಬಲ್ಲನೈಷ್ಟಿಕರಾದ। ಅಧ್ವರ್ಯು-ಬ್ರಹ್ಮ, ಹೋತೃ-ಪ್ರಸ್ತೋತೃ-ಪ್ರತಿಹರ್ತೃ-ಅಚ್ಛಾವಾಕ-ಮೈತ್ರಾವರುಣ। ಅಗ್ನೀಧ್ರಪ್ರಮುಖ। ಋತ್ವಿಕ್ಸಂಪತ್ತಿಯಿಂದಲೂ। ಉದ್ಗಾತೃವಿಗೆಕೊಡಲುಸ್ರಜ। ಹೋತೃವಿಗೆಕೊಡಲುರುಕ್ಮ।ಪ್ರಸ್ತೋತೃಪ್ರತಿಕರ್ತೃಗಳಿಗೆ ಕೊಡಲುಅಶ್ವ। ಮೈತ್ರಾವರುಣಂಗೆ ಕೊಡಲುವೃಷಭವೆಂಬದುಮೊದಲಾದ। ಷಷ್ಟಿಗರ್ಗಪ್ರೋ ದಕ್ಷಿಣಾಯುಂಬಾದಿದಕ್ಷಿಣಾರ್ಥವಾಗಿಯುಂ। ಸಂಭಾರಸಂಭರಣ। ಬ್ರಾಹ್ಮಣಸಂತರ್ಪಣ।ಸೋಮಪ್ರಕ್ರಿಯು

ಸಾಧಿಗಳಿಗುಂ ಬೇರೆಯಾಗಿ। ಧಾರ್ಮಿಕರಿಂ ಸಂತೋಷವಾಗಿ ಕೊಡಲ್ಪಟ್ಟ ಸದ್ರ
ವ್ಯಸಂಪತ್ತಿಯಿಂದಲೂ। ಕೃಷ್ಣಮೃಗಸಂಚಾರವುಳ್ಳ ಆರ್ಯಾವರ್ತಾದಿ
ದೇಶದೊಳು ಪುಣ್ಯಕ್ಷೇತ್ರತೀರ್ಥಾರಾಮನದೀ ದೇವಸನ್ನಿಧಿಗಳಲ್ಲಿ। ಸುರಕ್ಷಿ
ತವಿಶಾಲರಮಣೀಯಶಾಲಾದಿ ಸ್ಥಳಸಂಪತ್ತಿಯಿಂ। ಜಾತಪುತ್ರಕೃಷ್ಣಕೇಶಿ
ಯೆಂಬುದು ಮೊದಲಾದ ಶಾರೀರಕಸಂಪತ್ತಿಯಿಂ। ವೇದ। ತದಂಗಗಳು। ಮೀ
ಮಾಂಸೆ। ವೇದಭಾಷ್ಯ ಕಲ್ಪಸೂತ್ರದ ಆಧಾನಪಂಚಕಸೋಮಪಂಚಕಶಾ
ಖಶ್ರೌತವಿದ್ಯಾಪ್ರಕ್ರಿಯೆಗಳೆಂಬಲ್ಲ ವಿದ್ಯಾಸಂಪತ್ತಿಯಿಂ-ಕೃಚ್ಛ್ರಚಾಂದ್ರಾ
ಯಣ ಸಾಂತಾಪನೋಪವಾಸಾದಿಕ್ಷಮೆಯುಳ್ಳ ಧಾರ್ಢ್ಯಾರೋಗ್ಯಸಂಪತ್ತಿ
ಯಿಂ ಶ್ರದ್ಧಾಭಕ್ತಿಜ್ಞಾನಾದಿಮಾನಸಸಂಪತ್ತಿಯಿಂ। ಅನುಕೂಲ ಪತ್ನಿಪು
ತ್ರಾದಿಬಾಂಧವಸಂಪತ್ತಿಯಿಂ। ಯಜ್ಞವು ದಸ್ಯೂಪಹತವಾಗದಂತೆ ಸಂರ
ಕ್ಷಕರಾದ ರಾಜಾದಿಪಾಲಕಸಂಪತ್ತಿಯಿಂ। ಸರ್ವಾಂಶಗಳಿಂದಲೂ ಭಂಗವಿ
ಲ್ಲದಂತೆ ಯಜ್ಞಾನಂಮಾಡಿಸಿ। ವಿಷ್ಣುರೂಪದಿಂ ಯಜ್ಞಮಯನಾಗಿ। ಯ
ಜ್ಞಸಾಧನರೂಪದಿಂ ತಾನೇ ಮಾಡಿ। ಹವಿರಾದಿರೂಪದಿಂ ತಾನೇ ಆಗಿ। ಅಗ್ನಿ
ಮೂರ್ತಿರೂಪದಿಂ ತಾನೇ ಪರಿಗ್ರಹಿಸಿ। ಪಶುಸಂತೃಪ್ತನಾಗಿ। ಯಜಮಾ
ನಂಗೆ ಸದ್ಗತಿಯನೀವ ಪಶುಪತಿಯೆನಿಪ ಪರಮೇಶ್ವರನ ಪ್ರಸಾದವಂ ಪಡೆದ್ವಿಭ
ವಮಾನಮುಖ್ಯಸಂಪತ್ತಿಯಿಂದೊಡಗೂಡಿ। ಕೂಶ್ಮಾಂಡಗಣಹೋಮ। ವಿರ
ಜಾದೀಕ್ಷಾದಿಗಳಿಂ ಪರಿಶುದ್ಧನಾದ ಗೃಹಸ್ಥನು। ಶಿವಪೂಜಾ ಪ್ರಭಾವದಿಂ
ಸುಬ್ರಾಹ್ಮಣನಾಗಲ್ಕೆ। ಪರ್ವದಿಸೂಕ್ತಕಾಲಗಳಲ್ಲಿ। ಅರಣಿಯಂ ಪಡೆದು।
ಆಧಾನಗೊಳಿಸಿ। ಬಳಿಕ ಶಾಲಾಪ್ರವೇಶಮಂ ಮಾಡಿ- ಕುಶಾದಿರೂಪಬ್ರಹ್ಮ
ದರ್ಭೆ। ತುರಗವಾಲಾದಿ ರೂಪಮಾರ್ಜನದರ್ಭೆ। ಮೃದುಲಲಿತಯೋಗ್ಯಮಾ
ಗ್ರಾಸನಕಾಶಾದಿ ಪವಿತ್ರನಿಮಿತ್ತದರ್ಭೆ। ತೃಣದೂರ್ವಾದಿತೃಣದರ್ಭೆಗಳೆಂಬ ಚ
ತುರ್ವಿಧಬರ್ಹಿರಾದಿ ಸಾಮಗ್ರಿಗಳಿಂ। ಪಾಲಾಶ-ಅಶ್ವತ್ಥ-ಶಮೀ-ಔದುಂಬ
ರಾದಿ ಸಮಿತ್ಪಾತ್ರಪರ್ಣಾದಿಪದಾರ್ಥಗಳಿಂ। ನೀವಾರ-ಶ್ಯಾಮಾಕ-ಯವ-
ಗೋಧೂಮ-ವ್ರೀಹಿ-ತಂಡುಲ-ಗುಡ-ಕ್ಷೀರಾದಿಚರು-ಪುರೋಡಾಶಾದಿಗಳಿಂ
ದಲೂಂ। ಸರ್ವಪಾದೀಕ್ಷಾದ್ರವ್ಯಗಳಿಂ। ಕಲಶಾದ್ಯುಪಕರಣಗಳಿಂ। ವಿಶಸನ್ಯಾ
ಧಿಯುಜ್ಞಾಯುಧಗಳಿಂದಲೂಂ। ಚಮಸ-ದರ್ವೀ-ಆಜ್ಯಸ್ಥಾಲೀ-ಪ್ರೋಕ್ಷ
ಣೀಪಾತ್ರ-ಪೂರ್ಣಪಾತ್ರ-ಪ್ರಮುಖಪಾತ್ರವಿಶೇಷಂಗಳಿಂ। ಸಂಜ್ಞಪನೀ-
ಸ್ಫ್ಯ-ಮೊದಲಾದ ಸಾಧನಗಳಿಂದಲೂ। ಕೃಷ್ಣಾಜಿನ-ಹರಿಣಶೃಂಗ-ವಲ್ಕಲ
[illegible]-ಚಷಾಲ-[illegible]-ಗವ್ಯ-

ಪಶ್ವಾದ್ಯನೇಕಸಂಭಾರಗಳಿಂದಲೂ । ಸಂಭೃತನಾಗಿ। ಸ್ಥಂಡಿಲ-ಇಷ್ಟಕೋಪಧಾನ-ಚಯನ-ಕಪಾಲಸಾಧನ-ಅಗ್ನಿಮಥನ-ಯಾಜ್ಯೆಕ)ಪುರೋನುವಾಕ್ಯ-ಸ್ತುತಿ-ಶಸ್ತ್ರವಿಹ-ದಾನ ಉದ್ದೇಶ್ಯತ್ಯಾಗಾದಿಗಳಿಂ(ಕ)ಪುಭಂಗದಲ್ಲಿ। ಪವನ। ಪರಿಷತ್ತುಮೊದಲಾದ ಪ್ರಾಯಶ್ಚಿತ್ತಗಳಂಕೊಂಡ।ಭೇದಗಳಿಂ ಮುಖ್ಯಪ್ರತಿಪಾದ್ಯನಾದ ಶಿವಪ್ರೀತಿಯಾಗಲ್ಕೆ। ರುದ್ರಮೂರ್ತಿಯಾದ ಅಗ್ನಿಗೆ। ಚತುರಶ್ರತ್ರಿಕೋಣಅರ್ಧಚಂದ್ರ ವೃತ್ತ ಧನುರಾಕಾರ ಷಡಶ್ರ, ಪದ್ಮಾಕಾರ ಅಷ್ಟಕೋಣ ಗರುಡಾಕಾರಶ್ಯೇನಾಕಾರಾದಿಕುಂಡಗಳಂ।ತತ್ತದುಕ್ತಕ್ರಮದಿಂ ತತ್ತದಂಗವಾಗಿರಚಿಸಿ ಉತ್ತಮಮಧ್ಯಮಾಧಮಂಗಳಾದ ಕುಂಡಸ್ಥಳ ಸ್ಥಂಡಿಲಸ್ಥಳ ಶುಭಸ್ಥಳಗಳಲ್ಲಿ ಕಾಳ್ಯಗ್ನಿ ಅನ್ವಾರಬ್ಧನಾಗಿಪತ್ನಿಯೊಡನೆ ಅಂತರ್ವೇದಿಪತ್ನೀಶಾಲೆಮುಂತಾದಪ್ರದೇಶಗಳಲ್ಲಿ ಶಾಮಿತ್ರಪಶು ಸಂಜ್ಞಪನಾದಿಗಳಂ ತಪ್ಪದೆ ಮಾಡಿಸಿ ಪಶುಹವನಸೂತ್ರಾದಿಗಳಂ ಅಂಗಹೋಮ ಆಜ್ಯಹೋಮಾದಿಗಳಂ ಆಹವನೀಯ ಗಾರ್ಹಪತ್ಯದಕ್ಷಿಣಾಗ್ನಿಗಳೆಂಬ ಕಾರಣರುದ್ರ ಕಾರ್ಯರುದ್ರ ಲೀಲಾರುದ್ರರೆಂಬತ್ರಿಗುಣಮೂರ್ತಿಗಳಂ ತೃಪ್ತಿಗೊಳಿಸಿಬಳಿಕ ಕಾಳಿಕರಾಳಿವಿಶುದ್ಧ ಧೂಮ್ರವರ್ಣಾಸ್ಫುಲಿಂಗನೀವಿಶ್ವರುಚೀಲೇಲಾಯಮಾನಾಯೆಂಬ ಅಗ್ನಿಹೋತ್ರನಸಪ್ತಜ್ವಾಲೆಗಳು ಸ್ಫುರಸುತಿತಲ್ಕೆ ಯಥಾಕಾಲವಾಗಿ ಹವ್ಯಕವ್ಯಾದಿಗಳಂಸಮರ್ಪಿಸಿ

— ರುದ್ರಾಗ್ನಿಮೂರ್ತಿ. —

ಬಳಿಕ ರುದ್ರೋವಾಏಷೋಗ್ನಿ। ತ್ವಮಗ್ನೇರುದ್ರಃ ಅಪ್ರೋರಾಜಾನಂ। ಯೆಂಬವುಮುಂತಾದ ಮುಖ್ಯಶ್ರುತಿನಿರುಕ್ತ ಬ್ರಾಹ್ಮಣವಾಕ್ಯಗಳಿಂ ಗೋಚರವಾದಂತೆ। ಹೊಗೆ, ಬೆಳಕು, ಬಿಸಿ, ಉರಿ, ಕಿಡಿ. ಅಂಗಾರ, ಶ್ರೀಲಕ್ಷಣ, ಕಪಿಲತಾಮ್ರಸ್ವರ್ಣವರ್ಣ। ಶಬ್ದಗಂಧವ್ಯಂಜನ। ಹವ್ಯವಾಹ। ಕವ್ಯವಾಹವೆಂಬ ದಶಕಲಾಯುಕ್ತನಾದ ಅಗ್ನಿಮಂಡಲಮಧ್ಯದಲ್ಲಿ ಯೆರಡುಶಿರಸ್ಸುಗಳು। ನಾಲ್ಕುಶೃಂಗಗಳು ಮೂರುನೇತ್ರ। ಕಪರ್ದ, ಚಂದ್ರಕಲೆ, ಸಪ್ತಹಸ್ತ, ಸಪ್ತಜಿಹ್ವೆ। ತ್ರಿಪಾದಯಜ್ಞಸೂತ್ರ। ತ್ರಿಮೇಖಲೆ, ಬಸ್ತವಾಹನ, ವೃಷಭಾಕಾರ, ಜ್ಯೋತಿರ್ಮಯ, ರುದ್ರಶಕ್ತಿಗಳುಳ್ಳ।ವಾಮಪಾರ್ಶ್ವದೊಳುಸ್ವಧಾದೇವಿ। ದಕ್ಷಿಣಪಾರ್ಶ್ವದೊಳು ಸ್ವಾಹಾದೇವಿಯೆಂಪರಿಗ್ರಹಿಸಿ।ದಕ್ಷಿಣಹಸ್ತಚತುಷ್ಟಯದಿಶಕ್ತಿ। ಅನ್ನಶೃಕ್ಸ್ರುವಗಳಂಧರಿಸಿ। ವಾಮಕರತ್ರಯದಿಂ। ತೋಮರ, ವ್ಯಜನ, ಘೃತಪಾತ್ರಗಳಂವಹಿಸಿ।ರಕ್ತವರ್ಣರತ್ನಾಂಬರ ರಕ್ತಗಂಧಾಕ್ಷತಾದಿಗಳಿಂ ಅಲಂಕೃತನಾಗಿ। ಸ್ಥಂಡಿಲ, ಪರಿಸ್ತ

ರಣ, ಪರಿವೇಷಣ, ಅಲಂಕರಣ, ಅಭಿಮುಖೀಕರಣ, ಮುಖಾರಾತ್ರ್ಯಾದಿಗಳಿಂ ಸಮರ್ಚಿತನಾಗಿ। ದೇವಮುಖನೆನಿಸಿ। ದ್ವಿಜಕುಲದೈವಮಾಗಿ। ಸೂರ್ಯಾಗ್ನಿಯಿಂದಭಿನ್ನವಾದ ವೇದಜ್ಯೋತಿಯಿಂ ಪಡೆದು। ವಿಷ್ಣ್ವಾದಿಸಕಲದೇವತಾಶಕ್ತಿಯುಳ್ಳಾತನಾಗಿ। ಸ್ವಭಕ್ತರಾದ ದೇವರ್ಕಳಂ ಪೊರೆಯಲ್ಕೆ ಅವಮ ಕೃತ್ಯದಿಂ ಹವ್ಯವಾಹನಾಗಿಮೆರೆವ ಶ್ರೀರುದ್ರಾಗ್ನಿಮೂರ್ತಿಯಂ। ಸಭಕ್ತಿಕಮಾಗಿಧ್ಯಾನಿಸಿ। ಹರಿಣವರ್ಣ। ಗಗನವರ್ಣ। ರಕ್ತವರ್ಣ। ಕೃಷ್ಣವರ್ಣ। ಸುಪ್ರಭಾವರ್ಣ। ಬಹುವರ್ಣ। ಅತಿರಿಕ್ತಮಾದಜ್ವಾಲೆಗಳೊಳು। ಸಮಿತ್ತು ಸಾಸುವೆ। ಅರಳು। ತುಪ್ಪ। ಹಾಲು। ಅನ್ನ। ಯೆಳ್ಳು। ಯೆಂಬಸಮ್ಮಾಹುತಿಗಳಂ ಕೊಟ್ಟು। ಯೂಪಸ್ಥಾಪನ। ಅಹೋರಾತ್ರಪ್ರಯೋಗ। ಸವನ। ಅವಭೃಥಾದಿಗಳಂ ತತ್ತತ್ಕಾಲಕರ್ಮತಂತ್ರವರಿತು ವಿದ್ಯುಕ್ತಮಾಗಿನಡಿಸಿ।ತತ್ಫಲವಂ । ಸ್ವರ್ಗಾದಿನಶ್ವರಫಲಾಪೇಕ್ಷೆಯಿಲ್ಲದೆ ಪರಮೇಶ್ವರಪ್ರೀತಿಗೊಳಿಸಿ । ಸೋಮಪಾನಾದಿಗಳಂ ಪೂತನಾಗಿರ್ಪ ಸೋಮಯಾಜಿಯಾಗಲಿ । ಪೌಂಡರೀಕಾದಿಬ್ರಹ್ಮರಥಾರೂಢದಾನ ಕರ್ಮಶೂರನಾಗಲಿ ವಾಜಪೇಯಾದಿಗಳಂ ಪೂತಮೇಧ್ಯದಕ್ಷಿಣ್ಯನೆಂಬ ವಿಪ್ರಪ್ರವರನಾಗಲಿ।ಸೋಮವಿಲ್ಲದಯಿಷ್ಟಿರುಂ ಹವಿರ್ಯಾಜಿಯಾಗಲಿ। ಪಯಸ್ಸಾಗ್ನಿಹೋತ್ರ। ಯವಾಗ್ವಗ್ನಿಹೋತ್ರಾದಿಗಳಂನಡಿಸುತ್ತ । ಷಟ್ಕರ್ಮನಿಷ್ಠನಾಗಿ । ಸಕಲಧರ್ಮವ್ರತಾದಿಗಳಂ ಪರಮೇಶ್ವರ ಮುಖೋಲ್ಲಾಸವಂ ಮಾಡುತ್ತ ಗುರುವೇದಾನುಶಾಸನಧರ್ಮಶಾಸ್ತ್ರನೀತಿಪಥಗಳಂ ಮೀರದೆ ಮಂಕಾಂಕುರವಂ ಬೆಳಸಿ ಭುಕ್ತಿಭೋಗ ಮಪ್ಪುದರಿಂ। ವಿಚಾರಪುಖನಾಗಿ। ಬಳಿಕ ವಿರಕ್ತನಾಗಬೇಕದೆಂತೆನೆ॥

— ಗೃಹಿಧರ್ಮಾನುಶಾಸನ. —

ಗೃಹಿಯು। ವೇದವೇದಾಂಗ ಸ್ಮೃತ್ಯಾದ್ಯಧ್ಯಯನರೂಪಬ್ರಹ್ಮಯಜ್ಞವಂ। ಅಗ್ನಿಹೋತ್ರಶಿವಸಮರ್ಚನಾದಿರೂಪದೇವಯಜ್ಞವಂ।ಅತಿಥ್ಯಭ್ಯಾಗತಿ ಸಮಾರಾಧನರೂಪಮನುಷ್ಯಯಜ್ಞವುಂ। ಪಿಂಡಪಿತೃಯಜ್ಞ ಪ್ರೀತರ್ಪಣಾದಿರೂಪಪಿತೃಯಜ್ಞವುಂ। ಶ್ವಾನಬಲ್ಯಾದಿರೂಪ ಭೂತಯಜ್ಞ ಮೆಂಬ ಪಂಚಯಜ್ಞಗಳಂ ಶಕ್ತಿಲೋಪವಿಲ್ಲದೆನಡಿಸಬೇಕು। ಸಂಸ್ಕೃತಳಾದಧರ್ಮಪತ್ನಿಯು। ರುತುಕಾಲವಂ ಮೀರದೆ ಸಂತಾನಾರ್ಥಮಾಗಿ। ವಿಷ್ಣುರ್ಯೋನಿಯೆಂಬಗರ್ಭಾದಾನಸೂಕ್ತವುಂ ಪಠಿಸುತ್ತ । ಶಿವಶಕ್ತ್ಯೈಕ್ಯಾನುಸಂಧಾನದಿಂ ರಮಿಸಿ। ಸುಪುತ್ರನಂ ಪಡದು।ಪಿತೃರುಣವಂ ಕಳೆಯಬೇಕು।ಗುರುಯಾತ್ರೆ।ದೇವಯಾತ್ರೆ। ತೀರ್ಥಯಾತ್ರೆ। ಯಜ್ಞಧರ್ಮಾಚರಣ। ಅಪತ್ಯ

ಟುಂಬಗಳೆಂಬವಕ್ಕೆ ಧರ್ಮದಿಂದ್ರವ್ಯಾರ್ಜನೆಮಾಡಲಹುದು। ಆತ್ಮಾರ್ಥವೆನ್ನದೆ ದೇವತಾರ್ಥವಾಯಜ್ಞಾರ್ಥ ಭಿಕ್ಷಾರ್ಥವಾಗಿಯು ಪಾಕಪ್ರಯತ್ನಗೈವುದು ತಾನೊಂದುವೇಳೆಯಾದರುಂ ಮೇಣೆರಡುವೇಳೆಯಾದರುಂ [illegible]ಪಾತ್ರ ಮೂವತ್ತೆರಡುತುತ್ತುಗಳಧಿಕವಿಲ್ಲದೆಶುದ್ಧಾನ್ನವಂಭೋಜನಂಗೈಯ್ಯುವದು। ಅತ್ಯಾಶನ। ಅತಿಪಾನ। ಉಗ್ರಪ್ರತಿಗ್ರಹ। ಉಚ್ಛಿಷ್ಟ। ಪರ್ಯುಷಿತ। ನಿಷಿದ್ಧದ್ರವ್ಯಗಳಂವರ್ಜಿಸುವದು। ಶಿವಸಂಸ್ಕೃತವಿಲ್ಲದೆಯಾವದೊಂದನ್ನುಂ ಪರಿಗ್ರಹಿಸಲಾಗದು। ಪೂಜನ। ಹವನ। ಸ್ನಾನಭೋಜನಗಳಲ್ಲಿ ಮೌನವಂಧರಿಸಲಹುದು। ಅಹಿಂಸೆ। ಅಸ್ತೇಯ। ಏಕಾಂತಸ್ವಸ್ತ್ರೀಗಮನ। ಪರದಾರಾವರ್ಜನ। ಅಸ್ಪೃಹತ್ವ। ಶೌಚ। ಇಂದ್ರಿಯನಿಗ್ರಹ। ಭೂತದಯೆ। ದೇವತಾಭಕ್ತಿ। ಗೋವಿಪ್ರಸೇವೆ। ಸತ್ಯವಚನ। ಸದಾಚಾರ। ಪರೋಪಕಾರ। ಪುಣ್ಯಸಂಪಾದನ। ಸಾತ್ವಿಕವೃತ್ತಿ। ಭರ್ತವ್ಯಭರಣ। ಭೋಜನಾದಿನಿಯಮ। ಇಂತಿವು ಮೊದಲಾದಸುಗುಣಗಳಂಪಡೆದಿರಲಹುದು। ಬೇಡಿದವರಿಗಿದ್ದಂನೀಡುವದು। ಪರುಷವಂನುಡಿಯದಿರುವದು। ಪರಸಂತಾಪವಂಮಾಡದಿರ್ಪುದು। ಶಿವಮಾಹೇಶ್ವರಪ್ರಸಾದವಂಸಂಪಾದಿಸುವದು। ಶಿವಮಹೇಶ್ವರಾಪಚಾರಕ್ಕೊಳಗಾಗದಿರ್ಪುದು। ಲುಪ್ತಕ್ರಿಯೆಗಳಿಗೆ ಪ್ರಾಪ್ತಪ್ರಾಯಶ್ಚಿತ್ತಗಳಂಮಾಳ್ಪುದು। ವ್ರತಭಂಗವಂಮಾಡಲಾಗದೆಂಬಿವು ಮೊದಲಾದ ಧರ್ಮಪರನಾಗಿ। ವಾರ್ತಾವೃತ್ತಿ। ಸ್ವಾಧೀನವೃತ್ತಿ। ಯಾಯಾವಾರವೃತ್ತಿ। ಮೌನಸನ್ಯಾಸಿಯೆಂಬ ನಾಲ್ಕುವಿಧಗಳಂ ಋತಾಮೃತಾದಿಸದ್ವೃತ್ತಿಗಳಿಂ ಶಿಲ। ಉಂಛವೃತ್ತ್ಯಾದಿಗಳಂಜೀವಿಸುತ್ತ। ಗೃಹಿಣಿಯೊಡನೆ। ಗೃಹಮೇಧಿಯಾಗಿ ಆಪತ್ತಿನಲ್ಲಿಯೂಧರ್ಮದಿಂಸಂಚರಿಸುತಿರ್ಪಾತನೇಗೃಹಸ್ಥನೆಂದುತಿಳಿಯಲ್ವೇಳ್ಕುಂ

—* ಪಂಚಕರ್ಮವಿಭಾಗ. *—

ಮತ್ತಮಾ ಗೃಹಸ್ಥನಿಂದನುಷ್ಠಿಸಲ್ತಕ್ಕಕರ್ಮವಾದೊಡೆ। ನಿತ್ಯ। ನೈಮಿತ್ತಿಕ। ಪ್ರಾಯಶ್ಚಿತ್ತ। ಕಾಮ್ಯ। ನಿರ್ಮಲ। ಎಂದು ಪಂಚವಿಧವಾಗಿಹವದರಲ್ಲಿ। ಸಂಧ್ಯಾವಂದನಾದಿಕವೇನಿತ್ಯಕರ್ಮವೆನಿಸುವದು। ಶುಭಕಾಲದೆ ಶಾಡಿಕದಲ್ಲಿಮಾಳ್ಪವಿಧಿವಿಶೇಷವೇನೈಮಿತ್ತಿಕಕರ್ಮವೆನಿಸುವದು। ಬ್ರಹ್ಮಹತ್ಯಾದಿದೋಷಪರಿಹಾರಕ್ರಿಯೆಯೇಪ್ರಾಯಶ್ಚಿತ್ತವೆನಿಸುವದು। ಜ್ಯೋತಿಷ್ಟೋಮಯಾಗಾದಿಕವೇ ಕಾಮ್ಯಕರ್ಮವೆನಿಸುವದು। ಈಶ್ವರೋಪಾಸನೆಯೇ ನಿರ್ಮಲಕರ್ಮವೆಂದುತಿಳಿಯಲಕ್ಕುಂ॥

ಲಾನುಗುಣವಾಗಿವರ್ತಿಸಿದರುಂ ಜನಸ್ಮರಣಂಬಿಡಲಾಗದು । ನಿಷ್ಠುರವಾಡಬಾರದು। ದುರ್ಜನರಂತರೂರದು ಸಜ್ಜನರಸಂಗದಲಿರಬೇಕು।ಕಾಲವಂವ್ಯರ್ಥವಾಗಿಕಳೆಯಬಾರದು । ಕ್ಷಣವಾದರೂ ಬಿಡದೆ ಐಹಿಕಾಮುಷ್ಮಿಕಗಳಂಸಾಧಿಸುತಿರಬೇಕು । ಪುರಾತನಪದ್ಧತಿಯಂಪರಿಪಾಲಿಸಬೇಕು । ಕಷ್ಟಕಾಲದೊಳಗ ಧೈರ್ಯ [illegible] ಬಾರದು [illegible] ಸುಖವಧಿಕವಾಗಿರಬೇಕು । ಅತಿಥಿಗಳಂ [illegible] ರಬಾರದು । ಶತ್ರುಗಳ ಅನ್ನವಂಭಕ್ಷಿಸಬಾರದು । ಕಂಡಕಡೆ ಅಡಿಇಡಬೇಕು । ವಸ್ತ್ರಶೋಧಿತವಾದ ನೀರಂಕುಡಿಯಲಕ್ಕುಂ। ಸತ್ಯಪೂತವಾದುದಂನುಡಿಯಬೇಕು । ಆತ್ಮಪೂತವಾದುದಂಮಾಡಬೇ[illegible] । [illegible] ಸಬಾರದು। ಬಾಲ್ಯದೊಳು ವಿದ್ಯೆಯಂಕಲಿಯಬೇಕು । ಯೌವನದೊಳುಧನಾರ್ಜನವಂಮಾಡಿ ಭೋಗಿಸಿ ಧರ್ಮಕೀರ್ತಿಗಳಂ ಪಡೆಯಬೇಕು ।ವಾರ್ಧಿಕದಲ್ಲಿವಿರಕ್ತತ್ವದಿಂ ಶಿವಧ್ಯಾ[illegible]ನ । ಜ್ಞಾನವಂಪಡೆಯಬೇಕು। ಶಿವಯೋಗದಿಂದಂತ್ಯಕಾಲದೊಳುತನುವಂತ್ಯಜಿಸಬೇಕು । ಜ್ಞಾನಿ ಶಿವವಿಷಯದೊಳು ತೃಪ್ತಿಪಡಬಾರದು । ಪೈಶಾಚ್ಯಾದಿವೃತ್ತಿಗಳ ಅಂತಃಕರಣವಂ ಶೋಧಿಸಬೇಕು ಮಹಾಜನಪಥನಂ [illegible] ರಾಗದು । ಅಪವಾದಕ್ಕಂಜಬೇಕು । ವ್ಯರ್ಥವಾಗಿ ಸಾಹಸವಂ ಮಾಡಬಾರದು । ಮಾಂದ್ಯವಂಬಿಟ್ಟುಜಾಗ್ರತೆಯಿಂಪ್ರಯತ್ನಪರರಾಗಿ ಉತ್ಸಾಹವಂಧೈರ್ಯದಿಂದ ಭಿವೃದ್ಧಿಗೆತಂದು ನೀತ್ರಿಯಿಂಕಾರ್ಯಗೆಲ್ಲಲಹುದು । ಪರಲೋಕಚಿಂತೆ ಯಿರಬೇಕು । ಸರ್ವವಿಧದಿಂದಲೂ ಆತ್ಮದ್ರೋಹ ಮಾಡಲಾಗದು । ದೇಶವಂ ಅನುಸರ್ತಿಸಬೇಕು। ಸಮಯವಂಪರಿನೋಡಿಕೊಳ್ಳಬೇಕು। ಸತಿಸುತರಂತಿಕ್ರಮಿಸದಾಳಬೇಕು । ಗೋವಿಪ್ರನಾಗರ್ಕಳುಕೊಲ್ಲಲ್ಪಡುತಿರಲುಉಪೇಕ್ಷಿಸಲಾಗದು । ಸಂಪತ್ತು ಬಂದಲ್ಲಿಕುಸುಮರ್ಗಂತೆ ಮೃದುಹೃದಯನಾಗಬೇಕು । ವಿಪತ್ತುಬಂದಲ್ಲಿ ಶಿಲೆಯಂತಕಠಿನಚಿತ್ತನಾಗಿರಬೇಕು । ವೃಕ್ಷಾದಿಕದಂತೆ ಸ್ವಕಾರ್ಯವನುಳಿದಾದರೂಪರೋಪಕಾರವಂಮಾಡಬೇಕು। ಸರ್ವಪೂರ್ಣನಾದೀನವೆಂದಲಸ್ವಭಾವದಿಂಪರಮೇಶ್ವರನ್ಯಸ್ತಭರನಾಗಿ [illegible] ಯದಿಂದಿರಬೇಕು । ಪುರುಷಪ್ರಯತ್ನವಂ ಬಿಡಲಾಗದು ಪರಗುಣವಂಪರಮಾಣುಸದೃಶವಾದರೂಪರ್ವತದಂತೆ ಶ್ಲಾಘಿಸಬೇಕು [illegible] । ಸ್ಮೃತಿಪರನಿಂದೆಗಳಂಮಾಡಬಾರದು. ದೂರವಾದರೂತಾನು ಸುಖವಿರ್ದೆಡೆಗೈದಬೇಕು ಲೋಕವ್ಯವಹಾರಂಗಳಂ ಸತ್ಯಧರ್ಮಗಳಿಗೆ ವಿರುದ್ಧವಾಗದೇನಡಿಸಬೇಕು ದುಃಖಾತಿ

ಶಯುವಾಗೆ ವಿಚಾರಪರನಾಗಬೇಕು ಪೂರ್ವೀಕರಇತಿಹಾಸಗಳಂ ಪಠನಂ ಗೈಯುಬೇಕು ಸ್ಥಳನೋಡಿಮಲಗಬೇಕು ಶಾರೀರಕ ಕರ್ಮವಂ ವ್ಯತಿರೇಕಗೊಳಿಸಲಾಗದುಸ್ವಲ್ಪರೋಗವಂಕ್ಷಿಪ್ರದಲಿಪರಿಹರಿಸಿಕೊಳ್ಳಬೇಕು ವೈದ್ಯನೊಳು ವಿರೋಧವಮಾಡಬಾರದು ಪಗಲುತ್ತರಮುಖನಾಗಿ ರಾತ್ರಿದಕ್ಷಿಣಮುಖನಾಗಿ ಮಲಮಂತ್ಯಜಿಸುವಲ್ಲಿಯುಂ ಶೌಚಂಗೈವಲ್ಲಿಯುಂ ನುಡಿಯುಲಾಗದು ತಳವರಿಯದಮಡುಹಿನೊಳ್ ಮುಳುಗಬಾರದು ಜಲಾದಿಗಳೊಳು ಮಲಮೂತ್ರಾದಿಗಳಂಮಾಡಬಾರದು ಮಲಿನವಾಗಿರಬಾರದು ಗಾಂಭೀರ್ಯವಂ ಬಿಡಬಾರದು ಮಾನವಂತನಾಗಬೇಕು ಸಾಕ್ಷಿವಾದಕ್ಕೆ ಸಿಕ್ಕಬಾರದು ಮಿತ್ರದ್ರೋಹ ಸ್ವಾಮಿದ್ರೋಹ ಕಾಲದ್ರೋಹಾದಿಗಳಂಮಾಡಬಾರದು ಉಪಕಾರಿಯೊಳು ಕೃತಜ್ಞನಾಗಿರಬೇಕುತಾಯಿತಂದೆಗಳಂ ಸಂತೋಷಗೊಳಿಸಬೇಕು ನಂಬಿದವರಂತೊರೆಯಲಾಗದು ವಪನತೈಲಾಭ್ಯಂಜನಮೈಥುನಾದಿಗಳಂ ಷಣ್ಣವತಿಶ್ರಾದ್ಧ ಕಾಲಗಳಲ್ಲಿಯುಂನಿಷಿದ್ಧದಿನ ವಾರಾದಿಗಳಲ್ಲಿಯುಂ ಮಾಡಬಾರದು ಆದಿತ್ಯಮಂಗಳ ಗುರುಶುಕ್ರಜನ್ಮವಾರಂಗಳಲ್ಲಿ ವಿಶೇಷಗಳಾದ ಕರ್ಮಂಗಳಂ ಮಾಡದೆ ಸೌಮ್ಯಕ್ರಿಯಾಪರನಾಗಬೇಕು ಪ್ರತಿದಿನವೂ ಪ್ರತ್ಯೂಷದೊಳಗೇಳಬೇಕು ಉದಯಾದಿಸಂಧ್ಯಾಕಾಲಗಳೊಳು ಮಲಗಿರಬಾರದು ಪೂರ್ವೋತ್ತರಮುಖನಾಗಿ ಸತ್ಕರ್ಮವನಾಚರಿಸಬೇಕು ಮಂಗಳವಾರದೊಳು ಹೊಸಕಾರ್ಯವಂ ಯತ್ನಿಸಬಾರದು ಬುಧವಾರದೊಳು ಸಾಲವಂತೆಗೆಯಲಾಗದು ಕ್ಷುದ್ರಜಂತುಗಳಂ ಸೋಕಲಾಗದು ಆತ್ಮರಕ್ಷೆಯಂಮರೆಯಬಾರದು ಬುಧಬೃಹಸ್ಪತಿಶನಿವಾರಂಗಳಲ್ಲಿ ನೂತನವಸ್ತ್ರಗಳಂ ಚಂದ್ರಸ್ವರದಿಂದುಟ್ಟುಪೊದೆವುದು ವಿಕ್ಷ್ಮವಾರಗಳಲ್ಲಿಸೂರ್ಯಸ್ವರದಿಂ ಭೋಜನಂಗೈವುದು ಉತ್ತರಾಭಿಮುಖನಾಗಿ ಚಂದಸ್ವರದಿಂ ಭೋಜನಂಗೈಯಲಾಗದು ಅಸಾಕ್ಷಿಕನಾಗಿ ಉಣಲಾಗದು ತಾಮ್ರದಲ್ಲಿಕ್ಷೀರಪಾನಂ ಗೈಯಲಾಗದು ಉಪ್ಪುವೆರಸಿ ಪಾಲಕುಡಿಯಲಾಗದು ಕಂಚಿನಲ್ಲಿ ನಾರಿಕೇಳಪಂಕುಡಿಯಲಾಗದು ವಾಮಕರದಿಂ ನೀರುಕುಡಿಯಬಾರದು ತರ್ಜನಿಯಿಂದಂತಧಾವನಮಾಡಲಾಗದು ಅಡಿಕೆಯನೊಡೆಹ ಯೆಲೆಯಂ ತೊಳೆಯದೆ ಸುಣ್ಣವಂಶೋಧಿಸದೆತಾಂಬೂಲಸ್ವೀಕಾರವಂಮಾಡಲಾಗದು ವಾಮಹಸ್ತದಿಂತಲೆಕೊಡವಲಾಗದು ಮದಕಾರಿವಸ್ತುಗಳಂಕೊಳ್ಳಲಾಗದು ಉತ್ತರಶಿರನಾಗಿ ಮಲಗಬಾರದು ದಿವಾಮೈಥುನದಿವಾನಿದ್ರೆಗಳಂ ಮಾಡಲಾಗದು ದಾಸೀವೇಶ್ಯಯರೊಡಕೂಡಲಾಗದು ಮರಣಾವಸ್ಥೆಯಾದರೂ ದೇ

ಹಿಡಿಂದು ಹೀನನಬಳಿಬೇಡಲಾಗದು ದೇಹಿಯೆಂದವರಿಗೆ ನಾಸ್ತಿಯೆನಲಾಗದು। ಯಾವದಾಗಲಿತನಿಗೆಬರಲುಳ್ಳದೇಬಹುದು। ಬಾರದುದನೇನನಮಾಡಿದರುಬಾರದಾಗಿ। ಸ್ಥಿತಿಗತಿಗೆಚಿಂತಿಸಲಾಗದು। ಭಾಗ್ಯಕ್ಷಯಮಾಗೆದ್ರವ್ಯಂತೀರುವದಾಗಿತ್ಯಾಗಭೋಗಗಳನುಳಿದಿರಲಾಗದು। ಧನಕ್ಷಯಮಂ।ದ್ರವ್ಯಾರ್ಜನೆಯುಮಂ। ಗೃಹಛಿದ್ರವನುಂ। ತನಿಗಾದವಮಾನವನುಂ ಪ್ರಕಟಸಲಾಗದು। ಸೂಪಕಾರನಂ। ವೈದ್ಯನಂ। ಮರ್ಮಜ್ಞನಂ ಕೋಪಿಸಲಾಗದು ಕರೆಯದವರಗೃಹಕೆಹೋಗಲಾಗದು । ಬೆಸಗೊಳ್ಳದೇನನಂ ಹೇಳಲಾಗದು। ಶಿವಾರಾಮಕ್ಷೇತ್ರಂಗಳಲ್ಲಿಮಲಮೂತ್ರವಿಸರ್ಜನನಂ ಮಾಡಲಾಗದು।ಪಂಚಸೂತಕಂಗಳಂಪೊರ್ದಲಾಗದು। ಲೌಕಿಕಾಚಾರಮಂ ಮೀರಲಾಗದು। ಜಾತಿಸಂಕರಮಂಮಾಡಲಾಗದು। ದಾಸೀಭೃತ್ಯರುಗಳನಶನವಸ್ತ್ರದಾನಾದಿಗಳಂನೋಯಿಸಲಾಗದು। ದೀರ್ಘದ್ವೇಷಮಂಮಾಡಲಾಗದು। ಫಲವೃಕ್ಷಮಂಮುರಿಯಲಾಗದು। ಪಾಪಕೃತ್ಯಮಂಮಾಡಬಾರದು। ಧನವನಿತಾದಿಗಳನಿತ್ಯಮಪ್ಪುದರಿಂ ದೃಢಾನುರಾಗಮಂಮಾಡಕೂಡದು। ಡಂಬಾರ್ಥವಾಗಿ ಪೂಜಾದಿಗಳಂಮಾಡಬಾರದೆಂಬಿವುಮೊದಲಾದುದೆಲ್ಲಂಗೃಹಸ್ಥಂಗೆನೀತಿಸಿದ್ಧಮಕ್ಕುಂ

### — ವಾನಪ್ರಸ್ಥಾಶ್ರಮ. —

ಮತ್ತಮಾಗೃಹಸ್ಥಂಗೆ ವಿರಕ್ತಿಪುಟ್ಟೆ ವಾನಪ್ರಸ್ಥನಾದರೂ ಯತ್ಯಾಶ್ರಮನಾದರೂ ಸ್ವೀಕರಿಸುವಲ್ಲಿ। ಸತಿಸಮೇತನಾಗಾದರೂ ಅಲ್ಲದೆವನಿತಾದಿಗೃಹಭಾರಮಂಪುತ್ರಂಗೆವಪ್ಪಿಸಿ । ಮೇಲೆಸರ್ವಸಂಗ ಪರಿತ್ಯಾಗಮಂ ಮಾಡಿವನಕ್ಕೆ ಹೋಗುವಸಮಯದಲ್ಲಿತನ್ನಕಾರ್ಯಸಿದ್ಧ್ಯರ್ಥವಾಗಿ ಉತ್ತರಾಯಣ। ಶುಕ್ಲಪಕ್ಷ । ಶುಭವಾರ-ಶುಭಲಗ್ನ-ಶುಭನಕ್ಷತ್ರ-ಸ್ವಾನುಕೂಲ್ಯಗಳಂ ವಿಚಾರಿಸಿ॥

### — ಪ್ರಯಾಣವಾರಶೂಲಗಳು. —

ಬಳಿಕ ಶನಿಸೋಮವಾರಂಗಳಲ್ಲಿ ಮೂಡಲ್ಪೈದಬಾರದು । ಆದಿತ್ಯಶುಕ್ರವಾರಗಳಲ್ಲಿ ಪಡವಲ್ಪೈದಬಾರದು।ಮಂಗಳಬುಧವಾರಗಳಲ್ಲಿ ಬಡಗಲ್ಪೈದಬಾರದು। ಗುರುವಾರಟೆಂಗಲ್ಪೈದಬಾರದೆಂಬವಾರಶೂಲಗಳಂಕಳದುಳಿದು।ಆತುರದಲ್ಲಿದಾನಭೋಜನಾದಿಗಳಿಂ ಪ್ರತಿಕ್ರಿಯಾದಿಗಳಂ ಸರಿಗೊಳಿಸಿಕೊಂಡು ಸ್ವರಹೋರಾದಿಯಥಾಲಾಭಸಮಯಬಲದಿಂದಭಿಸಂಧಿಶುದ್ಧನಾಗಿಪೊರಟು

### — ಅಪಶಕುನಗಳು. —

ಬಳಿಕ ಹರಡೆ-ಗಾರ್ದಭ-ಗೌಳಿಗಳುವಾಮದಲ್ಲಿನುಡಿಯೆ। ಹರಿಣ-ಭಾರ

ಪ್ವಾಜದ-ಹಂಸಗಳುತಡೆಯೆ-ನರಿ-ನವಿಲು-ಲಕುಳ-ವಾಯಸ-ಕುರರಿಗಳ ಳುತ್ತಿರೆ-ಗರುಡನು ಯೆಡದಿಂಬಲಕೋಡಲು। ವಾಯಸನು ಬಲದಿಂಯೆಡಕೆ ಸುಳಿಯೆ। ಸರ್ಪನಡ್ಡವಾಗೆ। ಮೊಲನಂಕಾಣೆ। ಶಿನೊಂದಲಕೇಳೆ। ಮಜ್ಜಿಗೆ ಚೆಲಿಕೆದರಿದಹೆಂಟು। ತೈಲಾಭಿಷಿಕ್ತ। ಬೋಳ। ಹೊಸಮುಡಿಕೆ। ಕೊಡಲಿ ಮುಂತಾದ ಆಯುಧಗಳು। ಹಗ್ಗಗಳು-ಕಟ್ಟಿಗೆ-ರಿಕ್ತ-ಕುಂಭ-ಕಲಹ-ಬಿಕ್ಕು-ವಂಟಿಗಾರನಾದವಿಪ್ರ-ಅಂಗಹೀನ-ಕುಂಟುನಾಯಿ-ಕ್ರೋಶ-ಆಪಶಬ್ದ ವದ್ದೆಬಟ್ಟೆ-ಹೊಗೆಯುಳ್ಳಬೆಂಕಿ-ರಜಸ್ವಲೆ-ಮುಂತಾದ ದುರ್ದರ್ಶನಗಳಾದವುಗಳಂನೋಡೆ। ಪ್ರತಿಕೂಲವಾತ-ಪ್ರತಿಘಾತ-ಪಾತ-ಧೂಳೀತುಷಾರಾದಿಗಳೊಳಗೆ। ಆತ್ಕಾಲದೊಳು। ದೈವಸಹಾಯವಿಲ್ಲದೆಂದು ಹೊರಡದೆ ಹಿಂದುಳಿದು। ಮರಳಿ ಮನೆಯೊಳು ಸ್ವಸ್ತಿವಾಚನಂಮಾಡಿ। ಸರ್ವಮಂಗಳಾಲಂಕೃತ ಸಾಂಬಶಿವನಂಧ್ಯಾನಿಸಿ। ಸಮಾಹಿತಮನಸ್ಕನಾಗಿ। ಉಷಃಕಾಲ। ಅಭಿಜಿನ್ಮುಹೂರ್ತಾದಿಗಳಲ್ಲಿ ನಿಶ್ಚಯದಾರಢ್ಯದಿಂ ಪೊರಮಟ್ಟ॥

— ಶಿವಶಕುನಗಳು. —

ಬಳಿಕ ಗೋವೃಷಭಗಳು। ಕನ್ಯಕಾಕಲಶಗಳು। ಹರಿದ್ರಾಕುಂಕುಮ। ಗಂಧಪುಷ್ಪತಾಂಬೂಲದರ್ಪಣಛತ್ರಚಾಮರ ವ್ಯಜನಗಜತುರಗ। ಮಂಗಳವಾದ್ಯವೇಶ್ಯಾಜನ ಭೋಜ್ಯಾನ್ನ ದಧಿಫಲಾದಿಗಳುಂ। ಪ್ರದಕ್ಷಿಣ ಜ್ವಾಲಾಮಾಲಿಯಾದ ಅಗ್ನಿಹೋತ್ರನುಂ। ವಿಭೂತಿರುದ್ರಾಕ್ಷಾಲಂಕೃತವಿಪ್ರದ್ವಯಮುಂ। ಶವ-ಸುರಾಭಾಂಡ-ಮತ್ಸ್ಯದ್ವಯ-ಪೂರ್ಣಕುಂಭದ್ವಯ-ಅನುಕೂಲಪಕ್ಷಿಗಮನ-ಅನುಕೂಲಪ್ರಿಯವಚನ-ಅನುಕೂಲಯಾನಮಾಂಸಖಂಡ-ಹಿತಮಿತ್ರಾದಿ ಸಂದರ್ಶನವಾಗೆ। ಶಿವಶಕುನಗಳೆಂಬ ಮನೋಹರ್ಷದಿಂಪರಮೇಶ್ವರಸಹಾಯಮುಂ ನಿಶ್ಚಯಿಸಿ॥

— ಅರಣ್ಯವಾಸ. —

ಮೇಣುದೂರದ ಪ್ರಯಾಣಕ್ಕೆ ಚಂದ್ರಸ್ವರ। ಸಮೀಪಪ್ರಯಾಣಕ್ಕೆ ಸೂರ್ಯಸ್ವರ್ಯ ಚಿರಕಾಲಪ್ರಯಾಣಕ್ಕೆ ಆಪ್ತತ್ವ। ಕ್ಷಿಪ್ರಪ್ರಯಾಣಕ್ಕೆ ತೇಜಸ್ತತ್ವವಿರಬೇಕೆಂಬುದು ಮೊದಲಾದವುಗಳಂತಿಳಿದು। ಆತ್ಮರಕ್ಷಣೆಯಂಮಾಡಿಕೊಂಡು। ಗ್ರಾಮದಿಂಪೊರಮಟ್ಟು। ಈತಿಬಾಧೆಗಳಿಲ್ಲದರಮ್ಯಾರಣ್ಯವನಮಂ ಪ್ರವೇಶಿಸಿ। ಸನ್ನಿಹಿತ ಫಲವೃಕ್ಷಕಂದಮೂಲಜಲಾಶಯ ಪ್ರದೇಶದೊಳು। ಯಥಾಸುಖಪರಿಕಲ್ಪಿತ ಪರ್ಣಶಾಲೆಯೊಳಿದರುಂ। ತರುಮೂಲಾದಿಛಾಯಾ

ಶ್ರಯದೊಳಗಾದರುಂ।ನಿಕುಂಜಗುಹಾದ್ಯಾಶ್ರಯದೊಳಾದರುಂ ವನಸ್ಪತಿಪ್ರಾರ್ಥಪೂರ್ವಕವಾಗಿ ಭೂರಕ್ಷಾದಿಗಳಂ ಸುಖನಿವಾಸವಾಗಿನೆಲಸಿ॥

## — ವಾನಪ್ರಸ್ಥದೀಕ್ಷೆ. —

ಬಳಿಕ ಸಂಕಲ್ಪಸಂಸ್ಕಾರ ಪೂರ್ವಕವಾಗಿ । ಜಟಾಯಜ್ಞೋಪವೀತಬೃ ಕೃಷ್ಣಾಜಿನ ವಲ್ಕಲವೇಣುವೇತ್ರ ಹಸಂತೀಧಮಸೀವ್ಯಜನಪಾತ್ರ ಭಾಜನವರ್ಣ ರಜ್ಜುಖನಿತ್ರ ಪಿಟಕಾದಿಗಳೊಡನೆ । ಭಸ್ಮರುದ್ರಾಕ್ಷ ಪವಿತ್ರಾದಿಗಳಂತಳೆದು । ಕೇಶಶ್ಮಶ್ರುಲೋಮನಖಾದಿಗಳಂತ್ಯಜಿಸದೆ। ವಿಶೇಷನಿಷೇಧಗಳಂಬಿಟ್ಟು।ಗ್ರಾಮಪ್ರವೇಶಮಂಮಾಡದೆ।ಕಾಮಕ್ರೋಧಾದಿಗಳಿಲ್ಲದೆ। ಪ್ರತಿಗ್ರಹಪರಾಙ್ಮುಖನಾಗಿ । ತ್ರಿಷವಣಸ್ನಾನ, ಶಾಂಭವವ್ರತ, ತ್ರಿಪುಂಡ್ರಧಾರಣ- ತ್ರಿಸಂಧ್ಯೋಪಾಸ್ತಿತ್ರೇತಾಯಜನ, ಮಂತ್ರಾನುಷ್ಠಾನ ಪಂಚಮಹಾಯಜ್ಞ ಶಿವಾರ್ಚನೆ-ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧ್ಯಷ್ಟಾಂಗಯೋಗನಿಷ್ಠೆ ಕೃಚ್ಛ್ರಚಾಂದ್ರಾಯಣಾದ್ಯುಪವಾಸ। ಪಯೋವ್ರತ।ಗೋಮೂತ್ರಪ್ರಾಶನ-ಅಬ್ಭಕ್ಷ-ವಾಯುಭಕ್ಷ. ಪರ್ಣಾಶನ-ಫಲಾಶನ, ಕಂದಮೂಲಾಶನ-ನೀವಾರಕಡಂಗರೀಯಾದಿಸಂಗ್ರಹ ಭೂಶಯನ ಶೀತವಾತ ಘರ್ಮತಿತಿಕ್ಷೆಯುಳ್ಳಾತನಾಗಿ। ನಖನಿತುಷದ್ವಿದಳಧಾನ್ಯಾದಿಗಳಂ ಸ್ವೀಕರಿಸಿ। ತಪಶ್ಶೋಷಿತಗಾತ್ರನಾಗಿ ಶಿವಸೇವೆಗೈಯುತ್ತ-

## —* ಪಂಚಾಗ್ನಿ ಮಧ್ಯತಪಸ್ಸು. *—

ಬಳಿಕ ದೇಹದೊಳು ಮೂಲಾಧಾರಾದಿಗಳಲ್ಲಿರ್ಪ ಜಾಠರಕಾಲಾಗ್ನಿ । ಜಲಾದಿಗತತೈಕ್ಷ್ಣ್ಯರೂಪಮಾದ ಬಾಡಬಾಗ್ನಿತರು ಪಾಷಾಣಾದಿ ಗರ್ಭಸ್ತವಾಗಿನ್ಯಕ್ತಸುಪ್ರಭಾವಾಗ್ನಿ । ವೃಷ್ಟಿಯೊಳಭಿವ್ಯಕ್ತಮಪ್ಪ ಮಿಂಚಿಸಿಡಿಲುಮುಂತಾದವೈದ್ಯುತಾಗ್ನಿ। ಹಗಲುಪರಿತಪಿಸುವಸೂರ್ಯಾಗ್ನಿಯೆಂಬಗೂಢ್ಯಬಿಂದುರೂಪ ಪಂಚಾಗ್ನಿಗಳನುಂ। ಗ್ರೀಷ್ಮಾದಿರೂಪ ಕಾಲಾಗ್ನಿ।ಆತಪರೂಪಸೂರ್ಯಾಗ್ನಿ । ಪ್ರಣ್ಯಭಿವ್ಯಕ್ತರೂಪಸೂರ್ಯಕಾಂತಾಗ್ನಿ । ವೇಣ್ವಭಿವ್ಯವ್ಯಕ್ತದಾವಾಗ್ನಿ । ದೇಹಾಂತರ್ಗತಉದರಾಗ್ನಿಗಳೆಂಬ ಪಂಚಾಗ್ನಿಗಳನುಂ ಮತ್ತಂಭಾವಾಗ್ನಿಗಳನೇಕಕುಂಡಗಳೊಳುಚತುರ್ದಿಕ್ಕುಗಳಲ್ಲಿಯುಂ ಸ್ಥಾಪಿಸಿಮಧ್ಯದಲ್ಲಿ ಯೋಗಾಸೀನನಾಗಿ ಸೂರ್ಯಾಗ್ನಿಯಿಂ ತಪಿಸುವಪಂಚಾಗ್ನಿಗಳನುಂ । ಯಥಾವಿಧಿಯಾಗಿಸೇವಿಸುತ್ತ। ಏಕಪಾದಸ್ಥಿತಿ ಮೊದಲಾದವು

ಗಳಿಂದುಗ್ರತಪವನಾಚರಿಸುವನಾಗಿಔದುಂಬರವೈಖಾನಸಕವ ಕ್ಷಾಳಿಕ ಪ್ರೌ ರ್ಣಿಮನೆಂದು ಚತುರ್ವಿಧನಾಗಿರ್ಪನೇವಾನಪ್ರಸ್ಥನೆಂದುತಿಳಿಯಲ್ಪೇಳ್ಕುಂ

—✻ ಯತ್ಯಾಶ್ರಮ. ✻—

ಬಳಿಕ ವಾನಪ್ರಸ್ಥಂಗಾದರುಅಥವಾಬ್ರಹ್ಮಚಾರಿ,ಗೃಹಸ್ಥರಿಗೆಅದರುಂ ದೃಢತರವೈರಾಗ್ಯಂಜನಿಸೆ। ಯತ್ಯಾಶ್ರಮಂಕೈಕೊಂಬುದ ೧.ತಿಯು! ಪ್ರ ವೃತ್ತಿಭೇದದಿಂ- ಕುಟೀಚಕ-ಬಹೂದಕ-ಹಂಸ-ಪರಮಹಂಸರೆಂದುನಾ ಲ್ಕುತೆರನಾಗಿರ್ಪರವರಲ್ಲಿಯೆಲ್ಲರುಂ ಕಾಮ್ಯಫಲವಂತ್ಯಜಿಸಿ। ಆಶ್ರಮೋಕ್ತಧ ರ್ಮಗಳಂಬಿಡಲ್ಪಡದವರಾಗಿಯುಂ। ವ್ಯಾಹೃತಿಪ್ರಣವಪಂಚಾಕ್ಷರಹಂಸಜಪ ನಿವೃತ್ತಿಧರ್ಮ ವಿರಕ್ತಲಕ್ಷಣ। ಶಿವಯೋಗವುಳ್ಳವರಾಗಿಯುಂ-ಶಮದಮಾ ದಿನಿಷ್ಠತರಾಗಿಯುಂ ತಿಳಿಯಲ್ಪೇಳ್ಕುಂ॥

— ಕುಟೀಚಕಸನ್ಯಾಸಿ. —

ಬಳಿಕಾಯತಿಗಳೊಳು। ಶಿಖಾಯಜ್ಞೋಪವೀತಿಯಾಗಿತ್ರಿದಂಡ। ಕಮಂ ಡಲು। ಭಿಕ್ಷಾಪಾತ್ರಕಾಷಾಯಾಂಬರ। ಪಾದುಕೆಗಳುಳ್ಳಾತನಾಗಿ।ತ್ರಿಸಂ ಧ್ಯದಲ್ಲಿಯೂ ಭಸ್ಮೋದ್ಧೂಳನ। ತಿರ್ಯಕ್ತ್ರಿಪುಂಡ್ರಧಾರಣ। ಶಿವಲಿಂಗಾರ್ಚ ನಪ್ರಣವವ್ಯಾಹೃತಿಗಾಯತ್ರೀ ಹಂಸಪಂಚಾಕ್ಷರಜಪಗಳಂ ವಿಶ್ವಾಸದಿಂ ಮಾಡುತ್ತ। ಸ್ವಜಾತಿಯಲ್ಲಾಗಲಿ। ಪುತ್ರಬಂಧ್ವಾದಿಗಳಲ್ಲಿಯಾಗಲಿ, ಭಿಕ್ಷಾ ನ್ನಮಂಪಡದು ಭುಂಜಿಸಿ- ಶಿವಯೋಗಿಯಾಗಿರ್ಪಾತನೇ । ಕುಟೀಚಕಸ ನ್ಯಾಸಿಯಕ್ಕುಂ॥

— ಬಹೂದಕಯತಿ —

ಮತ್ತು ಶಿಖಾಯಜ್ಞೋಪವೀತಿಯಾಗಿ। ಗೋವಾಲಚಿತ ರಜ್ಜುಸಂಬಂ ಧವಾದತ್ರಿವೇಣುದಂಡಗಳಂಪಿಡಿದು। ಕಾಂಸ್ಯಪಾತ್ರ, ದಾರುಪಾತ್ರ, ಮೃ ತ್ಪಾತ್ರಗಳೊಳಗೊಂದಂಪರಿಗ್ರಹಿಸಿ। ಕಂಥೆ, ಕೌಪೀನ, ಆಚ್ಛಾದನ-ಕೃ ಷ್ಣಾಜಿನ। ತೋಡೆ, ಪಾದುಕೆ, ಸೂಜಿ, ಕರ್ತರಿ, ಯೋಗದಂಡ, ಯೋಗ ಪಟ್ಟ, ಯೋಗಪಟ್ಟಾದಿಪರಿಕರಗಳುಳ್ಳಾತನಾಗಿ। ಭಸಿತೋದ್ಧೂಳನ ಧಾರಣರುದ್ರಾಕ್ಷಮಾಲಾಭರಣ, ಶಿವಲಿಂಗಾರ್ಚನಪ್ರಣವಸಾವಿತ್ರೀಜಪಂ ಗಳಂ ತ್ರಿಸಂಧ್ಯದಲ್ಲಿಯೂ ಬಿಡದಾಚರಿಸುತ್ತ।ವೇದಾಧ್ಯಯನವನುಳಿದೀ ಶ್ವರನಧ್ಯಾನತತ್ಪರನಾಗಿ। ಏಕಾನ್ನವನೊಲ್ಲದೆ। ಬಂಧುಪುತ್ರಾದಿಗಳಗೃಹ ಮಂಪೋಗದೆ ಬೇರೆಪಳುಮನೆಗಳಲ್ಲಿಯೇಭಿಕ್ಷಾನ್ನಮಂತಂದು ಲೋಕಾನು ಭವತಿಭಿಕ್ಷಾಪರನಾಗಿಸಹ ವಿರಕ್ತಶಿವಯೋಗಪರನೇ ಬಹೂದಕನಪ್ಪಂ॥

—* ಹಂಸಯತಿ *—

ಮತ್ತು ಬಹಿಶ್ಶಿಖಾಯಜ್ಞೋಪವೀತಂಗಳಂ ಪರಿತ್ಯಜಿಸಿ ವೇಣುದಂಡಮೊಂದಂಪಿಡಿದು। ಕಮಂಡಲುವೃತ್ತಾತ್ಯ, ಪಾಣಿಪಾತ್ರ, ಕಂಥೆ, ಕೌಪೀನ ಆಚ್ಛಾದನ, ಕಾಷಾಯವಸ್ತ್ರಂಗಳುಳ್ಳಾತನಾಗಿ। ಭಸ್ಮರುದ್ರಾಕ್ಷಧಾರಣ ಶಿವಾರಾಧನ ಪ್ರಣವಸಾವಿತ್ರೀಪಂಚಾಕ್ಷರಹಂಸಜಪತತ್ಪರನಾಗಿ। ತ್ರಿಸಂಧ್ಯವಲ್ಲಿಯುಂಗುರುವಂದನಾದಿಗಳಂತಪ್ಪದೆ ಮಾಡುತ್ತ ಮಂದೇಕಾಂತದಲೆಂಟುಗ್ರಾಸಭಿಕ್ಷಾನ್ನವನುಂಡು-ಅಜಿಹ್ವ-ಷಂಡ-ಪಂಗು-ಅಂಧಕ-ಬಧಿರ-ಮುಗ್ಧರೆಂಬಷಡ್ಗುಣಯುಕ್ತನಾಗಿ। ವನಿತಾದಿವಿಷಯವೊಳು ಕಾಮಿಸುವದು ನೆನವುದುಕೊಂಡಾಡುವದು ನಿರೋದಿಸುವದು-ರತಿಗೆಳಸುವದು-ಪಡೆಂಬಡುವದು-ಚುಂಬಿಸುವದು-ಕೂಡುವದೆಂಬ। ಅಷ್ಟವಿಧಮೈಥುನಂಗಳಂತ್ಯಜಿಸಿ,ಮೋಕ್ಷಾದಿಕಾರದಿಂ,ಅಧ್ಯಾತ್ಮಚಿಂತಕನಾಗಿರ್ಪಾತನೇಹಂಸಯತಿಯಪ್ಪಂ

— ಪರಮಹಂಸಯತಿ. —

ಮತ್ತು ಶಿಖಾಯಜ್ಞೋಪವೀತ ನಿತ್ಯಕರ್ಮಾದಿಗಳಂ। ತ್ರಿದಂಡಕಮಂಡಲುವೊದಲಾದ ಪರಿಕರಂಗಳಂಬಿಟ್ಟು। ಕಂಥೆಕೌಪೀನಪಾಣಿಪಾತ್ರಾದಿಗಳಂಶೀತಬಾಧಾದಿಪರಿಹಾರಾರ್ಥವಾಗಿ ಸ್ವೀಕರಿಸಿ । ದಿವ್ಯಸ್ನಾನ-ವಾರುಣವಾಸ್ನಾನ-ವಾಯವ್ಯಸ್ನಾನ-ಮಾನಸಸ್ನಾನ-ಆಗ್ನೇಯಸ್ನಾನವೆಂಬಪಂಚವಿಧಸ್ನಾನಗಳೊಳಗೆ। ಆಗ್ನೇಯಸ್ನಾನ, ಮಾನಸಿಕಸ್ನಾನಗಳೆರಡೇಮುಖ್ಯವಾಗಿ ಕೋಟಿಗುಣಾಧಿಕವಪ್ಪುದರಿಂ- ಶ್ರುತಿಸಿದ್ಧಂತ ಸಮ್ಮತವಾಗಿ। ಆಪಾಶ್ರಮಿಗಳಿಂದಲೂತ್ಯಜಿಸಲು ಯೋಗ್ಯವಲ್ಲಾಗಿ। ಅಗ್ನಿರಿತ್ಯಾದಿಮಂತ್ರಗಳಂಭಸ್ಮೋದ್ಧೂಳನ। ಪ್ರಣವಹಂಸಮಂತ್ರಗಳಂತ್ರಿಪುಂಡ್ರಧಾರಣಂಗೈದು-ಶಿವಧ್ಯಾನನಿರ್ಧೂತಕಲ್ಮಷನಾಗಿ ರುದ್ರಾಕ್ಷಮಾಲಾದಿಗಳಂಧರಿಸಿ-ಲಿಂಗಾರ್ಚನೆಯಂಬಿಡದಾಚರಿಸುತ್ತ-ತ್ರಿಸಂಧ್ಯದಲ್ಲಿಯೂ-ಪ್ರಣವಪೂರ್ವಕವಾಗಿ ಷಟ್ಪ್ರಾಣಾಯಾಮದಿಂದಷ್ಟೋತ್ತರ ಪಂಗೈದು ಏಕಾಂತವಾಸಿಯಾಗಿ-ಸುಖಸ್ಥಾನಾಸನಗಳಲ್ಲಿಯಥಾಶಕ್ತಿ ಸಮಾಧಿನಿಷ್ಠನಾಗಿ-ಮಧೂಕರ, ಅಸಂಕ್ಲೃಪ್ತ, ಪ್ರಾಕ್ಪ್ರಣೀತ ಅಯಾಚಿತ, ತಾತ್ಕಾಲಿಕವೆಂಬ ಪಂಚವಿಧ ಭಿಕ್ಷಗಳನಾದೊಡಂ-ಪಕ್ವಾನ್ನವನಾದೊಡಂ-ಯಥೇಷ್ಟವಲ್ಲದೆ-ಅಲ್ಪವಲ್ಲದೆ-ಯೋಗಾನುಗುಣ್ಯವಾಗಿಭೋಜನಂಗೈದು- ಗುರುಪ್ರಾಪ್ತಿಯಿಂದಾತ್ಮಜ್ಞಾನವಂ ದೃಢಪಡಿಸುತ್ತ-ಸ್ನಾನ, ಶೌಚ ಸತ್ಯಾದಿಗಳುಳ್ಳಾತನಾಗಿ-ಅನೃತಕಾಮ, ಕ್ರೋಧ, ಲೋಭ, ಮೋಹ, ಶೋಕ, ದರ್ಪ ಡಂಭ

ದವರ್ಣಾದಿಗಳಂಬಿಟ್ಟು | ಚಾತುರ್ವರ್ಣ್ಯಪನಾಚರಿಸುತ್ತ-ತನ್ನ ಪೂರ್ವಾಶ್ರಮಾಚಾರವನಂಬಿಟ್ಟು| ಉತ್ತರಾಚಾರನಿಷ್ಠನಾಗಿ-ದೃಢವಿರಕ್ತಶಿವಯೋಗಿಯಾಗಿರ್ಪಾತನೇ ಪರಮಹಂಸಯತಿಯಕ್ಕು||

— ಅತ್ಯಾಶ್ರಮಿ. —

ಬಳಿಕ ಸೂರ್ಯೋದಯಕ್ಕೆ ಮೊದಲಿದ್ದು ಇದುಖದ್ಯೋತ-ಇದುದೀಪ-ಇದುನಕ್ಷತ್ರ-ಇದುಚಂದ್ರನೆಂದು | ಇಂತುಬೇರೆಬೇರೆ ಲಕ್ಷಿಸಿಕೊಳ್ಳುತಿರ್ಪ ಪ್ರಕಾಶಾಂತರಗಳುಂ! ಸೂರ್ಯೋದಯವಾಗಲೊಡ -ತಾವಾ ಸೂರ್ಯಜ್ಯೋತಿ ದೀಪ್ತಿಯೊಳಂತರ್ಭಾವಗೊಂಡತೆ- ಜ್ಞಾನೋತ್ಪತ್ತಿಗೆ ಮುನ್ನವೇ | ಭಿನ್ನಭಿನ್ನ ಮಾಗಿಅಭಿಮಾನಿಸಿಕೊಳ್ಳಲು ಯೋಗ್ಯವಾಗಿರ್ಪ ಚತುರಾಶ್ರಮ ಧರ್ಮಂಗಳಿಂದಂತಃಕರಣ ಶುದ್ಧನಾಗಿ ಮೋಕ್ಷಸಾಧನಚತುಷ್ಟಯಸಂಪನ್ನನಾಗಿ- ಬಳಿಕಶ್ರೀಗುರೂಪದೇಶಪ್ರಭಾವದಿಂ | ವೇದಾಂತಸಿದ್ಧಾಂತವಾದ ಜೀವಪರಮೈಕ್ಯ ವಿಷಯಮಪ್ಪಜ್ಞಾನದಿಂ| ನಿರ್ವಿಕಲ್ಪಕನಿರ್ವಿಶೇಷ ಚಿನ್ಮಾತ್ರ- ನಿತ್ಯಶುದ್ಧಾನಂದೈಕರಸಾದ್ವೈತಸಿದ್ಧಿಯಾಗೆ- ಸ್ವಾತ್ಮಜ್ಞಾನಾನಂತರದೊಳಾಜ್ಞಾನಕ್ಕೆ ಬೇರೊಂದತಿಶಯ ಮಿಲ್ಲಾಗಿ| ತನಗೊಂದಾಶ್ರಮಾಭಿಮಾನವಿಲ್ಲದೆ- ವಿಧಿನಿಷೇಧಾತೀತನಾಗಿ- ನಿಸ್ತ್ರೈಗುಣ್ಯಪದಪಂಥಕ್ಕು | ಸರ್ವಾಶ್ರಮಿಗಳಂಪೂಜ್ಯನಾಗಿ- ಜೀವನ್ಮುಕ್ತನೆಂದು| ಸ್ಥಿತಪ್ರಜ್ಞನೆಂದು ಗುಣಾತೀತನೆಂದು ವಿರಕ್ತನೆಂದು, ಜ್ಞಾನಸಿದ್ಧನೆಂದು ಅವಧೂತನೆಂದು ಕೃತಕೃತ್ಯನೆಂದು ಭಗವದ್ಭಕ್ತನೆಂದು, ಬ್ರಹ್ಮಣನೆಂದು ಶಿವಯೋಗಸಿದ್ಧನೆಂದುಪೆಸರ್ವಡೆದಿರ್ಪಾತನೇ- ಕೈವಲ್ಯ, ಪರಮಹಂಸ, ನಿರಾಲಂಬ, ಬಂ ಹಂಸಾದ್ಯುಪನಿಷದುಕ್ತಪ್ರಕಾರವಾಗಿ ಅತ್ಯಾಶ್ರಮಿಯಪ್ಪಂ-

— ಶಿವಯೋಗಾಧಿಕಾರಿಗಳು. —

ಬಳಿಕಿಂತು ಪೂರ್ವೋಕ್ತಸಕಲಶೈವಧರ್ಮೋಪವರ್ಣಕಶೈವಗಳ್ಗೆ | ಶುದ್ಧವೈದಿಕರೆಂದು, ತಾಂತ್ರಿಕವೈದಿಕರೆಂದುಶುದ್ಧತಾಂತ್ರಿಕರೆಂದು ವೈದಿಕತಾಂತ್ರಿಕರೆಂದು | ಜ್ಞಾನಕ್ರಿಯಾಭೇದದಿಂ ನಾಲ್ಕುತರದಧಿಕಾರಿಗಳಿರ್ಪರಲ್ಲಿ| ತಂತ್ರವಾಸನೆಗೆಪೋಗದೆ- ವೈದಿಕಕರ್ಮೈಕನಿಷ್ಠರೇ ಶುದ್ಧವೈದಿಕರು- ವೇದಸ್ಮೃತಿಗಳೆರಡಲ್ಲಿಯೂಪ್ರೀತಿಯುಳ್ಳರೇ ತಾಂತ್ರಿಕವೈದಿಕರುಗಳು| ವೇದವಾಸನಿಗೆಪೋಗದೆತಂತ್ರೈಕನಿಷ್ಠರೇಶುದ್ಧತಾಂತ್ರಿಕರುಗಳು| ತಂತ್ರವೇದೋಭಯಪ್ರೀತರೇವೈದಿಕತಾಂತ್ರಿಕರುಗಳಕ್ಕುಂ-

— ಪ್ರಮಾಣಗ್ರಂಥವಿಭಾಗ. —

ಮತ್ತಮಾ ಅಧಿಕಾರಿಗಳಿಗೆ ಮಾರ್ಗಸಂಕರವಾಗದಂತೆ ಬೇರೆಬೇರೆವಿಧಿ ಪ್ರತಿಪಾದಕಂಗಳಾವಾವವೆಂದೊಡೆ। ಸೂತಸಂಹಿತಾ ಪರಾಶರ ಪುರಾಣಾದಿಗಳೇಶುದ್ಧವೈದಿಕಪ್ರತಿಪಾದಕಂಗಳು। ಶಿವಗೀತಾಶಿವರಾಘವ ಸಂವಾದವಾಯುವ್ಯ ಸಂಹಿತಾದಿಗಳೇತಾಂತ್ರಿಕವೈದಿಕಪ್ರತಿಪಾದಕಂಗಳು । ಶೈವ, ಪಾಶುಪತ, ಸೋಮ ಲಾಕುಳಕವೆಂಬಸಿದ್ಧಾಂತರಂಗಳೇ ಶುದ್ಧತಾಂತ್ರಿಕ ಪ್ರತಿಪಾದಕಂಗಳು। ಭಗವತ್ಶಿವಸಿದ್ಧಾಂತಗಳೇ ವೈದಿಕತಾಂತ್ರಿಕಪ್ರತಿಪಾದಕಂಗಳೆಂದು ಪೇಳ್ವುದೆ ಚರ್ಯಾಪಾದಮುಕ್ತ್ಯಂ ॥

—* ಇತಿ ಚರ್ಯಾಪಾದಸ್ಸಮಾಪ್ತಃ *—

---

— ಅಥ ಯೋಗಪಾದ ಪ್ರಾರಂಭಃ —

---

ಮತ್ತಮಾ ಯೋಗಪಾದದಲ್ಲಿ ಶ್ರೀಕಂಠೇಶ್ವರನಿಂ ದುಪದೇಶವಂಪಡೆದ। ಶ್ವೇತಸವಾವ- ಮದನ- ಸಹೋತ್ರ- ಕಂಕ- ಲೋಕಾಕ್ಷ- ಜಸಿಪತ್ಯ-ದಧಿವಾಹ- ವೃಷಭ- ಉಗ್ರ- ಅತ್ರಿ- ಸುಬಾಲಕ- ಗೌತಮ- ವೇದಶಿರ- ಗೋಕರ್ಣ- ಗುಹವಾಸಿ- ಶಿಖಂಡಿ-ಜಟಾಮಾಲಿ- ಅಟ್ಟಹಾಸ- ದಾರುಕ- ಲಾಂಗುಲಿ- ಮಹಾಕಾಯ- ಶೂಲಿ-ದಂಡಿ-ಮುಂಡಿ- ಸಹಿಷ್ಣು- ಸೋಮಶರ್ಮನಕುಲೀಶರೆಂಬ- ಅಷ್ಟಾವಿಂಶತಿಯೋಗಾಚಾರ್ಯರಾದ ಮುನೀಶ್ವರರಾದೊಡೆ। ಅವರಿಗೆ ಬೇರ್ಬೇರೆನಾಲ್ವರು ಶಿಷ್ಯರುಂಟಾಗಿ। ಶ್ವೇತಶಿಖಾದಿಗರ್ಗಮಿಶ್ರಕರಿಷ್ಯನೆಂಬಾತನಕಡೆಯಾದ ನೂರಹನ್ನೆರಡು ಮಂದಿಯೋಗಪ್ರವರ್ತಕರೊಡಗೂಡಿ। ಭಸಿತ, ಅಕ್ಷಸೂತ್ರ, ಯೋಗದಂಡ. ಯೋಗಪಟ್ಟ್ಯಾದಿಗಳಿಂದಲಂಕೃತರಾಗಿ।ಏಕಶಿಖೆ ಪಂಚಶಿಖೆ, ಕೇಶಪಾಶಮುಂಡನಂಗಳುಳ್ಳವರಾಗಿ। ಶಾತತೇಜೋಮಯರಾಗಿರ್ಪುದೆಂದು। ಶಿವಯೋಗಾಚಾರ್ಯ ಲಕ್ಷಣಂಗಳಂವಿವೇಕಿಸಿ ॥

— ಶಿವಯೋಗಲಕ್ಷಣ. —

ಬಳಿಕಾಯೋಗವೆಂತೆನೆ। ಶಿವಚೈತನ್ಯಕ್ಕಿಂತಲೂ ಜೀವಚೈತನ್ಯವುಬೇರೆಯೆಂದರಿತಿರುವಅವಿದ್ಯೆಯುಪಾಶಮಂಪರಿಹರಿಸಲು ಶಿವಜೀವಯೋಗವೆಂಬೈಕ್ಯಜ್ಞಾನಸಿದ್ಧಿಯುಂ। ವೈರಾಗ್ಯಾದಿಗಳಿಂ। ಶಮಾದಿಗಳಿಂ। ಪರಿಷ್ಕೃತವಾದ ಶುದ್ಧಾಂತಃಕರಣಕ್ಕೆ ಸಕಾರ್ಯವಾಗಿ ಆತ್ಮನೊಳು ವಿಲೀನತೆಯಿಂ

ಬುದುಂ । ದುಃಖಮಯಮಾಗಿರುವ ದ್ವೈತಮಂ ಸುಖಮಯಮಾಗಿರುವ ಅದ್ವೈತವಾಗಿ ಮಾಳ್ಪುದುಂ। ಯೋಗಮೆಂತಲುಂ। ಕರ್ಮಕೌಶಲ್ಯಮೆಂಬ ಅಸಂಗಬ್ರಹ್ಮಾತ್ಮಭಾವನೆಯೇ ಯೋಗವೆಂತಲುಂ । ನಿಗ್ರಹಿಸಲ್ಪಟ್ಟ ಪ್ರಾಣಾದಿವಾಯುಗಳಿಂದೊಡಗೂಡಿ ನಿರುದ್ಧಮನಸ್ಸಿಗೆ ತಾರಕಮಪ್ಪ ಶಿವಲಿಂಗದೊಳು ನಿರ್ಭೇದವಾಗಿಐಕ್ಯವೇಯೋಗವೆಂತಲುಂತಿಳಿಯಲ್ಪೇಳ್ಕುಂ

— ಶಿವಯೋಗಭೇದಗಳು. —

ಬಳಿಕೀಶ್ವರನಲ್ಲಿ। ಚಿತ್ತದೇಕತ್ವವೇಲಕ್ಷಣವಾದಯೋಗವು । ಮಂತ್ರ ಲಯ- ಹಠ- ರಾಜ ಯೆಂಬನಾಲ್ಕುಭೇದಂಗಳಂ। ಮೃದು, ಮಧ್ಯ, ಅತಿಮಾತ್ರ ಅತಿಮಾತ್ರತರವೆಂಬ।ಚತುರ್ವಿಧಯೋಗಕ್ರಮದಿಂದ ಮಂತ್ರಾದಿಯೋಗಕ್ರಮಗಳಂ । ಬಳಿಕ ನಾಲ್ಕುಯೋಗಾನುಕ್ರಮದಿಂಗಲೇ। ಪ್ರಣವಹಂಸಾದಿ ಮಂತ್ರವಿಧಿಗಳಂ। ದಶನಾದದಶಲಕ್ಷಣಂಗಳಂ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರಧ್ಯಾನಧಾರಣಾಸಮಾಧಿಗಳೆಂಬ ಸಗುಣನಿರ್ಗುಣರೂಪವಾದಷ್ಟಾಂಗಯೋಗವಿಧಿಗಳಂ । ಅಹಿಂಸೆ ಸತ್ಯ, ಅಸ್ತೇಯ ಬ್ರಹ್ಮಚರ್ಯ, ಕ್ಷಮೆ, ಧೃತಿ, ದಯೆ ಆರ್ಜವ, ಮಿತಾಹಾರ, ಶೌಚವೆಂಬ ಯಮಾಂಗದಶಕಮಂ ತಪಸ್ಸು, ಸಂತೋಷ, ಆಸ್ತಿಕ್ಯ, ದಾನ, ಈಶ್ವರಪೂಜೆ, ಸಿದ್ಧಾಂತಶ್ರವಣ, ಲಜ್ಜೆ, ಮತಿ, ಜಪ, ವ್ರತವೆಂಬ ನಿಯಮಾಂಗದಶಕಮಂ । ವಿಚಾರಿಸಲದರೊಳು॥

— ಅಹಿಂಸಾದಿಲಕ್ಷಣ. —

ಬಳಿಕ ಯಮಾದಿ ಯೋಗಗಳಲಕ್ಷಣವೆಂತೆನೆ । ಯಜ್ಞಾರ್ಥವಾದಪಶುಹಿಂಸೆಹೊರತಾಗಿ। ಮತ್ತೆಲ್ಲಾಕಡೆಯಲ್ಲಿಯೂ ಸಕಲ ಪ್ರಾಣಿಗಳ್ಗೆ ಕ್ಲೇಶಮಂಪುಟ್ಟಿಸದಿರ್ಪುದೇ ಅಹಿಂಸೆಯೆನಿಸುವದು । ಗುರುದೇವತಾಪ್ರಯೋಜನ ಮಾಡೊಂಬಡೆಯಲ್ಲದೆ । ತನಗೆಬಂದಾಪತ್ತು ಭೀತಿಗಳ್ಳಿಯೂ ಹುಸಿಯದಿರ್ಪುದೇ ಸತ್ಯವೆನಿಸುವದು । ಚೌರ್ಯದಿಂದಾದರೂ ಬಲಾತ್ಕಾರದಿಂದಾದರೂ ಪರದ್ರವ್ಯವನ್ನು ಅಪಹರಿಸದಿರ್ಪುದೇ ಅಸ್ತೇಯವೆನಿಸುವದು। ವನಿತಾದಿ ವಿಷಯಮಂ ಕಂಡು ಕೇಳದಲ್ಲಿ ಮನೋವಾಕ್ಕಾಯಂಗಳಂ ಮಾತ್ರವಂದು ಭಾವಿಸುವದೇ ಬ್ರಹ್ಮಚರ್ಯವೆನಿಸುವದು । ಅಥವಾ- ಹೃದಯ- ವಾಕ್ಕು- ನೇತ್ರ -ರೇತರಸ್ಸು- ಅಂಗಗಳಂ ಪರಸ್ತ್ರೀವಿಷಯದೊಳುಂ ಸ್ವಸ್ತ್ರೀವಿಷಯದೊಳ ಶಾಸ್ತ್ರೀಯವಾಗಿಯುಂ ಚಲಿಸದಂತೆ ನಿಗ್ರಹಿಸಿ ಯಿರುವದೇ ಬ್ರಹ್ಮಚರ್ಯವೆನಿಸುವದು ಪರರುಮಾಳ್ಪ ಅಪಕಾರಮಂ ತಾನುಪ್ರ

ತ್ಯುಪಕಾರಮಾಡಲು ಸಮರ್ಥನಾದರುಂ ಸೈರಿಸಿಕೊಳ್ಳುವದೇ ಕ್ಷಮೆಯೆ ನಿಸುವದು । ಅರ್ಥಬಂಧು ಸುತಾದಿಗಳ ಪ್ರಾಪ್ತ್ಯಪ್ರಾಪ್ತಿಗಳಲ್ಲಿ ಹರ್ಷ ಶೋಕವಿಲ್ಲದಿರ್ಪುದೇ ಧೃತಿಯೆನಿಸುವದು । ರೋಗಾದಿಗಳಿಂ ಪೀಡಿತರಾದ ಶತ್ರುಮಿತ್ರಾದಿಗಳ ರಕ್ಷಣಾಭಿಮುಖಮಪ್ಪುದೇ ದಯೆಯೆನಿಸುವದು। ಹ ರ್ಷಶೋಕಂಗಳೆಡೆಯಲ್ಲಿ ಬುದ್ಧಿ ತಡದಿರ್ಪುದೇ ಆರ್ಜನವೆನಿಸುವದು। ಅಲ್ಪ ವಲ್ಲದೆ ಯಥೇಷ್ಟವಲ್ಲದೆ ಯೋಗಾನುಗುಣ್ಯಮಾಗಿ ಭೋಜನಂಗೈವುದೇ ಮಿತಾಹಾರವೆನಿಸುವದು। ದೇಹಮಲಮೋಚನಾರ್ಥಮಾಗಿ ಮೃತ್ತಿಕಾಶೌ ಚಜಲಸ್ನಾನಗಳಿಂ ಮನೋಮಲಹರಾರ್ಥವಾಗಿ ಮಂತ್ರಧ್ಯಾನಗಳಿಂ ಮಾ ಳ್ಪುವೇಶೌಚವೆನಿಸುವದು। ಬಳಿಕನಾನಾರು।ಯೆನಗೀಸಂಸಾರವೇನುಕಾರ ಣಬಂದಿತು।ಇದೆಂತುಬಿಡುವದೆಂದಾಲೋಚಿಸಿ। ಆತ್ಮಾನಾತ್ಮವಿವೇಕದಿಂ।ಶಿವ ಸ್ವರೂಪವಂತಿಳಿವುದೇ ತಪವೆನಿಸುವದು । ತನಿಗೆ ವಿಧಿವಶದಿಂ ದೊರತಷ್ಟ ರಲ್ಲಿ ತೃಪ್ತಿಯೇ ಸಂತೋಷವೆನಿಸುವದು। ಪುಣ್ಯಪಾಪಸ್ವರ್ಗ ನರಕಾದಿ ಗಳುಂಟೆಂದು ತಿಳಯುವದೇ ಆಸ್ತಿಕ್ಯವೆನಿಸುವದು। ತಾಘಳದನ್ನಾದಿದ್ರವ್ಯ ಗಳಿಂ ಧರ್ಮಾರ್ಥವಾಗಿ ವಿಧಿಕ್ರಮದಿಂದೇಶಕಾಲಪಾತ್ರವ ನರಿದೀವುದೇದಾ ನವೆನಿಸುವದು। ಸ್ಮರಣ। ಸ್ತುತಿ। ಭಜನಗಳಿಂತ್ರಿಕರಣಶುದ್ಧಿಯಾಗಿ ಶಿವಭ ಕ್ತಿದೃಢವಾದುದೆ ಈಶ್ವರಪೂಜೆಯೆನಿಸುವದು । ವೇದಾರ್ಥವಿಚಾರವಂ ಮಾಳ್ಪುದೇ ಸಿದ್ಧಾಂತಶ್ರವಣವೆನಿಸುವದು। ಲೌಕಿಕವೈದಿಕವಿರುದ್ಧವಾದ ಮಾರ್ಗದತ್ತ ಚಿತ್ತವನೆರಗಲೀಯದಿರ್ಪುದೇ ಲಜ್ಜೆಯೆನಿಸುವದು। ವಿಹಿತ ವಾದ ಸ್ವಧರ್ಮದಲ್ಲಿಯೇ ವಿಶ್ವಾಸವು ಮತಿಯೆನಿಸುವದು। ಪ್ರಣವ। ಶತ ರುದ್ರೀಯಾದಿಗಳ ಸ್ವಾಧ್ಯಾಯವೇ ಜಪವೆನಿಸುವದು । ಧರ್ಮಾತ್ಮಸಿದ್ಧ್ಯ ರ್ಥವಾದುಪಾಯಗ್ರಹಣವೇ ವ್ರತವೆನಿಸುವದೆಂದು ಅಹಿಂಸಾದಿಗಳ ಲಕ್ಷ ಣಂಗಳಿಂ ತಿಳಿಯಲ್ಪಾಳ್ಕಂ ॥

## — ಶಿವಯೋಗಾಸನಗಳು. —

ಬಳಿಕ ಸುಖಸ್ಥೈರ್ಯನಿಶ್ಚಲಾವಹವಾದ ಯೋಗಯೋಗ್ಯಾಸನಗಳಲ್ಲಿ ಸಿದ್ಧಾಸನ-ಸಿಂಹಾಸನ-ಸ್ವಸ್ತಿಕಾಸನ- ಸನ್ಯಾಸನ-ಶೂಲಾಸನ- ಸುಖಾ ಸನ-ಸರ್ವತೋಭದ್ರಾಸನ-ಗೋಮುಖಾಸನ-ಗರುಡಾಸನ-ಮಯೂರಾ ಸನ-ಮತ್ಸ್ಯೇಂದ್ರಾಸನ- ಮತ್ಸ್ಯಾಸನ-ಮುದ್ಗರಾಸನ-ಮಂಡೂಕಾಸ ನ-ಮೃಗಾಸನ-ನಾಗಾಸನ- ಕುಕ್ಕುಟಾಸನ-ಕುಂಜರಾಸನ ಕೂರ್ಮಾಸ ನ-ಕ್ರೌಂಚಾಸನ-ಕಾಷ್ಠಾಸನ- ಖಡ್ಗಾಸನ-ಕಾಮದಹನಾಸನ- ಯೋ

ನ್ಯಾಸನ-ವೈಯಾಘ್ರಾಸನ-ವೈಣಿಕಾಸನ-ಪಸ್ತ್ರಾಸನ-ವಾಸವಾಸನ ವೀರಾಸನ-ವರಾಹಾಸನ-ಪರ್ಯಂಕಾಸನ-ಪದ್ಮಾಸನ-ಪಥಾಸನ-ಪಶ್ಚಿಮ ಕಾರಣಾಸನ-ತ್ರಿಪದಾಸನ-ಹಸ್ತಿಕರ್ಣಾಸನ-ಹೈಮವಾಸನ-ಅರ್ಧಾಸನಾ ದಿ ಎಂಭತ್ತಾಲ್ಕಾಸನ ಭೇದಂಗಳಂ ತತ್ತಲ್ಲಕ್ಷಣ ಪೂರ್ವಕವಾಗಿ। ಸ್ವ ಸ್ವಯೋಗಸಿದ್ಧ್ಯನುಕೂಲತೆಯಿಂ ನಿರ್ಧರಿಸಿ॥

— ಯೋಗಕ್ಕೆ ಘಟಿಕಾಚಕ್ರಾದಿವಿವೇಕ. —

ಬಳಿಕ ಶರೀರನನಿತವಾಯುಸಿರೋಧವೇ ಲಕ್ಷಣವಾದ ಪ್ರಾಣಾಯಾ ಮವಿಧಿಗೆ ಮೊದಲು ಪ್ರಕಾರವುಂ।ಕುಶಕೃಷ್ಣಾಜಿನಾದಿಯೋಗ ಗೃಹೋ ಪಚರಣಪ್ರಕಾರಂಗಳುಂ। ತೈಲಪಿಣ್ಯಾಕಾದಿ ಯೋಗೀಶ್ವರನಿಷಿದ್ಧ ದ್ರವ್ಯಂ ಗಳುಂ। ಮುದ್ಗಪಟೋಲಕಗೋಧೂಮಾದಿ ಯೋಗಿಸ್ವೀಕಾರ್ಯವಸ್ತುನಿಯ ಮಗಳುಂ। ಮೊದಲಿಪ್ರಾಣಾಯಾಮ ಪ್ರಾರಂಭದಲ್ಲಿ ಶ್ರೀಗುರುಸರಸ್ವತೀ ವಿಘ್ನೇಶ್ವರವಿಶಾಖಾದಿದೇವತಾಪೂಜಾವಿಧಾನಂಗಳುಂ। ಬಳಿಕ ಸಕಲ ಮ ನುಷ್ಯಶರೀರವೇ ತಮ್ಮತಮ್ಮ ತೊಂಭತ್ತಾರಂಗುಳ ದುದ್ದಹುದದರಲ್ಲಿ ಗುದಸ್ಥಾನದಿಂದೆರಡಂಗುಳದಮೇಲೆ ಶಿಶ್ನದಿಂದೆರಡಂಗುಳದ ಕೆಳಗೆ ಮಧ್ಯ ದೊಂದಂಗುಳ ಪ್ರಮಾಣಸ್ಥಾನವೇ ದೇಹಮಧ್ಯವೆನಿಸುವದು। ಅದೇಮೂ ಲಾಧಾರವೆಂದು ಶಿಖಿಸ್ಥಾನವೆಂದು ಪೆಸರುಳ್ಳದ್ದಾಗಿ। ತ್ರಿಕೋಣಾಕಾರದಿ ತಪ್ತಸುವರ್ಣಕಾಂತಿ ಮಯವಾಗಿಹುದು। ಮತ್ತದರಿಂನ್ನವಾಂಗುಳದು ದ್ದದಲ್ಲಿ ಚತುರಂಗುಳ ವಿಸ್ತಾರಕುಕ್ಕುಟಾಂಡಾಕಾರವಪ್ಪ ನಾಡೀಕಂದವಿ ಹುದದರಮಧ್ಯವೆ ನಾಭಿಯೆನಿಸುವದು। ಆ ನಾಡೀಕಂದದಿಂದೆರಡಂಗುಳದ ಕೆಳಗೆ ಕುಂಡಲೀಸ್ಥಾನವಿಹುದಲ್ಲಿ ಕುಂಡಲೀಸರ್ಪವನು ಅಷ್ಟಪ್ರಕೃತಿ ರೂಪದಿಂ ಸಪ್ತಕುಟಿಲಾ ಕೃತಿಯಾಗಿ ನಾಡೀಕಂದಮಧ್ಯದ ಸುಷುಮ್ನ ಎಂಬ ನಾಡೀದ್ವಾರಮಂ ತನ್ನ ಮುಖದಿಂಮುಚ್ಚಿ ಮರಸಿ ನಿದ್ರಿತನಾಗಿ ಹುದು। ಬಳಿಕ ನಾಡೀಕಂದದಿಂ ದ್ವಾದಶಾಂಗುಳರಂಧ್ರಮಾದ ನಾಳದಿಂ ಪತ್ರಾಷ್ಟಕದಿಂ ಚತುರಂಗುಳವಿಸ್ತಾರದಿಂ। ಕದಳೀಕುಸುಮದಂ ತಧೋ ಮುಖಮಾಗಿರ್ಪ ಹೃದಯಕಮಲವಿಹುದಲ್ಲಿ। ಜೀವಹಂಸನು ಕರ್ಮವಾ ಶಬದ್ಧನಾಗಿ ವಾಲಾಗ್ರಶತಭಾಗದೊಳೊಂದರಂತೆ ಸೂಕ್ಷ್ಮವಾದ ಮನದ ನಡವಳಿಯಿಂಗವಿಸುತ್ತಿಹನು। ಮತ್ತಮಾ ನಾಡೀಕಂದದಿಂ ಪೊರಮಟ್ಟ ಜಾಲಿಸೂತ್ರದಂತೆ। ಮೇಲೆಕೆಳಗೆಡಬಲಂಗಳಿಗೈದಿ। ಮನಃಪ್ರಾಣಾದಿ ದಶ ವಾಯುಗಳ ಮಾರ್ಗಂಗಳೆನಿಸಿದೆಪ್ಪತ್ತೆರಡು ಸಾವಿರನಾಡಿಗಳೊಳಗೆ ಮು

ಪ್ರವೇಶಿಸಿದ ಚತುರ್ದಶನಾಡಿಗಳವುಗಳಲ್ಲಿ। ಈಶ್ವರನಧಿದೇವತೆಯಾದ ಸುಷುಮ್ನೆಯೋ ಮಸ್ತಕಾಂತವಾಗಿಹುದು। ವಿಷ್ಣುವಧಿದೇವತೆಯಾದಯಿಡೆಯೋವಾಮನಾಸಾಪುಟಾಂತವಾಗಿಹುದು।ಬ್ರಹ್ಮನಧಿದೇವತೆಯಾದ ಪಿಂಗಳೆಯೋದಕ್ಷಿಣನಾಸಾಪುಟಾಂತವಾಗಿಹುದು।ಇಂದ್ರನಧಿದೇವತೆಯಾದಗಾಂಧಾರಿಯೋವಾಮನೇತ್ರಾಂತವಾಗಿಹುದು ದಿಗಧಿದೇವತೆಯಾದಪೂಷೆಯೊ ದಕ್ಷಿಣನೇತ್ರಾಂತವಾಗಿಹುದು ॥ ಚಂದ್ರನಧಿದೇವತೆಯಾದ ಶಂಕಿನಿಯೋ ವಾಮಕರ್ಣಾಂತವಾಗಿಹುದು। ಪ್ರಜಾಪತಿ ಅಧಿದೇವತೆಯಾದ ಪಯಸ್ವಿನಿಯೋದಕ್ಷಿಣಕರ್ಣಾಂತವಾಗಿಹುದು। ವಿರಾಡಧಿದೇವತೆಯಾದ ಸರಸ್ವತಿಯೋ ಜಿಹ್ವಾಂತವಾಗಿಹುದು। ಪಾವಕನಧಿದೇವತೆಯಾದ ವಿಶ್ವೋದರಿಯೋಜಠರಾಂತವಾಗಿಹುದು। ಭೂಮಿಯಧಿದೇವತೆಯಾದ ಕುಹೂಯೆಂಬುದೇ ಶಿಶ್ನಾಂತವಾಗಿಹುದು। ವರುಣನಧಿದೇವತೆಯಾದ ಅಲಂಬುಷಯೋ ಪಾಯ್ವಂತವಾಗಿಹುದು। ಸೂರ್ಯನಧಿದೇವತೆಯಾದಪಯಸ್ವಿನಿಯೋದಕ್ಷಿಣ ಪಾದಾಂಗುಷ್ಟವಾಗಿಹುದು। ವರುಣನಧಿದೇವತೆಯಾದಹಸ್ತಿಜಿಹ್ವೆಯೋ ವಾಮಪಾದಾಂಗುಷ್ಟವಾಗಿಹುದು। ವಾಯುವಧಿದೇವತೆಯಾದವಾರುಣಿಯೋ ಸರ್ವಾಂಗಗಾಮಿನಿಯಾಗಿಹುದೆಂತಲುಂ। ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ, ಆಗ್ನೇಯ, ಅನಾಹತ, ವಿಶುದ್ಧ, ಸಹಸ್ರಾರಸಮ್ಮಿತವಾಗಿಪ್ಪ ಪಿಂಡಾಂಡದೊಳು। ಬ್ರಹ್ಮಾಂಡದಂತೆಸರ್ವಲಕ್ಷಣಗಳುಂ ತುಲ್ಯಸೃಷ್ಟಿಗಳಾಗಿರುವದರಿಂ। ಮಹಾಕಾಶಮಧ್ಯಗತವಾದದೆಲ್ಲಂ। ದಹರಾಕಾಶದೊಳಗಿಪ್ಪದೆಂತಲುಂ। ಗುರೂಪದೇಶಾನುಷ್ಠಾನಾಭ್ಯಾಸಸಾಧನಕ್ರಮದಿಂ ವಿವೇಕಿಸಿ.

— ಯೋಗತಂತ್ರಸಂಗ್ರಹ. —

ಬಳಿಕ ನಾಡೀಶೋಧನಕ್ರಮಂಗಳಂ। ರೇಚಕಪೂರಕಕುಂಭಕಕ್ರಮಂಗಳಂ। ತನ್ನಜಾನುಮಂದಕ್ಷಿಣಹಸ್ತದಿಂ ಪ್ರದಕ್ಷಿಣಂಗೈದು। ಒಂದುಚಿಟಿಕೆಯಿಕ್ಕಲು ಅದೇಮಾತ್ರೆಯೆಹುದಾಗಿ ಷೋಡಶಾದಿಮಾತ್ರಾನಿಯಮಂಗಳಂ। ತನುಲಾಘವ। ದೀಪನ। ಜಠರಾಗ್ನಿವರ್ಧನ। ನಾಡೀಶುದ್ಧಿಚಿಹ್ನಗಳಂ ಸೂರ್ಯಭೇದನ। ಉಜ್ಜಾಯಿ। ಸೀತ್ಕಾರಿ। ಸೀತಳ। ಭಸ್ತ್ರಿಕೆ। ಭ್ರಮರಿ। ಮೂರ್ಛೆ। ಕೇವಲವೆಂಬ ಅಷ್ಟಕುಂಭಕಪ್ರಕಾರಂಗಳಂ। ಮೂಲಬಂಧ। ಉಡ್ಯಾಣಬಂಧ। ಜಾಲಂಧರಬಂಧವೆಂಬಬಂಧತ್ರಯಮಂ। ಪಾತ್ಯತವೆಕೃತವೆಂದುದ್ವಿವಿಧವಾದ। ರೇಚಕ। ಪೂರಕ। ಕುಂಭಕ। ಉತ್ಕರ್ಷ। ಅಪ

ಕರ್ಷ, ಶೂನ್ಯ। ಉತ್ಕ್ರಾಂತಿಯೆಂಬ । ಸಪ್ತಪ್ರಾಣಾಯಾಮಲಕ್ಷಣಂಗಳಂ। ಸ್ವೇದ। ಕಂಪನ । ದೇಹೋತ್ಥಾನವೆಂಬಕ್ರಮದಿಂ । ಕನಿಷ್ಠಮಧ್ಯಮೋತ್ತಮಪ್ರಾಣಾಯಾಮಸಿದ್ಧಿಸೂಚನೆಗಳಂ । ಪಶ್ಚಿಮದ್ವಾರಗಮನ ಬ್ರಹ್ಮಾದಿಗ್ರಂಥಿಭೇದನ। ಶಿರೋಮಧ್ಯಗತಚಂದ್ರಾಮೃತಸೇವನಾದಿಕ್ರಮಗಳಂ। ತತ್ತಲ್ಲಕ್ಷಣಾದಿಕಮಂ । ಅನುಷ್ಠಾನ ಯೋಗ್ಯಮಪ್ಪಂತೆ ಸವಿಸ್ತಾರವಾಗಿ ವಿವೇಕಿಸಿ.

— ಸರ್ವಯೋಗಾಂಗಫಲಾದಿಸಂಗ್ರಹ. —

ಬಳಿಕ ಪ್ರಾಣಾಯಾಮದಿಂಪಾಪಕ್ಷಯರೂಪಶಾಂತಿ। ಅಜ್ಞಾನನಿವೃತ್ತಿರೂಪಪ್ರಶಾಂತಿ। ಜ್ಞಾನಪ್ರಕಾಶರೂಪದೀಪ್ತಿ । ಬುದ್ಧಿನಿರ್ಮಲರೂಪಪ್ರಸಾದವೆಂಬ ಚತುರ್ವಿಧಸಿದ್ಧಿಗಳಹವೆಂಬುದಂ । ಬಳಿಕಬಾಹ್ಯಕರ್ಮಪರಿತ್ಯಾಗದಿಂ ಚಿತ್ತವನಂತರ್ಮುಖಕ್ಕೈದಿಸುವುದೇ ಲಕ್ಷಣವಾದ ಪ್ರತ್ಯಾಹಾರದನೇಕಭೇದಂಗಳಂ। ಬಳಿಕ ಪರಶಿವನೆಂಬ ಶುಭಾಶ್ರಯದಲ್ಲಿ ಚಿತ್ತಸ್ಥಾಪನವೇ ಲಕ್ಷಣರೂಪವಧಾರಣದಲ್ಲಿ। ವಾಯುಧಾರಣ, ಭೂಧಾರಣಾದಿಬಹುಕ್ರಮಂಗಳಂ। ಮತ್ತೆ ವಿಷಯಾಂತರಕೇಗದ ಶಿವಚಿಂತಾಪ್ರವಾಹರೂಪವಾದ ಧ್ಯಾನದನಾನಾವಿಧಂಗಳಂ । ಧ್ಯೇಯವಸ್ತುವಿನಲ್ಲಿ ಮನೋನಿಶ್ಚಲಾತ್ಮಕವಾದ ಸಮಾಧಿಯುಜ್ಞಾತಾಜ್ಞಾತಾದಿಭೇದಂಗಳಂ. ಬಳಿಕ ಅಣಿಮಾದ್ಯಷ್ಟಸಿದ್ಧಿಭೇದಂಗಳಂ।ತತ್ತಲ್ಲಕ್ಷಣಪರೀಕ್ಷಾನುಷ್ಠಾನ ಫಲಯೋಗ್ಯಮಪ್ಪಂತೆವಿವರಿಸಿ॥

— ಯೋಗವಿಘ್ನಾದಿಗಳು —

ಬಳಿಕ ಆಲಸ್ಯ, ವ್ಯಾಧಿ, ಪ್ರಮಾದ, ಸ್ಥಾನಸಂಶಯ, ಅನವಸ್ಥಿತಿ, ಅಶ್ರದ್ಧೆ,ಭ್ರಾಂತಿದರ್ಶನ, ದುಃಖ, ದೌರ್ಮನಸ್ಯ, ವಿಷಯಲೋಲುಪತ್ವವೆಂಬ ದಶಯೋಗವಿಘ್ನಂಗಳಂ । ಲಯವಿಕ್ಷೇಪ, ಕಷಾಯವೆಂಬಚಿತ್ತದ ತ್ರಿದೋಷಂಗಳಂ। ಆಯಾವಿಘ್ನದೋಷಶಾಂತಿಪ್ರಕಾರಂಗಳಂ।ಮತ್ತಮಾಯಮನಿಯಮಾದ್ಯಷ್ಟಾಂಗಗಳೊಳಗೆ। ಮೊದಲಿನಯಮಾದಿನಾಲ್ಕಂಗಳೇ ಬಾಹ್ಯಯೋಗಂಗಳೆಂತಲುಂ। ಮಿಕ್ಕಪ್ರತ್ಯಾಹಾರಾದಿ ನಾಲ್ಕಂಗಗಳೇ ಅಂತರಂಗಯೋಗಗಳೆಂಬದು ಮುಂತಾದವಿಷಯಂಗಳಂ ಪ್ರತಿಪಾದಿಸಿ.

— ಯೋಗಫಲಾದಿಗಳು. —

ಬಳಿಕ ಅಹಿಂಸಾದ್ಯವಾಂತರಾಂಗಮುಖ್ಯಯಮಕ್ಕೆ। ನಿರ್ವೈರಸಮದರ್ಶನಯೆಂಬದು ಮುಂತಾದವೇಫಲ।ತಪಸ್ಸ್ವಾಧ್ಯಾಯಾದ್ಯವಾಂತರಾಂಗಮುಖ್ಯನಿಯಮಕ್ಕೆ। ಅಭಿಮತದೇವತಾಸಂದರ್ಶನಾದಿಗಳೇಫಲ। ಸ್ವಸ್ತಿಕಾದಿಭೇ

ದಮುಳ್ಳಾಸನಕ್ಕೆ । ದೇಹಾರೋಗ್ಯ । ಅನಾಲಸ್ಯಮುಂತಾದುದೇ ಫಲ । ರೇಚಕಾದಿಸಪ್ತಭೇದಮುಳ್ಳಪ್ರಾಣಾಯಾಮಕ್ಕೆ ಸಕಲದೋಷ ನಿವೃತ್ತ್ಯಾದಿಗಳೇ ಫಲ । ಇಂದ್ರಿಯಂಗಳನಂತರಂಗಕ್ಕಾಕರ್ಷಣಮಂ ಮಾಳ್ಪ ಪ್ರತ್ಯಾಹಾರಕ್ಕೆ। ವೈರಾಗ್ಯಲಕ್ಷಣವನ್ಹಿಯಿಂ। ತತ್ತದ್ವಿಷಯಮೆಂಬವನಮಂ ದಹಿಸಿ ನಿರ್ವಿಷಯಶೀಲನಪ್ಪುದೇ ಫಲ । ಶುಭತ್ರಯದಲ್ಲಿ ಚಿತ್ತಬಂಧನ ರೂಪ ಧಾರಣಕ್ಕೆ। ಪಾಪಕ್ಷಯಾದಿಗಳೇ ಫಲ। ಜ್ಞಾತಾದಿರೂಪಸಮಾಧಿಗೆ। ಪ್ರಜ್ಞಾಪ್ರತಿಷ್ಠಾದಿಗಳೇ ಫಲವೆಂಬುದು ಮೊದಲಹ। ತತ್ತದ್ಯೋಗಪ್ರತಿಬಧ್ಯ ಪ್ರತಿಬಂಧಕೋತ್ತೇಜಕಾವಾಂತರ ಫಲತತ್ಸಾಧ್ಯಾದಿಸರ್ವಮಂ ಪ್ರತಿಪಾದಿಸಿ॥

— ಯೋಗಿಗಳ ತಾರತಮ್ಯ. —

ಮತ್ತಮಾ ಅಷ್ಟಾಂಗಯೋಗದೊಳಗೆ । ಯಮಾದ್ಯಷ್ಟಾಂಗಗಳಲ್ಲಿಯಭ್ಯಾಸಮಂ ಮಾಡುತ್ತ । ಪೂರ್ವಾಂಗಸಿದ್ಧಿಯೇಯಿಲ್ಲದವನೇ ಕನಿಷ್ಠಯೋಗಿ। ಆಸನಾದಿಷಡಂಗಾಭ್ಯಾಸಿಗಳೇ ಮಧ್ಯಮರು। ಪ್ರತ್ಯಾಹಾರಾದಿಚತುರಂಗಾಭ್ಯಾಸಿಗಳೇ ಉತ್ತಮರು । ಧ್ಯಾನಾದ್ಯಂಗದ್ವಯಾಭ್ಯಾಸಿಗಳೇ ಉತ್ತಮೋತ್ತಮರೆಂಬ। ಅಧಿಕಾರಿಗಳ ತಾರತಮ್ಯಮಂ ನಿರೂಪಿಸಿ॥

— ನಿರ್ಗುಣಯಮಾದಿಯೋಗಲಕ್ಷಣ. —

ಅನಂತರದಲ್ಲಿ ದೇಹೇಂದ್ರಿಯಾದಿವೈರಾಗ್ಯವೇ ಯಮವೆಂದರಿವುದು। ಪರಮಾತ್ಮಾಭಿರತಿಯೇ ನಿಯಮವೆಂದರಿವುದು । ಸರ್ವವಿಷಯಗಳೊಳಗೌದಾಸೀನ್ಯಮಾದಸ್ಥಿರಸ್ಥಿತಿಯೇ ಆಸನವೆಂದರಿವುದು । ವಿಷಯಾರ್ಥಮಾದ ಇಂದ್ರಿಯನಿರೋಧವೇ। ಪ್ರಾಣಾಯಾಮವೆನಿಸುವದು। ವಿಷಯವಿಮುಖತೆಯಿಂತರಂಗಾಭಿಮುಖತೆಯೇ ಪ್ರತ್ಯಾಹಾರಮಕ್ಕುಂ। ಸ್ವಾತ್ಮನಿಷ್ಠೆಯೇ ಧಾರಣವಾಗಿರ್ಪುದು। ಬ್ರಹ್ಮೇತಾನೆಂಬೈಕ್ಯಾನುಸಂಧಾನವೇ ಧ್ಯಾನವೆನಿಸುವದು। ಯೆಚ್ಚರವಲ್ಲದ। ಮರವೆಯುಲ್ಲದಸಂವಿನ್ಮಾತ್ರಾವಭಾಸವೇ ಸಮಾಧಿಯಹುದೆಂಬದು ಮೊದಲಾದ। ನಿರ್ಗುಣಾಷ್ಟಾಂಗಲಕ್ಷಣಾದಿಗಳಂ ವಿವೇಕಿಸಿ

— ಷಟ್ಚಕ್ರವಿಷಯವಿವೇಕ. —

ಮತ್ತಮಾಯೋಗಲಕ್ಷ್ಯಾನುಸಂಧಾನಕ್ಕುಪಯುಕ್ತವಾಗಿ । ಮೂಲಾಧಾರಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಗ್ನೇಯಗಳೆಂಬ ಷಟ್ಚಕ್ರಗಳಿಗೆ ಕ್ರಮದಿಂ। ದೇಹಮಧ್ಯ। ಲಿಂಗ। ನಾಭಿ। ಹೃದಯ। ಕಂಠತಾಲುಮಧ್ಯ । ಭ್ರೂಮಧ್ಯಲಲಾಟವೆಂಬಾರುಸ್ಥಾನಂಗಳಂ। ಚತುರಶ್ರ, ಅರ್ಧಚಂದ್ರ, ತ್ರಿಕೋಣ, ಷಟ್ಕೋಣ, ವೃತ್ತ, ಚಿತ್ರವೆಂಬಷಡಾಕಾರಂ

ಗಳಂ। ಪೃಥಿವ್ಯಾಧಿಮಾನಸಾಂತಮಾದಷಡ್ಭೂತಂಗಳಂ। ಪೀತ, ಶ್ವೇತ, ರಕ್ತ, ನೀಲ, ಸ್ಫಟಿಕ, ಮಾಣಿಕ್ಯವೆಂಬಾರುವರ್ಣಂಗಳಂ। ಚತುರ್ದಳ, ಷಡ್ದಳ। ದಶದಳ। ದ್ವಾದಶದಳ। ಷೋಡಶದಳ। ದ್ವಿದಳಂಗಳುಳ್ಳಕಮಲಾಕಾರಂಗಳಂ। ವಾದಿಸಾಂತ। ಬಾದಿಲಾಂತ। ಡಾದಿಫಾಂತ। ಕಾದಿಠಾಂತ। ಅಕಾರಾದಿಷೋಡಶಸ್ವರಗಳು। ಹಂಕ್ಷಂ। ಯೆಂಬಅಕ್ಷರಂಗಳಂ। ಬ್ರಹ್ಮಾದಿಜೀವಾಂತಮಾದಾಧಾರಾದಿ ದೇವತೆಗಳಂ। ಮೇಲೆ। ಬ್ರಹ್ಮಚಕ್ರ- ಶಿಖಾಚಕ್ರ-ಪಶ್ಚಿಮಚಕ್ರತ್ರಯಮುಂ- ಕ್ರಮದಿಂದಮಕ್ಕೆ-ಮಸ್ತಕ-ಶಿಖಾ-ಶಿಖಾಂತವೆಂಬಸ್ಥಾನತ್ರಯಮುಂ- ಸಹಸ್ರದಳ-ತ್ರಿದಳ-ಏಕದಳಮಾದ ತ್ರಿಪದ್ಮಗಳಂ-ಅಕ್ಷರಾತ್ಮಕನಾದ-ಅನಕ್ಷರಾತ್ಮಕನಾದ-ನಿಶ್ಶಬ್ದವೆಂಬ ಅವ್ಯಕ್ತನಾದವೆಂಬೀತ್ರಿನಾದಂಗಳಂ। ಅಂತರಾತ್ಮ-ಪರಮಾತ್ಮ-ಪರಬ್ರಹ್ಮಮೆಂಬ-ಅಧಿದೇವತಾತ್ರಯಮುಂ ಕ್ರಮದಿಂತತ್ತದ್ವಿಪ್ರತಿಪತ್ತಿಮತಭೇದಗಳಿಗವಕಾಶವಿಲ್ಲದಂತೆ ಅನುಭವಸಿದ್ಧಂತಮಾಗೆ ಪ್ರತಿಪಾದಿಸಿ॥

— ಯೋಗವಿದ್ಯಾವಿಶೇಷ. —

ಬಳಿಕ ಸೋಮಸೂರ್ಯಾಗ್ನಿ ಮಂಡಲತ್ರಯು। ಸ್ಥಾನ-ಕಾಂತಿ-ವ್ಯಾಪ್ತಿ ಪ್ರಯೋಜನಪ್ರಕಾರಂಗಳಂ। ಬಾಹ್ಯಮಧ್ಯಾಂತರ್ಲಕ್ಷ್ಯತ್ರಯಮುಂ। ಗುಣರಹಿತ್ಯಾಕಾಶಪಂಚಕಮುಂ। ಪೂರ್ವಮಧ್ಯೋತ್ತರವೆಂಬತಾರಕತ್ರಯಮುಂ ಷಣ್ಮುಖೀಖೇಚರೀ। ಶಾಂಭವಿಮೊದಲಾದಮುದ್ರಾಭೇದಂಗಳಂ। ಉನ್ಮನೀ ಮನೋನ್ಮನೀ। ಸಹಜೆಯೆಂಬಮನಸ್ಥಾತ್ರಯಮುಂ। ವಿಕ್ಷೇಪ, ಗತಾಗತ ಸಂಶ್ಲಿಷ್ಟ। ಸ್ವಲೀನವೆಂಬಮನೋವೃತ್ತಿಚತುಷ್ಟಯಮುಂ। ಬಾಲ। ಉನ್ಮತ್ತ, ಪಿಶಾಚಾದಿಲಕ್ಷಣಮುಳ್ಳ। ಯೋಗೀಶ್ವರಚಿಹ್ನತ್ರಯಮೊಂದಿದುಮೊದಲಾದುದೆಲ್ಲಂ। ಸಪಾದಲಕ್ಷಭೇದಾಂತರ್ಭೇದ ಸಹಿತಮಾಗಿ ಯೋಗಯಾಮದ್ವಿಷಯಂಗಳಂ ಶಿವಸಿದ್ಧಾಂತಮಾದ ಆಗಮಶಾಸ್ತ್ರದಲ್ಲಿ ಯೋಗಪಾದದೊಳು ಸಪ್ರಪಂಚಮಾಗಿ ಪ್ರತಿಪಾದಿಸಿರ್ಪಂ.

ಇತಿ ಯೋಗಪಾದಸ್ವರೂಪಂ.

## — ಅಥಜ್ಞಾನಪಾದ ಪ್ರಾರಂಭಃ. —

ಬಳಿಕ ಪ್ರಾಣಿಗಳೊಳು ಸರ್ವೋತ್ತಮನಾದ ಶಿವಸಿದ್ಧಾಂತಿಯು। ಶಿವಜ್ಞಾನದಿಂದಲೇ ಕೃತಕೃತ್ಯನಾಗಿ ಶಿವಸಮಾನತಾರೂಪಮುಕ್ತಿಯಂ ಪಡೆವನಾಗಿ। ಶೈವರೆಲ್ಲರುಂ ಮುಖ್ಯವಾಗಿ ಶಿವಸಿದ್ಧಾಂತ ಜ್ಞಾನಸ್ವರೂಪವಂ ತಿಳಿದಿರಲ್ಕೆ। ಆಗಮಶಾಸ್ತ್ರಜ್ಞಾನಪಾದದೊಳು। ಅಬಾಧಿತವಾಗಿರುವ ವಿಸ್ತರಣ ವಿಚಾರವಂ ಸಂಗ್ರಹಿಸುದೆಂತೆನೆ। ಪತಿ ಪಶು ಪಾಶವೆಂದು ತ್ರಿಪದಾರ್ಥಂಗಳೇ ಸಿದ್ಧಾಂತಶಾಸ್ತ್ರದೋಳ್ ಪ್ರತಿಪಾದ್ಯಂಗಳವುಗಳಲ್ಲಿ॥

### — ಪತಿಪದಾರ್ಥ. —

ಅನಾದಿ-ನಿರ್ಮಲ-ಚಿದ್ಭುವನ-ಏಕರೂಪವಾಗಿ-ಸೃಷ್ಟಿ-ಸ್ಥಿತಿ-ಸಂಹಾರ ತಿರೋಭಾವ-ಅನುಗ್ರಹವೆಂಬ ಪಂಚಕೃತ್ಯಗಳಿಗೂ ಸ್ವಾಧೀನಕರ್ತೃತ್ವವೇ ತನಿಗೆ ಸಾಧಾರಣ ಧರ್ಮವಾಗಿವುಳ್ಳ। ಸದಾಶಿವಚೈತನ್ಯವೇ ಪಶುಪತಿ ಪರಬ್ರಹ್ಮವಸ್ತುವೆಂಬಪ್ರತಿಪದಾರ್ಥವೆಂದು ತಿಳಿಯಲಕ್ಕುಂ॥

### — ಸೃಷ್ಟಿಸ್ವರೂಪ. —

ಬಳಿಕಾ ಸೃಷ್ಟ್ಯಾದಿಪಂಚಕೃತ್ಯಗಳೊಳು ಮೊದಲನೆಯದಾದ ಸೃಷ್ಟಿಯು। ಬಿಂದ್ವಧಿಕಾರಾವಸ್ಥಾತ್ಮಕೋಪಾಧಿ ವಿಶಿಷ್ಟತ್ವದಿಂದೀಶಸಂಜ್ಞೆಯುಳ್ಳ ಪರಶಿವನ।ಸನ್ನಿಧಾನಕರ್ತೃತ್ವಪ್ರಯುಕ್ತವಾದ ಸಕಲಕಾರ್ಯೋತ್ಪಾದಕವ್ಯಾಪಾರ ವಿಶೇಷವಾಗಿಪ್ಪುದೆಂದು ತಿಳಿಯಲಕ್ಕುಂ॥

### — ಕರ್ತೃತ್ವಭೇದ. —

ಮತ್ತಮಾ ಕರ್ತೃತ್ವಮೆಂಬುದು।ಕಾರ್ಯೋಪಾದಾನಗೋಚರಾಪರೋಕ್ಷಜ್ಞಾನಚಿಕೀರ್ಷಾಕೃತಿರೂಪವೆಂದು ಸಾಮಾನ್ಯವಾಗಿತಿಳಿದರುಂ। ಈಶಕ್ತಿಯೊಳು ವಿಶೇಷಮಿಪ್ಪುದಾಗಿ। ಕರಣಕರ್ತೃತ್ವ-ಸಂಕಲ್ಪಕರ್ತೃತ್ವ-ಸಂನಿಧಾನ ಕರ್ತೃತ್ವವೆಂದು ತ್ರಿವಿಧವಾಗಿಪ್ಪುದೆಂತೆನೆ। ಈಶ್ವರದತ್ತಸ್ವಾತಂತ್ರ್ಯಮುಳ್ಳ। ಕುಲಾಲಾದಿಗಳಿಗಿಪ್ಪಘಟಾದಿಕರ್ತೃತ್ವವು। ಘಟೋಪಾದಾನವಾದ ಮೃತ್ಪಿಂಡಯದೊಳಗಿಲ್ಲವಾಗಿ ಪೃಥುಬುಧ್ನೋದರಾದಿ ವಿಕಾರಾತ್ಮಕೋಪಕರಣಮಾತ್ರಕ್ಷಮಮಪ್ಪುದರಿಂದದುಕರಣ ಕರ್ತೃತ್ವವೆನಿಸಿ ಬದ್ಧಜೀವಸಾಧಾರಣವಾಗಿಪ್ಪುದು। ಮತ್ತಮಾ ಈಶ್ವರದತ್ತಶಕ್ತಿಕರಾದ ವಿಶ್ವಕರ್ಮಾದಿಗಳಿಪ್ಪ। ವಿದ್ಯಾಕರ್ಮಾದ್ಯತಿಶಯಸಾಧ್ಯವಾದ ಲೋಕಾಂತರನಿರ್ಮಾಣಾದಿಕರ್ತೃತ್ವವು। ಸಂಕಲ್ಪವೆಂಬಸ್ಮರಣವಿಶೇಷಮಾತ್ರಮಪ್ಪುದ

ರಿಂ। ಸರ್ವಜ್ಞತ್ವವಿಲ್ಲದೆ ಕ್ವಚಿದಂಶದೊಳು। ಅಜ್ಞತ್ವಾದಿ ದೋಷೋಪಹತವಾಗಿ। ಸಂಕಲ್ಪಕರ್ತೃತ್ವವೆನಿಸಿ। ಅಧಿಕಾರಿಕಜೀವಸಾಧಾರಣವಾಗಿರ್ಪುದು॥ ಬಳಿಕ ಕುಮುದ-ಕಮಲ-ಮಧೂಚ್ಛಿಷ್ಟ-ಮೃತ್ತಿಕೆಗಳಿಗೆ- ಕ್ರಮದಿಂ-ಸಂಕೋಚ-ವಿಕಾಸ-ದ್ರವ-ಶುಷ್ಕಂಗಳೆಂಬ ವಿಷಯವಿಕಾರಂಗಳಂ। ತನ್ನಸನ್ನಿಧಾನಮಾತ್ರದಿಂಮಾಳ್ಪ ನಿರ್ವಿಕಾರನಾದ ಸೂರ್ಯನಲ್ಲಿಯುಂ। ಕಬ್ಬುಣಮಂನೋಂಕದೆ ಕೆಳಕೊಳ್ಳುಲುಳ್ಳ ಅಯಸ್ಕಾಂತಮಣಿಯಲ್ಲಿಯುಂ ತನ್ನಲ್ಲಿಯೆಲ್ಲಮಂ ಪ್ರತಿಫಲಿಸುವಂತೆಮಾಳ್ಪ ದರ್ಪಣದಲ್ಲಿಯುಂ। ಸನ್ನಿಧಾನಕರ್ತೃತ್ವಮಿಪ್ಪಂತೆ। ಸರ್ವಜ್ಞನಾದ ಪಶುಪತಿಯುಂ। ತನ್ನಸಾನ್ನಿಧ್ಯಮಾತ್ರದಿಂ। ಪಂಚಕೃತ್ಯಗಳಂಮಾಳ್ಪನೆಂದೀ। ಸನ್ನಿಧಾನಕರ್ತೃತ್ವವು ಪ್ರತಿಪದಾರ್ಥದಲ್ಲಿಮಾತ್ರವಿಪ್ಪುದೆಂದು ತಿಳಿಯಲ್ವೇಳ್ಕುಂ॥

— ಸ್ಥಿತಿಸ್ವರೂಪ. —

ಬಳಿಕಾತ್ಮರ್ಗೆ ಪರಮಾನಂದೋತ್ಪಾದಕಮಪ್ಪುದರಿಂ। ಭೋಗಾವಸ್ಥೆಯನೈದಿದಬಿಂದೂಪಾಧಿಯಿಂ ಸದಾಶಿವನಾಮಧೇಯಮುಳ್ಳ ಪರಶಿವನು ಸಮಸ್ತಜಗತ್ಪಾಲನಮಂ ಮಾಳ್ಪನಾಗಿ। ಅಂಥಾಪಾಲನಕೃತ್ಯವೇಸ್ಥಿತಿಯ ಸ್ವರೂಪಮಕ್ಕುಂ॥

— ಸಂಹಾರಸ್ವರೂಪ. —

ಮತ್ತು ಸಂಸಾರದಿಂದುಃಖಿತರಾದ ಪಶುಗಳವಿಶ್ರಮಣಾರ್ಥವಾಗಿ। ಶಿವನನಿಯೊಮಕಶಕ್ತಿಯಿಂ। ಸಕಲತತ್ವಭುವನಾದಿಕಾರ್ಯವರ್ಗವುಸಂಕುಚಿತವಾಗಿ। ಲಯಾವಸ್ಥೆಯನೈದಿದಬಿಂದೂಪಾಧಿಯಿಂದೀಶಸಂಜ್ಞಿತನಾದ ಪತಿಯ ನಿವೃತ್ತಿವ್ಯಾಪಾರವಿಶೇಷವೇ ಪ್ರಪಂಚಸಂಹಾರಮಕ್ಕುಂ॥

— ತಿರೋಭಾವಸ್ವರೂಪ. —

ಮತ್ತು ಸರ್ವಾತ್ಮರಭೋಗಸಾಧನವಾದ ಬಿಂದೂಪಾಧಿಯಿಂ। ಕರ್ಮಾನುಸಾರದಿಂ ದಾವಾತತ್ವಭುವನಾದಿಗಳಲ್ಲಿರ್ದ ಭೋಗವನುಣಿಪುದರಿಂ ದಾವಾವನಾಮಧೇಯಮುಳ್ಳ ಪರಶಿವನಕೃತ್ಯವಿಶೇಷಕ್ಕೆ। ಆಯಾಪಶುಗಳ ಭೋಗಾದೃಷ್ಟತೀರಿದ ಬಳಿಕಕಾರ್ಯಮಿಲ್ಲಾಗಿ। ಅದು ತೋರದಿರ್ಪುದೇ ತಿರೋಭಾವಮಕ್ಕುಮಿದು ಸಂಹಾರತುಲ್ಯವಾದರುಂ ಕಾರಣವೈಲಕ್ಷಣ್ಯದಿಂ ಬೇರ್ಪಟ್ಟಿರ್ಪುದು॥

— ಅನುಗ್ರಹಸ್ವರೂಪ. —

ಮತ್ತು ನಿಶ್ಶೇಷವಾಗಿನಷ್ಟವಹುದಕ್ಕೆ ಯೋಗ್ಯವಾದಮಲ ಪರಿಪಾ

ಕಾನುಸಾರದಿಂ ಅತ್ಯಂತನಾಶಪರಿಣಾಮ ವಿಶೇಷಗುಣಯುಕ್ತವಾದ ತನ್ನ ಕಾರ್ಯವರ್ಗಗರ್ಭೀಕಾರಕ್ಕಭಿಮುಖವಪ್ಪ ಬಿಂದೂಪಾಧಿಯಿಂಲಭ್ಯವಾದ ನಿರಧಿಕರಣ-ಸಾಧಿಕರಣ-ಶಿವಧರ್ಮಿಣಿ-ಲೋಕಧರ್ಮಿಣಿ-ನೈಷ್ಠಿಕಿ-ಹೌತ್ರಿಕೆ ಯೆಂಬಿವುಮೊದಲಾದ ದೀಕ್ಷಾದ್ವಾರದಿಂದೀಶಾನಸಂಜ್ಞಕನಾದಪತಿಯು। ಸ್ವಸಾಮ್ಯಸಂಜ್ಞಕ ವಿಶುದ್ಧಾತ್ಮಾಭಿವ್ಯಕ್ತಿಗೆ ಕಾರಣವಾದ ಅತಿಪ್ರಸಾದ ವೆಂಬ ವ್ಯಾಪಾರವಿಶೇಷವೇ ಅನುಗ್ರಹವೆಂದು ತಿಳಿಯಲ್ಪೇಳ್ಕು॥

— ಪಶುಪದಾರ್ಥ. —

ಮತ್ತಮನಾದಿ ಮಲರುದ್ಧಜ್ಞಾನ ಕ್ರಿಯಾಶಕ್ತಿಯುಕ್ತಚೈತನ್ಯವೇ ಪಶುವಪ್ಪುದರಿಂ। ಪಿಪೀಲಿಕಾದಿವಿಷ್ಣ್ವಂತವಾಜೀವಕೋಟಿಯೆಲ್ಲಮುಂ ಪತಿಯುಪಾಶದಿಂಬದ್ಧವಾಗಿ। ಪತ್ಯತಿರಿಕ್ತವ್ಯಷ್ಟಿಚೈತನ್ಯವರ್ಗವೆಲ್ಲ ಮುಂ ಪಶುವೆಂದು ತಿಳಿಯಲ್ಪೇಳ್ಕು॥

— ಪಾಶಪದಾರ್ಥ. —

ಬಳಿಕ ಪತ್ಯಂಭಿನ್ನವಾದುವಾ ಸಂಜ್ಞಕವಪ್ಪಶಿವಶಕ್ತಿಯಿಂದಧಿಷ್ಟಿತವಾಗಿ ಪಶುಜ್ಞಾನಕ್ರಿಯಾಶಕ್ತಿಯಂ ತಿರಸ್ಕರಿಸಿಕೊಂಡಿರ್ಪಜಾಡ್ಯನವೇ ಪಾಶಪದಾರ್ಥವೆಂದು ತಿಳಿಯಲಕ್ಕುಂ॥

— ಸಿದ್ಧಾಂತಮತವಿವೇಕ. —

ಬಳಿಕ ನಿಖಿಲನಿಗಮನಿಗಮಾಂತಾಗಮವಾದಿ ಸಮ್ಮತವಪ್ಪ ಭಾಷಾದಿ ಸಂಗ್ರಹೀತಸಿದ್ಧಾಂತವಿವೇಕವೆಂತೆನೆ। ಜ್ಞಾನಕ್ರಿಯಾಶಕ್ತಿಯುಕ್ತಚೈತನ್ಯವೊಂದೇ। ಚಿದಚಿದ್ವಿಶಿಷ್ಟಾದ್ವೈತಶಿವತತ್ವವೆಂತಲೂ। ಇದರೊಳು ನಿರ್ಗುಣ। ನಿರ್ವಿಶೇಷ। ನಿಷ್ಕ್ರಿಯ। ನಿರಂಜನ। ಸತ್ತಾಮಾತ್ರ। ಸುಖಮಾತ್ರ। ಚಿನ್ಮಾತ್ರಗಳೆಂಬ ಶುದ್ಧಾದ್ವೈತಬೋಧಕಶ್ರುತ್ಯಾದಿಗಳು। ವಿಶೇಷ್ಯಾನತಿರಿಕ್ತವಿಶೇಷಣ। ಅಥವಾ ವಿಶೇಷಣೀಭೂತವಿಶೇಷ್ಯಾ।ಸ್ವಾನತಿರಿಕ್ತವಿಶೇಷಣಕತ್ವ। ವಿಶೇಷಣ ವಿಶೇಷ್ಯೋಭಯಾತ್ಮಕತ್ವ। ತದುಭಯನಿತ್ಯಸಂಸರ್ಗರೂಪ ವಿಲಕ್ಷಣಸ್ವರೂಪ ಶಕ್ತಿಮತ್ವವೆಂಬದು ಮುಂತಾದ ತಾತ್ಪರ್ಯವನುಂಕೊಡುವವಾಗಿ। ಸಗುಣಬ್ರಹ್ಮವಾದವಭಿಮತವೆಂತಲೂ ಸ್ವರೂಪದೊಳು ಜೀವೇಶ್ವರಭೇದವಿಲ್ಲವೆಂತಲುಂ। ಮುಕ್ತಿಯೊಳು ನಿರಂಜನ ಸಾಮ್ಯನಲ್ಲದೆ ಸಾಯುಜ್ಯಕೈವಲ್ಯಗಳೆಂಬವು।ಬೇರೆಅವ ಸಿದ್ಧವಾದರುಂ ಅದ್ವೈತಭಿಮತತುರೀಯಾತೀತ ಜೀವನ್ಮುಕ್ತಿಯಂತೆ ಸಿದ್ಧಾಂತಮುಕ್ತಿಯೊಳು ಭೇದತೋರದಿರ್ಪುದರಿಂದೌಪಚಾರಿಕವಾಗಿರ್ಪುದೆಂತಲುಂ। ಪತಿ

ಪದಾರ್ಥವಾದ ಶಿವನಿಗೂ। ಪಶುಪದಾರ್ಥವಾದ ವಿಷ್ಣುಬ್ರಹ್ಮಾದಿಜೀವ ಕೋಟಿಗೂ। ಪಾಶಗುಣಶಕ್ತಿತಾರತಮ್ಯಾನು ರೂಪತರತಮಭಾವವಿಪ್ಪು ದೆಂತಲುಂಪತಿಗೂ ಪಾಶಮುಕ್ತಪಶುಗಳಿಗೂ। ಕ್ರಮದಿಂ ಸ್ವಾಧೀನಪಾಶ ಕತ್ವ। ಶಾಂತವಿಲೀನದಗ್ಧಪಾಶಕತ್ವವೆಂಬವೇ। ಮುಕ್ತಿಯೊಳಗುಂಭೇದಸಾ ಧಕವಾಗಿರ್ಪುದಾಗಿ। ಪತಿಗೆಸ್ವರೂಪವಶರಾದಪಶುಗಳು। ಮುಕ್ತಿಯೊಳು ವಿಧೇಯಶೋಕರಾಗಿ ಪತಿಸೇವೆಗೈವುದೇಸ್ವಭಾವವಾಗಿ। ಭೇದದಿಂ ಹಾನಿ ಯಿಲ್ಲದಿರ್ಪುದೆಂತಲುಂ। ಪದಾರ್ಥತ್ರಯತದ್ಭೇದಗಳುಂಅನಾದಿಯುಪ್ಪುದ ರಿಂ। ಸೃಷ್ಟ್ಯಾದಿಜೀವಭೋಗವೈಚಿತ್ರ್ಯವಿರೋಧವಿಲ್ಲವೆಂತಲುಂ। ಸ್ವಶ ಕ್ತನಾದ ಪತಿಯೊಳುಮತ್ತಾವ ಅಸಾಮಂಜಸಾದಿವಿರೋಧಗಳೂಯಿಲ್ಲವೆಂ ತಲುಂ ವಿಶ್ವವಿಷಯಗಳೆಲ್ಲವುಂ ಅದ್ವೈತಸಮ್ಮತವಾಗಿಯುಂ। ಐಕ್ಯಾ ತ್ಮ್ಯಾನುಸಂಧಾನಾದಿಗಳೇಸ್ಥಿಪಾಶದಹನೋಪಯುಕ್ತಗಳಾಗಿ। ಪರಮೇಶ್ವರ ಸಮ್ಮತವುಪ್ಪುದರಿಂ ಜಗನ್ಮಿಥ್ಯಾತ್ವಾದಿ ವಿವೇಕಮಿರಬೇಕಾದರುಂ। ತಾ ತ್ತ್ವಿಕವಾದ ಶೈವಪ್ರಪಂಚವುಸತ್ಯವಾಗಿ। ಪಾಶವಿಕೃತಿಪ್ರಪಂಚವೆಲ್ಲವೂ ಮಿಥ್ಯೆಯೆಂತಲುಂ। ಭೇದಮಾತ್ರಜ್ಞಾನವು ಮುಕ್ತಿಪ್ರತಿಬಂಧಕವಾದ ರುಂ ಭೇದವುತಾದಾತ್ಮ್ಯರೂಪವಾಗಿರ್ಪುದೆಂತಲುಂ। ಸ್ಥೂಲಜ್ಞಾನಕ್ರಿ ಯಾವಿಶಿಷ್ಟನಿಗುದ್ಧಶಕ್ತಿಕರಾದ ವಿಷ್ಣ್ವಾದ್ಯಮುಖಪಶುಗಳಲ್ಲಿ। ಕೆಲವರು ನಿತ್ಯಮುಕ್ತರಾಗಿಯುಂ। ಕೆಲವರು ಅಧಿಕಾರಿಕಮುಕ್ತರಾಗಿಯುಂ। ಕೆಲವ ರುಅಧಿಕಾರಿಕಬದ್ಧರಾಗಿಯುಂ। ಕೆಲವರು ಸಂಸ್ಕೃತಿಬದ್ಧರಾಗಿಯುಂ।ಕೆಲ ವರು ಕೇವಲಜಡಸದೃಶಾವಸ್ಥರಾಗಿಯುಂ। ಅಸಂಖ್ಯಾತಬ್ರಹ್ಮವಿಷ್ಣು ರುದ್ರಾದ್ಯಮುಖರಾದ ಪರಸ್ಪರಹಸ್ರ ಸದಾಶಿವರೂಪದಿಂದಲೂ। ತದಂ ತರ್ಗತಪಶುಪಾಶರೂಪದಿಂದಲೂ। ಪಾಶಲೇಶಹೀನಶುದ್ಧಾದ್ವೈತರೂಪದಿಂ ದಲೂ। ಶಾಂತಪಾಶವಿಶಿಷ್ಟದ್ವೈತರೂಪದಿಂದಲೂ। ಪಾಶವಿಶಿಷ್ಟದ್ವೈತ ರೂಪದಿಂದಲೂ। ಪಶುಪಾಶೋಭಯಾಂತರ್ಯಾಮಿ ರೂಪದಿಂದಲೂ। ಪತಿ ಯೋರ್ವನಲ್ಲದೆ ಬೇರೆಯಿಲ್ಲವಾಗಿ। ತನ್ನಿಚ್ಛೆಯಿಂತಾನೇ ನಾಕಾರದಿಂಪು ರವ ಪಶುಪತಿಯೊಳು ಜಲದೊಳಗಿನಂತೆ ವ್ಯಧಿಕರಣ ಧರ್ಮವಿರೋಧವಿಲ್ಲವೆಂ ತಲುಂ। ಶ್ರುತಿಸಿದ್ಧಾಂತಭವಾದಿನಾಮಾಷ್ಟಕದಿಂ। ತದರ್ಥನಿರ್ಣಯಕ ವೇದರಾಶಿಯಿಂ। ಅಥರ್ವಣಶಿಖಾದ್ಯಷ್ಟಾದಶೋಪನಿಷತ್ತುಗಳಲ್ಲಿಯುಂ। ಛಾಂದೋಗ್ಯಾದಿಪಕೋಪನಿಷತ್ತುಗಳಲ್ಲಿಯುಂ! ಸಕಲಾಗಮಪುರಾಣಗಳ ಲ್ಲಿಯುಂ। ಉಪಕ್ರಮಾದಿಷಡ್ವಿಧಲಿಂಗಗಳಿಂದ ನಿರ್ಣೀತವಾಗಿ!ಬ್ರಹ್ಮಸೂ

ತ್ರಗಳಂ। ಪಶುಪತಿಮೇಸನುಪಾಸ್ಯನೆಂದುತಾತ್ಪರ್ಯವಿಷಯಮೆಂತಲುಂ। ಪಶುಪತಿಪರಾಜ್ಞ್ಯರಿಗೆ ಪಾಶಕಳೆಯದಾಗಿಯೆಂದಿಗುಂಮುಕ್ತಿಯಿಲ್ಲವೆಂತಲುಂ। ಸರ್ವವೇದಗಳೂ ಸಕಲಶಬ್ದಗಳೂ, ಯೋಗಬಲದಿಂದಲೂ, ಶ್ರೌತಾಗಮರೂಢಿಯಿಂದಲೂ, ಪಶುಪತಿಪರವೆಂತಲುಂ ವಿಶೇಷವಾಗಿ। ಶಿವಶಬ್ದಕ್ಕೂ ಭವಾದಿನಾಮಾಷ್ಟಕಕ್ಕೂವಿಷ್ಣ್ವಾದಿಗಳಲ್ಲಿ ಯೋಗಶಕ್ತಿಬೋಧೆಯಿದ್ದರುಂ। ರೂಢಶಕ್ತಿಬೋಧೆಯಿಲ್ಲದೆ ಪಶುಪತಿಮಾತ್ರಪರತ್ವವೆಂತಲುಂ। ಪಶುಪತಿಯೇಶುದ್ಧಸತ್ವಮಯನಾಗಿ। ತದ್ವಿರುದ್ಧಪ್ರತಿಪಾದಕವಾಕ್ಯಂಗಳ ನಿತ್ಯಬದ್ಧತಮೋಯೋಗ್ಯ ಪಶುಮೋಹನಾರ್ಥವಾಗಿ। ರಾಜಸತಾಮಸಕಲ್ಪಿತಗಳೆಂತಲು। ತಾದೃಶತತ್ವವು! ಕೂರ್ಮಲೈಂಗ। ಸೂತಸಂಹಿತಾ। ಕೇದಾರಖಂಡ! ಸಿದ್ಧಾಂತಾಗಮಸ್ಮೃತ್ಯಾದಿಗಳಿಂ ದೃಢತರವೆಂತಲುಂ। ಪ್ರಣವಬ್ರಹ್ಮಶಬ್ದಗಳು ಸದಾಶಿವೈಕಬೋಧಕಗಳೆಂತಲುಂ। ಆತ್ಮಚೈತನ್ಯಾದಿಶಬ್ದಗಳು ಸಾಧಾರಣಗಳೆಂತಲುಂ। ಆಕಾಶ। ಶ್ರೌತಗಳಾದಕಾರಣಾದಿಶಬ್ದಗಳು। ಚಿದಂಬರಾದಿಪರಗಳೆಂತಲುಂ। ಭವಾದಿಶಬ್ದಗಳಂ। ಘಟಾದಿಸತ್ತಾದಿಕವು ಭವಸತ್ತಾನತಿರಿಕ್ತವೆಂತಲುಂ। ಸಿದ್ಧಾಂತದೊಳಪ್ರಾಕೃತಪರಕೈಲಾಸ ಪ್ರಪಂಚವಿಷಯವಾಗಿ ಸತ್ಖ್ಯಾತಿಯುಂ। ಪಾಶವಿಕೃತಪ್ರಪಂಚದೊಳು ಅನಿರ್ವಚನೀಯ ಖ್ಯಾತಿಯುಂಸ್ವೀಕೃತವೆಂದು। ತಿಳಿಯಲ್ವೇಳ್ಕುಂ॥

## — ಉಪನಿಷನ್ಮೀಮಾಂಸೆ. —

ಬಳಿಕ ನಿರುಪಾಧಿಕಪ್ರೇಮದ್ವೇಷಾಸ್ಪದಗಳಾದ ಸುಖದುಃಖಗಳ ಅತ್ಯಂತಪ್ರಾಪ್ತ್ಯತ್ಯಂತನಿವೃತ್ತಿಗಳೇ। ಪರಮಪುರುಷಾರ್ಥಮಪ್ಪುದರಿಂದದು। ಸಿದ್ಧಿಸುವದೆಂತು। ಜ್ಞಾನದಿಂದನಲದಕೆವಿಷಯವೇನು। ಪ್ರಸಿದ್ಧಮಪ್ಪುದೆಂತು। ತಿಳಿವಧಿಕಾರಿಯಾರೆಂಬವು ಮುಂತಾಗಿ। ಸಂದೇಹದೋಲಾಸನಾರೂಢಶೋತೃಜನಮನಶ್ಯಂಕಾಶೋಕೋನ್ಮೂಲನಕ್ಕಾಗಿ ಸರ್ವಜ್ಞಶಿಖಾಮಣಿಗಳಾದ ವ್ಯಾಸಾದಿಗಳು। ತಮ್ಮಶಾಸ್ತ್ರಪಾಂಡಿತ್ಯದಿಂದನ್ಯದೇವತಾಪರವಾಗಿಯುಂ। ಧ್ವನಿತೋರ್ಕ್ಯಂತೆ ರಚಿಸಿದ್ದಬ್ರಹ್ಮಸೂತ್ರಾದಿಗಳಿಗೆ ಕಾಶೀಖಂಡಾದಿಪ್ರಸಿದ್ಧವಾಗಿ ಶಿವಾಪಚಾರಶಿಕ್ಷಾರೂಪವಾದ। ಭುಜಸ್ತಂಭಾದ್ಯನುಭವಸ್ಮಾರಿತಪರಮೇಶ್ವರಾನುಭಾವಾನುಗ್ರಹ ಪ್ರಸಾದಿತಶುದ್ಧಜ್ಞಾನಸಂಪನ್ನರಾಗಿ। ಸ್ವಸ್ವನಿರ್ಮಿತಸೂತ್ರಾದಿಗ್ರಂಥಜಾತಕ್ಕೆಸ್ಪಷ್ಟವಾದತಾತ್ವಿಕ ತಾತ್ಪರ್ಯಮಂ ಸೂಚಿಸಲುಸೂತ್ರಾದಿಗೀತಾ ಬ್ರಹ್ಮಗೀ

ತಾ-ವ್ಯಾಸಗೀತಾದಿಗಳುಪೇಳ್ವರಾಗಿ- ಸಮನ್ವಯಾಧ್ಯಾಯ। ಅವಿರೋಧಾಧ್ಯಾಯ । ಸಾಧನಾಧ್ಯಾಯ। ಫಲಾಧ್ಯಾಯಗಳೆಂಬ ನಾಲ್ಕಧ್ಯಾಯವೂ, ಸದಾಬ್ರಹ್ಮಣಾದಿ ಸಕಲವರ್ಣಾಶ್ರಮ ಸಂಸ್ಕೃತರಾದಶೈವರೆಲ್ಲರಿಂ। ಮೋಕ್ಷಾರ್ಥವಾಗಿ। ತತ್ತದಧಿಕಾರಾನುಗುಣವಾಗಿ। ಆಗಮಾದಿಸಂಮತಕ್ರಿಯಾಚರ್ಯಾ ಯೋಗಜ್ಞಾನಲಕ್ಷಣವಿಂ । ಶಿವನೇಸಮುಪಾಸ್ಯನೆಂದುಸಕಲ ಶ್ರುತಿಸ್ಮೃತೀತಿಹಾಸ ಪುರಾಣಾದಿಗಳಿಂದ। ಅಬಾಧಿತವಾಗಿ। ಸಿದ್ಧಾಂತಗಳೊಳಸಲ್ಕವನಿಳಿವನ್ಯತಾತ್ಪರ್ಯಗಳ। ನಿಂದ್ಯವಾಗೆಸಿದ್ಧಾಂತಗಳಗಾಂ ಮುಖ್ಯಲಕ್ಷ್ಯವಾದ ಶಿವಾದ್ವೈತಮವಿರುದ್ಧಮಕ್ಕು॥

— ಸಮನ್ವಯಸಂಗ್ರಹ. —

ಬಳಿಕ ಶ್ರುತಿಸಿದ್ಧಾಂತದೊಳು ಪ್ರಕರಣಗಳಲ್ಲಿಯುಂ ಆರಾಧನಾರಾಧ್ಯಭೂತರಾದ ಧರ್ಮಬ್ರಹ್ಮಗಳಿಗೆ ಸಂಬಂಧಮುಂಟಾಗಿಯುಂ ಧರ್ಮವುಬ್ರಹ್ಮಬೋಧಕಹೇತುವಪ್ಪುದರಿಂಧರ್ಮವಿಚಾರಾನಂತರವಲ್ಲ ಬ್ರಹ್ಮವಿಚಾರವಾಳ್ಪುದೆಂತಲುಂ ಧರ್ಮವಿಚಾರವುಸಾಧನಚತುಷ್ಟಯ । ಸಂಪತ್ತಿದ್ವಾರಕವಾಗಿ ಬ್ರಹ್ಮಜ್ಞಾನಸಾಧಕವಪ್ಪುದೆಂತಲುಂ ಜ್ಞಾನದೊಳು ಸಮುಚಿತಕರ್ಮವಾದವೇನಿರ್ಧಾರಿತವೆಂತಲುಂ। ಗೋದೋಹನಾದಿಕದಂ ತದಧಿಕಾರಾಂತಪ್ರಯುಕ್ತೋಪ ಜೀವ್ಯತ್ವದಿಂಪಡ್ಯಾಗದಂತೆಫಲೈಕ್ಯದಿಂ ಕರ್ಮೈಕ್ಯಾದಿದೋಷಗಳಿಗವಕಾಶವಿಲ್ಲವೆಂತಲುಂ ನಿರ್ಧರಿಸಿ । ವೇದಾಹಮೇತಂ, ವಿದ್ವಾನಮೃತಃ । ಜ್ಞಾತ್ವಾಮುನಿರ್ಗಚ್ಛತಿಭೂತಯೋನಿಂ ಜ್ಞಾತ್ವಾಶಿವಂ ಮುಚ್ಯತೇಪಾಶಬಂಧೈಃ ಇತ್ಯಾದಿಶ್ರುತಿಗಳಿಂಮಹಾದೇವಜ್ಞಾನಕ್ಕೆ ಮುಕ್ತಿಸಾಧನಮುಖ್ಯತ್ವಮಂಪೇಳೆ.

— ಬ್ರಹ್ಮಶಬ್ದಾರ್ಥ. —

ಬ್ರಹ್ಮಶಬ್ದವು ಯೋಗರೂಢಿಲಕ್ಷಣಗಳಿಂಕಾರ್ಯಬ್ರಹ್ಮಪರ। ಕಾರಣರುದ್ರಪರ। ಚತುರ್ಮುಖಪರ- ಮುಖ್ಯಜೀವನಾರಾಯಣಪರ-ಅಂತಃಕರಣಪರ ಬಿಂದೂಪಾಧಿಪರ-ಸದಾಶಿವಪರ-ಗಣಪತಿಪರ-ಸುಬ್ರಹ್ಮಣ್ಯಪರ-ಸೂರ್ಯಪರ ಚಿನ್ಮಾತ್ರಪರ-ಆತ್ಮಪರ್ಯಾಯ ಪರಶಿವಪರ ಮಂಗಳಪರವೆಂದು ಬ್ರಹ್ಮಾರ್ಥಕವಾಗಿತಿಳಿವರುಂ ನಾರಾಯಣವರಂ ಬ್ರಹ್ಮ ಯೆಂಬಶ್ರುತಿಗೆ ಪಂಚಮಿತತ್ಪುರುಷಕವಾಸಮೇಮುಖ್ಯವಾಗಿಯುಂ- ಬ್ರಹ್ಮಣಸ್ಪತಿಯೆಂಬಗಣಪ

ಪತಿಮಂತ್ರದೊಳು ಪ್ರಮಾಥಾರಾಧ್ಯತ್ವ ಮಿಪ್ಪುದಾಗಿಯುಂ ಅಂಭಸ್ಯಪಾರೆಯೆಂಬಾದಿಯಾಗಿ ಮಂತ್ರಾನು ವಾಕ್ಯಗಳಲ್ಲಿರ್ಪ ಪುರುಷಸೂಕ್ತವೇದಪಾದತ್ರಗಳೊಳು ಪುರುಷೋವೈರುದ್ರಯೆಂಬ ಶ್ರುತಿಯಿಂ ನಿರ್ಧಾರಿತಮಪ್ಪಪುರುಷಪದಮಹತ್ಪದದೇವಪದಾದಿಗಳಿಂ ಉಪಕ್ರಮಾಭ್ಯಾಸೋಪಸಂಹಾರಬಲದಿ-ಪರಶಿವನೇ ಪ್ರತಿಪಾದ್ಯಮಾನನಾಗಿಯುಂ ಪ್ರಕರಣಾನುರೋಧದಿಂ ಸುತ್ತ್ರಮಾಬ್ರಹ್ಮಶಬ್ದವು ಈಶಾನುಮಂತ್ರದೊಳು ಈಶಾನವಿದ್ಯಾನಾಮಧಿಪತಿ ಭೂತಾಧಿಪತಿಬ್ರಹ್ಮಾಧಿಪತಿಶಿವಸದಾಶಿವ ಶಬ್ದಸಹೋಚ್ಚರಿತವಾಗಿ ಪರ್ಯಾಯಮಪ್ಪುದರಿಂ ಬ್ರಹ್ಮವೆಂದೊಡೆ ಶಿವನಲ್ಲದೆ ಬೇರೆಯಲ್ಲವೆಂದು ನಿರ್ಧಾರಿತಮಪ್ಪುದಾಗಿ ಬ್ರಹ್ಮಜಿಜ್ಞಾಸೆಯೆಂದೊಡೆ ಶಿವಜಿಜ್ಞಾಸೆಯೆಂದು ಸಿದ್ಧಮಕ್ಕುಂ॥

— ಕಾರಣವಾಕ್ಯಗಳು. —

ಬಳಿಕ ಕಾರಣವಾಕ್ಯಗಳೊಳು । ಆಕಾಶವೆಂದರೆ । ಚಿದಂಬರಾಕಾಶಶಿವಲಿಂಗಪ್ರಾಣವೆಂದರೆ। ಮುಖ್ಯಪ್ರಾಣಾತ್ಮಕ ಶಿವವಾಯುಲಿಂಗ। ಜ್ಯೋತಿರೆಂದರೆಪ್ರಣವಜ್ಯೋತಿರಾತ್ಮಕ ಶಿವಮಂತ್ರಸಾದೇಶ್ವರಲಿಂಗ । ಮಹಚ್ಛಬ್ದಮಹಾದೇವಮಹಾಲಿಂಗ । ಸತ್ತೆಂದರೆ। ಸ್ವರೂಪಸತ್ಯಲಿಂಗ। ಅಸತ್ತೆಂದರೆ। ಅಘೋರಮೂರ್ತಿಯಪ್ರಕೃತಿಲಿಂಗ। ಜಲವೆಂದರೆ। ಮಹಾಜಲಮೂರ್ತಿಯಅಬ್ಲಿಂಗ। ಸೂರ್ಯನೆಂದರೆ। ಅಷ್ಟಮೂರ್ತ್ಯಂತರ್ಗತದೃಗ್ಲಿಂಗ। ವೈಶ್ವಾನರನೆಂದರೆ। ಆಗ್ನೇಯಲಿಂಗವೆಂದೀಮೊದಲಸಿದ್ಧಮಾಗಲ್ಕೆ। ಪಂಚಬ್ರಹ್ಮ-ಪಂಚರುದ್ರ - ಸೂತಸಂಹಿತಾಮಹಾಭಾರತ ಶಿವಧರ್ಮಾಗಮಂಗಳಿಂ । ಬ್ರಹ್ಮನಾರಾಯಣ- ಶಿವ, ರುದ್ರ, ಹಿರಣ್ಯಗರ್ಭ, ಪತಿ, ಪುರುಷ, ದೇವಮಹತ್, ಸತ್, ಚೈತನ್ಯ, ಶಬ್ದವಾಚ್ಯನಪ್ಪ ಪರಶಿವನೇಜಗಜ್ಜನ್ಮಾದಿಕಾರಣನಪ್ಪಂ॥

— ಶಿವನೇಶಾಸ್ತ್ರಯೋನಿ —

ಬಳಿಕಂತು ಪ್ರತಿಪಾದಿಸಿದಶಾಸ್ತ್ರವು ಶಿವನಿಂಪೇಳಲ್ಪಟ್ಟುದಾಗಿಯುಂ । ಶಿವನಂಪೇಳ್ವುದಾಗಿಯುಂ । ವೇದಶ್ಶಿವಶ್ಶಿವೋವೇದಃಯೆಂಬನುಶಾಸನದಿಂ ಹರಿವಂಶಕೈಲಾಸಯಾತ್ರೆಯೊಳು । ತಾನ್ಯೇವಮಮನಾಮಾನಿಯೆಂಬಈಶ್ವರಾಜ್ಞೆಯಿಪ್ಪುದರಿಂ। ನಾರಾಯಣಋಷಿಯು। ಚಕ್ರಂಪಡೆಯಲು ಪರಮೇಶ್ವರನಂಪೂಜಿಸಿದ ಸಹಸ್ರನಾಮಾದಿಗಳೊಳಗುಂ। ಮಾಂಡೂಕ್ಯಾದ್ಯುಪನಿಷತ್ತುಗಳಲ್ಲಿಯುಂ। ಓಂಕಾರಕ್ಕೆಮುಖ್ಯಾರ್ಥನಪ್ಪ ಪರಶಿವನೇಸರ್ವ

ವ್ಯಾಪಕನಾಗಿ ವಿಷ್ಣುಶಬ್ದವಾಚ್ಯನಲ್ಲದೆಬೇರೆಯಿಲ್ಲವೆಂತಲುಂ । ವೈಕುಂಠಾದಿಗಳಲ್ಲಿ। ನಾರಾಯಣಶಬ್ದವಾಚ್ಯನಾಗಿಯುಂ ವಿಷ್ಣುವಾಚ್ಯನಾಗಿಯುಂಯಿಪ್ಪ ಪರಮೇಶ್ವರನೇ । ಅಂತರ್ಯಾಮಿಯುಪ್ಪುದರಿಂ । ವೈಕುಂಠನಿಗೆ । ವಿಷ್ಣ್ವಾದಿಶಬ್ದರೂಢಿಯಿದ್ದರುಂ ಕೇವಲರೂಢಶಕ್ತಿಗಿಂತಲುಂ ಯೋಗರೂಢವುಪ್ರಬಲವಾಗಿ ಪರಶಿವನೇಸರ್ವಶಬ್ದಾರ್ಥವಪ್ಪುದರಿಂ ಶಾಸ್ತ್ರಯೋನಿಯೆಂದುದು ನಿರ್ಧರಿಸಲಕ್ಕುಂ॥

— ಪತಿತ್ವೋಪಪತ್ತಿ. —

ಮತ್ತಮಾಪರಶಿವನೇ। ಪತಿಪದಾರ್ಥಮೆಂತೆನೆ। ದಿಶಾಂಚಪತಯೇ। ಪತ್ತೀನಾಂಪತಯೇ। ಅನ್ನಾನಾಂಪತಯೇ । ವೃಕ್ಷಾಣಾಂಪತಯೇ । ಸತ್ವನಾಂಪತಯೇ। ಹಿರಣ್ಯಪತಯೇ। ಅಂಬಿಕಾಪತಯೇ। ಉಮಾಪತಯೇ। ಪಶುಪತಯೇ। ಯೆಂಬದುಮುಂತಾಗಿ ಪರಸ್ಸಹಸ್ರಶ್ರುತಿಗಳುನಮಸ್ಕರಿಸುತಿರಲ್ಕೆ। ಪರಶಿವನಲ್ಲದೆಬೇರೆಪತಿಪದಾರ್ಥವಿಲ್ಲದರಿಂ। ಏಕೋರುದ್ರಃ। ಏಕೋದೇವಃ। ಏಕಮೇವಾದ್ವಿತೀಯಂಯೆಂಬಾದಿಯಾದ ಶ್ರುತಿವಾಕ್ಯಗಳಿಗೆ। ಐಕ್ಯರೂಪ್ಯವಿಪ್ಪುದರಿಂ। ಪರಶಿವನೇಸಮುಪಾಸ್ಯಪತಿಯಕ್ಕುಂ॥

— ಶಿವಜೀವೈಕ್ಯ. —

ಬಳಿಕ ಅಯಮಾತ್ಮಾ-ಏಷಆತ್ಮಾಸದಾಶಿವಃ। ಶಿವಏಷನಿರಂಜನಃ-ಶಿವಏವಾಹಮಸ್ಮ್ಯಯಃ-ಬ್ರಹ್ಮಾಹಮಸ್ಮಿ- ಮದಾತ್ಮಾಪರಮೇಶ್ವರಃ-ಈಶ್ವರಸ್ಸರ್ವಭೂತಾನಾಂಹೃದ್ದೇಶೇರ್ಜುನತಿಷ್ಠತಿ । ತತ್ವಮಸಿ। ಶಿವಮದ್ವೈತಂಚತುರ್ಥಮ್ಮತದೇವ। ಮತಾತ್ಮಾಶಂಭುರೀಶಾನೋಭೂತೇಭೂತೇವ್ಯವಸ್ಥಿತಃ ಕೈವಲ್ಯಲಕ್ಷ್ಮೀಪತಿರೀಶ್ವರೋಸ್ಮಿ । ಹ್ರೀಶ್ಚತೇಲಕ್ಷ್ಮೀಶ್ಚಪತ್ನ್ಯೌ। ವೇದಾಹಮೇತಂಪುರುಷಂಮಹಾಂತಂ। ಆದಿತ್ಯವರ್ಣಂತಮಸಸ್ತುಪಾರೇ। ಧ್ಯಾತ್ವಾಮುನಿರ್ಗಚ್ಛತಿಭೂತಯೋನಿಂಸಮಸ್ತಸಾಕ್ಷಿಂತಮಸಃಪರಸ್ತಾತ್। ಸಬ್ರಹ್ಮಾಸಶಿವಃ। ಬ್ರಹ್ಮವಿದ್ಬ್ರಹ್ಮೈವಭವತಿ। ನಿರಂಜನಃಪರಮಂಸಾಮ್ಯಮುಪೈತಿ। ನಿತ್ಯೋಸೌನಿರ್ಗುಣಶ್ಶಿವಃ । ಯೆಂಬದುಮೊದಲಾದ ಶ್ರುತಿವಾಕ್ಯಂಗಳಿಂ। ಜೀವನಿರ್ದೇಶಪೂರ್ವಕವಾಗಿ। ಶಿವೈಕ್ಯಪೇಳುತಿರಲ್ಕೆ। ಶಿವಸಮಾನತಾರೂಪಮುಕ್ತಿಯೊಳಗುಂ। ಚಿನ್ಮಾತ್ರಕ್ಕೆಭೇದಮಿಲ್ಲಾಗಿ, ಸ್ವರೂಪೈಕ್ಯಮಿಪ್ಪುದೆಂದುನಿರ್ಧಾರಿತಮಕ್ಕುಂ॥

— ಸಗುಣತ್ವಸಮರ್ಥನ. —

ತ್ತಮಾಶಿವಮಂಗಳಗುಣಂಗಳುಶಿವಂಗಳಹಣನದಿಂ । ಶಿವಸ್ವರೂಪಾ

ನತಿರಿಕ್ತವಾಗಿ। ಬೇರೆಗುಣಗಳುತೋರದಿರ್ದಡಂ।ನಿರ್ಗುಣನಾದೀಶ್ವರನಿಂ ಪಂಚಕೃತ್ಯಂಗಳಾಗಲ್ಕೆ। ನಿತ್ಯಜ್ಞಾನಕ್ರಿಯಾದಿಗಳುಂಟೆಂಬುದಕೆ। ಪರಾಸ್ಯಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀಜ್ಞಾನಬಲಕ್ರಿಯಾಚ। ಇಂತೆಂಬುದುಮೊದಲಾದಸತ್ಯಕಾಮಾದಿಶ್ರುತಿವಾಕ್ಯಗಳುಸಗುಣನಂ ಉಪದೇಶಿಪುದಾಗಿ। ಅಷ್ಟನಿಧಾನಾಧಿಕರಣತ್ವಾದಿಗಳಿಂ। ಪತಿಯುಸಗುಣನೆಂಬುದೇ ಸಿದ್ಧವಾಕ್ಯಂ॥

— ಅಷ್ಟಾಭಿಧಾನಗಳು. —

ಬಳಿಕ ಸತ್ತಾರ್ಥಕವಾದ ಭೂಧಾತುವಿನ। ಸರ್ವತ್ರಸದಾಭವತಿಯೆಂಬ ಭವಶಬ್ದವಾಚ್ಯತ್ವದಿಂ। ಹಿಂಸಾರ್ಥಕವಾದಶುಧಾತ್ವರ್ಥದಿಂ। ಸಕಲಸಂಹರ್ತೃತ್ವಮುಳ್ಳ। ಸರ್ವಶಬ್ದವಾಚ್ಯತ್ವದಿಂ। ನಿರುಪಾಧಿಕಪರಮೈಶ್ವರ್ಯವಿಶಿಷ್ಟವಾದೀಶಾನಶಬ್ದವಾಚ್ಯತ್ವದಿಂ। ಏಷಾಮೀಶೇಪಶುಪತಿಃಪಶೂನಾಂಚತುಷ್ಪದಾಂ। ಶಿವಸ್ವರೂಪಾಜ್ಞಾನೇನವಿಷ್ಣ್ವಾದ್ಯಾಃಪಶವಸ್ಮೃತಾಃ। ಇತ್ಯಾದಿ ಶ್ರುತ್ಯಾಗಮಪುರಾಣಪ್ರಮಾಣಗಳಿಂ। ಪಶುಪಾಶಾತ್ಮಕಚಿದಚಿನ್ನಿಯಾಮಕತ್ವವಿಶಿಷ್ಟ। ಪಶುಪತಿಶಬ್ದವಾಚ್ಯತ್ವದಿಂ। ರುದ್ರಂದ್ರಾವಯತೆಯಸ್ಮಾದ್ರುದ್ರ ಇತ್ಯುಚ್ಯತೇಪ್ರಭುಃಯೆಂಬ ಪ್ರಮಾಣದಿಂ। ಸಂಸಾರದುಃಖನಿವಾರಕತ್ವವಿಶಿಷ್ಟ। ಸರ್ವಭೂತದಯಾಳುರುದ್ರಶಬ್ದವಾಚ್ಯತ್ವದಿಂ। ತರತಿಶೋಕಮಾತ್ಮವಿದೆಂಬಶ್ರವಣದಿಂ। ಪರತೇಜಸ್ಸುಗಳಿಂದನಭಿಭವನೀಯತ್ವಾದಿರೂಪವಾದ। ಉಗ್ರಶಬ್ದವಾಚ್ಯತ್ವದಿಂ। ನತತ್ರಸೂರ್ಯೋಭಾತಿಯೆಂದುನಿಯಾಮಕತ್ವದಿಂ। ಭೀಷಾಸ್ಮಾದ್ವಾತಃಪವತೆಯೆಂದು। ಭಯಹರ್ತೃಭೀಮಶಬ್ದವಾಚ್ಯತ್ವದಿಂ। ಸಮಹಾನ್ಸೃಜತೇಲೋಕಸೃಷ್ಟಿಸ್ಥಿತ್ಯಾಂತಕೃತ್ಪತಿಃ ಎಂಬ ಪ್ರಮಾಣದಿಂ ಮಹಾತ್ಮರಾದ ವಿಷ್ಣುಬ್ರಹ್ಮಾದಿಗಳಿಗೆ ನಿಯಾಮಕಾಂತರ್ಯಾಮಿಯಪ್ಪನಾಗಿ। ಮಹಾದೇವಶಬ್ದವಾಚ್ಯತ್ವದಿಂ। ನಿರಸ್ತಸಮಸ್ತಸಂಸಾರಕಳಂಕತ್ವದಿಂ। ನಿಖಿಲಮಂಗಳಾಧಾರಸರ್ವಮಂಗಳಾಂಗತ್ವದಿಂ। ನಾಮರೂಪಗಳಿಂಶಿವನಪ್ಪುದರಿಂ। ಸತ್ಕೃತ್ಯಸಂಗಮಾತ್ರದಿಂ ನಿಜನಾಮಜಪ್ತೃಗಳಿಗೆ ಮಂಗಳಪ್ರದವಾಗಿಪ್ಪುದರಿಂ। ಶಿವತ್ವವುಅನನ್ಯಸಾಧಾರಣವಾಗಿ ಶಿವಶಬ್ದವಾಚ್ಯತ್ವದಿಂ। ನಿಖಿಲಹೇಯಪ್ರತ್ಯನೀಕಕಲ್ಯಾಣಗುಣೈಕತಾನ ನಿತ್ಯಮಂಗಳರೂಪ ಸಚ್ಚಿದಾನಂದೈಕರಸಪರಬ್ರಹ್ಮತ್ವದಿಂ। ಸರ್ವಶಕ್ತನಾದಪರಶಿವನೇ। ಸೂಕ್ಷ್ಮಚಿದಚಿದ್ವಿಶಿಷ್ಟ

ನಾಗಿ ಜಗತ್ಕಾರಣನೆಂತಲೂ। ಸೂಕ್ಷ್ಮಲಚಿದಚಿದ್ವಿಶಿಷ್ಟತ್ವದಿಂ ಕಾರ್ಯನೆಂತಲೂ ನಿರ್ಧರಿಸಲಕ್ಕುಂ॥

— ಶಿವಸರ್ವೋತ್ತಮತ್ವ. —

ಬಳಿಕ ಪತಿಯಾದ ಪರಶಿವನ ದಿವ್ಯಮಹಾಲಿಂಗ ಪಾದದರ್ಶನಕೆ ಪರಾಹರೂಪದಿಂಹುಡಿಕಿ। ಬಳಿಕ ಶಿವಾನುಗ್ರಹಪಾತ್ರನಾಗಿ । ಶಿವಾಂಗದಿಂಜನಿಸಿ । ಶಿವನಂಪೂಜಿಸಿ ಚಕ್ರವಂಪಡಮು । ವಿಷಪಾನಪಂಪಾಡಿದಶಿವನಿಂರಕ್ಷಿಸಲ್ಪಟ್ಟು । ಶಿವನಿಗೆ ಪಾದಾಭರಣ। ಬಾಣ- ಕಳತ್ರ- ಯೋನಿ- ಅರ್ಧಾಂಗ-ಮಿತ್ರಶಿಷ್ಯಾದಿಭಾವಗಳಂ । ಪ್ರೋಷ್ಯಪ್ರೋಷಕರೂಪಗಳಂಪ್ರಿಯತಮನಾಗಿ । ಶಿವಾಭಿನ್ನನೆಂದೆನಿಸಿರ್ಪ ವಿಷ್ಣುವು ಶಿವಪೂಜಾಪ್ರಭಾವದಿಂದಲೇ ಸರ್ವೋತ್ತಮನೆಂದೆನಿಸಿ । ಶಿವಸಮಾನತ್ವದಿಂಶಿವನಂ ಮರೆಯುಸುತ್ತಿರನೆಂದು ಶ್ರುತಿಸ್ಮೃತ್ಯಾದಿಗಳು ಸಾರುತ್ತಿರಲ್ಕೆ। ಪರೋಣೋತ್ತಮಬ್ರಹ್ಮಾಕುಲದೈವತವೆಂದು। ಬ್ರಾಹ್ಮಣಾನಾಂಶಿವೋದೇವಃಯೆಂಬ ಸ್ಮೃತಿಸಿದ್ಧವಾಗಿ। ಶಿವನೇ ಸರ್ವೋತ್ತಮನೆಂಬುದಕೆ ಸಂದೇಹವಿಲ್ಲದಿರ್ಕುಂ॥

— ಶಿವಜ್ಞಾನಸಾರ. —

ಮತ್ತಮಾಶಿವನು। ಸಹಸ್ರಶೀರ್ಷಾ।ಸಹಸ್ರಾಣಿಸಹಸ್ರಶಃ।ಋತಗ್ಂಸತ್ಯಂಪರಬ್ರಹ್ಮ। ದರ್ಶಯಾಮಾಸಪಾರ್ಥಾಯಪರಮಂರೂಪಮೈಶ್ವರಂ ಅಷ್ಟಮೂರ್ತಿರಜಶ್ಶಿವಃ। ರುದ್ರೋನರ ಉಮಾನರೀತಸ್ಮೈತಸ್ಮೈನಮೋನಮಃ। ವಿಷ್ಣುರ್ಶ್ವೇಬಂಕಲ್ಪಯತು। ಯೋರುದ್ರೋಅಗ್ನೌ। ಶಿವಸ್ಸರ್ವಂ ಯೆಂಬಾದಿಯಾದ। ಪ್ರಮಾಣಗಳಿಂ। ಸರ್ವಾತ್ಮಕನಾಗಿ। ಮತ್ತಮಾಶಿವನೇನಾನು। ಶಿವನೇನೀನು। ಶಿವನೇಇವನು। ಶಿವನೇಇದು।ಶಿವನೇಅದು। ಶಿವನೇಮಾಳ್ಪ। ಶಿವನೇಮಾಡಿಸುವ । ಶಿವನೇಸತ್ಯ। ಶಿವನೇಧರ್ಮ। ಶಿವನೇಜ್ಞಾನವೆಂದು। ಶಿವಮಯವಾಗಿ। ಶಿವೇತರವಿಲ್ಲದೆ। ಶಾಂತಿಸಮೃದ್ಧಾಮೃತವಾಗಿರ್ಪುದೇ ಶಿವಜ್ಞಾನಸಾರವೆಂದು ತಿಳಿಯಲ್ವೇಳ್ಕು॥

— ಪಶುಗಳಭೇದಗಳು. —

ಬಳಿಕಾಪಶುವೇ-ಮಲ-ಮಾಯಾ-ಕರ್ಮವೆಂಬಪಾಶತ್ರಯಸಂಬಂಧದಿಂದ। ಸಕಲನೆಂದು- ಮಲ- ಕರ್ಮವೆಂಬ ಪಾಶದ್ವಯಸಂಬಂಧದಿಂಪ್ರಳಯಾಕಲನೆಂದು- ಮಲೈಕಪಾಶಬಂಧದಿಂ ವಿಜ್ಞಾನಕೇವಲನೆಂದು-ತ್ರಿವರ್ಗವಾಗಿಹುದದಲ್ಲಿ- ಮೊದಲನೆಯಸಕಲವರ್ಗವೇ- ಪಕ್ವತ್ರಿಪಾಶರೆಂದು-ಅಪಕ್ವತ್ರಿಪಾಶರೆಂದು- ದ್ವಿವಿಧಮಾಗಿಹುದದರಲ್ಲಿ॥

— ಪಕ್ವತ್ರಿಪಾಶಪಶುಗಳು. —

ಪಕ್ವತ್ರಿಪಾಶರೊಳಗೆ ಕಲಾಮಸ್ತಕವೊಳಗಿರ್ದಮಂಡಲೇಶ್ವರರೆಂಟು। ಗಣಮಸ್ತಕದಲ್ಲಿರ್ದ ಕ್ರೋಧೇಶಾದಿಗಳೆಂಟು। ಸೂಕ್ಷ್ಮತನ್ಮಾತ್ರವರ್ಗದಲ್ಲಿರ್ದಶತರುದ್ರರಿಗೆಕರ್ತೃವಾದವೀರಭದ್ರನೊರ್ವನು! ಗುಣತತ್ವದಲ್ಲಿರ್ದಬ್ರಹ್ಮವಿಷ್ಣ್ವಾದಿಗಳಿಗೆ ಕರ್ತೃವಾದ ಶ್ರೀಕಂಠೇಶ್ವರನೊರ್ವನು। ಬ್ರಹ್ಮಾಂಡರಕ್ಷಕರಾದ ಶತರುದ್ರರೆಂಬ ನೂರಹದಿನೆಂಟನೂ। ಪರಶಿವನು। ತಾನೇನಿರಧಿಕರಣದೀಕ್ಷೆಯಿಂಮಂತ್ರೇಶ್ವರರಂಮಾಡಿ। ಆಯಾಕೃತ್ಯಾದಿಕಾರಿಗಳಾಗಿನಿಲ್ಲಿಸಲವರೆಲ್ಲಂಪೇಹಯುಕ್ತರಾದೊಡೆ । ಆಯಾದೇಹವಶಂಗತರಾಗದೆ। ಸರ್ವಜ್ಞರಾಗಿ। ಪತಿಪದಾರ್ಥವೆನಿಸಿಕೊಳ್ಳುವರೆಂದು ತಿಳಿಯಲ್ಪೇಳ್ಕುಂ॥

— ಅಪಕ್ವತ್ರಿಪಾಶಪಶುಗಳು. —

ಮತ್ತಮಾ ಅಪಕ್ವತ್ರಿಪಾಶರೊಳಗೆ ಕೆಲವರುವಿಷಯಮೂರ್ಛಿತರಂತೆ ಮಲನಿರೋಧದಿಂ ಕೇವಲಾವಸ್ಥರಾಗಿರ್ದು । ಮೇಲೆಶಿವನಿಂಕಲಾಯೋಗ್ಯಭೋಗಕರ್ಮಕ್ಷಯ। ಮಲಪರಿಪಾಕಾದಿಕ್ರಮಯೋಗಂಬಡೆದು । ಬಳಿಕ ಮೋಕ್ಷದಲವಲನಿಕೆ। ಸಂಸಾರದಲ್ಲಿಜುಗುಪ್ಸೆ। ಶಿವಭಕ್ತರುಗಳಲ್ಲಿಭಕ್ತಿ।ಶ್ರೀಗುರೂಪಾಸ್ತಿ। ಶಿವಾಗಮಂಗಳಲ್ಲಿವಿಶ್ವಾಸಮೊದಲಾದಚಿಹ್ನೆಗಳುಳ್ಳಶಕ್ತಿಪಾತದ। ಮಂದ। ಮಂದತರ। ತ್ರೀವ್ರ। ತೀವ್ರತರ। ವೆಂಬ ಭೇದಪರೀಕ್ಷೆಯಿಂ ಪರಶಿವಗುರಮೂರ್ತಿಯಧಿಷ್ಟಿಸಿಪಾಳ್ದ। ಸಾಧಿಕರಣದೀಕ್ಷಾಕ್ರಮದಿಂ। ಶಿವಸಮಾನರೂಪಮೋಕ್ಷವನೈದುತಿರ್ಕುಂ॥

— ಅಪಕ್ವತ್ರಿಪಾಶರಲ್ಲಿ ಪ್ರಳಯಾಕಲರು. —

ಬಳಿಕ-ಅಪಕ್ವತ್ರಿಪಾಶರೊಳಗುಳದವರಲ್ಲಿ। ಕರ್ಮಫಲಭೋಗಾದಿಕದಿಂದಿಂತು ಮುಕ್ತರಾಗಲೊಸುಗ। ಶಿವನುಪಶುವಂ ನಾನಾಯೋನಿಯೊಳ್ ಬೆರಸಿ। ಕಿಂಚಿಜ್ಞತ್ವ। ಕಿಂಚಿತ್ಕರ್ತೃತ್ವದಿಂ। ಸುಖದುಃಖಮೋಹಂಗಳುಳ್ಳವರಾಗಿ। ಆಯಾದೇಹಿಗಳೆನಿಸುತ್ತಲ್ಲಿ। ಸಮಯಾಂತರದೀಕ್ಷಾವಿಶೇಷದಿಂ। ಪಶುತ್ವೈಕದೇಶಮಾಗಿರ್ದು। ಶಿವತ್ವೈಕದೇಶಾಭಿವ್ಯಕ್ತಿಘಟಿಸಿ। ಮಾಯಾಪಾಶವಿಮೋಚನದಿಂ ಮಲ ಕರ್ಮವೆಂಬ ಪಾಶದ್ವಯಮಾತ್ರಯುಕ್ತರಾಗಿ। ಪ್ರಳಯಾಕಲಸಂಜ್ಞೆಯಂತಾಳರ್ವರು॥

— ಪ್ರಳಯಾಕಲರಲ್ಲಿ ಭೇದಗಳು. —

ಮತ್ತಮಾ ಪ್ರಳಯಾಕಲರೇ। ಪಕ್ವಪಾಶದ್ವಯರೆಂದು। ಅಪಕ್ವಪಾಶದ್ವಯರೆಂದು। ದ್ವಿವಿಧರಾತಹರು। ಬಳಿಕಲ್ಲಿಪಕ್ವಪಾಶದ್ವಯರೇ। ಪರಶಿವನ

ನಿರಧಿಕರಣದೀಕ್ಷಾಸಾಮರ್ಥ್ಯದಿಂ ನಿವಮೋಕ್ಷವನೈದುತ್ತಿಹರು । ಮತ್ತಂ ಮಪಕ್ವಪಾಶದ್ವಯರೇಸೂರ್ಯ್ಯಾಷ್ಟಕದೇಹಯುಕ್ತರಾಗಿ । ಕರ್ಮಾಧೀನದಿಂ ದಾದಭುವನಜದೇಹಸಂಬಂಧಿಗಳಹರು। ಮತ್ತಮವರೊಳಗೆ। ಲೋಕಪಾಲಾಷ್ಟಕವೆಂಬವರು। ಗುಹ್ಯಾಷ್ಟಕವೆಂಬವರು । ಅತಿಗುಹ್ಯಾಷ್ಟಕವೆಂಬವರು। ಪವಿತ್ರಾಷ್ಟಕವೆಂಬ ಪಂಚಾಷ್ಟಕವಾದ ನಲವತ್ತುಮಂದಿಯೊಳ್ ಮಂತ್ರಮಹೇಶ್ವರನಾದ ಅನಂತೇಶ್ವರನಿಂದನುಗೃಹೀತರಾಗಿ। ಸರ್ವಜ್ಞರೆನಿಸಿ। ಭುವನಪತಿಗಳಾಗಿರ್ಕುಂ॥

— ಪಕ್ವಪಾಶದ್ವಯಪಶುಗಳು. —

ಮತ್ತಮಾ ಪಕ್ವಪಾಶದ್ವಯರೇ। ವಿಜ್ಞಾನ- ಯೋಗ- ಸನ್ಯಾಸಾದಿಗಳಿಂ। ಕರ್ಮಕ್ಷಯಮಪ್ಪಾಗೆ। ಮಲೈಕಪಾಶಸಂಬಂಧದಿಂ । ದರ್ಶನಾಂತಕ್ಕೆ ಮುಕ್ತಿಸಾಧನವೆನಿಪ। ಮಾಯಾತತ್ವ। ಶುದ್ಧವಿದ್ಯಾತತ್ವದ್ವಯದಂತರಾಳಲಕ್ಷಣ ಕೈವಲ್ಯಪದದೊಳಗೆನಿಂದು।ವಿಜ್ಞಾನಕೇವಲಸಂಜ್ಞೆಯಂತಾಳಿರ್ಪರು

— ವಿಜ್ಞಾನಕೇವಲರು. —

ಮತ್ತಮಾ ವಿಜ್ಞಾನಕೇವಲರೇ । ಮಲವಿಶಿಷ್ಟಪರಿಪಾಕತಾರತಮ್ಯದಿಂ । ಶಿವಸಿಂಸಂಪ್ರಾಪ್ತನಿರಧಿಕರಣದೀಕ್ಷಾತಿಶಯದಿಂ । ವಿದ್ಯೇಶ್ವರಸದಾಶಿವಾದಿಭೇದವಾಗಿಉತ್ತರೋತ್ತರವಾದಧಿಕಾರಾವಸ್ಥೆಯಿಂ। ಶಿವಸ್ವೀಕಾರಾವಸ್ಥೆಯಿಂ। ಸ್ವೀಕರಿಸಿ। ಪರಮುಕ್ತರಂತೆ। ದುಃಖಲೇಶವಿಲ್ಲದೆ। ನಿರತಿಶಯಸುಖಸ್ತಭೋಗಾಸ್ವಾದನಂಗೈದು । ಬಳಿಕಾ ಭೋಗದೊಳು । ವಿರಕ್ತಿಪ್ರಟ್ಟಿಪ್ರಯೋಜ್ಯಕರ್ತೃತ್ವದಾಯಾಸಮಂಬಿಟ್ಟು । ಸಕಲಬ್ರಂಗವ್ಯೋತ್ತೀರ್ಣ್ಣಮಾಗಿ। ತತ್ವಾತೀತಮಾದಸರ್ವಾಭಿವ್ಯಕ್ತಿ। ನಿರ್ವಿಕಲ್ಪಸವಾನಲಕ್ಷಣಜ್ಞಾನಕ್ರಿಯಾಶಕ್ತಿಯುಕ್ತರೆನಿಸಿರ್ಪರು॥

— ಪಶುಜ್ಞಗಳು. —

ಇಂತಿದ್ವಿತೀಯ ಪದಾರ್ಥವಾದ ಪಶುವೇ। ಸರ್ವಶಾಸ್ತ್ರಗಳಲ್ಲಿಯೂ ವಿಶ್ವ-ತೈಜಸ-ಪ್ರಾಜ್ಞ-ವೈಕಾರಿಕ-ತಾಮಸ-ವಿರಾಟ್ಟು-ಹಿರಣ್ಯಗರ್ಭ-ಅವ್ಯಕ್ತಚೇತನ-ಶರೀರಿ-ಅಭಿಮಾನಿ-ಸೋಪಾಧಿಕಚೇತನ-ಬದ್ಧ-ಮುಕ್ತ-ಮುಮುಕ್ಷು-ಪತಿತ-ಅತೀತ- ಆರೂಢ-ಪ್ರಾಣಿ- ಜೀವನೆಂಬುದು ಮೊದಲಾದ ಹೆಸರುಳ್ಳದ್ದಾಗಿವ್ಯವಹರಿಸುತಿರ್ಕುಂ। ಈಪಶುವೇಶಿವಾಂಶವೆಂತಲುಂ। ಶಿವಪ್ರತಿಬಿಂಬವೆಂತಲುಂ। ಶಿವಶೇಷವೆಂತಲುಂ। ಶಿವಗ್ರಾಸನೆಂತಲುಂ। ಶಿವಪ್ರತಿನಿಧಿಯೆಂತಲುಂ। ಶಿವಕಿಂಕರವೆಂತಲುಂ।ಶಿವಾಭಾಸನೆಂತಲುಂತಿಳಿಯಲ್ಪೇಳ್ಕುಂ

— ಪಾಶಭೇದಗಳು. —

ಮತ್ತಮಾ ಪಾಶಪದಾರ್ಥವು। ಪಶುಬಂಧಲಕ್ಷಣವುಳ್ಳದ್ದಾಗಿ। ಪಶುಕೋಟಿಯುಂಬಿಡದೆವ್ಯಾಪಿಸಿ। ಶಿವಾಧೀನವಾಗಿ । ಮಲಪಾಶ । ಮಾಯಾಪಾಶ । ಕರ್ಮಪಾಶ। ಬಿಂದುಪಾಶ । ತಿರೋಧಾನಪಾಶವೆಂದು । ಪಂಚಪ್ರಕಾರವಾಗಿ ಪ್ಪುದದರೊಳು॥

— ಮಲಪಾಶವಿವೇಕ. —

ಮೊದಲನೆಯದುಪಶುಗಳಚೈತನ್ಯಪ್ರಕಟತೆಯಂನಿಲ್ಲಿಸಿ। ಮಾಯಾಬೀಜಾಂತುರಕ್ಕೆ ಸಾಧನವಹುದರಿಂದ। ಆತ್ಮರ್ಗೆಭೋಕ್ತೃತ್ವವನಾಪಾದಿಸಿ । ತಾನೊಂದಯಾದೊಡಂ । ಪ್ರತ್ಯೇಕಾತ್ಮರನಾವರಿಸಿರ್ದನೇಕಶಕ್ತಿಯುಕ್ತವಾದ ತನ್ನ ಪರಿಪಾಕವಶದಿಂಪ್ರಾಪ್ತವಾದದಿಕ್ಷಾವಿಶೇಷದಿಂತೊಲಗಲುಳ್ಳಶಕ್ತಿಸಹಿತನಾಗಿ। ಅಜ್ಞಾನ- ಅವಿದ್ಯೆ- ಆವೃತ್ತಿ-ಅಂಜನ-ಅಶುದ್ಧಿ-ಅಣವ- ಅನಿರ್ಮಲ-ಮೃತ್ಯು- ಮೂರ್ಛೆ- ತಿರಸ್ಕಾರ- ರುಚ್- ಪಶುತ್ವ-ವೆಂಬಿವುಮೊದಲಾದ ಪರ್ಯ್ಯಾಯನಾಮಂಗಳುಳ್ಳ-ಮೋಹ-ಮಹಾಮೋಹ-ಮಿಶ್ರತಾಮಿಶ್ರ- ಅಂಧತಾಮಿಶ್ರವೆಂಬ ಸಪ್ತಾವಸ್ಥೆಗಳುಳ್ಳ- ಕೂಟಸ್ಥಾನಾಥಯಾವ ಪಾಶವಿಶೇಷವೇಮಲವಕ್ಕುಂ॥

— ಮಾಯಾಪಾಶವಿವೇಕ. —

ಮತ್ತು- ಕಿಂಚಿಜ್ಞತ್ವ- ಕಿಂಚಿತ್ಕರ್ತೃತ್ವ- ಭೋಗಲೋಲುಪತ್ವಾದ್ಯನೇಕವೈಷಯಿಕಧರ್ಮಕ್ಕನುಗುಣವಾದ। ಪರಿಣಾಮಯುಕ್ತಕಾರ್ಯವರ್ಗವು ಜನಿಪುದಕ್ಕುಪಾದಾನಕಾರಣವೆನಿಸಿ । ಕರ್ಮಪಾಶದೊಡನೆ ತೊಲಗಲುಳ್ಳಾಗಂತುಕಪಾಶವೆನಿಸಿಕೊಂಡು। ಗ್ರಂಥಿ- ಮೂಲಪ್ರಕೃತಿ- ಮೋಹಿನಿ- ಮಾಲೋಪಾದಾನ- ಮಲಾತ್ಮಿಕೆ- ಪಾಶಪ್ರಸೃತಿ- ಕರ್ತೃತ್ವೋಪಾಧಿ- ಪ್ರಧಾನ- ಕಾರಣಾವಸ್ಥೆ- ಗುಣಸಾಮ್ಯ- ಅನುಮಾನಿಕ- ಸೂಕ್ಷ್ಮಶಕ್ತಿ- ಆಭಾಸಕಿ- ಆಧ್ಯಾಸಿಕಿ- ಶ್ಯಾಮೆ- ಅಶಿವೆ- ಅವ್ಯಕ್ತ- ಅಜೇ- ಜನನಿ-ಸ್ವರೂಪೆ- ಆಧಾರಹೂಮಿಕೆ- ಬಂಧಿಕೆ- ವ್ಯಾವರ್ತಿಕೆ- ದ್ವಿತೀಯೆ- ಅಶ್ವತ್ಥ-ಸಂಶಾಯಿಕೆ- ಅಪರವಿದ್ಯೆ- ಜ್ಞಾನವಂಚಿಕೆ- ಯೆಂಬಿವುಮೊದಲಾದ ಪರ್ಯ್ಯಾಯನಾಮಂಗಳುಳ್ಳದ್ದಾಗಿ। ಏಕತ್ವ- ಜಡತ್ವ- ಪರಿಣಾಮಿತ್ವ- ಮೋಹಕತ್ವ- ಕಾಲಾದಿಕಾರಣತ್ವ- ವಸ್ತುರೂಪತ್ವ- ಸೂಕ್ಷ್ಮತ್ವ- ಕರ್ಮಾತಿಶಯತ್ವ- ಸಕಲಜ್ಞಾನಯುತೇಶ್ವರತ್ವ- ತತ್ತ್ವಾಶ್ರಯಸೇಹವದನಂತೇಶ್ವರತ್ವ- ವೈರಸ್ಯ

ತ್ವಾದಿಧರ್ಮವಿಶಿಷ್ಟವೆನಿಸಿ। ನಿತ್ಯವ್ಯಾಪಕವಾಗಿರ್ಪ ಪಾಶವಿಶೇಷವೇಮಾಯೆ ಯೆಕ್ಕುಂ॥

— ಕರ್ಮಪಾಶವಿವೇಕ. —

ಬಳಿಕ ಮಾಯಾಮೂಲಕ ಕರ್ಮಪಾಶವೆಂಬುದು । ಚೈತನ್ಯಕ್ರಿಯಾಶ ಕ್ತ್ಯಭಾಸರೂಪವಾಗಿ। ಪ್ರವೃತ್ತಿನಿವೃತ್ತ್ಯಾತ್ಮಕತ್ವದಿಂ ಶುದ್ಧಾಶುದ್ಧ ಮೆನಿಸಿ। ಉತ್ತಮಮಧ್ಯಮಾಧಮಭೇದದಿಂತ್ರೈಗುಣ್ಯವೆನಿಸಿ। ಆಭ್ಯಂತರ ಬಾಹ್ಯರೂಪದಿಂದ್ವಿವಿಧವಾಗಿ। ಸಕಲಕಾರ್ಯೋತ್ಪಾದಕಶಕ್ತಿರೂಪಮಪ್ಪು ದರಿಂ। ಸಕಲಪಶುಕರ್ತೃಕವಾಗಿ। ಉತ್ತರೋತ್ತರಕರ್ಮಜನಕವಾಗಿಯುಂ ಕಚಿತ್ಪೂರ್ವನಾಶಕವಾಗಿಯುಂಯಿರುವಸಂಸ್ಕಾರಾದಿಗಳಿಂದೊಡಗೂಡಿ ಮಾಯಾಶ್ರಯಮಾಗಿರ್ಪುದಾವಮಾಯೆಗೆ ಕರ್ಮಾಶ್ರಯತ್ವಮೆಂತೆನೆ।

— ಗುಣಕರ್ಮವಿವೇಕ. —

ಮಾಯೆಯು ತ್ರಿಗುಣಾತ್ಮಕವಾಗಿರ್ಪುದರಿಂ ತತ್ಕಾರ್ಯವಾದ ಕರ್ಮ ಪಾಶವೊಳು। ಸಕಲಾತ್ಮರುಮಾಳ್ಪ ಸುಕೃತದುಷ್ಕೃತರೂಪಕರ್ಮವೆ। ಕ್ರ ಮದಿಂ-ಧರ್ಮ-ಜ್ಞಾನ- ಐಶ್ವರ್ಯ- ವೈರಾಗ್ಯವೆಂಬ- ಅಧರ್ಮ- ಅಜ್ಞಾನ-ಅ ನೈಶ್ವರ್ಯ- ಅವೈರಾಗ್ಯವೆಂಬ ಅಷ್ಟಭಾವಾತ್ಮಕತ್ವದಿಂ ಬುದ್ಧಿಯುಗುಣ ಮೆಂದೆನಿಸಿಅಪೂರ್ವವೆಂಬಪೆಸರಿಂ ಸತ್ಕರಿಸಿಕೊಂಡು । ಪೂರ್ವಭಾವಚತು ಷ್ಟಯಾತ್ಮಕತ್ವದಿಂ ಪಶುವಿಗೆ ಸಂಸಾರವೃತ್ತಿಯೆನಿಪ ಬಂಧಮಾರ್ಗಸಾ ಧಕವಾಗಿ। ಉತ್ತರಭಾವಚತುಷ್ಟಯದಿಂ। ಪಶುವಿಗೆಸಂಸಾರನಿವೃತ್ತಿಯೆ ನಿಪಮುಕ್ತಿಮಾರ್ಗಸಾಧಕವಾಗಿಹುದದರೊಳಗೆ। ಧರ್ಮಾದಿಗಳು ನಾಲ್ಕು ಸಾತ್ವಿಕಂಗಳು। ಮಿಕ್ಕಅಧರ್ಮಾದಿತ್ರಯಮೇತಾಮಸವು। ಅವೈರಾಗ್ಯವೊಂ ದೇ ರಾಜಸಮಪ್ಪುದಾಗಿ ತತ್ತದ್ಗುಣಾನುರೂಪವಾಗಿ ಕರ್ಮವಂ ತಿಳಿಯ ಲ್ವೇಳ್ಕುಂ॥

— ಗುಣಸಂಸ್ಕಾರಭೇದಗಳು. —

ಮತ್ತಮಾಗುಣಂಗಳಾದೊಡೆ। ಸಾಂಸಿದ್ಧಿಕವೆಂದು। ನೈಮಿತ್ತಿಕವೆಂದು ಪ್ರಾಕೃತವೆಂದು। ತ್ರಿವಿಧವಾಗಿರ್ಪವುಗಳಲ್ಲಿ। ಇಷ್ಟಾಪೂರ್ತಾದಿಧರ್ಮಸಂ ಸ್ಕಾರಗಳೇ। ದೇಹವಳಿದಮೇಲೆ । ಜನ್ಮಾಂತರದಲ್ಲಿ ಮೊದಲಿನಸಂಸ್ಕಾರಂ ತಾನೇ ಉದ್ಬುದ್ಧವಾಗಲು। ಅದೇಸಾಂಸಿದ್ಧಿಕವೆನಿಸುವದು। ಬಳಿಕ ದೇಹ ತ್ಯಾಗದಿಂಮೇಲೆ ಪುನರ್ಜನ್ಮದಲ್ಲಿ ಲೋಕಬುದ್ಧಿ ಗುರುಶಾಸ್ತ್ರಾದಿಗಳಿಂದ ಸಂಸ್ಕಾರಾನುಸಾರವಾದ ಗುಣತ್ರಯವೇ ನೈಮಿತ್ತಿಕವೆನಿಸುವದು।

ಬಳಿಕಸ್ವಪ್ನಮೂರ್ಛಾದಿಕದಿಂದೆಚ್ಚತ್ತಾತಂಗೆ ಯಥೋಚಿತಸಂಸಾರವಳ ಪಡುವಂತೆ। ವರ್ತಮಾನದೇಹದಲ್ಲಿಯೇ ಆಯಾಗುಣಾಭಿವ್ಯಕ್ತಿಯಹುದೇ ಪ್ರಾಕೃತಮಕ್ಕುಂ॥

— ಬುದ್ಧಿಗುಣಕರ್ಮಫಲಗಳು. —

ಬಳಿಕವರಲ್ಲಿ ಸಾಂಸಿದ್ಧಿಕವಾದ ಧರ್ಮದಿಂ ಪಶ್ವಾದಿಗಳು। ಜ್ಞಾನದಿಂಧರ್ಮಪರಿಜ್ಞಾನಸಂಬಂಧಾದಿಗಳು। ಐಶ್ವರ್ಯದಿಂವಿಘ್ನಸಮೂಹನಿವೃತ್ಯಾದಿಗಳು।ವೈರಾಗ್ಯದಿಂಭೋಗಪರಿತ್ಯಾಗಾದಿಗಳು।ಅಧರ್ಮದಿಂಭೋಗಾಸಕ್ತ್ಯಾದಿಗಳು। ಅಜ್ಞಾನದಿಂತಿರಸ್ಕಾರಾದಿಗಳು। ಅನೈಶ್ವರ್ಯದಿಂ ವಿಘ್ನಾದಿಗಳು। ಅವೈರಾಗ್ಯದಿಂಜನ್ಮಾಂತರಗಳಕ್ಕುಂ। ಬಳಿಕ ನೈಮಿತ್ತಿಕಪ್ರಾಕೃತಂಗಳಾದ ಧರ್ಮಗಳಂಸ್ವರ್ಗಾದಿಗಳು। ಜ್ಞಾನದಿಂಮುಕ್ತ್ಯಾದಿಗಳು। ಐಶ್ವರ್ಯದಿಂದಿಷ್ಟಸಿದ್ಧ್ಯಾದಿಗಳು। ವೈರಾಗ್ಯದಿಂಪ್ರಕೃತಿಲಯಾದಿಗಳು। ಅಧರ್ಮದಿಂಪಶುಪಕ್ಷಿಮೃಗಸರ್ಪಸ್ಥಾವರಮೆಂಬ। ಪಂಚವಿಧತಿರ್ಯಗ್ಯೋನಿಪ್ರಾಪ್ತ್ಯಾದಿಗಳು। ಅಜ್ಞಾನದಿಂನರಕಭಯಾದಿಗಳು। ಅನೈಶ್ವರ್ಯದಿಂವಿಘ್ನಾದಿಗಳು ಅವೈರಾಗ್ಯದಿಂ ಬಂಧಾದಿಗಳಹವಿಂತು ಸಕಲಧರ್ಮಸಂಸ್ಕಾರಗಳೆಲ್ಲಂಬುದ್ಧಿಯಲ್ಲಿರ್ಪುವೆಂದು ವಿವೇಕಿಸಿಪೇಳ್ಕುಂ॥

— ಬುದ್ಧಿಲಯೋತ್ಪತ್ತಿ. —

ಮತ್ತಮಾ ಬುದ್ಧಿಯಾದೊಡೆ। ನಿತ್ಯಾದಿಪ್ರಳಯಂಗಳಲ್ಲಿ ಅಂತಃಕರಣಮೆಂದು ಮೂಲಪಾಶರೂಪದಿಂದ ಜ್ಞಾನಪುಂಜಮಾಗಿರ್ದು। ಪ್ರಳಯದಲ್ಲಿ ಮಾಯೆಯೊಳಗಡಕೆಲಾ ಸಂಸ್ಕಾರವಲ್ಲಿಗರ್ದು ಕಾಲಾಂತರದಿಂ ಪುನರಂಕುರಿಸಿ ಫಲಿಸುತ್ತಿಹುದಾಗಿ ಮಾಯೆಯೇ ಕರ್ಮಾಶ್ರಯಮೆಂದು ಸಿದ್ಧಾಂತಿತಮಕ್ಕುಂ॥

— ಕರಣತ್ರಯ —

ಮತ್ತು- ಮನಸ್ಸು- ವಾಕ್ಕು-ಕಾಯಮೆಂಬ ತ್ರಿವಿಧಕರಣವು ಸುಖದುಃಖಾನುಭವಕ್ಕುಂ। ತತ್ಸಾಧನಕಲ್ಪನಾದಿಗಳಿಗುಂಸಾಧಕಮಾಗಿರ್ಪುದೆಂತೆನೆ। ಮನಸ್ಸೆನಲು। ಸೂಕ್ಷ್ಮಾವರಣವೇಗಜ್ಞಾನಕಿರ್ಯಾಪ್ರತಿಘನಯೋಗ್ಯಮಾಗಿ। ಸಂಕಲ್ಪವಿಕಲ್ಪಾದಿಗಳಿಗೆಮೂಲವೆನಿಸಿದ। ಮಾಯಾಪಾಶದಪ್ರಥಮವಿಕಾರವೆನಿಸಿ। ಪಶುತ್ವಕ್ಕೆ ವರಾಂಗಮಾಗಿರ್ಪುದು। ವಾಕ್ಕೆನಲುದರಾದಿಗಳೊಳು ಯತ್ನಿಂಚಿದವಚ್ಛೇದಕಾಭಿವ್ಯಕ್ತಮಾಗಿ। ಶಿವಾದಿಸಂಕೇತದಿಂದರ್ಥಪ್ರಕಾಶಕಮಾದ ಶಬ್ದಮಾಗಿರ್ಪುದು। ಕಾಯವೆನಲು ದಶೇಂದ್ರಿಯ

ಪ್ರಾಣಧಾತ್ವಾದಿನಿಬದ್ಧ ಪಶುಭೋಗನಿಯಂತ್ರಣ ರೂಪಮಲಕರ್ಮಜಾಲವಿಸ್ತೃತ ಪ್ರಕೃತಿವಿಕೃತಾತ್ಮಕ ಪಂಜರವಾಗಿರ್ಪುದು॥

— ಧರ್ಮಾಧರ್ಮಾದಿಕಾರ್ಯಗಳು. —

ಮತ್ತಮಾ ತ್ರಿವಿಧಕಾರಣದಿಂ ಜನಿಸಿ ಸುಖದುಃಖಾದ್ಯನೇಕ ಗುಣಕಾರಣಮಾದ ಧರ್ಮಾಧರ್ಮರೂಪದಿಂ ವಿಚಿತ್ರವಾಗಿ ಉತ್ಕ್ಷೇಪಣ ಅಪಕ್ಷೇಪಣ ಆಕುಂಚನ ಪ್ರಸಾರಣ। ಗತಿಗಳೆಂಬ ಪಂಚವ್ಯಾಪಾರಸಂಭವವಾಗಿ, ಉತ್ಪಾದ್ಯ ಪ್ರಾಪ್ಯ, ವಿಕಾರ್ಯ ಸಂಸ್ಕಾರ್ಯವೆಂಬ ಚತುರ್ವಿಧಫಲಂಗಳುತ್ಪನ್ನಿಸಿ, ಜಾತಿಪ್ರದ ಆಯುಃಪ್ರದ ಭೋಗಪ್ರದವಾಗಿ ಅಧ್ಯಾತ್ಮಿಕಾದಿ ತ್ರಿಸಾಧಮೆನಿಸಿ ಸುರನರತಿರ್ಯಗಾದಿಯೋನಿಪ್ರಾಪ್ತಿಯೊಳಗನುಗುಣವಾದ ಕಲಾದಿ ಸಕಲ ಮಾಯಾಕಾರ್ಯಂ ಜನಿಪುದಕ್ಕೆ ಸಹಕಾರಿಯಾಗಿ ಬೀಜವೃಕ್ಷನ್ಯಾಯದಿಂ ಪ್ರವಾಹಾನಾದಿಯಪ್ಪ ಪಾಶವಿಶೇಷವೇ ಕರ್ಮಮಕ್ಕುಂ॥

— ಕರ್ಮದಿಂ ಭೋಗಪ್ರಸಾದಂ —

ಬಳಿಕೀ ಕರ್ಮಕ್ಕೆ ಭೋಗಪ್ರದತ್ವಮುಂಟಾಗಲಾ ಭೋಗಲಕ್ಷಣಮೆಂತೆನೆ ಚಕ್ಷುರಾದೀಂದ್ರಿಯಂಗಳೇ ಬಾಹ್ಯವನಿತಾದಿವಿಷಯಂಗಳಂ ಪ್ರಕಾಶಿಸಿ ಅವುಗಳಲ್ಲಿರ್ದ ಗುಣದೋಷಂಗಳಂ ಪರಾಮರ್ಶಂಗೆಯ್ದು ಮನಸ್ಸು ಬಳಿಕ ಬುದ್ಧ್ಯಾತ್ಮಕವಾದೊಡಾ ವಿಷಯಂಗಳಂ ನಿಶ್ಚಯಿಸುತ್ತಿರ್ಪಲ್ಲಿ ಯಂತಲ್ಲೀ ಸುಹೃಲ್ಲಿಂಗಗಳಂ ತಾನೇ ಸುಖದುಃಖರೂಪದಿಂ ಪರಿಣಮಿಸಿ ಸಾಕ್ಷಾದ್ಭೋಗ್ಯವೆನಿಸಲು ಅದನೇಕಲೀಂಗ್ಭರಿತ ಚೈತನ್ಯಾನಂದಲತ್ಮನು। ವಿಷ್ಯಯಂತಃಕರಣದಿಂ ಕಂಡು। ಮೇಲಹಂಕಾರದಿಂ। ನಾನುಸುಖಿ। ನಾನುದುಃಖಿಯೆಂದು। ಇಂತು ಅಧ್ಯಾಸವಶದಿಂ।ಭೋಗ್ಯರೂಪವನರಿವತನವೇ ಬುದ್ಧಿಯ ಭೋಗವಪ್ಪುದಾಗಿ। ವ್ಯವಹಾರಿಕ ಪ್ರತ್ಯಕ್ಷಾದಿಪ್ರಮಾಣಪ್ರಮೇಯಂಗಳಲ್ಲಿ ವೇದಾಂತಕ್ಕೂ ಶಿವಸಿದ್ಧಾಂತಕ್ಕೂ ವಿಶೇಷವಿರೋಧವಿಲ್ಲದಿರ್ಕುಂ॥

— ಬಿಂದುಪಾಶಸ್ವರೂಪ. —

ಅನಂತರದೊಳತ್ಯಂತವಿಶಿಷ್ಟಾಧಿಕಾರಿಗಳಿಗೆ। ಮಾಯಾಕರ್ಮಂಗಳ ಸೋಂಕಿಲದಿರ್ಪುದರಿಂ ನಿರಂತರವಾದ ನಿರತಿಶಯಸುಖಾನುಭವಲಕ್ಷಣ ಭೋಗಸಾಧನಕಾರ್ಯಜಾತವು ಜನಿಪುದಕ್ಕುಪಾದಾನಕಾರಣವಾಗಿಮಂ ಕ್ಷಯಂಗೆಡನೆತೊಲಗಲುಳ್ಳ ಆಗಂತುಕ ಪಾಶವೆನಿಸಿಕೊಂಡು ಮಹಾಮಾಯೆ ಕುಟಿಲೆ ಕುಂಡಲಿ ಕ್ರಿಯಾಶಕ್ತಿ ಪರನಾದ ಪರಬಿಂದು ಪರಿಗ್ರಹಶಕ್ತಿ ಪರವಿದ್ಯೆ ಶಬ್ದತತ್ವ ಶಬ್ದಬ್ರಹ್ಮ ಶುದ್ಧಮಾಯೆ ಶಿವತತ್ವ ಷಡಧ್ವಬೀಜ ಶಿವಶಿಗಪೀಠ ಯೋಗ

ಪೀಠ ಮಂತ್ರಪೀಠ ವ್ಯೋಮವಿದ್ಯೆ ವಿದ್ಯಾಶಕ್ತಿ ವಾಗೀಶ್ವರಿ ಅನಾಹತೆ ಅಘೋರವಾಕ್ಯ ಬ್ರಹ್ಮವೆಂಬಿವುಮೊದಲಾದಪರ್ಯಾಯನಾಮಂಗಳುಳ್ಳದ್ದೆನಿಸಿ

### — ಷಡಧ್ವವಿವೇಕ. —

ಬಳಿಕ- ಕ್ಷಕಾರಮೊದಲಾದೈವತ್ತೊಂದುವರ್ಣಾಧ್ವಕ್ಕೆ। ಓಂ ಶಿವಾಯನಮೋನಮಃಯೆಂಬುದು ಮೊದಲಾದಯೆಂಭತ್ತೊಂದುಪದಾಧ್ವಕ್ಕೆ। ಹೃದಯಾಯನಮಃಯೆಂಬುದು ಮೊದಲಾದ ಏಕಾದಶಮಂತ್ರಾಧ್ವಕ್ಕೆ।ಪೃಥಿವ್ಯಾದಿಶಿವಾಂತಷಟ್ತ್ರಿಂಶತ್ತತ್ವಾಧ್ವಕ್ಕೆ। ಕಾಲಾಗ್ನಿಮೊದಲಾದನೇಕಭುವನಾಧ್ವಕ್ಕೆ। ನಿವೃತ್ಯಾದಿಪಂಚಕಲಾಧ್ವಕ್ಕೆ। ಮತ್ತು ವೈಖರ್ಯಾದಿ ಚತುರ್ವಿಧವಾಕ್ಕುಗಳಗೆಯುಂ। ಆಧಾರಪರಿಣಾಮರೂಪದಿಂಕಾರಣವಾಗಿ। ನಿರ್ವಿಕಲ್ಪಕಜ್ಞಾನೋಪೇತನಾದ ಪರಶಿವನೆಂಬ ಅಶರೀರಕರ್ತೃಕವಾದ। ಪರಿಪೂರ್ಣಪರಂಜ್ಯೋತಿಸ್ವರೂಪಮಪ್ಪಪಾಶವಿಶೇಷವೇ ಬಿಂದುವಕ್ಕುಂ॥

### — ಚತುರ್ವಿಧವಾಕ್ಕುಗಳು. —

ಮತ್ತಮಾಬಿಂದುಪಾಶಕ್ಕೆ। ಮೂಲವಾಂಗಾತ್ಮಕೆಯೆಂಬ। ಶಿವೆ, ಉಮೆ ಘೋರೆ, ಸರಸ್ವತಿಯೆಂದೆನಿಪ- ವಾಕ್ಕೇಕಾರಣಮಾಗಿಪ್ಪುದಾಗಿ। ಚತ್ವಾರಿವಾಕ್ಪರಿಮಿತಾಯೆಂಬಶ್ರುತಿಸಂಮತವಾಗಿ। ಶಿವಾನಂದವಿದ್ಯಾವಲ್ಲಿಯೆಂದೆನಿಸಿ। ಪರಾವಾಕ್ ಪಶ್ಯಂತೀವಾಕ್, ಮಧ್ಯಮಾವಾಕ್, ವೈಖರೀವಾಕ್-ಯೆಂಬ ಚತುರ್ವಿಧಮಾಗಿರ್ಪ್ಪವಾಕ್ಚಾತುರ್ಯವೇ। ಚಿತಚಿದಾತ್ಮಕಪ್ರಪಂಚವೆಲ್ಲವಂವ್ಯಾಪಿಸಿ। ಜ್ಞಾನದನಕಮಪ್ಪುವರಿಂದನಾತ್ಮಕಮಪ್ಪುದರಿಂದದುಭಯ ಸಂಸ್ಕಾರಶಕ್ತಿಯುಂ। ಜ್ಞಾನಜ್ಞೇಯತಾದಾತ್ಮ್ಯವಂವಹಿಸಿರ್ಪ್ಪಶಿವವಿದ್ಯೆಯೇವಾಕ್ಕೆನಲಾವಾಗುಪಾಸನೆಯೆಪ್ರಾಣಿಗಳಗೆ। ಪುರುಷಾರ್ಥಸಾಧನಗಳೊಳು ಮುಖ್ಯಮೆಂದದು ತಿಳಿಯಲೆಂತೆನೆ॥

### — ಪರಾವಾಗ್ವಿದ್ಯಾಸ್ವರೂಪ. —

ಮತ್ತಮಾಚತುರ್ವಿಧವಾಕ್ಕುಗಳೊಳು। ಆವನಾದೊಡೋರ್ವತತ್ವವರ್ತಿಯಾದಶುದ್ಧಾತ್ಮಕಪಶುವೆನಿಪವಕ್ತೃವಿನ। ಮೂಲಾಧಾರದಲ್ಲಿ। ಸೂಕ್ಷ್ಮವಾದ ಸ್ವರೂಪದಿಂದಾತ್ಮನೊಡನೈಕ್ಯರಸವಾಗಿ। ಸಮಸ್ತಕಾರ್ಯಗಳಿಗೂಕಾರಣವಾಗಿರ್ಪ್ಪಶ್ರೇಷ್ಠವಾಣಿಯೇ।ಪರಾವಾಗ್ವಿದ್ಯಾಸ್ವರೂಪಮಕ್ಕುಂ

### — ಪಶ್ಯಂತಿವಾಗ್ರೂಪ. —

ಬಳಿಕಾ ಪರಾಸಂಜ್ಞೆಕಮಾದವಾಣಿಯೇ। ನಾಭಿಸ್ಥಾನದಲ್ಲಿ। ಮಯೂರಾಂಡರಸಗತನಾದಸಕ್ಷಾದ್ಯವಯವಚಿತ್ರಂಗಳಂತೆ। ಅರ್ಥವಾಚಕವರ್ಣ

ಕ್ರಮವಿಲ್ಲದ। ನಿರ್ವಿಕಲ್ಪವಾಗಿ। ಉಜ್ವಲಿಸುತಿರ್ಪವಾಣಿಯೇ। ಪಶ್ಯಂತೀ ಯೆನಿಸುವದು॥

— ಮಧ್ಯಮಾವಾಗ್ರೂಪ. —

ಬಳಿಕಾಪಶ್ಯಂತೀಸಂಜ್ಞಿಕವಾದವಾಣಿಯೇ। ಹೃದಯಸ್ಥಾನದಲ್ಲಿ। ಪದಾರ್ಥಗಳವಾಚಕವರ್ಣಾನುಸಂಧಾನಾನುರೂಪದಿಂ। ಪ್ರಾಣವೃತ್ತಿಯೆಡಗೂಡದೆ। ಸವಿಕಲ್ಪವಾಗಿರ್ಪವಾಣಿಯೇ। ಮಧ್ಯಮೆಯೆನಿಸುವದು॥

— ವೈಖರೀವಾಗ್ರೂಪ. —

ಮಧ್ಯಮಾಸಂಜ್ಞಿಕವಾಣಿಯೆ। ಉರಸ್ಸು, ಕಂಠ, ಜಿಹ್ವಾ, ಮೂಲ, ತಾಲು, ಓಷ್ಠ, ದಂತ, ನಾಸಿಕೆ, ಶಿರಸ್ಸೆಂಬ ಸ್ಥಾನಾಷ್ಟಕದಲ್ಲಿ। ಪ್ರಾಣವಾಯುಸಂಬಂಧವಾಗಲಲ್ಲಿಪುಟ್ಟುವ। ಅರ್ಣ, ವರ್ಣ, ಬೀಜ, ಲಿಂಗ, ಮಾತೃಕೆಶುದ್ಧಗೆ, ಯೆಂಬಪರ್ಯಾಯಸಂಜ್ಞಾವಿಡಿದು। ಪ್ರತ್ಯೇಕವರ್ಣಾಧಿದೇವತಾಫಲಂಗಳುಳ್ಳ। ಸ್ವರವ್ಯಂಜನವೆಂದಿತೆರನಾದ್ಯೈವತ್ತೊಂದಕ್ಷರಾಭಿವ್ಯಕ್ತಿಯಾಗಿ। ತತ್ತದಾನುಪೂರ್ವಿಯಿಂ ನಿಷ್ಪೃಷ್ಟವಾದಶಬ್ದಗಳಂ ಓದುಘಟವಿದುಪಟವೆಂದು। ಶ್ರವಣಗೋಚರವಾಗಿ। ಖಂಡಶಬ್ದಬೋಧೆಯಂಗೊಳಿಸಿ ಬಳಿಕ ವಾಕ್ಯಯೋಜನೆಯಿಂ। ದಖಂಡಶಬ್ದಬೋಧಕ್ಕೆಹೇತುವಾಗಿ। ಸಕಲಸಂಸಾರವ್ಯವಹಾರ ಕಾರಣವುಪ್ಪದರಿಂ। ಮುಖ್ಯಬಂಧರೂಪವಾದವಾಣಿಯೆ ವೈಖರಿಯೆನಿಸಿಸಕಲಗೋಚರವಾಗಿರ್ಕ್ಕುಂ॥

— ವಾಗಧಿಕಾರಿಗಳು. —

ಬಳಿಕವ್ರುಗಳಲ್ಲಿ। ಬಾಹ್ಯವೊಳೊಂದಾದವೈಖರಿಯು। ಅಭ್ಯಂತರದಲ್ಲಿ ಮಿಕ್ಕಮೂರುಂವರ್ತಿಸುತಿರ್ಪವ್ರುಗಳೊಳಗೆ। ಮುಂದೇಪೇಳ್ವ ಶುದ್ಧಾಧ್ವವರ್ತಿಗಳಗೆ। ಪರೆಯೆಂಬನಾದಸಂಜ್ಞೆಯುಳ್ಳಕಾರಣವಾಕ್ಯೇಮುಖ್ಯವಾಗಿಹುದು। ಮಿಶ್ರಾಧ್ವವಾಸಿಗಳಲ್ಲಿ। ಪಶ್ಯಂತೀ, ಮಧ್ಯಮೆ. ಯೆಂಬೆರಡುಬಿಂದುಸಂಜ್ಞೆಯುಳ್ಳ ಸೂಕ್ಷ್ಮವಾಕ್ಕುಗಳೇವರ್ತಿಸುತ್ತಿಹವ್ರು। ಅಶುದ್ಧಾಧ್ವವೆಂಬತತ್ವಾಭಾಸದೊಳಗಿರ್ಪರೆಲ್ಲರುಂ ವೈಖರಿಯೆಂಬ ವರ್ಣಸಂಜ್ಞೆಯುಳ್ಳಸ್ಥೂಲವಾಕ್ಕಿನಿಂದಲೇ। ವ್ಯವಹರಿಸುತಿರ್ಪರೆಂದು ತಿಳಿಯಲಕ್ಕು॥

— ವಾಗ್ಮಿವಿಭಾಗ. —

ಬಳಿಕಪ್ರಪಂಚದೊಳು। ಶರೀರಧಾರಿಗಳಾದಪ್ರಾಣಿಗಳೆಲ್ಲರುಂ। ವಾಗೀಶ್ವರೀವಿಲಾಸವೆಂಬ ಶಿವಪ್ರಸಾದದಿಂದಲೇ। ಆಹಾರನಿದ್ರಾಭಯಮೈಥುನವಿಚಾರವ್ಯವಹಾರಾದಿಸಕಲಕಾರ್ಯಗಳಂಮಾಳ್ಪರಾಗಿ। ಪಿಪೀಲಿಕಾದಿತಿರ್ಯಗ್ಜಂತುಗಳುವೇದಲಾಗಿ ಮನುಷ್ಯಾದಿದೇವಾಂತಜ್ಞಾನಜಂತುಗಳಾದ। ಪಶುಗಳ

ಲ್ಲರಿಗಂ। ವಾಕ್ಪ್ರಸಾದಮುಪ್ಪುದೆಂತೆನೆ। ವೃಕ್ಷಾದಿಪ್ರಾಣಿಗಳಿಗೆ। ದೇಹಯೋಗ್ಯತಾನುಗುಣವಾಗಿ ಪರವಾಕ್ಪ್ರಸಾದವೊಂದೇಯಿರ್ಪುದು। ಸರ್ಪಾದ್ಯಂಡಜಪ್ರಾಣಿಗಳಿಗೆ। ತಚ್ಛರೀರಯೋಗ್ಯತಾನುಸಾರವಾಗಿ। ಪಶ್ಯಂತೀವಾಕ್ಪ್ರಸಾದಮುಂಕೂಡಿಯೆರಡಿರ್ಪುದು। ಪಶ್ವಾದಿಪಿಂಡಜಪ್ರಾಣಿಗಳಿಗೆತದಯವಸೌಷ್ಠವಾನುರೂಪವಾಗಿ। ಮಧ್ಯಮೆಯುಂಕೂಡಿಮೂರಿರ್ಪುದು ಮನುಷ್ಯಾದ್ಯುತ್ತಮಪ್ರಾಣಿಗಳೆಲ್ಲರಿಗುಂ।ವೈಖರಿಯುಂಕೂಡಿ, ನಾಲ್ಕೂಯಿರ್ಪುದಿವುಗಳೊಳಗ, ಪರಯೇವಾಗ್ಬೀಜ। ವೈಖರಿಯೇಸಬೀಜಗರ್ಭಫಲವಾಗಿಹುದರಿಂ। ವೈಖರಿಯಿಂದಲೇ ಸರ್ವಪ್ರಯೋಜನಗಳೂಸಿದ್ಧಿಸಿದರುಂ। ಫಲದಂತೆತತ್ಫಲಭೋಗನಶ್ವರವಾಗಿರ್ಪುದರಿಂದದರಮೂಲವುಪ್ಪಪರಯೇ। ಸ್ಥಿರಪ್ರಯೋಜಕವಾಗಿರ್ಪುದೆಂತಲುಂ। ಅಂತುಪರೆವಾಕ್ಕುವೃಕ್ಷಾದಿಗಳಿಗಿದ್ದುರುಂಫಲವಿಲ್ಲದೇನಿಷ್ಪ್ರಯೋಜಕವಾಗಿ। ವೈಖರಿವಿಚಾರಸಂಪನ್ನನಾದ ಪ್ರಾಣಿಯು ಶಿವಾರಾಧನದಿಂ। ಪರವಾಕ್ಕಿಸೊಳುನಿಲ್ಲಲುದೇಕೃತಾರ್ಥಯೆಂದು ತಿಳಿಯಲ್ವೇಳ್ಕುಂ॥

— ವೈಖರೀವಿಶೇಷವಿವೇಕ. —

ಮತ್ತಮಾವೈಖರೀ ರೂಪಶಬ್ದಸಮೂಹವೇ। ವಾಚಕವೆಂದು। ಲಾಕ್ಷಣಿಕವೆಂದು। ವ್ಯಂಜಕವೆಂದು। ತ್ರಿವಿಧವಾಗಿಹುದು। ಅದರಲ್ಲಿ ವೃದ್ಧಸಂಕೇತಸಿದ್ಧವಾಗಿ। ಇದುಘಟವಿದುಪಟವೆಂಬರೀತಿಯಿಂ। ಮುಖ್ಯಾರ್ಥವಂಗೋಚರಿಪವಾಣಿಯೇ। ವಾಚಕಶಬ್ದವೆನಿಸುವದು ॥ ಬಳಕ ಅಟ್ಟಣಿಕೂಗಿತೆಂಬಲ್ಲಿ। ಅಚೇತನವಾದಟ್ಟಣಿಯುಕೂಗಲರಿಯದಾಗಿ। ತತ್ಸಂಬಂಧಿಯಾಗಿಯಿರುತಿಹಮಾಣವಕನೇಕೂಗಿದನೆಂದು ಅನ್ಯಾರ್ಥಮಂಲಕ್ಷಿಪವಾಣಿಯೇ। ಲಾಕ್ಷಣಿಕಶಬ್ದವೆನಿಸುವದು। ಬಳಿಕಸೂರ್ಯನಸ್ತಂಗತನಾದನೆಂಬಲ್ಲಿ। ಸುಕೃತಾದಿಗಲಪೇಕ್ಷೆಯಿಂ। ದೇವಪೂಜಾ ಸಂಧ್ಯಾವಂದನಾದಿಕಮಂ ಮಾಡಲ್ತಕ್ಕದೆಂದು ಬೇರೊಂದರ್ಥಮಂ ಬೋಧಿಪವಾಣಿಯೇವ್ಯಂಜಕಶಬ್ದಮುಪ್ಪುದಾಗಿ। ತ್ರಿವಿಧವಾಗಿರ್ಪವಾಗ್ವೈಖರಿಯು। ರಸಾಲಂಕಾರಾದಿಯುಕ್ತವಾಗಿತಾತ್ಪರ್ಯಬೋಧಾದಿವೈಚಿತ್ರ್ಯಮಂಕಲ್ಪಿಸುವದೆಂದುವಿವೇಕಿಸಿ॥

— ಸವಿಕಲ್ಪಕಜ್ಞಾನಗುರುಪರಂಪರೆ. —

ಬಳಿಕಲ್ಲಿ। ಘಟಾದಿಸಕಲವಿಷಯಂಗಳವಾಚ್ಯವಾಚಕಸಂಬಂಧಸಂಕೇತಲಕ್ಷಣಸವಿಕಲ್ಪಕಜ್ಞಾನವಾದೊಡೆ। ನಿರ್ವಿಕಲ್ಪಕತ್ವದಿಂಸರ್ವವಸ್ತುಯಥಾರ್ಥಗ್ರಾಹಕನಪ್ಪಸರ್ವಜ್ಞನಾದ ಪರಮೇಶ್ವರನ ಪ್ರಸಾದದಿಂದ। ಅನಂ

ತೇಶ್ವರಾದಿಗಳಿಗೆಬಂದಿತ್ತು। ಮೇಣವರಿಂಬ್ರಹ್ಮಾದಿಗಳಿಗೆಲಭಿಸಿತ್ತು। ಮರಳವರಿಂದೇವತೆಗಳಿಗೊಪಗಿತ್ತು। ಮತ್ತವರಿಂಋಷಿಗಳಿಗಳವಟ್ಟಿತ್ತು। ಬಳಿಕವರಿಂದಸ್ಮದ್ವಂಶಪೂರ್ವಿಕರಾದಪ್ರಪಿತಾಮಹಾದಿಪಿತೃಗಳಿಗೆಸಿಕ್ಕಿತ್ತು। ಮಗುಳವರಿಂದಸ್ಮದಾದಿಗಳಿಗೆಸಿದ್ಧಿಸಿತೆಂದರಿಯಲ್ವೇಳ್ಕುಂ॥

— ತಿರೋಧಾನಪಾಶಸ್ವರೂಪ. —

ಬಳಿಕಿಂತು ಪೇಳ್ದಮಲಾದಿ ಚತುರ್ವಿಧಪಾಶಮಚೇತನವಪ್ಪುದರಿಂತಂ ಮತಂಮವ್ಯಾಪಾರದೊಳುತಾನೇಪ್ರವರ್ತಿಸಲರಿಯುವಾಗಿ। ಆಯಾಪಾಶಾನುಗ್ರಹಲಕ್ಷಣಮಾದ। ಆಯಾಪಾಶವ್ಯಾಪಾರಾನುಸರಣಮಪ್ಪ। ಸೂತ್ರಧಾರಿಯವ್ಯಾಪಾರದಂತಸ್ವಾಧೀನವಾದ। ಶಿವಶಕ್ತಿವಿಶೇಷವೇತಿರೋಧಾನಪಾಶವಹುದೆಂಗು। ತೃತೀಯ ಪಾಶಪದಾರ್ಥಮುಂ ಸಂಭ್ರಮಾಗಿ ತಿಳಿಯಲ್ವೇಳ್ಕುಂ॥

— ಶಿವಸಾರೂಪ್ಯಸಿದ್ಧಾಂತ. —

ಇಂತೀ ಪಂಚಪಾಶಗಳಿಂಬದ್ಧರಾದಪಶುಗಳು। ಪಾಶಬದ್ಧೋಭವಜ್ಜೀವಃಪಾಶಮುಕ್ತಸ್ಸದಾಶಿವಃಯೆಂಬಪ್ರಮಾಣದಿಂ। ಪಶುಪತಿಯಂಭಜಿಸಿ। ತತ್ಪ್ರಸಾದಲಬ್ಧಮಾದಶಿವಾತ್ಮಜ್ಞಾನದಿಂ। ಮಯಾಕ್ರೀಡಂತಿತೇಮುಕ್ತಾ ಮದ್ಭಾವಮಾಮುಪಾಶ್ರಿತಾಃ। ಮತ್ಸಮೇನ ಚಿದಾನಂದಪೂರ್ಣಾಮನ್ಮೂರ್ತಿಮೂರ್ತಯಃ। ಯೆಂಬಪ್ರಮಾಣದಿಂ। ಶಿವರೂಪ್ಯಮೆಂದುಪಚರಿಸಿಕೊಳ್ಳಲುಚ್ಚ ಶಿವತ್ವಮಂಪಡವರೆಂದುನಿರ್ಧರಿಸಿ॥

— ಸಿದ್ಧಾಂತೋಪಸಂಹಾರ. —

ಬಳಿಕೀಪ್ರಕಾರದಿಂಪೇಳ್ದಮುಮೊದಲಾದ ಅಸಂಖ್ಯಾತಮಪ್ಪವಾಂತರಭೇದಯುಕ್ತಮಾಗಿ। ಪತ್ಯಾದಿಪದಾರ್ಥತ್ರಯಪ್ರತಿಪಾದಕಮಾದುದೇ ಜ್ಞಾನಪಾದಮಕ್ಕುಂ॥

ಇತಿ ಜ್ಞಾನಪಾದಸ್ಸಮಾಪ್ತಃ.

---

ಪ್ರಕರಣಪರಿಸಮಾಪ್ತಿ.

ಇಂತು ಕ್ರಿಯಾಪಾದಮೊದಲಾದನಾಲ್ಕುಪಾದಗಳಿಗಂ ಪ್ರವರ್ತಕಮಪ್ಪ। ಶಿವಾಗಮಸಿದ್ಧಾಂತಶಾಸ್ತ್ರದ। ಶ್ರವಣ, ಪಠನ, ಗ್ರಹಣ, ಮನನ, ನಿಧಿಧ್ಯಾಸನಗಳಿಂದುತ್ಪನ್ನಮಾದ। ಆತ್ಮನಯಥಾರ್ಥಜ್ಞಾನದೃಢತೆಯಿಂ ಪುಟ್ಟಿದ। ಸಮಸ್ತಪ್ರಾಕೃತಮಾಯೆಯ ಯಿಚ್ಛೆಯಿಂದಾದ ಭೋಗಗಳ

ಳೊಳು ನಿಸ್ಪೃಹಲಕ್ಷಣಮಪ್ಪ ಪರಮವೈರಾಗ್ಯಬಲದಿಂ। ಷಡರ್ಥಾತೀತ ನಿರಂಜನಪರಶಿವಸಾಮ್ಯದಿಂ। ಶಿವಸಮಾನನಪ್ಪೀನವರಿಂ। ಶಿವೋಹಮೆಂಬ ನಿಶ್ಚಯಮುಳ್ಳಾತನೇ ಚರಮಕೃತಾರ್ಥನೆಂದುಪೇಳ್ವುದೇ। ಶಿವಸಿದ್ಧಾಂತದರ್ಥವಿಸ್ತಾರಸಂಗ್ರಹಮುಕ್ಕುಂ॥

ಇಂತೆಂಬಲ್ಲಿಗೆ ನಿಜಗುಣಶಿವಯೋಗೀಂದ್ರ ವಿರಚಿತಮಾದ
ವಿವೇಕಚಿಂತಾಮಣಿಯೆಂಬ ಗ್ರಂಥದಲ್ಲಿ
ಶಿವಸಿದ್ಧಾಂತತತ್ವಕಥನವೆಂಬ
ದ್ವಿತೀಯಪ್ರಕರಣವು
ಪರಿಸಮಾಪ್ತಮಾದುದು.
ಮಂಗಳಮಸ್ತು.

---

ಶ್ರೀರಸ್ತು.
ಜಯಪರಮೇಶ್ವರ.

## ತೃತೀಯಪ್ರಕರಣಪ್ರಾರಂಭಃ.



ಕಂದ॥ ಸಕಲಾಗಮದರ್ಥವಸಾ। ಧಕರರಿವಂತುಸುರಿಮಾತ್ತೆನಿಂಮುದನಯೆದಿ॥ ಪ್ರಕಟಸುವೆನಿನ್ನ ಜಾಂಡಾ। ದಿಕಮುಂಕೌತುಕವಿದೆಂದುಕೇಳ್ವಂತಿಳಿಯೋಳ್ ॥೧॥ ಅದೆಂತೆಂದೊಡೆ। ಪರಮೇಶ್ವರಮಾಯಾಪರಿಕಲ್ಪಿತಮಾಗಿಪರಮೇಶ್ವರಶಕ್ತಿಯಿಂವರ್ತಿಸುತಿಪ್ಪಬ್ರಹ್ಮಾಂಡಮೆಲ್ಲಂ। ಎಷ್ಟುಪರಿಣಾಮವಿರುವದೆಂತಲುಂ। ಅದರ ಆಕಾರವೆಂತದೆಂತಲುಂ। ವಿಚಾರಿಸಿತಿಳಿಯಲ್ತಕ್ಕುದಾಗಿ ತತ್ವಾದಿಸೃಷ್ಟಿಯೆಂತೆನೆ॥

— ಆಗಮರೀತ್ಯಾಷಟ್ತ್ರಿಂಶತ್ತತ್ವಗಳು. —

ಪೂರ್ವೋಕ್ತಬಿಂದುವಿನಕಾರ್ಯಮಾದ ವರ್ಣಾದಿ ಕಳಾಂತಮಪ್ಪಷಡಧ್ವವಿಚಾರಮಾಗಮಂಗಳಲ್ಲಿ ಪ್ರಸಿದ್ಧಮಪ್ಪುದರಿಂದ। ಅವುಗಳೊಳಗೆ। ತತ್ವಾದ್ವಭುವನಾದ್ವಂಗಳೆರಡನೆ। ಪಾಲು ಸಕ್ಕರೆ ತುಪ್ಪಂಗಳೊಡಗೂಡಲದುಮಧುರಮಪ್ಪಂತೆ। ವೇದಾಗಮಪುರಾಣಸ್ಮೃತಿಗೂಡಪೇಳ್ವೆನದೆಂತೆಂದೊಡೆ

ಶಿವ, ಶಕ್ತಿ, ಸದಾಶಿವ, ಈಶ್ವರ, ವಿದ್ಯೆ, ೫। ಕಾಲ, ನಿಯತಿ ಕಲೆ, ವಿದ್ಯೆ, ರಾಗ, ಪುರುಷ, ಪ್ರಕೃತಿ, ೭। ಗುಣ ಬುದ್ಧಿ, ಅಹಂಕಾರ, ಚಿತ್ತ, ಶ್ರೋತ್ರ ತತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ವಾಕ್ಕು, ಪಾದ, ಪಾಣಿ, ಪಾಯು, ಉಪಸ್ಥ, ಶಬ್ದ, ತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರ, ನಭಸ್ಸು, ವಾಯು, ವಹ್ನಿ, ಜಲ, ಭೂಮಿ, ೨೪। ಅಂತೂ ೩೬। ಇಂತೆಂಬ ಮೂವತ್ತಾರುತತ್ವಗಳಲ್ಲಿ। ಸೃಷ್ಟಿಕ್ರಮ, ಸ್ವರೂಪಸಿದ್ಧಿ, ಗುಣಕರ್ಮ, ಪ್ರಯೋಜನಾದಿಗಳವಿಸ್ತರವನು। ಆಗಮಂಗಳಲ್ಲಿ ವಿಚಾರಂಗೈಯಲ್ತಕ್ಕುದವುಗಳೊಳಗೆ॥

— ಶುದ್ಧಾಧ್ವತತ್ವಗಳು. —

ಮೊದಲು । ಶಿವಾದಿವಿದ್ಯಾಂತಮಾದೈದುತತ್ವಂಗಳೇ ಬಿಂದುಮಾಯಾ ಕಾರ್ಯವಾಗಿ ಶುದ್ಧಾಧ್ವವೆನಿಸಿಕೊಂಡು। ವಿಜ್ಞಾನಕೇವಲರೆಂಬಾತ್ಮವರ್ಗಕ್ಕೆ ಶರೀರಾದಿಭೋಗಸಾಧನಂಗಳಾಗಿರ್ಕುಂ॥

— ಮಿಶ್ರಾಧ್ವತತ್ವಗಳು. —

ಮತ್ತಮಾಕಾಲಾದಿ ಪ್ರಕೃತಿಕಡೆಯಾದೇಳುತತ್ವಂಗಳೇ ಮಾಯಾವಿಕಾರಮಾಗಿ ಮಿಶ್ರಾಧ್ವವೆನಿಸಿಕೊಂಡು ಪ್ರಳಯಕಾಲರೆಂಬಾತ್ಮವರ್ಗಕ್ಕೆ ಕರಣಾದಿ ಭೋಗಸಾಧನಂಗಳಾಗಿರ್ಕುಂ॥

— ಅಶುದ್ಧಾಧ್ವತತ್ವಗಳು. —

ಬಳಿಕ ಗುಣಾದಿಭೂಮ್ಯಂತಮಾದಿಪ್ಪತ್ನಾಲ್ಕುತತ್ವಂಗಳೇ ಪ್ರಕೃತಿಕಾರ್ಯಮಾಗಿ ಅಶುದ್ಧಾಧ್ವವೆನಿಸಿಕೊಂಡು। ಸಕಲರೆಂಬಾತ್ಮವರ್ಗಕ್ಕೆ ಭುವನಾದಿಭೋಗಸಾಧನಂಗಳಾಗಿರ್ಕುಂ॥

— ಸೂಕ್ಷ್ಮತತ್ವಂಗಳು. —

ಬಳಿಕವುಗಳ್ । ಕಾಲಾದಿಭೂಮ್ಯವಧಿಯಾದಮೂವತ್ತೊಂದುತತ್ವಂಗಳಾವೊಡೆ। ಸೂಕ್ಷ್ಮಸ್ಥೂಲರೂಪದಿಂದಿತ್ತೆರನಾಗಿರ್ಪವುಗಳೊಳಗೆ। ಸೂಕ್ಷ್ಮರೂಪಂಗಳೇ। ಭೂತ, ತನ್ಮಾತ್ರ, ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಅಂತಃಕರಣ, ಗುಣ, ಪ್ರಕೃತಿ, ಕಾಲಾದಿವೇದು, ಎಂಟುವರ್ಗವಾಗಿ, ಬೇರೆ ಬೇರೆ। ಪುರ್ಯಷ್ಟಕವೆನಿಸಿಕೊಂಡು । ಸೃಷ್ಟಿತೊಡಗಿ ಪ್ರಳಯಾವಧಿಯಾಗಾದರೂ। ಅಲ್ಲವೆ- ಮೋಕ್ಷಾಂತಮಾಗಾದರೂ ಕೆಡದಿರ್ದು। ತಮ್ಮತಮ್ಮ ವ್ಯಾಪಾರವುಖದಿಂ। ಪಿಶಾಚಯಕ್ಷ, ರಾಕ್ಷಸ, ಗುಹ್ಯಕ, ಐಂದ್ರ, ಬ್ರಾಹ್ಮ, ಸೋಮ, ಪ್ರಾಜಾಪತ್ಯ, ಪಶುಪಕ್ಷಿ, ಸರ್ಪ, ಮೃಗ, ವೃಕ್ಷ, ಮನುಷ್ಯ

ರೆಂಬ- ಚತುರ್ದಶಸೃಷ್ಟಿಯೋಗ್ಯರಾದ ಪ್ರತ್ಯಗಾತ್ಮರ್ಗೆ ಭೋಗಸಾಧನಗಳಾಗಿರ್ಕುಂ॥

## — ಸ್ಥೂಲತತ್ವಗಳ ಪಂಚೀಕರಣ. —

ಬಳಿಕುಳಿದ ಸ್ಥೂಲಸೂಕ್ಷ್ಮಂಗಳೇ ಭುವನಂಗಳಿಗಾಧಾರವಾಗಿರ್ಪವೆಂತೆಂದೊಡೆ। ಪರಮೇಶ್ವರಪ್ರೇರಣೆಯಿಂ। ಬ್ರಹ್ಮನು, ಪೃಥಿವ್ಯಾದಿಪಂಚಭೂತಂಗಳನೊಂದೊಂದೆರಡಾಗಿವಿಭಾಗಿಸಿ । ಬಳಿಕವುಗಳೊಳಗೊಂದೊಂದುಭಾಗವನೇ ಮಹಾಭೂತವಾಗಿರಿಸಿ ಮಿಕ್ಕೊಂದುಭಾಗವನೇ ಮತ್ತೆರಡುಭಾಗಂಗೈದು। ಮೇಣಾಭಾಗದ್ವಯದೊಳಗೆ । ಮೊದಲು ಮೊದಲಭಾಗವನೇ ಮತ್ತೆನಾಲ್ಕುನಾಲ್ಕು ಭಾಗಂಮಾಡಿ । ಮೇಲಾನಾಲ್ಕುನಾಲ್ಕುಭಾಗಮಂ ತಂದು ತಮ್ಮತಮ್ಮ ದ್ವಿತೀಯಭಾಗದೋಳ್ ಬೆರಸಿದ ಮಿಕ್ಕವರೆರಡೆರಡನೆಯ ಭಾಗದೊಳಗೊಂದೊಂದು ಕೂಡಲಿಪ್ಪತ್ತೈದುಭಾಗಮಪ್ಪವದೆಂತೆನೆ

## — ಆಕಾಶಪಂಚೀಕರಣ. —

ವಿಭಕ್ತಾಕಾಶದದ್ವಿತೀಯಭಾಗವೇ ಜ್ಞಾತೃವೆನಿಸುವದು । ಅನಿಲನದ್ವಿತೀಯಭಾಗದೊಳು ಬೆರತುದೇ ಮನಸ್ಸೆನಿಸುವದು। ಅನಲನದ್ವಿತೀಯಭಾಗದೋಳ್ ಬೆರತುದೇಬುದ್ಧಿಯೆನಿಸುವದು।ವಾರಿಯದ್ವಿತೀಯಭಾಗದೋಳ್ಬೆರತುದೇ ಚಿತ್ತವೆನಿಸುವದು । ಭೂಮಿಯ ದ್ವಿತೀಯಭಾಗದೋಳ್ಬೆರತುದೇ ಅಹಂಕಾರವೆನಿಸುವದು । ಇಂತೈದಂತಃಕರಣಂಗಳೂ ಆಕಾಶಪಂಚೀಕರಣಮಕ್ಕುಂ॥

## — ವಾಯುಪಂಚೀಕರಣ. —

ಬಳಿಕ ವಾಯುವಿನದ್ವಿತೀಯಭಾಗವೇ ವ್ಯಾಸವೆನಿಸುವದು। ನಭದ್ವಿತೀಯಭಾಗದೋಳ್ಕೂಡಿದುದೇಸಮಾನ । ವಹ್ನಿಯದ್ವಿತೀಯಭಾಗದೋಳ್ಕೂಡಿದುದೇಉದಾನ। ಜಲದದ್ವಿತೀಯಭಾಗದೊಳುಕೂಡಿದುದೇಅಪಾನ। ಧರೆಯದ್ವಿತೀಯಭಾಗದೊಳು-ಕೂಡಿದುದೇಪ್ರಾಣ, ಇಂತೈದುಮಾರುತಂಗಳೇ ವಾಯುವಿನ ಪಂಚೀಕರಣಮಕ್ಕು॥

## — ಅಗ್ನಿಯ ಪಂಚೀಕರಣ. —

ಬಳಿಕ ಅಗ್ನಿದ್ವಿತೀಯಭಾಗವೇ ನೇತ್ರವೆನಿಸುವದು। ವ್ಯೋಮದದ್ವಿತೀಯಭಾಗದೊಳು ಕೂಡಿದುದೇ ಶ್ರೋತ್ರ। ಸಮೀರನದ್ವಿತೀಯಭಾಗದೊಳುಕೂಡಿದುದೇತ್ವಕ್ಕು। ಸಲಿಲದ್ವಿತೀಯಭಾಗದೊಳು ಕೂಡಿದುದೇಜಿಹ್ವೆ।

ಅವನಿಯದ್ವಿತೀಯಭಾಗವನೊಂದಿದುದೇ ಘ್ರಾಣ। ಇಂತೈದುಜ್ಞಾನೇಂದ್ರಿಯಂಗಳೇ ಅಗ್ನಿಯಪಂಚೀಕರಣಮಕ್ಕುಂ॥

— ಅಪ್ಪಿನಪಂಚೀಕರಣ. —

ಬಳಿಕ ಅಪ್ಪಿನದ್ವಿತೀಯಭಾಗವೇ ರಸವೆನಿಸುವದು। ಗಗನದ್ವಿತೀಯ ಭಾಗದೊಳ ಗೊಂದಿದುದೇಶಬ್ದ। ಪವನದ್ವಿತೀಯ ಭಾಗದೊಳೊಂದಿದುದೇ ಸ್ಪರ್ಶ। ಅನಲದ್ವಿತೀಯಭಾಗದಿಂ ಕೂಡಿದುದೇರೂಪ। ಪೃಥಿವಿಯದ್ವಿತೀಯಭಾಗದಿಂದೊಡಗೂಡಿದುದೇಗಂಧ। ಇಂತೈದುವಿಷಯಂಗಳೇ ಅಪ್ಪಿನ ಪಂಚೀಕರಣಮಕ್ಕುಂ.

— ಪೃಥಿವೀಪಂಚೀಕರಣ. —

ಬಳಿಕ ಪೃಥಿವಿದ್ವಿತೀಯಭಾಗವೇ ಪಾಯುವೆನಿಸುವದು। ಅಂಬರದದ್ವಿತೀಯಭಾಗದೊಡಗೂಡಿದುದೇವಾಕ್ಕು। ಪವಮಾನದ್ವಿತೀಯಭಾಗದೊಳೈದಿದುದೆ ಪಾಣಿ। ಜ್ವಲನ ನದ್ವಿತೀಯಭಾಗದೊಳೈದಿದುದೇಪಾದ। ಉದಕದದ್ವಿತೀಯಭಾಗದೊಳೈದಿದುದೇ ಉಪಸ್ಥ। ಇಂತೀಪಂಚಕರ್ಮೇಂದ್ರಿಯಂಗಳೇ ಪೃಥಿವಿಯ ಪಂಚೀಕರಣಮಕ್ಕುಂ॥

— ಎಂಭತ್ತನಾಲ್ಕುಲಕ್ಷ ಜೀವಯೋನಿಗಳು. —

ಇಂತುಪಂಚೀಕೃತಭೂತಂಗಳಿಂ ಬ್ರಹ್ಮಾಂಡವು। ಆ ಬ್ರಹ್ಮಾಂಡದಲ್ಲಿ ಕಾಲಾಗ್ನಿಮೊದಲಾದ ಭುವನಂಗಳು। ಆಭುವನಂಗಳಲ್ಲಿ। ಅಂಡಜ। ಸ್ವೇದಜ। ಉದ್ಭಿಜ್ಜ। ಜರಾಯುಜ। ಮಂತ್ರಜವೆಂದು ಐದುಯೋನಿ ಭೇದಂಗಳೊಳಗೆ, (೯೦೦೦೦೦) ನವಲಕ್ಷಮನುಷ್ಯಜಾತಿಗಳು। (೧೪೦೦೦೦೦) ಹದಿನಾಲ್ಕುಲಕ್ಷ ದೇವತಾಜಾತಿಗಳು। (೧೦೦೦೦೦) ಲಕ್ಷ ಜಲಚರಪ್ರಾಣಿಜಾತಿಗಳು। (೧೦೦೦೦೦೦) ಹತ್ತುಲಕ್ಷ ಬಹುಪಾದಗಳುಳ್ಳ ಶರೀರಜಾತಿಗಳು। (೧೦೦೦೦೦೦) ಹತ್ತುಲಕ್ಷಅಂಡಜಸರ್ಪಜಾತಿಗಳು।(೧೦೦೦೦೦೦)ಹತ್ತುಲಕ್ಷ ಖೇಚರಜಾತಿಗಳು। (೧೦೦೦೦೦) ಒಂದುಲಕ್ಷ ಚರಾಚರಪ್ರಾಣಿಭೂಜಾತಜಾತಿಗಳು। (೨೦೦೦೦೦೦) ಇಪ್ಪತ್ತುಲಕ್ಷ ವೃಕ್ಷಾದಿಸ್ಥಾವರಜಾತಿಗಳಸಂಖ್ಯಾಭೇದದಿಂ। (೮೪೦೦೦೦೦) ಎಂಭತ್ತುನಾಲ್ಕುಲಕ್ಷವಾದ ಜೀವರಾಶಿಗಳ ಸ್ಥೂಲಶರೀರಜಾತಿಭೇದಗಳಪ್ಪವೆಂದುಶ್ರುತಿಕರ್ಗಳ್॥

— ಸ್ಥೂಲಶರೀರದಲ್ಲಿ ಪಂಚೀಕೃತ. —

ಮತ್ತಮಾಸ್ಥೂಲಶರೀರದಲ್ಲಿಯೇ। ಪೃಥಿವ್ಯಾದಿಭೂತಪಂಚಕವು ಪಂಚೀಕೃತವಾಗಿ ಇಪ್ಪತ್ತೈದಾಗಿರ್ಕುಮಂತೆನೆ। ಅಸ್ಥಿ ಚರ್ಮಾದಿಪಂಚಕಮೇ

ಅಪ್ರುಕ್ಷುತ್ತೃಷ್ಣಾದಿಪಂಚಕಮೇಅಗ್ನಿ । ಧಾವನಚಲನಾದಿಪಂಚಕಮೇ ವಾಯು। ಕಾಮಕ್ರೋಧಾದಿಪಂಚಕಮೇಆಕಾಶಮಾಗಿ ಸ್ಥೂಲಶರೀರಾಶ್ರಯಮಾದರುಂ। ಕೆಲವುಶರೀರಗಳೊಳು ಅನಭಿವ್ಯಕ್ತಮಾಗಿಯುಂ। ಕೆಲವು ಶರೀರಗಳೊಳು ಸಪ್ರತಿಬದ್ಧಮಾಗಿಯುಂ। ಕೆಲವುಶರೀರಗಳೊಳು ಸ್ವರೂಪಯೋಗ್ಯತೆಯಿಲ್ಲದ್ದಾಗಿಯುಂ । ಕೆಲವುಶರೀರಗಳೊಳು ನಿವೃತ್ತಗಳಾಗಿಯುಂ। ಭೌತಿಕಂಗಳಪ್ಪರುಂ। ಉಳಿದಿರ್ಪ ಭೂತವಿಕೃತಿಯೊಳಂತರ್ಭಾವಮಪ್ಪುದರಿಂದ ವ್ಯಾಪ್ತಿಶಂಕೆಗವಕಾಶವಿಲ್ಲದಿರ್ಕುಂ॥

— ಭೋಗಸಾಧನಸ್ಥೂಲಸೂಕ್ಷ್ಮಗಳು. —

ಬಳಿಕಂತುಪೇಳ್ದ ತತ್ವಪುರ್ಯಷ್ಟಕಮಾದಸೂಕ್ಷ್ಮಶರೀರ। ಮತ್ತು। ಭುವನಜಮಾದಸ್ಥೂಲಶರೀರ। ಇವುಗಳೊಳಗೆ। ತತ್ವಂಗಳೇಸಮಸ್ತಜೀವರ್ಗಯುಂಭೋಗಾತ್ರಯಗಳಾಗಿ। ಸಾಧಾರಣಗಳೆನಿಸಿಕೊಂಬವು। ಸೂಕ್ಷ್ಮಶರೀರಂಗಳೆಸ। ಬೇರೆಬೇರೊಬ್ಬರೊಬ್ಬರಜೀವರ ಭೋಗಕ್ಕೆಸಾಧನಂಗಳಾಗಿ। ಅಸಾಧಾರಣಂಗಳೆನಿಸಿಕೊಂಬವು। ಸ್ಥೂಲದೇಹಂಗಳೇ ಜೀವರ್ಗನ್ಯೋನ್ಯಭೋಗಸಾಧನಂಗಳಾಗಿ। ಭೋಗ್ಯಭೋಕ್ತೃದೆಶೆಗಳಿಂಸಾಧಾರಣಗಳೆನಿಸಿಕೊಳ್ಳುತಿರ್ಕುಂ॥

— ಬ್ರಹ್ಮಾಂಡಾದಿಲಕ್ಷಣ. —

ಮತ್ತಮಾ ಬ್ರಹ್ಮಾಂಡಭುವನಾದಿಲಕ್ಷಣಮೆಂತೆನೆ । ಪಂಚೀಕರಿಸಿದ ಮೂಲಪೃಥ್ವೀತತ್ವದ ದಶಾಂಶದೇಕದೇಶದೊಳು। ಒಂದುಕೋಟಿಯೋಜನ ದಳತೆಯುಡಟ್ಟದಸುವರ್ಣಮಯಮಾದ ಹಂಚುಳ್ಳ। ಒಂದರ್ಬುದಯೋಜನದಪ್ಪವಾದ। ನೂರುಕೋಟಿಯೋಜನಪ್ರಮಾಣದ ವಿಶಾಲೋನ್ನತಮಾದ ವಳ ವಲಯಮುಳ್ಳ। ಕುಕ್ಕುಟಾಂಡಾಕಾರಮಪ್ಪುದೇ ಬ್ರಹ್ಮಾಂಡಮೆಂದು ತಿಳಿಯಲ್ವೇಳ್ಕು॥

— ಬ್ರಹ್ಮಾಂಡಸೃಷ್ಟಿ —

ಮತ್ತಮಾ ಬ್ರಹ್ಮಾಂಡೋತ್ಪತ್ತಿಯೆಂತೆನೆ। ಪರಮೇಶ್ವರನಾಜ್ಞೆಯಿಂ ಬ್ರಹ್ಮನುಮೊದಲು ಮಹಾಜಲದೊಳು ತನ್ನತಪೋವೀರ್ಯಮಂಬಿಡಲದು ಸುವರ್ಣಮಯಮಾದ ಅಂಡಮಾಗೆ।ಅದನುಮಧ್ಯದಲ್ಲಿಸಮಾನಮಾಗಿ। ಕೊಪ್ಪರಿಗೆಯಾಕಾರದಿಂದೆರಡುಹೋಳಾಗಿವಿಭಾಗಿಸಿ।ತಾನೊಳಪೊಕ್ಕು। ಹುಳುವುಕರಂಡಿಗೆಯುಸಮರ್ಚಿದಂತೆ। ಖರ್ಪರದ್ವಯಮುಂಮೊದಲಂತೆ ದೃಢಮಾಗಿ ಸೇರಿಸುತ್ತದರೊಳಗತಿ ವಿಚಿತ್ರಮಾದಭುವನರಚನೆಗಳಂಮಾಡಿದನದರಿಂ

ಚಿತ್ರಗರ್ಭವಾದ ಬ್ರಹ್ಮಾಂಡವೆನಿಸಿತದ್ಗತಚೇತನಕ್ಕೆ ವಿಲಾಸಾಸ್ಪದವಾಗಿರ್ಕು॥

— ಬ್ರಹ್ಮಾಂಡಾಂತರ್ವಿವೇಕ. —

ಮತ್ತಮಾ ಬ್ರಹ್ಮಾಂಡದಡಿಯ ಕಟಾಹದೊಳು ಘನಗಂಭೀರವಾದ ವಾರಿಪೂರಿತವಾಗಿಹುದದರನಟ್ಟನಡುವೆ ತಳದಲ್ಲಿ ವಿಶ್ವಕರ್ಮಕೃತವಾದದಿವ್ಯ ಸಿಂಹಾಸನವಿಪ್ಪುದದರಮೇಲೆ ಆಧಾರಶಕ್ತಿಯಿಪ್ಪುದಾಕೆಯು ಜಲಸ್ತಂಭಕತ್ವದಿಮೆರೆವಳೆಂತೆನೆ॥

— ಆಧಾರಶಕ್ತಿಕಮಠವುಠಪೀಠಗಳು. —

ಹಿರಣ್ಮಯ ಶರೀರದಿಂದೇಕವಕ್ತ್ರ ತ್ರಿಲೋಚನಂಗಳಿಂ। ವರಾಭಯ ಕಲಶೋತ್ಪಲಂಗಳನಾಂತವಾಮ ದಕ್ಷಿಣಕರಚತುಷ್ಟಯದಿಂದೆಸೆದು। ಶಿವಧ್ಯಾನದಿಂನಿಶ್ಚಲಾತ್ಮಕಿಯಾಗಿರ್ಪಳಾ ಆಧಾರಶಕ್ತಿಯಮಸ್ತಕದಲ್ಲಿಮುಡಿದ ಹೊಂದಾವರೆಯಂತೆ ದಶಕೋಟಿಯೋಜನದಗಲದಲ್ಲಿ ಸುವರ್ಣಮಯನಾದಕೂರ್ಮರಾಜನಿಹನು॥

— ಅಷ್ಟದಿಗ್ಗಜಗಳು. —

ಬಳಿಕಾ ಕೂರ್ಮನಬೆಂನರುಗಿನೊಳು। ಇಂದ್ರಾದ್ಯಷ್ಟದಿಕ್ಕುಗಳಲ್ಲಿಯುಂ ಕ್ರಮದಿಂದ। ಐರಾವತ- ಪುಂಡರೀಕ- ವಾಮನ- ಕುಮುದ- ಅಂಜನ- ಪುಷ್ಪದಂತ- ಸಾರ್ವಭೌಮ- ಸುಪ್ರತೀಕನೆಂಬದಿಗ್ಗಜಗಳೆಂಟು- ಅಭ್ರಮು- ಕಪಿಲೆ- ಪಿಂಗಳೆ- ಅನುಪಮೆ- ತಾಂಬ್ರವರ್ಣೆ- ಸುದಂತಿ- ಅಂಜನೆ ಅಂಜನಾವತಿಯರೆಂಬ ತವ್ಮತಮ್ಮ ಸ್ತ್ರೀಗಜಗಳೊಡಗೂಡಿ। ಕ್ರಮದಿಂ ಭೂಮಿಯಂವಹಿಸಿರ್ಪವು॥

— ಅಷ್ಟಕುಲಫಣಿಗಳು. —

ಮತ್ತಮಾ ದಿಗ್ಗಜಂಗಳಗೆ। ಸ್ತಂಭಕಪಾಶರೂಪವಾಗಿ। ಕೊರಳಂಬಳಸಿ। ತಮ್ಮತಮ್ಮ ಪೆಡೆಗಳಿಂದ ಇಂದ್ರಾಗ್ನಿ ಮೊದಲಾದವೆಂಟುದಿಕ್ಕಿನಭೂಮಿಯಂ ಕ್ರಮದಿಂಪೊತ್ತು। ಅನಂತ- ತಕ್ಷಕ- ವಾಸುಕಿ-ಶಂಕಪಾಲ-ಪದ್ಮ ಕರ್ಕೋಟಕ- ಕೋಡ- ಕಾಲನೆಂಬಷ್ಟಕುಲಫಣಿಗಳಿರ್ಕುಂ॥

— ಮಹಾಶೇಷ. —

ಬಳಿಕ ಕೂರ್ಮನ ನಡುಬೆನ್ನಮೇಲೆ ನೆಲಸಿ। ಪರಮೈಶ್ವರ್ಯಸಂಪನ್ನನಾಗಿ ಮೆರವಮಹಾಶೇಷನಾದೊಡೆ। ಪೆಡೆಯೊಂದಕೆಮೂವತ್ತುಸಾವಿರಯೋಜನದಗಲಮಿಂತು ಪೆಡೆಗಳಸಹಸ್ರದಿಂ। ಭೂಮಿಗಾಧಾರನಾಗಿರ್ಪನಾದಿಗ್ಗಜಗಳುಂ। ಕುಲಫಣಿಗಳುಂ- ಮಹಾಶೇಷನುಂ- ತಮ್ಮತಮ್ಮಆಹಾರಾದಿಸು

ಮಯಗಳೊಳು ಅನ್ಯೋನ್ಯಸಹಾಯಕರಾಗಿ। ಪರಮೇಶ್ವರಾಜ್ಞಾಬದ್ಧತ
ದಿ। ಶಿವಾರಾಧನರೂಪಮಾಗಿ ಧರಣಿಯಂ ಧರಿಸಿರ್ಪರು॥

— ದಶಲೋಕೇಶ್ವರರು. —

ಮತ್ತಮಿಂತು ಗಜಮಸ್ತಕ- ಫಣಿ- ಮಹಾಶೇಷಬಡಿಗಳಮೇಲೆ- ಒಂದುಕೋಟಿಯೋಜನದಳತೆಯುಡಟ್ಟವಾದ। ಸಾಂದ್ರವಿಶಾಲಸರ್ವಾಧಾರಮಪ್ಪ। ಸುವರ್ಣಮಯಭೂಮಿ ಕಂಗೊಳಿಸುತ್ತಿಹುದದರಮೇಲೆ॥ ಮೇಲೆಕೆಳಗೆ। ಇಂದ್ರಾದ್ಯಷ್ಟದಿಕ್ಕುಗಳಲ್ಲಿಯು। ಕ್ರಮದಿಂದೆಸೆವ- ಪ್ರಶ್ನ- ಅನಂತ ಈಶ್ವರ- ಪಿಂಗಳ- ಕಾಲ- ಕ್ರೋಧೇಶ- ಜಲದ- ಬಲ- ಧನದ- ಶಂಕರರೆಂಬ ದಶಲೋಕೇಶ್ವರ ಭುವನಂಗಳಿರ್ಪವವುಗಳ ಮಧ್ಯದೊಳು॥

— ಕಾಲಾಗ್ನಿರುದ್ರಭುವನ. —

ಏಕಾದಶಭುವನವೆನಿಸಿಕೊಂಡು। ಕಾಲಾಗ್ನಿರುದ್ರಭುವನಮೈದುಕೋಟಿಯೋಜನದಗಲದಿಂದಿಹುದದರ। ಮಧ್ಯದರಮನೆಯಲ್ಲಿ। ಯೆರಡುಕೋಟಿಯೋಜನದಗಲ। ಒಂದುಕೋಟಿಯೋಜನದುದ್ದದಿಂ ನಾನಾರತ್ನಖಚಿತಮಪ್ಪದಿವ್ಯಸಿಂಹಾಸನಾಗ್ರದೊಳು ಮೆರೆವ ಕಾಲಾಗ್ನಿರುದ್ರನಾದೊಡೆ॥

— ಕಾಲಾಗ್ನಿರುದ್ರಮೂರ್ತಿ. —

ಮಹಾಜ್ಯೋತಿಮಯಮಾಗಿ। ರಕ್ತವರ್ಣದೊಂದು ಕೋಟಿಯೋಜನದೀರ್ಘಶರೀರದಿಂ। ಕರಾಳಪವದನಚತುಷ್ಟಯದಿಂ। ದೀರ್ಘಶ್ಮಶ್ರುಗಳಿಂ। ಖಡ್ಗ- ಖಟ್ವಾಂಗ- ಪಾಶ- ಬಾಣ- ವರಂಗಳುಳ್ಳದಕ್ಷಿಣಪಂಚಹಸ್ತಂಗಳಿಂ- ಶೂಲ। ಅಂಕುಶದಂಡ- ಧನುಸ್ಸು- ಅಭಯಮಾಂತ- ವಾಮಕರಣಪಂಚಕದಿಂದೆಸೆದು। ತಾನೂರ್ಧ್ವಮುಖನಾಗಿ ಜಗತ್ಸಂಹಾರಮಪ್ಪುದೆಂದು। ಅಧೋಮುಖನಾಗಿ। ತನಿಗೆ ಸಮಾನರಾದಕೋಟಿರುದ್ರರುಗಳಿಂದಾವೃತನಾಗಿರ್ಪಾತನಜ್ವಾಲೆಯು ದಶಕೋಟಿಯೋಜನಾಂತಮಾಗಿ ನೊಪಲಾವರಿಸಿದದರಧೂಮಮೈದುಕೋಟಿಯೋಜನಾವನತಮಾಗಿರ್ಕುಂ॥

— ಯಮಲೋಕ. —

ಬಳಿಕಲ್ಲಿಂದಮೇಲೆ। ಯಮರಾಜನಾಜ್ಞಾಸೀಮೆಯಾದ। ಪ್ರತ್ಯೇಕ ಕೊಂಭತ್ತು ಲಕ್ಷಯೋಜನದಂತರಮುಳ್ಳ। ಮುವ್ವತ್ತಾರುಪುರಂಗಳಮಧ್ಯದಲ್ಲೊಂದೊಂದುಲಕ್ಷಯೋಜನಾವಕಾಶಮಿಪ್ಪ। ಪಾಪಾತ್ಮರಂವೇದನೆಗೊಳಿಸುವದಕ್ಕೋಸುಗ। ಪಜನಂಕಲ್ಪಿತಮಾದ ನರಕಲೋಕಹವಿಹುದಲ್ಲಿ॥

— ನರಕಂಗಳು. —

ರೌರವಾದಿನು ೨೮ವತ್ತೆರಡು ಮುಖ್ಯನರಕಂಗಳಿರ್ಪವವಾ ಪಾಪವೆಂದೊಡೆ ನಾಲ್ಕು ಭಾಗದಿಂದೆಂಟೆಂಟೆನಿಸಿ । ನರಕ- ಮಹಾನರಕ- ರಾಜನರಕ- ರಾಜ ರಾಜೇಶ್ವರನರಕಂಗಳೆನಿಸಿರ್ಪವವುಗಳಲ್ಲಿ॥

— ನರಕಾಷ್ಟಕ —

ರೌರವ- ಧ್ವಾಂತ- ಶೀತ- ಉಷ್ಣ- ಸಂತಾಪ- ಅಂಬುಜ- ಮಹಾಂಬುಜ- ಕಾಲಸೂತ್ರಂಪಳೆಂಬವೇ ಯೆಂಟುನರಕಂಗಳು॥

— ಮಹಾನರಕಾಷ್ಟಕ. —

ಸೂಚೀಮುಖ- ಕಾಲ- ಖಡ್ಗ- ಕ್ಷುರಧಾರೆ- ಅಂಬರೀಷಕ- ತಪ್ತಾಗಾರ-ಮಹಾದಾಹ- ಸಂತಾಪಂಗಳೆಂಬವೇ ಯೆಂಟುಮಹಾನರಕಂಗಳು॥

— ರಾಜನರಕಂಗಳು. —

ಲಾಕ್ಷಾಪ್ರಲೇಪ । ಮಾಂಸೋದ। ನಿರುಛ್ವಾಸ। ಸನಿಶ್ವಾಸ। ಯೋಗ್ನಾದ್ರಿ ಶಾಲ್ಮಲಿ। ಮೋಹಪ್ರದೀಪಕ। ಕ್ಷುತ್ಪಿಪಾಸಕ। ಕ್ರಿಮಿಕುಲಂಗಳೆಂಬವೇ ಎಂಟುರಾಜನರಕಂಗಳು॥

— ರಾಜರಾಜನರಕಂಗಳು. —

ಲೋಹಸ್ತಂಭ- ಪೂಯಮೂತ್ರ-ವೈಕರಣೀನದೀ- ತಾಮಿಸ್ರ-ಅಂಧತಾಮಿಸ್ರ- ಕುಂಭೀಪಾಕಿ- ಮಹಾರೌರವ- ಮಹಾಪದಾನುಗವೀಚಿಗಳೆಂಬೆಂಟುರಾಜನರಕಂಗಳು

— ರಾಜಮಂತ್ರಿನರಕಂಗಳು. —

ಮತ್ತಮಾನರಕಂಗಳಲ್ಲಿ । ರೌರವ- ಮಹಾರೌರವ- ತಪಸ್ಸು-ಶೀತ-ಉಷ್ಣಂಗಳೆಂಬೈದುಮಂತ್ರಿನರಕಂಗಳಿಂದಾವೃತವಾಗಿ । ಘೋರವೆಂಬರಸು ನರಕವಿಹುದು । ಮತ್ತು- ಸುಗಮನ- ಸುತೀಕ್ಷ್ಣ- ಪದ್ಮ- ಸಂಜೀವನಶತ- ಮಹಾಶನವೆಂಬೈದು ಮಂತ್ರಿನರಕಂಗಳಿಂಪ್ರವೇಷ್ಟಿಸಿ। ಸುಘೋರವೆಂಬರಸು ನರಕವಿಹುದು- ಮತ್ತು- ವಿಲೋಪ- ಸುಭೀಪ-ಕಟಕಟ- ತೀವ್ರವೇಗ- ಕರಾಳವೆಂಬೈದುಮಂತ್ರಿನರಕಂಗಳಿಂಬಳಸಿ।ಅತಿಘೋರವೆಂಬರಸುನರಕವಿಹುದು । ಮತ್ತು। ವಿಕರಾಳ- ಪ್ರಕಂಪ-ಪದ್ಮ ಸುವಕ್ತ್ರ- ಕಾಲವೆಂಬೈದುಮಂತ್ರಿನರಕಂಗಳಿಂದಾವರಿಸಿ। ಅಘೋರವೆಂಬರಸುನರಕವಿಹುದು॥ ಮತ್ತು। ಪ್ರಥನ- ಸೂಚೀಮುಖ- ಅಸುನಿಯಮ ಸಂಪೀಡನ-ಬಾಧೆಯೆಂಬೈದುಮಂತ್ರಿನರಕಂಗಳಿಂಕೂಡಿ । ಅಘೋರವೆಂ

ಬರಸುನರಕವಿಹುದು ॥ ಬಳಿಕ ಕುಂಭೀಪಾಕ- ಸುಪಾಕ- ಪ್ರಮುಖ-ದಾರುಣ- ಅಂಗಾರಕವೆಂಬೈದುಮಂತ್ರಿನರಕಂಗಳಂಸೇರಿ- ತರಳತಾರವೆಂಬರಸು ನರಕವಿಹುದು॥ ಮತ್ತು। ದಹನ- ಆಸ್ರಹ್ರದ- ತೀಕ್ಷ್ಣಾಯುಸ್ತಂಭ ಶಕುನಿಪ್ರೊಯುಹ್ರದ- ಮಹಾವರ್ತಕವೆಂಬೈದುಮಂತ್ರಿನರಕಂಗಳೊಡಗೂಡಿಭಯಾನಕವೆಂಬರಸುನರಕವಿಹುದು॥ ಮತ್ತು। ಕ್ರತು- ಪೂತಿಮಾಂಸ- ತಪ್ತಜತುಲೇಪ- ದ್ರಪತ್ರಪು- ಪ್ರಚ್ಛಾಸವೆಂಬೈದುಮಂತ್ರಿನರಕಂಗಳಂ ಕೂಡಿ। ಕಾಲರಾತ್ರವೆಂಬರಸುನರಕವಿಹುದು॥ ಮತ್ತು। ನಿರುಚ್ಛ್ವಾಸ- ಸುದೀರ್ಘ- ಕೂಟ ಶಾಲ್ಮಲಿ- ಅರಿಷ್ಟ- ಸುಮನವೆಂಬೈದು ಮಂತ್ರಿನರಕಂಗಳೊಡನೆ ಭಯೋತ್ಕಟವೆಂಬರಸು ನರಕವಿಹುದು ॥ ಮತ್ತು। ನಾದ-ಪ್ರವಾಹ- ಸುಪ್ರವಾಹ- ರೂಕ್ಷಮೇಷವೆಂಬೈದು ಮಂತ್ರಿನರಕಂಗಳಮಧ್ಯದಲ್ಲಿ ಚಂಡವೆಂಬರಸು ನರಕವಿಹುದು॥ ಮತ್ತು। ಸಕಲ- ಶಲ್ಯ- ಸಿಂಹ- ಗಜಾನನ- ವ್ಯಾಘ್ರವೆಂಬೈದು ಮಂತ್ರಿನರಕಂಗಳಮೇಳದಲ್ಲಿ ಮಹಾಚಂಡವೆಂಬರಸು ನರಕವಿಹುದು॥ ಮತ್ತು। ಶುನಕ- ಸೂಕರ। ಅಜ। ಮಹಿಷ। ಆವಿಕವೆಂಬೈದು ಮಂತ್ರಿನರಕಂಗಳನಡುವೆ। ಚಂಡ ಕೋಲಾಹಲವೆಂಬರಸು ನರಕವಿಹುದು॥ ಮತ್ತಂ। ಉಗ್ರ। ವೃಕಾಸ್ಯ। ಗ್ರಾಹ। ಕುಂಭಿ। ನಕ್ರವೆಂಬೈದು ಮಂತ್ರಿನರಕಂಗಳಿಂದೊಡಗೂಡಿ ಪ್ರಚಂಡವೆಂಬರಸು ನರಕವಿಹುದು॥ ಮತ್ತಂ। ಸರ್ಪ- ಕೂರ್ಮ। ವಾಯುಸಗೃಧ್ರ। ಉಲೂಕವೆಂಬೈದು ಮಂತ್ರಿನರಕಂಗಳಂ ಸಂಯೋಗಿಸಿ। ಪದ್ಮವೆಂಬರಸುನರಕವಿಹುದು॥ ಬಳಿಕ ಜಳೂಕ- ಮಹಾವ್ಯಾಘ್ರ- ಮರ್ಕಟ- ಕರ್ಕಟ- ಗಂಡಕವೆಂಬೈದುಮಂತ್ರಿನರಕಂಗಳಸಹಾಯದಿಂಮಹಾಪದ್ಮವೆಂಬರಸುನರಕವಿಹುದು॥ಮತ್ತು। ಪೂತಿವಕ್ತ್ರ ರಕ್ತಪೂತಿ। ವೃಶ್ಚಿಕೆ। ಕಣಧೂಮವೆಂಬೈದು ಮಂತ್ರಿನರಕಂಗಳಂಸತ್ತಿ- ಭೀಮವೆಂಬರಸುನರಕವಿಹುದು॥ ಮತ್ತು। ತುಷಾಗ್ನಿ।ಕ್ರಿಮಿಸಂಘ। ಅಮೇಧ್ಯ। ಪ್ರತಿಷ್ಠ। ಮೂತ್ರಕೂಪ। ದುರ್ಗಂಧವಾಸಗಳೆಂಬೈದುಮಂತ್ರಿನರಕಂಗಳಿಂದೊಡಗೂಡಿ। ಭೀಮಭೀಷಣವೆಂಬರಸು ನರಕವಿಹುದು॥ ಮಲಭಕ್ಷಣ- ಆತ್ಮಭಕ್ಷಣ- ರುಧಿರಾಂಬುಭಕ್ಷಣ। ಸರ್ವಭಕ್ಷಣ-ಸುದಾರುಣವೆಂಬೈದು ಮಂತ್ರಿನರಕಂಗಳಂಕಲಿತವಾಗಿ। ಕರಾಳವಂಬರಸುನರಕವಿಹುದು॥ ಅಂಬರೀಷಕ- ಕಟಿತಪ್ತ- ತೋಹಶಯುನವೈತರಣೀನದಿ- ಕಷ್ಟವೆಂಬೈದು ಮಂತ್ರಿನರಕಂಗಳಿಂಯುಕ್ತವಾಗಿ। ವಜ್ರವೆಂಬರಸುನರಕವಹುದು। ಸಂಕಟ- ವಿಸಂಕಟ-ಸುವಿಶಾಲ- ಕಟು- ವಿಕಟುವೆಂಬೈದು

ಮಂತ್ರಿನರಕಂಗಳಿಂಬೆರಸು ವಿಕರಾಳವೆಂಬರಸು ನರಕವಿಹುದು॥ ಅಸಿತಾಳವನ- ಅಸಿಯಂತ್ರಕ್ರಕಚ- ಅಸಿಭಂಗಪ್ರಪೀಡನ- ಶಿಲಯಂತ್ರಪೇಷಣ- ಇಕ್ಷುಯಂತ್ರಸಂಮರ್ದನವೆಂಬೈದು ಮಂತ್ರಿನರಕಂಗಳಿಂಸಹಿತವಾಗಿ। ತ್ರಿಕೋಣಪಾತವೆಂಬರಸು ನರಕವಿಹುದು॥ ಮಹಾಚೂರ್ಣ- ಮೂಲಸಂಚೂರ್ಣ- ಕಟಪಕ್ಷಪ್ರಮರ್ದನ- ತಪ್ತತೈಲ- ತಪ್ತಶೈಲ- ವೆಂಬೈದುಮಂತ್ರಿನರಕಂಗಳಿಂ ಜೊತೆಗೊಂಡು ಪಂಚಕೋಣವೆಂಬರಸು ನರಕವಿಪ್ಪುದು ಪರ್ವತಯುಗಳಘಟ್ಟನ- ಪರ್ವತಕ್ಷುರಧಾರೆ- ದುರ್ಮತ್ರಗರ್ತನಿಷ್ಪಾಟಗರ್ತ- ಚಿತ್ರಹಿಂಸೆಯುಂಬೈದು ಮಂತ್ರಿನರಕಂಗಳ ಸಾಹಚರ್ಯದಿಂ ಸುದೀರ್ಘಯಾತನೆಯೆಂಬರಸು ನರಕವಿಹುದು॥ ಕ್ಷಾರಕೂಪ- ಅಂಧತಮಃಕೂಪ-ಆಮೂಲನಿಶಾತನಮುಸಲೋಲೂಖಲಮರ್ದನ- ಶಿಲಾಸಂಕಟವೆಂಬೈದು ಮಂತ್ರಿನರಕಂಗಳಿಂದೊಪ್ಪಿ। ವಿಷವರ್ತುಳವೆಂಬರಸು ನರಕವಿಹುದು। ಲಾಂಗೂಲಕರ್ತನ- ತಾಳಪತ್ರಪಾಟನ- ಅಸಿಗಹನವಿಸಕಲನ- ಮಶಕಮಂದಿರಕುಟ್ಟನ - ಮೋಹಸಂಭ್ರಂಶವೆಂಬೈದು ಮಂತ್ರಿನರಕಂಗಳಿಂ ಸಹವಾಸಿಯಾಗಿ ಸಪ್ತಭೌಮಭಯ ವೆಂಬರಸು ನರಕವಿಹುದು॥ ಅಸ್ಥಿಬಂಧಬಾಧೆ, ತಪ್ತಸೂಚೀಶೂಲ- ಗುದಶಂಕುತಾಪ- ಬಹುದುಃಖ- ಮಹಾದುಃಖವೆಂಬೈದುಮಂತ್ರಿನರಕಂಗಳಿಂ ಪರಿವೇಷಿತವಾಗಿಅಷ್ಟಭೌಮಶೋಕವೆಂಬರಸು ನರಕವಿಹುದು॥ ಶಾಲ್ಮಲಾಗ್ನಿಜ್ವಲನ- ಸಕಲಾಂಗಭಂಗ। ಹಳಾಹಳ-ವಿರೂಪನ್ಯಸನ- ಸರೂಪತಾಡನವೆಂಬೈದು ಮಂತ್ರಿನರಕಂಗಳಿಂ ಕ್ರೂರವಾಗಿ- ದುರ್ದಿನವೆಂಬರಸು ನರಕವಿಹುದು- ಯಮಾನುಗನಿಯಮಾನಪಕಪಾದಕರ್ಷಣ- ನಿಪಾದಕರಣ- ತೀವ್ರಹಿಂಸೆ- ಚಿರಂತಹಿಂಸೆಗಳೆಂಬೈದು ಮಂತ್ರಿನರಕಂಗಳಿಂಭಯಂಕರವಾಗಿ ಯಮಮಾಯೆಯೆಂಬರಸು ನರಕವಿಹುದು ಇಂತು ೨೯ ಅರಸುನರಕ- ೧೪೦ ಮಂತ್ರಿನರಕಂಗಳಿವುಗಳಗೆಸೇರಿದಂತೆ॥

— ನಾಯಕನರಕಕೋಟಿಗಳು. —

ಪ್ರತ್ಯೇಕವೊಂದೊಂದುಕೋಟಿನಾಯಕನರಕಂಗಳು। ಅವುಗಳಗೊಂದೊಂದಕ್ಕೆ ನೂರಾರು ಪರಿವಾರನರಕಂಗಳುಂಕೂಡಿಶಿವಶಿವಾಬಹುದುಸ್ಸಹಕಠಿನತರಕ್ರೂರ- ಭಯಂಕರ, ದುರಂತ, ಸಂಕಟಸಮರ್ದ, ಕರ್ಷಣ, ಕುಟ್ಟನ, ಪಾತನ, ಪೇಷಣ, ಮರ್ದನ, ಕರ್ತನ, ವಿದಳನ, ವಿಶಸನ, ಸ್ತಂಭನ, ಬಂಧನ, ನಾಶನ, ಘಾತನ, ತಾಡನ, ಭರ್ತ್ಸನ, ತರ್ಜನಹನನ। ಖನನ, ದಹನ, ನಿಯಂತ್ರಣ। ಕೀಲನ, ನಿಪೂರ್ಣಲನ, ವಾರಣ, ವಿಲೇಖನ,

ವ್ಯಾಧೂನನ, ಭ್ರಮಣ, ಚರ್ವಣ, ಸಂತಾಪನ, ಕ್ಲೇಶನ, ಸಮುತ್ಪಾತನ- ಚೂರ್ಣನ, ವಿಮುಖೀಕರಣ, ದುರ್ಭೋಗ್ಯನಾನಾವಿಧಾಸಂಖ್ಯಾತತೀವ್ರವೇದನಾರೂಪಂಗಳಾಗಿ, ಶಿವದ್ರೋಹಿಗಳಿಗೆ, ನಿಷ್ಕಾರುಣ್ಯದಿಂವಾಳ್ವಶಿಕ್ಷಾಲೇಶವೆಂದೆನಿಸಿ । ಲೋಕಾನುಭವದೃಷ್ಟವ್ರಣಕುಷ್ಟಶೂಲಮೂರ್ಛಾಪಸ್ಮಾರಘಾತಪಾತವಿಷಜಂತು ದಂಶನಾದಿಸಾಜಾತ್ಯದಿಂ। ಸೂಚಿಸಲ್ಪಟ್ಟ ದೇಹಧಾರಿಗಳಾದಸಂಸಾರಿಗಳಿಗೆ।ದುಃಖಾನುಭವಪರಕಾಷ್ಠೆಯಾಗಿರ್ಪುವೆಂದುನಿಶ್ಚಿತವುಕ್ಕು॥

— ಪಾಪಸ್ವರೂಪ. —

ಮತ್ತಮಾನರಕಪ್ರಾಪ್ತಿಗೆ ಮುಖ್ಯಹೇತುವಾದ ಪಾಪಸ್ವರೂಪವಮಾದೊಡೆ। ಪ್ರಾಣಿಸಂತಾಪಾತ್ಮಕವಾಗಿ। ಶಿವದ್ರೋಹಮೆಂಬಪ್ರಾಣದಿಂ। ವೇದವಿರೋಧಮೆಂಬಅಪಾನದಿಂ, ಧರ್ಮಚ್ಯುತಿಯೆಂಬವ್ಯಾನದಿಂ- ಕರ್ಮಭ್ರಷ್ಟತೆಯೆಂಬಉದಾನದಿಂ, ಜಾತಿಸಾಂಕರ್ಯವೆಂಬಸಮಾನದಿಂ, ಬ್ರಾಹ್ಮಣಾವಮಾನವೆಂಬಮನಸ್ಸಿನಿಂ ವಿಪ್ರನಿಂದೆಯೆಂಬಬುದ್ಧಿಯಿಂ, ಅಪ್ರಾಮಾಣ್ಯವೆಂಬಚಿತ್ತದಿಂ, ನಾಸ್ತಿಕ್ಯವೆಂಬಹಂಕಾರದಿಂ, ದುರ್ಜನಸಂಗತಿಯೆಂಬಬಲದಿಂ, ಹಿಂಸೆಯೆಂಬಆಹಾರಬಲದಿಂ, ಸಂಸಾರವೆಂಬೂರೊಳು । ದುರಶೆಯೆಂಬರಮನೆಯಂಸೇರಿ- ದುರ್ನೀತಿಯೆಂಬಸಿಂಹಾಸನದಲ್ಲಿ ದುರ್ವಾಕ್ಯಗಳೆಂಬಸ್ವರದಿಂ- ಬ್ರಹ್ಮಹತ್ಯವೆಂಬಶಿರಸ್ಸಿನಿಂ- ಮನುಷ್ಯಹತ್ಯವೆಂಬಕಂಠದಿಂ। ಭೂತಹತ್ಯವೆಂಬಗೋಮಾಳದಿಂ। ಚೌರ್ಯ, ಸ್ವರ್ಣಸ್ತೇಯಂಗಳೆಂಬಭುಜದ್ವಯದಿಂ- ಮಾಂಸಭಕ್ಷಣವೆಂಬಗುಂಡಿಗೆಯಿಂ, ಗುರುತಲ್ಪಗಮನವೆಂಬಬೀಜದಿಂ, ವ್ಯಭಿಚಾರವೆಂಬಮೇಢ್ರದಿಂ, ಅನೃತವೆಂಬನಾಭಿಯಿಂ। ಆತ್ಮದ್ರೋಹನೆಂಬುದರದಿಂ, ಪರಗೃಹದಾಹವೆಂಬೆಡತೊಡೆಯಿಂ, ವಿಷಪ್ರದಾನವೆಂಬಬಲತೊಡೆಯಿಂ, ಅಭಕ್ಷ್ಯಭಕ್ಷಣ, ಅಕಾರ್ಯಕರಣವೆಂಬಪಾರ್ಶ್ವದ್ವಯದಿಂ ವಿಷಯೈಕಲೋಲುಪತ್ವವೆಂಬಚಕ್ಷುರಿಂದ್ರಿಯದಿಂ, ಅಶ್ಲೀಲಕೀರ್ತನವೆಂಬನಾಲಿಗೆಯಿಂ, ಮರ್ಯಾದೋಲ್ಲಂಘನವೆಂಬಮಾಂಸದಿಂ, ನೀಚಕಾರ್ಯಗಳೆಂಬನಾಡಿಗಳಿಂ, ಅರಿಷಡ್ವರ್ಗವೆಂಬಾಯುಧಗಳಿಂ, ಮಹಾಪಾತಕಂಗಳೆಂಬವಯವಂಗಳಿಂ,ಉಪಪಾತಕಂಗಳೆಂಬಸಂಧಿಬಂಧಗಳಿಂ, ಸೂಕ್ಷ್ಮಪಾತಕಂಗಳೆಂಬ ರೋಮಂಗಳಿಂನಂಬಿಸಿ, ಕೆಡಿಸುವದೆಂಬನಿತ್ಯಕರ್ಮದಿಂ, ವಂಚನೆಯೆಂಬಕುಲಧನದಿಂ, ದುರ್ಗುಣಗಳೆಂಬಆಭರಣಗಳಿಂ, ಅಜ್ಞಾನವೆಂ

ಬಾಕಾರದಿಂ, ಅವಿವೇಕ, ಅನ್ಯಥಾಜ್ಞಾನಗಳೆಂಬಕೋರೆದಾಡೆಗಳಂ, ಶಿವಾಜ್ಞಾಭಂಗವೆಂಬವ್ರತದಿಂ, ಕಲಿಪುರುಷನೆಂಬಮಿತ್ರನಿಂ, ಕೌಟಿಲ್ಯವೆಂಬದೂತನಿಂ, ಮಿತ್ರದ್ರೋಹವೆಂಬಮುದ್ರೆಯಿಂ, ಲೋಕವಿರೋಧವೆಂಬಪತ್ನಿಯಿಂ, ಅಪವಾದವೆಂಬರತಿಯಿಂ, ವರ್ಣಸಾಂಕರ್ಯವೆಂಬ ಪುತ್ರನಿಂ, ದುರ್ವಿಷಯಗಳೆಂಬಪರಿಕರಗಳಿಂದೊಳಪಟ್ಟು ಸಕಲಜೀವಕೋಟಿಗೆಹಿತಶತ್ರುವಾಗಿ ಶರೀರಗಳೆಂಬಪಟ್ಟಣಗಳಂಮುತ್ತಿ । ಸತ್ಯಧರ್ಮಗಳೆಂಬ ಕೋಟೆಗಳಂ ಸದೆಬಡಿ। ಕರಣತ್ರಯವೆಂಬ ಬೊಕ್ಕಸವಂವಶಪಡಿಸಿಕೊಂಡು ವಿವೇಕವೆಂಬಧನವಂಬಚ್ಚಿಟ್ಟು। ಅಸಂಭಾವನೆ । ಸಂಶಯಭಾವನೆ, ವಿಪರೀತಭಾವನೆಗಳೆಂಬ ಸೈನ್ಯಗಳಂಪಸರಿಸಿ, ತತ್ವಗಳೆಂಬಸೈನಿಕರಂಜೊತೆಗೊಳಿಸಿ। ಶಮದಮಾದಿಗಳಂಜಯಿಸಿ। ಪುಣ್ಯವೆಂಬಆಹಾರವಂಮುಗಿಸಿ।ಕಾಲಬಲವೆಂಬಸಿಂಗರಸಾಗಿ, ಕುಲದ್ರೋಹವೆಂಬಯಜ್ಞವಂಮಾಡಿ- ಶಿವಮಾಯೆಯೆಂಬದೇವತೆಯಂತೃಪ್ತಿಪಡಿಸಿ, ಅಮಂಗಳವೆಂಬಬೆಳೆಯಿಟ್ಟು। ಧರ್ಮದ್ವಾರವಂಮುಚ್ಚಿ ನರಕವೆಂಬಸ್ಥಾನದೊಳುಭಯಲೋಕವ್ಯಾಪಾರಯುತವಾಗಿ ಶಿವಜ್ಞಾನವೆಂಬಮಹಾರಾಜನ ಶಿವಧರ್ಮವೆಂಬ ಪ್ರಾಕಾರಕ್ಕೆ ಸಿಕ್ಕದೆತಪ್ಪಿಸಿಕೊಂಡು ಕುರುಬನು ಕುರಿಗಳಂಮೇಯಿಸಿ ಕಟುಕಂಗಿತ್ತು ಕೊಂದಂತೆ ಪ್ರಾಣಿಗಳೆಂಬಪಶುಗಳಂ ಪಾಮರಲೋಕವ್ಯವಹಾರದಿಂದಾಳಿಸ್ವಾತಂತ್ರ್ಯವೆಂಬ ಕಟುಕಂಗಿತ್ತು ಕೊಲ್ಲಿಸುತಿರ್ಪುದೆಂದು ಸರ್ವಭೂತಶತ್ರುವಾದ ಪಾಪಸ್ವರೂಪವಂ ತಿಳಿಯಲ್ವೇಳ್ಕು॥

— ಪಾಪಪುರುಷನ ಆಕಾರ. —

ಮತ್ತಮಾ ಪಾಪಪುರುಷನು ಭಯಂಕರವಾದೇಕವಕ್ತ್ರಭುಜದ್ವಯದಿಂ। ಕಗ್ಗತ್ತಲೆಯಂತೆಭಯಾನಕವಾದಕಾರೊಡಲಿಂ। ಅತಿವಿಸಂಕಟಗಭೀರಕರಾಳವದನದಿಂ। ಅತಿಕ್ರೂರದುರ್ದರ್ಶಪೃಥುವಕ್ಷಃಸ್ಥಲಭೀಷಣವಾದಕೆಂಡದಂತುರಿವಕಂಗಳಿಂ। ಮೋಹಜಾಲವಿಸ್ತೃತಗಹನವಾದಜುಂಜುಮೆತ್ತಮೀಸೆಗಳಿಂ । ಕುಟಿಲತೀಕ್ಷ್ಣಖರಪುರುಷನಖರಗಳಿಂ । ಪಾಪಸಂಬಂಧರೂಪಮಹಾಮಷೀವಿಲೇಪನದಿಂ। ಹಲಿಗೆಕತ್ತಿಗಳನಾಂತಹಸ್ತಯುಗದಿಂ। ಪ್ರಕೃತೋಚಿತವಾದಸೂಕ್ಷ್ಮಾಸೂಕ್ಷ್ಮಸ್ಥೂಲಾತಿಸ್ಥೂಲವಾದಾಯಾಮಯಾಜ್ಞಾನವಿಜೃಂಭಿತ ಭೀಭತ್ಸರಸವಿಸ್ಫುರಿತರೌದ್ರಗಾತ್ರದಿಂ। ಜೀವಶರೀರವಾಮಕುಕ್ಷಿಯಲ್ಲಡಗಿ। ಸ್ವಪ್ನಮೂರ್ಛಾಪಸ್ಮಾರ ಮರಣಾವಸರಗಳಲ್ಲಿ

ನಾನಾಪ್ರಕಾರದಿಂ ಭಯಂಗೊಳಿಸಿ ಪ್ರತ್ಯಕ್ಷವಾಗುತ್ತ। ಕರಣತ್ರಯದಿಂ ದುಷ್ಕೃತ್ಯಂಗಳಂಮಾಡಿಸುತ್ತಿಹುದೇಪಾಪದ ಕೃತ್ಯವಾಗಿರ್ಪುದೆಂತದು ಪರಿಭಾವಿಸಲಕ್ಕುಂ॥

— ದಶವಿಧಪಾಪಗಳು. —

ಮತ್ತಮಾಮನೋವಾಕ್ಕಾಯಮೆಂಬ ತ್ರಿವಿಧಕರಣದಲ್ಲಿಜನಿಸಿ। ಮಹಾಪಾತಕವೆಂದು। ಅತಿಪಾತಕವೆಂದು। ಪ್ರಾಸಂಗಿಕವೆಂದು। ಪಾತಕವೆಂದು। ಉಪಪಾತಕವೆಂದು। ಜಾತಿಭ್ರಂಸಕವೆಂದು। ಸಾಂಕೀರ್ಣಕವೆಂದು। ಅಪಾತ್ರಕರಣವೆಂದು। ಮಲಾವಹವೆಂದು। ಪ್ರಕೀರ್ಣಕವೆಂದು। ಪಾಪರಾಶಿಗಳೊಳು। ದಶವಿಧವಾಗಿ ಮುಖ್ಯಪಾಪಗಣಂಗಳಿರ್ಕುಂ॥

— ಪಂಚಮಹಾಪಾತಕಗಣ. —

ಮತ್ತಮಾ ಪಾತಕಕೂಟಂಗಳೊಳು। ಬ್ರಹ್ಮಹತ್ಯಾದಿವ್ಯೂಹ। ಸುರಾಪಾನಾದಿವ್ಯೂಹ। ಸ್ವರ್ಣಸ್ತೇಯಾದಿವ್ಯೂಹ। ಗುರುತಲ್ಪಗಮನಾದಿವ್ಯೂಹ। ತತ್ಸಂಯೋಗಿವ್ಯೂಹವೆಂಬೈದು ಮಹಾಪಾತಕವ್ಯೂಹಂಗಳಿರ್ಕುಂ॥

— ಅತಿಪಾತಕಂಗಳು. —

ಬಳಿಕ। ಮಾತೃಗಮನ, ಪುತ್ರಿಗಮನ, ಸ್ವಸಾಗಮನ, ಸ್ನುಷಾಗಮನ, ಸಾಪತ್ನೀಮಾತೃಗಮನ, ಧಾತ್ರಿಗಮನ, ಮಿತ್ರಪತ್ನೀಗಮನ, ಆಚಾರ್ಯಮಿತ್ರಪತ್ನೀಗಮನ, ಶ್ರೋತ್ರಿಯಪತ್ನೀಗಮನ, ಉತ್ತಮಸ್ತ್ರೀಗಮನ, ಬ್ರಹ್ಮವಿಷ್ಣುಸರಸ್ವತೀಗಣಪತ್ಯಾದಿಮೂರ್ತಿಪಾತನೋತ್ಪಾಟನ ಬಿಲ್ವಾಶ್ವತ್ಥನಾಶನಾದಿಗಳೇ ಅತಿಪಾತಕಂಗಳೆನಿಸುವವು॥

— ಪ್ರಾಸಂಗಿಕಪಾತಕಂಗಳು. —

ಬಳಿಕ- ಕ್ಷತ್ರಿಯ- ಸೂತಕಿ- ಗರ್ಭಿಣಿ- ಬಂಧುಗಳೆಂಬವರವಧೆ, ದೇವಬ್ರಾಹ್ಮಣತಪಸ್ವಿಭೂಹರಣ। ಶ್ವಶುರಪತ್ನೀರಾಜಸ್ತ್ರೀಯರಗಮನ। ಕೂಟಸಾಕ್ಷಿತ್ವಾದಿಗಳೇ ಪ್ರಾಸಂಗಿಕಪಾತಕಂಗಳೆನಿಸುತಿರ್ಕು॥

— ಸಾಧಾರಣಪ್ರಬಲಪಾತಕಂಗಳು. —

ಬಳಿಕ ತಾಯಿಮವರಸೆಯುಳ್ಳಹೆಂಗಳು। ಮಾತೃಸಖಿ- ಸತಾನಭಿ-ಅತ್ತಿಗೆ ನಾದಿನಿ- ಪ್ರತತುಲ್ಯನಪತ್ನಿಮುಂತಾದವರಗಮನ। ಭಸ್ಮರುದ್ರಾಕ್ಷಧಾರಣತಪ್ತಚಕ್ರಾಂಕನ। ಅಂಕುಶಗದಾಶಂಖಚಕ್ರಗರುಡಹನುಮದಾದಿಮುದ್ರಾಧಾರಣ। ದೇವಬ್ರಾಹ್ಮಣಶಿವಭಕ್ತರುಗಳ ಪಟ್ಟವಾದವಸ್ತುವಂತಾನು ಸ್ವೀಕರಿಸುವದು ಮೊದಲಾಗಿ ಪಾತಕಂಗಳೆನಿಸುತಿರ್ಕುಂ॥

— ಮುಖ್ಯೋಪಪಾತಕಂಗಳು. —

ಬಳಿಕ ಆಚಾರ್ಯರುತ್ವಿಂಗ್ಮಿತ್ರಪ್ರಾಯರಾದ ಪರಸ್ತ್ರೀಯರಂರಮಿಸುವಿಕೆ। ಸ್ವಸ್ತ್ರೀಸಖೀಗಮನ। ಆದಿತ್ಯದುರ್ಗಾದಿದೇವತಾಮೂರ್ತಿಭಂಜನ ಪಾಷಂಡರೊಡನೆಸಂಬಂಧ। ಪಾಷಂಡತ್ವಮುಂತಾದವುಗಳೇ ಮುಖ್ಯೋಪಪಾತಕಂಗಳು॥

— ಗುಣೋಪಪಾತಕಂಗಳು. —

ಬಳಿಕ ಪುಸಿಕೊಂಡೆ ಗುರುನಿರಾಕರಣ ಮಂತ್ರತ್ಯಾಗ ವೇದನಿಂದೆ ವೇದಾಧ್ಯಯನತ್ಯಾಗಯಜ್ಞತ್ಯಾಗ ಪುತ್ರಪತೀತ್ಯಾಗ ಪಿತೃಮಾತೃಸಹೋದರಸ್ವಸ್ತ್ರೀಪರಿತ್ಯಾಗ ಅಭಕ್ಷ್ಯಭಕ್ಷಣ ಪರದ್ರವ್ಯಾಪಹರಣ ಪರದಾರಗಮನ ಗುಲ್ಮಲತಾವನಚ್ಛೇದನ ಅಭಿಚಾರಕ್ರಿಯೆ ಬ್ರಹ್ಮಚರ್ಯವರ್ಜನ ಕುತ್ಸಿತ ಶಾಸ್ತ್ರಾಭ್ಯಾಸ ಕುಶೀಲಕುಮತಾದಿಗ್ರಹಣಗಳೇ ಗುಣೋಪಪಾತಕಂಗಳು॥

— ಜಾತಿಭ್ರಂಶಕಪಾತಕಂಗಳು. —

ಬಳಿಕಸುರಯುವಾಸನೆ ಹೆಣದದುರ್ಗಂಧ ಮಹಿಷೀಪ್ರುರುಷ ಮೈಥುನ ಮೊದಲಾದುದರಿಂ ಜಾತಿಮುಖ್ಯಕೃತ್ಯಸಂಬಂಧಮಾಗಿ ನಿತ್ಯಕರ್ಮಮಂ ಅತ್ಯಂತಿಕಮಾಗಿ ಉಪೇಕ್ಷಿಸುವದೇ ಜಾತಿಭ್ರಂಶಪಾತಕಮಪ್ಪುದು॥

— ಸಂಕೀರ್ಣಪಾತಕಂಗಳು. —

ಬಳಿಕ ಗ್ರಾಮಾರಣ್ಯಗಳಲ್ಲಿರ್ಪ ಪಶುಮೃಗಾದಿಗಳಲ್ಲಿ ವಧ್ಯಾವಧ್ಯವಿಚಾರವಿಲ್ಲದೆ ಪಲಲಾದಿಲುಬ್ಧತೆಯಿಂ ಅಲ್ಲವೇ ಕೃತ್ಯಾದಿರೋಷದಿಂ ಅಥವಾ ರೂಪಾದಿರಾಗದಿಂ ಹಿಂಸೆಗೊಳಿಸುವದಾದಿಯಾದುದೇ ಸಂಕೀರ್ಣಪಾತಕವೆನಿಸುತಿರ್ಕುಂ॥

— ಅಪಾತ್ರಕರಣಪಾತಕಂಗಳು. —

ಬಳಿಕ ನಿಂದಿತರಕಡೆಯಿಂದ್ರವ್ಯಪ್ರತಿಗ್ರಹ। ನಿಂದಿತರಿಗನ್ನನೀಡುವಿಕೆ ಪುಸಿದುಮಾಳ್ಪವ್ಯವಹಾರದೀಕ್ಷಾಹೀನರು ಮತ್ತುಶೂದ್ರರೂಮಾಳ್ಪ ವೇದಾಧ್ಯಯನ ಅನಧಿಕಾರಿಗಳು ಮಾಳ್ಪವೇದೋಕ್ತಕರ್ಮಾನುಷ್ಠಾನ ಮೊದಲಾದುದೇ ಅಪಾತ್ರಕರಣಪಾತಕಂಗಳಕ್ಕುಂ॥

— ಮಲಾವಹಪಾತಕವು. —

ಮತ್ತು ವನತಟಾಕಾದಿ ಸ್ಥಳಗಳಲ್ಲಿರ್ದ ಪಕ್ಷಿಗಳಂಘಾತಿಸುವಿಕೆ। ನಿಷಿದ್ಧಂಸೋಂಕಿದನ್ನ ಭಕ್ಷಣನಿಷಿದ್ಧಂತಂದ ಜಲಪ್ರಾಶನ ಮುಂತಾದವುಗಳೇ ಮಲಾವಹಪಾತಕಂಗಳು॥

### ಸಂಮಿಶ್ರಪಾತಕಂಗಳು.

ಬಳಿಕಿಂತುಪೇಳ್ದಪಾತಕಂಗಳಲ್ಲಿ ಪರಸ್ಪರ ಸಂಮಿಶ್ರವಾಗಿರ್ಪುದರಿಂದಿತ್ತರವಾಗಿ ನಾನಾಬಗೆಪಾತಕಂಗಳಂಮಾಡಿ ಬಹುಪಾಪಿಷ್ಠನಾಗಿರ್ಪುದೇ ಸಂಕೀರ್ಣಪಾತಕವೆಂದು ಪ್ರಕೀರ್ಣಪಾತಕವೆಂತಲುಂನಿರ್ಧರಿಸಿ। ಪೇಳ್ದ ದಶವಿಧತ್ವದೊಳುನಿರುಕ್ತಪಾತಕ ಸಾಂಕರ್ಯಮಾದೊಡಂ ತತ್ತದ್ವಿಶೇಷಲಕ್ಷ್ಯದಿಂಪೇಳ್ದುದಾ ವಿಭಾಗಾನುಪಪತ್ತಿಯಿಲ್ಲದಿರ್ಕುಂ ॥

### ತ್ರಿವಿಧಪಾತಕಂಗಳು.

ಮತ್ತಮಾಪಾತಕಮೆನೆ। ಶಿವಜ್ಞಾನರೂಪವಾದ ನಿಗಮಾಗಮಸ್ಮೃತಿ ಪುರಾಣಪುರಾತನವೃತ್ತಿಗಳಿಗೆಸಂಮತವಾಗಿಯೂ ವಿರುದ್ಧವಾಗಿಯೂ ಇರುವ ನಡತೆ, ಕೆಲಸ, ಮಾತು, ನೆನಹುಗಳಿಂದುದಿಸಿದ ತಪ್ಪೆಂದು ತಿಳಿಯಲದು ಮೂರುಬಗೆಯಾಗಿರ್ಕುಮಾಗಿ। ಪಂಚಕರ್ಮೇಂದ್ರಿಯಂಗಳಲ್ಲಿ। ವಾಕ್ಕುವಿನಾ। ಪಂಚಜ್ಞಾನೇಂದ್ರಿಯಂಗಳಿಂಮಾಳ್ಪ ನಿಷಿದ್ಧಕರ್ಮವು ಕಾಯಿಕಪಾಪಜನಕ। ವಾಕ್ಕೆಂಬಕರ್ಮೇಂದ್ರಿಯ ಮೊಂದದರಿಂದಮಾಡಿದುದೇವಾಚಕಪಾತಕ। ಅಂತಃಕರಣವೆಂಬ ಹೃದಯದಿಂಮಾಡಿದುದೇ ಮಾನಸಿಕಪಾತಕ। ಮಿಂತೀ ಮೂರುಂಕೂಡಿ ತ್ರಿಕರಣಪಾತಕವೆಂದು ನಿರ್ಧರಿಸಲಕ್ಕುಂ ॥

### ಸರ್ವಪಾಪಾನುಗಮನಿರ್ಧಾರಣ.

ಮತ್ತಮಾ ಪಾತಕಂಗಳೆಲ್ಲಕ್ಕೂ ಅಜ್ಞಾನವೇಮೂಲಮಪ್ಪುದರಿಂ। ಸರ್ವವಿಷಯಂಗಳಲ್ಲಿಯುಂ । ಯಾವಅಂಶವನಾದರುಂತಿಳಿಯದಿರುವದೊಂದು ದೊಡ್ಡಪಾತಕವಾಗಿಯುಂ। ಮತ್ಸ್ಯಭಕ್ಷಣತದ್ದೇಶೀಯಂಗೆ ಸಲ್ಲುವದು। ಮಾತುಳಕನ್ಯಾಪರಿಗ್ರಹದ್ರಾವಿಡರಿಗೆಸಲ್ಲದು। ಪರ್ಯುಷಿತವಾದನ್ನಭಕ್ಷಣದಾಕ್ಷಿಣ್ಯಾತರಿಗುಂ ಪ್ರಾಚ್ಯರಿಗುಂ ಅವಿರುದ್ಧಮಿತ್ತೆರದಿಂ ಛೇದವನಾಗಿಯೂ। ಗಂಗೋದಕವುಶೂದ್ರಾನೀತವಾದರುಂಶುಚಿ। ತೈಲಪಕ್ವವುಶೂಪ್ರಸ್ಪೃಷ್ಟವಾದರುಂನಿಂದ್ಯವಲ್ಲ। ಬ್ರಹ್ಮಚಾರಿ ಯತಿ ದೀಕ್ಷಿತರಿಗೆಸೂತಕಾದಿಹೊಲೆಗಳಿಲ್ಲವೆಂಬುದು ಮೊದಲಾದಾಚಾರಭೇದವಿರ್ಪುದರಿಂ। ದೇಶಾಚಾರ ಜಾತ್ಯಾಚಾರ ಮತಾಚಾರ ಕುಲಾಚಾರ ಕೂಟಾಚಾರ ಶಿಷ್ಟಾಚಾರ ವೃದ್ಧಾಚಾರ ಗುಣಾಚಾರ, ಸಂಪ್ರದಾಯ ವೆಂಬುದು ಮೊದಲಾದವುಗಳಂತಿಳಿದು ತತ್ಕಾಲ ತದ್ದೇಶ ತಚ್ಛಾಸ್ತ್ರಗಳಿಗವಿರುದ್ಧವಾಗಿಯುಂ। ನಿಯತಗಳಾದ ಸರ್ವಶರೀರಾಭಿಮಾನಪ್ರಯುಕ್ತಮಪ್ಪಜಾತಿವರ್ಣಾಚಾರಕ್ರಮಂಗಳಂಬಿಡದೆಯುಂ। ಉತ್ತಮನಾದಶಿವಧರ್ಮಸಿದ್ಧಿಸುವಲ್ಲಿಯುಂ ಕೆಡುವಲ್ಲಿಯುಂ ಸತ್ಯ

ಧರ್ಮರಕ್ಷಣಾರ್ಥವಾಗಿ ಇತರರಗಳಂಬಿಟ್ಟಾದರು। ವಿವೇಕಗಳಗಭಿಮತವಾಗಿಯೂ। ಪರಮೇಶ್ವರಮುಖೋಲ್ಲಾಸವಾಗಿಯೂ ತಿಳಿದುವರ್ತಿಸಬೇಕಾಗಿ। ಅಂತು ಆಚರಿಸದೆಯುಂ। ನುಡಿಯದೆಯುಂ। ಸ್ಮರಿಸದೆಯುಂ। ಇರುವದೇ ಪಾತಕವೆಂದು ನಿಷ್ಕೃಷ್ಟವಾಗಿನಿರ್ಧರಿಸಿ ॥

ಪಾಪದಿಂಕಷ್ಟ.

ಬಳಿಕಿಂತುಪಾಪವೆಂಬುದರಿಂ। ಪ್ರಮಾದಕ್ಕೊಳಗಾಗಿಬಿಚ್ಚರಗೊಳ್ಳದೆಪ್ರಾಯಶ್ಚಿತ್ತಶಿವಧ್ಯಾನಾದಿವಿಮುಖನಾದವನಿಗುಂ। ಪ್ರಾರಬ್ಧವನುತಕ್ಕವರಿಗುಂ। ಮೃತ್ಯುಗಳುಂ। ಕಷ್ಟಗಳು ಕೇಡುಗಳು। ಭಯಗಳು ಭಾರಿಭಾರಿಗುಂತಲೋದ್ಭವವಲ್ಲವೆ। ಪಾಪೋತ್ಕರ್ಷ ಪರಿಪಾಲಕಕಾಲವೊದಗಲು। ಕಾಲಮೃತ್ಯುವಿನಿಂದೇಹವಳಿದು। ಯಮದೂತರಕೈಸಿಕ್ಕಿ। ಯಾತನಾದೇಹದಿಂಪೂರ್ವೋಕ್ತನರಕಗಳೊಳು। ಬಹುಕಾಲ ಸಂಕಟದಿಂ ಬಳಲುವನಾಗಿ। ಪ್ರಾಣೋತ್ಕ್ರಮಣವೆಂಬ ಮರಣಕಾಲದೊಳಗಾದರುಂ। ತಿಳಿದುಸತ್ಕರ್ಮಪರನಾಗಿರಲು। ಮುನ್ನಿಳ್ಳಮಹಾಪಾಪಂಗಳನೆಲ್ಲವಂದಹಿಸಿ ಸುಖವಂಪಡೆವನಾಗಿ ಪ್ರಾಣಿಯು। ಮುಖ್ಯವಾಗಿ ಮರಣಕಾಲವಂ ವಿಚಾರಿಸಿಕೊಂಡು ತತ್ಕಾಲಕ್ಕೆ ಮನವೇಜಾಗರೂಕನಾಗಿ ಸಮಯಕೊಳ್ಳದಗುವಂತೆ ಸಾಧನೆಯೊಳಗಿರಬೇಕಾಗಿ ಮರಣಸೂಚನೆಯು। ಯೋಗ ವೈದ್ಯ ಸ್ವಪ್ನಶಕುನ ಜ್ಯೋತಿಷಗಳಂತಿಳಿವುದಾಗಿ ತತ್ಸರ್ವ ಸಂಗ್ರಹವಾಗಿರುವದೆಂತೆನೆ॥

ಸರ್ವದಿಂದಾಯುಷ್ಯ ಪರಿಜ್ಞಾನ.

ಬಳಿಕ ಸ್ವರಭೇದದಿಂದ ಆಯುಃಪರಿಮಯಣವನರಿವಕ್ರಮವೆಂತೆಂದೊಡೆ। ನಾಸಿಕಾರಂಧ್ರದಿಂ। ಇಡೆ, ಪಿಂಗಳೆಂಬೆರಡು ನಾಡಿಗಳಂದೊಡಗೂಡಿ ಬರಡುನಾಳಗಳಹವು। ಅವುಗಳೊಳಗೊಂದೊಂದುನಾಳದಲ್ಲಿ। ಪೃಥ್ವೀಸ್ವರ ಅಪ್ಪುಸ್ವರ। ತೇಜಸ್ಸಿನಸ್ವರ ವಾಯುವಿನಸ್ವರ ಆಕಾಶಸ್ವರ ಇಂತೀಪಂಚಸ್ವರಸಂಭೇದ್ಯಯಂತಾಳಿ ಕಾಲಕ್ಲ್ಲಪ್ತಿಯಿಂ। ಉಛ್ವಾಸನಿಶ್ವಾಸವಾಯುವೇಸಂಚರಿಸುತ್ತಿಹುದು। ಇದುವೊಂದೊಂದುನಾಳದೊಳೈದೈದುಘಳಿಗೆಗಳು। ಹಗಲಿರುಳುಗಳಂ ಹನ್ನೆರಡು ಸ್ವರದಪೋರಿರಾತ್ರಕ್ರಮದಿಂಮೂನ್ನೂರರವತ್ತುದಿನಗಳಂದಾದವರುಷನೂರೆಂದುಶತವಾನಂಭವತಿಯೆಂಬಶೃತಿಸಾರುತ್ತಿಹುದು। ಅವುಗಳೊಳು। ಆಯುಷ್ಯದ। ಪೂರ್ವಭಾಗಚಂದ್ರಸ್ವರಪ್ರಧಾನ ವೆಂತಲೂ। ಆಯುಷ್ಯದ ಉತ್ತರಭಾಗ ಸೂರ್ಯಸ್ವರಪ್ರಧಾನವೆಂತಲೂ। ಪೇಳ್ದಿದುಸ್ವರಗಳಲ್ಲಿಪ್ರವೃತ್ತಿಪ್ರವೃತ್ತಿಕ್ಕೊಂದೊಂದದರಮೇಲೆ ನೂರುವರುಷ

ಗಳಹವೆಂತೆಲೂ। ಸ್ವರಗತಿವೈಪರೀತ್ಯದಿಂದಾಯುಷ್ಯದಿನಸಂಖ್ಯಾವೈಪರೀತ್ಯವಪ್ಪುದೆಂತಲೂಸಾಮಾನ್ಯತಃವಿವೇಕಿಸಿ। ಸರ್ವ್ವುಯಾವದೊಂದು ನಾಳದೊಳಗಾದರುಂ ಅಱದು ಘಳಿಗೆಗೆ ೩೬೦೦ ಪರಿವೃತ್ತಿಗಳಿಂದೊಂದುತತ್ವದಕಾಲವುಸಮವಾಗಿನಡೆಯುದೆ।ಅಧಿಕಸಂಖ್ಯೆಯಾಗಿಯಾದರುಂಅಥವಾಸ್ವರವುಶೀಘ್ರಗತಿಯಿಂ ೫ ಘಳಿಗೆಗಗಳಿಂ। ಕಡಮೆಯಾದ ಕಾಲಕ್ಕೇನೇ ೩೨೦೦ ಗಳಿಗಳುಚರಿಸಿಸಿದರುಂ ಆಯುಷ್ಯವು ಕ್ಷಯವಾಗಿರ್ಪುದು।ಇಂತೀಗತಿನ್ಯೂನಾಧಿಕ್ಯದಿಂ। ಮಧ್ಯಪರಿಮಾಣವಾದಮಾನವಾಯುಷ್ಯದ ೧೨೦ ವರುಷಗಳೂ ೫ ದಿನಂಗಳಲ್ಲಿ ನೂನಾಧಿಕ್ಯವಾಗಿರ್ಕ್ಕುಂ। ಇಂತುಸಿದ್ಧದೇಹಗಳಲ್ಲಿಕ್ರಮಪರಿತವರುಮಧ್ಯಾಯುಃ ಪೂರ್ಣ್ಣಪರಿವೃತ್ತಿಪರಿಸಮಾಪ್ತಿಕಾಲದೊಳು ಶರೀರನಾಶಕವಾದ ಮೃತ್ಯುವಿಗೆಸಿಕ್ಕದೆ ಕುಂಭಕಬಲದಿಂ ತತ್ಕಾಲವಂ ಕಳೆಯುಲು ಮೃತ್ಯುತಪ್ಪಿಹೋಗಿ।ಬಳಿಕ ಮತ್ತಾಷ್ಟಾಯುಷ್ಯದಗೂಸ್ಥಿತಿಗತಿಗಳಿಗೆಪಗವಕಾಶಮಿರ್ಪ್ಪುದೀ ಲೋಕವ್ಯವಹಾರದೊಳು ಸಿಲುಕುವರಿಗಾದೊಡೆ। ಒಂದು ತತ್ವರಸ್ಸ್ವರವು ಆರುಘಳಿಗೆನಡದರೆ ನೂರುವರುಷದಾಯುಷ್ಯ। ಯೇಳುಘಳಿಗೆನಡದರೆ ಅರುವತ್ತುವರುಷದಾಯುಷ್ಯ। ಹತ್ತುಘಳಿಗೆನಡದರೆ ಐವತ್ತುವರುಷದಾಯುಷ್ಯ! ಹದಿನೈದುಘಳಿಗೆನಡದರೆನಾಲ್ವತ್ತುವರುಷದಾಯುಷ್ಯ।ಇಪ್ಪತ್ತುಘಳಿಗೆನಡದರೆ ಮೂವತ್ತುವರುಷದಾಯುಷ್ಯ। ಮೂವತ್ತುಘಳಿಗೆ ನಡದರೆ ಹದಿನೈದು ವರುಷದಾಯುಷ್ಯ। ನಾಲ್ವತ್ತುಘಳಿಗೆನಡದರೆ ಹತ್ತುವರುಷದಾಯುಷ್ಯ।ಐವತ್ತುಘಳಿಗೆನಡದರೆ ಐದುವರುಷದಾಯುಷ್ಯ। ಅಹೋರಾತ್ರವೆಲ್ಲವುಂ ಒಂದೇನಾಳದಲ್ಲೇ ನಡದರೆ ಆರುತಿಂಗಳಾಯುಷ್ಯ। ಈ ಮೇರೆನಡೆತೆಯಿಂದಾಯುಷ್ಯಕ್ಷಯಮಪ್ಪ ಕ್ರಮವಂ ಲೆಕ್ಕವಿಟ್ಟು ಸರಿನೋಡಲು। ಸ್ವರದಿಂದಲೇಮಾರಣಸೂಚಕಗಳಾದ ವ್ಯಾಧಿಗಳ ಕಾಲವರಿಯಲ್ತಕ್ಕುದೆಂತೆನೆ.

## ಸೂರ್ಯನಾಡಿ.

ಮತ್ತಮಾ ಮೂಗಿನಬಲಭಾಗದೊಳು ಸಂಚರಿಪಸ್ವರವು ಸೂರ್ಯನಾಡಿಯುಪ್ಪುದಾಗಿ।ಐದುದಿನಗಳಹೋರಾತ್ರದಲ್ಲಿಎಡಬಿಡದದುನಡೆಯಲುಮೂರುತಿಂಗಳಿಗೆರೋಗದಿಂಮರಣವಹುದು। ಹತ್ತುದಿನಗಳಂತಡಸಿನಡೆಯಲು ತಿಂಗಳೊಂದಕ್ಕೆರೋಗದಿಂಮರಣ। ಹದಿನಾಲ್ಕುದಿನಗಳ್ಳಂತುನಡದರೆ ಹದಿನೈದುದಿನಗಳಿಗೆ ರೋಗದಿಂಹಾನಿಯೆಂದಿಂತು ಸೂರ್ಯನಾಡಿಯು ದೀರ್ಘವಾಗಿ। ಐದುಘಳಿಗೆಗಿಂತಲೂ ಹೆಚ್ಚಿಗಷ್ಟುಸನಿಾಪದಲ್ಲಿ ಮರಣ

ಪ್ಪುದೆಂದಾಗಾಗ್ಯೆ ತನ್ನ ನಾಡೀಗತಿಯಂ ನೋಡಿಕೊಳ್ಳುತಿರ್ಕುಂ ॥

ಚಂದ್ರಸ್ವರಸಂಚಾರ.

ಮತ್ತಮಾನಾಸಾಪಾನುಭಾಗ ಸಂಚಾರಿಯಾದವನಂಗೆ ಚಂದ್ರಸ್ವರಸಂಜ್ಞೆಯಿಪ್ಪುದಾಗಿ।ಪಿತೃಯಾನವೆನಿಪಚಂದ್ರಸ್ವರವು ಐದುದಿನಬಿಡದೆ ನಡದರೆ ವರುಷವೊಂದಕ್ಕೆ ಹಾದಿಬಹುದು।ಅಷ್ಟರೊಳಸರಿಗೊಳ್ಳಲು ರೋಗವಾದರೂಪುಟ್ಟಿತೊಂದರೆಗೊಳಿಸದೇಬಿಡವು।ಹದಿನೈದುದಿನನಡದರೆ ಆರು ತಿಂಗಳಿಗೆ ಭಂಗಬಂದೀತು ಇಪ್ಪತ್ತುದಿನವೇಕರೀತಿಯಿಂಬಿಡದೆನಡದರೆ ತಿಂಗಳುಮೂರಕ್ಕೆ ಪ್ರಾಣಗತಿಗೆವಿಘ್ನಬರುವದು। ಒಂದುತಿಂಗಳಡಸಿನಡದರೆ ಆಯುಷ್ಯದಕಡೆಯದಿನವೇ ಪ್ರಾಪ್ತವಾಯಿತೆಂದರಿವುದೆಂದು ಸೂರ್ಯಚಂದ್ರಸ್ವರಗತಿಗಳಂ। ತತ್ಸಾಂಕರ್ಯಲಕ್ಷಣಂಗಳಂ।ದಕ್ಷಿಣೋತ್ತರಾಯಣದಿವಾರಾತ್ರಿಶುಕ್ಲಕೃಷ್ಣಚಾರಗಳಂ ಸ್ವರಶಾಸ್ತ್ರದಿಂತಿಳಿಯಲಪ್ಪುದೆ-ದಿಲ್ಲವಿವೇಕಿಸದೇ। ಮುಖ್ಯವಾಗಿ ಸ್ವರವೊಂದು ೫ ಘಳಿಗೆನಡದರೆ ೧೦೦ ವರುಷಗಳಾಯುಷ್ಯವೆಂತಲುಂ। ಅದುದೀರ್ಘವಾಗಿ ಕಾಲವಿಳಂಬವಾದಷ್ಟೂಮರಣ್ಯಸಮೀಪಿಸಿತೆಂತಲುಂ ಸಾಮಾನ್ಯವಾಗಿತಿಳಿಯಲ್ಪೇಳ್ಕುಂ.

ಧನಂಜಯ ವಾಯುಗತಿ ಸೂಚನೆ.

ಬಳಿಕ ಶರೀರದೊಳು ದಹರಾಕಾಶದಲ್ಲ ವ್ಯಾಪಿಸಿ ಸರ್ವಸಂಧಿಬಂಧಗಳಲ್ಲಿ ಯೂಹೊಕ್ಕು ತನ್ನವೇಗದದೆಸೆಯಿಂದೊಳಕೆ ಕಿವಿಮುಚ್ಚಿದಲ್ಲಿ ವ್ಯಕ್ತವಾಗಿ ಪ್ರಣವಧ್ವನಿಯಂ ಸಾಂದ್ರಗೊಳಿಸುತ್ತಿಹುದೇ ಧನಂಜಯವಾಯುವದು। ಬ್ರಂಹರಂಧ್ರದಲ್ಲಿ ಮರ್ಕಕರ್ಣರಂಧ್ರದಲ್ಲಿ ಸಮುದ್ರಘೋಷಿಸಿ ಮರಣಕಾಲಕ್ಕೀಂತಲೂ ಮುಂಚೆ ಮೂರುದಿವಸಗಳಲ್ಲಿ ಕಿವಿಮುಚ್ಚಿದರೂ ಘೋಷಿಸದಿಹುದೆಂದದರಕುರುಹಿಡಲಕ್ಕುಂ.

ಸ್ವರಕಾರಣಗಳು.

ಬಳಿಕ ಶರೀರದೊಳು ಹೃದಯಕಮಲಕೋಶದೊಳಗಿಪ್ಪ ಪಿತ್ತತೇಜದ ಆಕರ್ಷಣಶಕ್ತಿಯದೆಸೆಯಿಂದೆ। ಆಧ್ಯಾತ್ಮಿಕವಾಯುವೆಂಬ ಪ್ರಾಣವುಬಿಡದೆ ಸೆಳದಿಡಲ್ಪಡುವದಕ್ಕೆ ಉತ್ತೇಜಕವದಗಿ। ಹೃದಯದಪಿತ್ತಮಂಪ್ರೇಷಿಸದೆ ಸೆಳದಿಡಲ್ಪಡುವದಕ್ಕೆ। ರಕ್ತಚಲನಗೆಸಹಾಯವಾದವ್ಯವಹಾರದ। ಅಪಾನಗತಿಲುಳ್ಳಆಹಾರದ। ರಕ್ತಚಲನಗೆಸಹಾಯವಾದವ್ಯವಹಾರದ। ಧಾತುತಾರಯಂ ಸರಿಗೊಳಿಸಲುಳ್ಳವ್ಯಾಯಾಮದ ಕುಂದುಹೆಚ್ಚುಗಳಿಂದ ಧಾತುತಾರತವ್ಯಸಹ-ದೆಂತಲುಂ। ಧಾತುಗಳ ನ್ಯೂನಾಧಿಕ್ಯಗಳಿಂದ ಸ್ವರಗಳಕುಂದುಹೆಚ್ಚುಗಳಹವೆಂತಲುಂ। ತಿಳಿಯಲ್ಪೇಳ್ಕುಂ.

## ಮರಣಕ್ಕೆಸಾಧಾರಣನಿಮಿತ್ತಗಳು.

ಬಳಿಕ ಪ್ರಾಣಿಗೆ ಪ್ರಬಲವಾದರೋಗವುಸಂಭವಿಸಿದೊಡೆಕತ್ತುನಿಲ್ಲದಿರೆದೃಷ್ಟಿಸ್ಥೈರ್ಯೋಪ್ಪವಂಪಡೆಯೆ। ಮೂಗುದ್ದವಾಗೆ । ದೇಹದೊಳು ದುರ್ಗಂಧಸ್ಥೈಲಕ್ಷಣ್ಯವಾಗೆ। ಹೃದಯದೊಳುವಿಶೇಷವಾಗಿ । ಅಧೈರ್ಯತೋರೆ। ಸ್ವಾಂತಂತ್ರ್ಯನಾದರಸಂಕೋಪಂಗೈಯ್ಯೆ। ಪಾಳ್ಪವ್ಯವಹಾರಗಳೆಲ್ಲನಷ್ಟಗಳಾಗೆ।ಬಿತ್ತಿದಬೀಜಗಳುಸೀತುಹೋಗೆ। ತನ್ನೊಳಗಭಿಮಾನಿಗಳುಕಲಹಿಸಿಶವಿಸೆ।ಸಜ್ಜನರಸಂತಾಪಕ್ಕೆಗುರಿಯಾಗೆ। ವ್ರತಭಂಗವಾದೊಡೆ। ಸತಿಗೆ ವೈಧವ್ಯಲಕ್ಷಣಂತೋರೆ। ಶಿವದ್ರೋಹವುಂಟಾಗೆ। ಅತ್ಯುತ್ಕಟಪಾತಕಂಗಳು ಸಂಭವಿಸೆ। ದುಸ್ವಪ್ನಬಹುಳವಾಗೆ। ಲೋಕಕಂಟಕತ್ವದಿಂದತ್ಯುಭ್ರಯುವಾಗೆ।ಮನೋರೋಗವುದ್ಭವಿಸೆ। ಕಾಮಕ್ರೋಧಾದಿಗಳುನ್ಮಸ್ತಕವಾಗೆ। ಪ್ರಬಲಗ್ರಹವಾವೇಶಿಸೆ। ಆಭಿಚಾರಿಕವುದಿಸೆ। ಘಾತವಾತಗಳಾಗೆ।ಯುಮದೂತರಂನೋಡೆಬ್ರಹ್ಮಸ್ವವುಮನೆಸೇರೆ। ಮರಣಸನ್ನಿಹಿಪಿಸುವದೆಂದು ನಿಶ್ಚಯಿಸಲಕ್ಕುಂ,

## ದುಷ್ಫಲಹೇತುಗಳು.

ಮತ್ತಮಾಶರೀರಿಗೆ। ತಾನುಮಹಾಪಾತಕಂಗಳಂಮಾಡಿದೆನಿದಕ್ಕೆನಿಷ್ಕೃತಿಯಿಲ್ಲವೆಂದುತೋರಿದರುಂ।ಮಹಾಪಾಪಾತಿರೇಕವಾದರುಂ। ಮೂರುವರುಷ।ಮೂರುತಿಂಗಳು। ಮೂರುದಿನ। ಮೂರುಘಳಿಗೆಗಳೊಳಗಾಗಿ ಅತ್ರಿಬಿಡದು ಮಹಾದುಃಖಂಗಳನೀವುದು। ಅಲ್ಲದೆಅಂತದೊಳಿದಕಡ್ಡಿಯುಂಮಾಡೆ ಮರಣಾನಂತರದೊಳು ನರಕಯಾತನೆಯುಂ ವಳ್ಳುದಾಗಿ। ಸರ್ವಕಾಲಗಳಲ್ಲಿಯೂ। ಸರ್ವದೇಶಗಳಲ್ಲಿಯೂ। ಸ್ವರವಿಷಯುಗಳಲ್ಲಿಯೂ।ಸರ್ವಾಂಶಗಳಿಂದಲೂ। ಪ್ರಾಣಿಗೆ। ಪಾಪವಂಬುದೇ ಅನಿಷ್ಟಾನರ್ಥದುಃ ಸಾಧಕವಪ್ಪುದರಿಂದೆಲ್ಲರೂಪಾಪಕ್ಕಂಜಿ ವರ್ತಿಸಬೇಕೆಂತಲುಂ। ಪಾಪವಂಕಳಕೊಳ್ಳುತ್ತಿರೆ ಭಯುಪಿಲ್ಲವೆಂತಲುಂ।ಪಾಪಲೇಶವಿಲ್ಲದವಂಗೆ ಮರಣಭಯು ವಿಲ್ಲವೆಂತಲುಂ।ತಿಳಿಯಲ್ಪೇಳ್ಕುಂ..

## ಧ್ರುವಾದಿದರ್ಶನ.

ಬಳಿಕ ಮನುಷ್ಯಜನ್ಮಿಯು । ತಾನುಜಾತನಪ್ಪುದರಿಂದೆಂದಿಗಾದರೂ ಸಾವುದೇದಿಟವೆಂದಣಿಸಿ। ತತ್ಕಾಲವಂತಿಳಿದುಕೊಂಡು. ಶಿವಧ್ಯಾನಪರನಾಗಲ್ಕೆ।ಯಥಾಲಾಭವಾಗಿ। ಉತ್ತರದಕ್ಷಿಣ ಸಮಸೂತ್ರದೊಳು ಸಪ್ತರುಷಿಮಂಡಲಕ್ಕೆ ಕೆಳಗದೆ । ಸ್ಥಿರವಾಗಿರ್ಪ್ಪಧ್ರುವನಕ್ಷತ್ರವಂ ವಸಿಷ್ಟನಕ್ಷತ್ರಬಳಿ

ಸೂಕ್ಷ್ಮವಾಗಿರ್ಪರುಂಧತಿಯುಂ। ಬೆಳದಿಂಗಳೊಳು ನಿಜಛಾಯೆಯುಂ।ಹಗ
ಲಿರುಳುಗಳೊಪಸಾದಳಬಲದಿಂ । ಛಾಯಾಪುರುಷಾದಿಗಳಂ। ಸಮಲಕ್ಷ್ಯನಿ
ರ್ದಿಷ್ಟಹಸ್ತಮೂಲಾದಿಗಳಂ । ಮಹಾಪಥಪಂಕಾಣಾತ್ತಿರಬೇಕಪ್ಪುಗಳೊ
ಳು।ಧೃವಾರುಂಧತೀಚಂದ್ರಛಾಯಾಮಹಾಪಥಗಳಂ ಕಾಣದಿರ್ದೊಡೆ।ಒಂ
ದು ವರುಷಕ್ಕೆ ಮೃತಿಯುಪ್ಪುದೆಂತಲುಂ। ರಶ್ಮಿರಹಿತನಾದ ಸೂರ್ಯನಂ।ರ
ಶ್ಮಿಸಹಿತವಾದವಹ್ನಿಯುಂಕಂಡೊಡೆ। ಹನ್ನೊಂದುತಿಂಗಳಗೆ ಮೃತ್ಯುವಪ್ಪು
ದೆಂತಲುಂ। ಜಾಗ್ರತ್ಸ್ವಪ್ನಂಗಳಲ್ಲಿಯುಂ। ಸುವರ್ಣರಜತಾದಿಗಳವಮನ
ವಾಗೆ ಹತ್ತುತಿಂಗಳುಬಾಳುವನೆಂತಲುಂ। ಭೂತ, ಪ್ರೇತ, ಪಿಶಾಚ, ಗಂ
ಧರ್ವನಗರ ರುಕ್ಮವರ್ಣದೃಮಾದಿಗಳಂ ಕಂಡರೆಒಂಭತ್ತುತಿಂಗಳು ಬದುಕು
ತನೆಂತಲುಂ। ಆಕಸ್ಮಿಕವಾಗಿ ತನ್ನನತಿಸ್ಥೂಲವಲ್ಲದೆ ಅತಿಕೃಶ ವಾಗಾದು
ರೆ॥ ಅತಿಕೃಷ್ಣರೂಪದಿಂ ಕಂಡೊಡೆಂಟುತಿಂಗಳ ಸ್ಥಿತಿಯುಪ್ಪುದೆಂತಲಲುಂ
ಮರಳು ಕೆಸರುಗಳಲ್ಲಿ। ತನ್ನಹೆಜ್ಜೆಯುಂಪತ್ತಿದರೆ। ಹಿಂದಾಗಲಿ। ಮುಂದಾ
ಗಲಿ. ಅರ್ಧಭಾಗ ತೋರದಿರಲು। ಯೇಳುತಿಂಗಳೇಬದುಕುವನೆಂತಲು।ಕಾಗೆ
ಗೂಗೆ, ಕಪೋತಾದಿಪಕ್ಷಿಗಳು।ಮಸ್ತಕದಲ್ಲಿಕುಳತರೆ। ತಿಂಗಳಾರಕ್ಕೆ ಪಂಚ
ತ್ವಪಹುದೆಂತಲುಂ। ಮಳಲಮಳೆರಕುತದಮಳೆ ತನ್ನಮೇಲೆಸುರಿದರೆ ಐದು
ತಿಂಗಳಗೆನಿಧನವಹುದು । ನೆರಳಲ್ಲಿತಂನಅಂಗದವಿಕೃತಿಯುಂಕಂಡರೆ ನಾಲ್ಕು
ತಿಂಗಳಗೆ ಸಾವುಬಪ್ಪುದು। ದಕ್ಷಿಣದಿಕ್ಕಿನಲ್ಲಿಮುಗಿಲಿಲ್ಲದಮಿಂಚನುಂ।ಉದಕ
ದೊಳಂದ್ರಚಾಪವನು ಆಕಸ್ಮಿಕವಾಗಿಕಂಡೊಡೆ । ಮೂರು। ಅಥವಾ।ನಾ
ಲ್ಕುತಿಂಗಳೊಳಗೆ ನಾಶವಹುದು । ನಿರ್ಮಲದರ್ಪಣದಲ್ಲಿ ಸಿರಸ್ಸಿಲ್ಲದ ತನ್ನ
ಮೊಂಡೆವಂತಾನೆಯಾದೊಡಂ। ತನ್ನವಾದೊಡಂ । ಕಂಡರೊಂದುತಿಂಗಳ
ಗೆ ಕಾಲಭೀತಿಯುಪ್ಪುದು । ತನ್ನಶರೀರವುರಸಾಗಂಧವಾಗಿಯುಂ ಶವಗಂ
ಧವಾಗಿಯುಂ। ತೋರುವವ್ಯೆಲಕ್ಷಣ್ಯ ನಿರಲ್ಕೆ।ಮಾಸಾರ್ಧದೊಳುಪ್ರಾ
ಣತ್ಯಾಗ ವಹುದೆಂತಲುಂ ಯುಪಯೋಣಗಿ। ಬಲಕುಂಗಿ। ಧೈರ್ಯತಪ್ಪಿ'ದೃಷ್ಟಿ
ವಿಪರೀತವಾಗಿ ಕಂಪಪುಟ್ಟಿದೊಡೆ ಹತ್ತುದಿನಕ್ಕೆ ಶರೀರವನಾಪಯೋಗ
ವಹುದೆಂತಲುಂ। ಮುಖ್ಯವಾಗಿಭಯೋತ್ಕಟವಾಗೆ । ತತ್ಕ್ಷಣದಲ್ಲಿಯೆಸಾ
ವುಬಪ್ಪುದೆಂತಲುಂ। ಸರ್ವಾಂಶಗಳಂದಲೂ। ಆಶೆಅಭಯು । ಆನಂದಗಳೇಶ
ರೀರಪೋಷಕಗಳಾಗಿ। ಅವುಗಳನಾಶವೇಮರಣಸಾಧಕವೆಂತಲುಂನಿರ್ಧರಿಸಿ

## ದುಸ್ವಪ್ನದಿಂಮರಣ ಸೂಚನೆ.

ಮತ್ತಮಾಶರೀರಿಯು। ಸಪ್ನದಲ್ಲಿ ಕಪಿಕರಡಿಗಳೊಡಗೂಡಿ । ಪಥದಲ್ಲಿ

ತಾನುದಕ್ಷಿಣಮುಖನಾಗಿ ಪೋಪುದಂಕಂಡೊಡೆ ಮರಣ ಸಮೀಪವಹುದು ಕೃಷ್ಣವಸ್ತ್ರಧರರಾದ ಸ್ತ್ರೀಪುರುಷರೊಡಗೂಡಿ ತಾನುದಕ್ಷಿಣದೆಶೆಗಾಗಿಸ್ವಪ್ನದಲ್ಲಿಗಮಿಸಿರಮಿಸುತ್ತಿರೆ। ಶೀಘ್ರದಲ್ಲಿಮೃತ್ಯುವಹುದು। ಪಗಲಲ್ಲಿಬಹುನಕ್ಷತ್ರಂಗಳಂರಾತ್ರಿಯೊಳುಸೂರ್ಯಪರಿವೇಷಮಂಪಗಲು ವರ್ಣವಾಗಿಚಂದ್ರನಂಕಂಡಂತಾದರೂ ಕನಸಾದರೂಗ್ರಹಣಾದಿಗಳಿಲ್ಲದೆ ಸೂರ್ಯನುಕೃಷ್ಣವರ್ಣವಾದರೂ ಪ್ರಾಣವಿಯೋಗವಪ್ಪಿಶೀಘ್ರ ಜಾಗ್ರತ್ಸ್ವಪ್ನಂಗಳಲ್ಲಿ ಸೂರ್ಯಮಂಡಲವಂ ಮುರುಕಾಗಿಯುಂ ಚಂದ್ರಸೂರ್ಯರಂ ಛಿದ್ರಯುತವಾಗಾದರುಂ ನೋಡಿದೊಡೆ ಅಂತ್ಯಸಮೀಪಿಸುವದು। ಕನಸಿನೊಳು ತಾನುರಕ್ತಮಾಲ್ಯರಕ್ತಪುಷ್ಪಗಳಂಧರಿಸಿದರೂ।ಅಮೇಧ್ಯಗೋಮಯಾದಿಕೂಪಗಳಲ್ಲಿ ಬಿದ್ದರೂ ತೈಲಮಜ್ಜನಮಾಡಿಕೊಂಡರೂ।ತಲೆಕೆಡದಿಗಾರ್ಧಭಯಾನದಿಂದಕ್ಷಿಣದಿಶೆಗೈದರುಂ। ತಿಂಗಳುಮರಣಮಿಕ್ಕುಂ । ಕನಸಿನೊಳುಶ್ಮಶಾನಭಸ್ಮ।ನಿರ್ಜ್ವಾಲಚಿತಿಧೂಮ। ವಿಕೇಶಿಯುರಂನೋಡಲ್ಕೆ ಮೃತ್ಯುಬಪ್ಪುದು।ಸ್ವಪ್ನವಲ್ಲಿ ಕೃಷ್ಣವರ್ಣದಬೋಳುತಲೆಯ ಪುರುಷರುಕಲ್ಲುಗುಂಡುಕಟ್ಟಗೆಗಳಿಂ ತನ್ನಂಬಾಧೆಪಡಿಸಲು ಮಹಾರೋಗಮರಣಂಗಳಹವು।ಸೂರ್ಯೋದಯದಲ್ಲಿಶುಭದಿನಂಗಳೊಳು ತನ್ನಂಜಂಬುಕನು ಅಳುತೆದುರುದೊಡಂಗೋಮಾಯುಗಳುತಟ್ಟಿದರುಂ। ಶೀಘ್ರದಲ್ಲಿಮೃತಿಯಹು । ಕನಸಿನಲ್ಲಿ। ಶ್ವೇತವರ್ಣಗಜಾದಿಗಳಂಟೆಂಕಲೊಳುಕಂಡರೆ ಮರಣಸೂಚನೆಯಹುದು ವಂಟೆಯನಾದರೂ ಕತ್ತೆಯನಾದರೂ ಕಟ್ಟಿದರಥದೊಳು ತಾನುನಡದಂತಾಗೆಪರಾಜಯದಿಂ ಮರಣವಹುದು । ಕನಸಿನೊಳಗಗ್ನಿಗುಂಡದಲ್ಲಿ ಬಿದ್ದರುಂಬೆಟ್ಟದಿಂದುರುಳಿದರುಂ। ಕಾಗೆಗಳಿಂದಚುಚ್ಚಲ್ಪಟ್ಟರುಂ ಮರಣಕಾಲ ಸಮೀಪಿಸುವದು ಇಂತಿದುಮೊದಲಾದದುಸ್ವಪ್ನಗಳಂಕೇಡಹುದೆಂತಲುಂ ತಿಳಿದು। ತಚ್ಛಾಂತಿಮಾಡಿದೊಡೆ ಆಯುರ್ವೃದ್ಧಿಯಹುದು ದುಸ್ವಪ್ನವು ಸ್ವತಃ ಮಿಥ್ಯಾಭೂತವಾದರೂ ವ್ಯವಹಾರದೊಳು ಸತ್ಯಫಲವಂಕೊಡುವದು।ಜನಾನುಭವಸಿದ್ಧಮಪ್ಪುದರಿಂ ಶಾಂತಿಪೌಷ್ಟಿಕಾದಿ ಕರ್ಮಗಳಿಂಪಾಪನಿವೃತ್ತಿಯಂ ಮಾಡಿಕೊಳ್ಳುತ್ತಾ ಈಶ್ವರಧ್ಯಾನ ಪರನಾಗಬೇಕೆಂದು ಸೂತಸಂಹಿತಾದಿಗಳಲ್ಲಿ ಹೇಳಲ್ಪಟ್ಟಿಕ್ಕುಂ ॥

### ಮರಣಾರಿಷ್ಟಸೂಚನೆ.

ಮತ್ತಮಾಶರೀರಿಯು ದೇಹಜಾತಿಗೆತಕ್ಕಂತೆಯೂ। ಆಹಾರಕ್ಕನುಗುಣವಾಗಿಯೂ। ಪೂರ್ವಸ್ಥಿತಿಯನ್ನು ಅನುಸರಿಸಿಯೂ।ವಯಸ್ಸಿಗೆಸರಿಯಾ

ಗಿಯುೂ। ಕಾಲದೇಶಗಳಿಗುಚಿತವಾಗಿಯೂ। ಇರತಕ್ಕದ್ದಾಗಿತನಿಗೂ ತನ್ನಂ ನೋಳ್ಪವ್ವರಿಗೂ ವಿರೋಧದರ್ಶನವಿಲ್ಲದೆಯಿರುವ। ಆಕೃತಿ-ಅವಯ ವಪುಷ್ಟಿ ಅಂಗಚೇಷ್ಟೆ ದೃಷ್ಟಿ, ಸ್ವರ, ಕೃತ್ಯ, ಲಕ್ಷಣ, ಪ್ರಜ್ಞೆಗಳುಳ್ಳಾತ ನಾಗದೆ। ಪೇಳ್ದೆಲ್ಲವಿಷಯಗಳಿಗೂವಿಲಕ್ಷಣವಾಗಿ ತನ್ನಂತಾನೆನೋಡಿ। ಪರ್ಯಾಲೋಚಿಸಿನಿಶ್ಚಯಿಸಿದರುಂ। ತನ್ನೊಳಗಭಿಮಾನವುಳ್ಳವರು।ತನ್ನ ವಿಪರೀತಲಕ್ಷಣಗಳಂ ನಿಶ್ಚಯಿಸಿದರುಂ ಮರಣಸಮೀಪಿಸಿತೆಂದು ನಂಬಬ ಹುದೆಂತನೆ। ಸಾಧಾರಣವಾಗಿ ಸಮದೃಷ್ಟಿಯುಳ್ಳಪುರುಷನು। ವಿಶೇಷ ವಾಗಿ। ಊರ್ಧ್ವದೃಷ್ಟಿ। ಬಿರಿಗುಡ್ಡುಬಿಟ್ಟಂತೆದೃಷ್ಟಿ। ಮಂದದೃಷ್ಟಿಗಳು। ನಿರ್ಹೇತುಕವಾಗಿ ಬಾರಿಬಾರಿಗೂತೋರಿದರುಂ ಕಂಣುಗುಡ್ಡೆಗಳು ಪಳ ಗಡೆತಿರ್ರನೆತಿರಿಗಿದರುಂ। ನೋಟವುವಿಪರೀತವಾದರುಂ। ಕೆಲವುಹೊತ್ತು ಮಾತ್ರಕಣ್ಣಾಗಣವೇಯಿದ್ದುಮರಳಿಕಾಣುಕಂಡು ಬಳಿಕಕಾಣದೆ ಈಮೇರೆ ದೃಗ್ದೋಷವುಂಟಾದರುಂ। ಬಿಳುಪುಕಪ್ಪಾಗಿ। ಪುಟ್ಟದುದೊಡ್ಡದಾಗಿ।ಇ ಷ್ಟವನಿಷ್ಟವೆನಿಸಿ। ದೋಷಗಳುಗುಣಗಳಾಗಿ। ನಿತ್ಯಗಳಲ್ಲಅನಿತ್ಯಧರ್ಮ ಗಳುಳ್ಳದ್ದಾಗಿ। ಅವಿರುದ್ಧಗಳುವಿರುದ್ಧಗಳಾಗಿ। ಇಲ್ಲದ್ದುಂಟಾಗಿ। ಕಂಡ ರುಂಕಾಣಲ್ಪಟ್ಟಂತೆತಿಳಿದರುಂ ತಜ್ಜನ್ಯಭಯವುಹೃದ್ಗತವಾದರುಂ।ಲೋ ಕಸಂಮತವಾದ ಸರ್ವಸಾಧಾರಣವುಪ್ಪಕಾರಣಗಳಿಲ್ಲದೆ। ಇಂತು ವಿಪರೀ ತದರ್ಶನವಾದೊಡೆ ಆರುತಿಂಗಳೊಳಗಾಗಿಮರಣವುಪ್ಪುದೆಂದು ತಿಳಿಯ ಲಕ್ಕುಂ॥

ಮರಣಕಾರಣ ಸೂಚನೆ.

ಮತ್ತು ಆಕಸ್ಮಿಕವಾಗಿರೋಗವುತಲೆದೋರಿ ವಿಷವೇರಿದಂತೆ ಪ್ರತಿದಿ ನವಲ್ಲಿಯುಂ ವಿಮುಖವಾಗದೆ। ಪ್ರಬಲವಾದರುಂ। ಎರಡುಕೈಗಳಲ್ಲಿಯೂ ತ್ರಣದೋರಿದರುಂ। ಮುಂಗೈಗಳಲ್ಲಿಹಸರುನರಗಳುಕಂಡರುಂ।ತಲೆಕೆರಕೊ ಳ್ಳುತ್ತಿದ್ದರುಂ ಪೇಚಾಟವುಂಟಾದರಂ। ಸುತ್ತಿಸುತ್ತಿಮಲಗಿದರುಂ।ಅತಿ ಭೋಜನಾರ್ಥಿಯಾದರುಂ। ವೃಷಣಗಳುಕರಗಿಚರ್ಮಮಾತ್ರನಿಂತರುಂ।ಅಂ ಡುನವದರುಂ। ಗಂಬೀರ। ಮಹತಿಯೆಂಬ ಬಿಕ್ಕಳಿಕೆಗಳುಪುಟ್ಟಿದರುಂ। ಆ ಹಾರಕಡಮೆಯಾಗಿ ಮಲಮೂತ್ರಗಳಧಿಕವಾಗುತ್ತಬಂದರುಂ। ಉಷ್ಣಾದಿ ಸ್ವಭಾವವುಳ್ಳ ಶರೀರಕ್ಕೆ ಶೀತಾದಿಸ್ವಭಾವವುಂಟಾದರುಂ। ಸೇರದೇ ಇ ದ್ದವಸ್ತುಗಳುರುಚಿಯಾಗಿತೋರಿದರುಂ ಮಲಮೂತ್ರಗಳೊಳುಆಕಸ್ಮಿಕ ವಾಗಿರಕ್ತಸ್ರವಿಸಿಯುದರೊಳುಯಣ್ಣೆಯಂತೆಜಿಡ್ಡಾಗಿತೋರಿದರುಂ। ಹುಚ

ಯುವೆಲಿಬಹಳಆಪೇಕ್ಷೆತೋರಿದರೂ। ಕಟ್ವಾದಿತೀಕ್ಷ್ಣವಸ್ತುಗಳನ್ನೇಸೇವಿಸಿದಷ್ಟೂಶ್ಲೇಷ್ಮವೃದ್ಧಿಯಾದರೂ। ಮೂಗಿನಕೊನೆ।ಕಿವಿಗಳು, ಅಂಗೈಅಂಗಾಲು, ಹೊಟ್ಟೆ, ಇವುಪ್ರಾಯಿಕವಾಗಿಬಿಸಿಯಿಲ್ಲದೆ ಕೆಲವುಕಾಲಗಳಲ್ಲಿವಿಶೇಷತಣ್ಣದೋರಿದರೂ। ಅಲ್ಪವಿಷಯಕ್ಕಾಗಿ ಬಹಳ ಸಂತೋಷವುತಲೆಗೇರಿದರೂ। ಸ್ವಲ್ಪಕೆಲಸದಿಂಬಹಳಶ್ರಮತೋರಿದರೂ।ಜನಸಂಗವರ್ಜನಾದಿಲೋಕಧರ್ಮಗಳೆಲ್ಲವೂ ಅಸಹವಾಗುತ್ತಿದ್ದರೂ। ಸ್ವರವುಕುಗ್ಗಿಹೋದರೂ। ಗೋಮಾಳವುಕೆಳಗಡೆಅರ್ಧಅಂಗುಲಯಿಳಿದಿದ್ದರೂ।ಕಣ್ಣಲ್ಲಿರಕ್ತವಿಲ್ಲದೆಗುಡ್ಡುನಿಸ್ತೇಜಸ್ಕವಾಗಿ।ಬಿಳೇಗುಡ್ಡೆಹಸುರಾಗಿ। ಕರೀಗುಡ್ಡೆಬಿಳುಪೇರುತ್ತಾ ಬಂದರೂ। ಪ್ರಾಯಿಕವಾಗಿ ಗಂಟಲುಒಣಗುತ್ತಾ ಪ್ರಡಿಕೆವುಂಟಾಗಿಸ್ನಾನಮಾಡಿದೊಡನೆ ಎದೆಯುಮೇಲಣತ್ವಚವು ಕ್ಷಿಪ್ರವಾಗಿ ಒಣಗಿಹೋದರೂ। ಮುಖದಲ್ಲಿ ಎಣ್ಣೆಗೋಮೆಯುಡಪ್ಪೈಲುಹೊಳವುಂಟಾದರೂಇದ್ದಂತಧೈರ್ಯಕಡಮೆಯಾದರೂ ಬಹುತ್ವರೆಯಲ್ಲಿ ರೂಪಹೀನನುಸುಂದರನಾದರೂ। ನಿರ್ಬಲನುಬಲಿಷ್ಟನಾದರೂ ಕೃಶನುಪೀವರನಾದರೂ। ಮೈಥುನಾರಂಭದಲ್ಲಿಯೇ ವೀರ್ಯವುಚಲಿಸದೆಮುನ್ನಕೊರಳೊಳುಕಪೋತನಾದಮುದಿಸಿದರೂ। ನಿರ್ವೀರ್ಯವಾದ ಮೇಢ್ರದೊಳುಕಾಠಿಣ್ಯ ಮುದಿಸಿದರೂಯೋನಿದ್ರವಿಸಲುಬಹಳಬಿಸಿಯಾಗಿ ಕೂದಲುಸುಟ್ಟದುರ್ಗಂಧವಾದರೂ। ಕಾಲಿನಜೀವನರದಸೆಳತವಾದರೂ। ಆಗಾಗ್ಯೆ ಗುಂಡಿಗೆಹಿಡಿಯುತ್ತ ಬಂದರೂ। ರಾತ್ರಿಗಳೊಳು ನಿದ್ರೆಶುದ್ಧವಾಗಿ ಯಿಲ್ಲದೆ ಹೋದರೂ। ಬುದ್ಧಿಯೂಜ್ಞಾನಾಜ್ಞಾನಸಂಕಲಿತವಾದರೂ। ಅಂಗೈ ವ್ರಜ್ಜಲು ಅಮೇಧ್ಯವಾಸನೆತೋರಿದರೂ। ಪ್ರತಿವಿಷಯದಲ್ಲಿಯೂ ಬಹಳ ಅಸಹ್ಯವಾದರೂಲುಬ್ಧಂಗೌದಾರ್ಯಮುದಿಸಿದರೂ। ಹೇಡಿಯುಪರಾಕ್ರಮಿಯಾದರೂ।ಸಗುಣಿಯುಕುತ್ಸಿತನಾದರೂ। ಸತ್ಪುರುಷನು ಅಕಾರ್ಯರತನಾದರೂ। ಸಕ್ಕರೆಮೈಯ್ಯಾಗಿತೋರಿದರೂ।ಭ್ರಾಂತಿಭಯಗಳು ಪ್ರಬಲವಾದರೂ। ಮಲಮೂತ್ರಾದಿಗಳು ದಿನಕ್ರಮದಿಂ ಕಾಲಪರಿಮಾಣರೂಪಕ್ಲಪ್ತಿತಪ್ಪಿ ವಿಪರೀತವಾದರೂ। ಯೆಡವೊಗ್ಗಲೊಳುನಿದ್ರೆಯೇ ಬಾರದಿದ್ದರೂ ಬೆನ್ನೆಲುಬುಕುಗ್ಗಿಡೊಂಕಾದರೂ। ಉಗುರುಗಳಲ್ಲಿ ರಕ್ತವಿಲ್ಲದೆ ಶುಷ್ಕವಾದರೂ। ಅಗ್ನಿಬಲವಡಗಿಹೋದರೂ। ಪಿತ್ತಶ್ಲೇಷ್ಮಧಾತುಗಳಿಗೆ ಭೇದತೋರದೇಕಾಲಸ್ಥಲಭೇದತೋರಿದರೂ। ಋತುಧರ್ಮಗಳು ತನ್ನಪಾಲಿಗೆವಿಪರೀತಗಳಾಗಿ। ಚಳಿಯೊಳುಸೆಕೆಯೂಸೆಕೆಯಲ್ಲಿ ಚಳಿಯೂ।ನಿರ್ಹೇತುಕವಾಗಿ

ತನಿಗೆ ಮಾತ್ರ ಭಾರಿಭಾರಿಗೂ ತೋರಿದರುಂ ಕಾಗಿಗಳ ವ್ಯಥಾಸನಂ ಕಂಡರುಂ ವಿಷಾದಗಳು ಮೈಸೇರಿ ಯೆದೆಯೊಳು ರೂಕ್ಷವಾದರುಂ। ಕ್ಷಯಾದಿದೋಷಗಳು ಬೆಳಕೊಂಡರುಂ। ಮನೆಹಾಳು ಸ್ವತ್ತುಗಳು ಸುಲಭವಾಗಿ ದಕ್ಕಿಶುಭೋದಯವಾಗಿ ತೋರಿದರುಂ। ಸತ್ಕರ್ಮಗಳ ಮಾಡಲ್ಕವುಗಳಂ ಮಾಯಿಕವಾಗಿ ಕಷ್ಟಗಳಾಗುತ್ತಿದ್ದರುಂ। ಆಕಸ್ಮಿಕವಾಗಿ ಕೇವಲ ಅವಮಾನನಾದರುಂ। ವಿಶೇಷಾಭಿಮಾನವುಳ್ಳ ಬಂಧುಗಳ ಸೇಕರುಯೇಕಕಾಲದೊಳಗಲ್ಲನೆ ಸಂಗಡಸಂಗಡಲೇ ಮೃತರಾದರುಂ। ಸಂಘಾತರೋಗಿಗಳಂ ಕಂಡುಂಜಿಕೊಂಡರುಂ। ಸಂಪಿತಲಿಗೇರಿದರುಂ। ಅತಿಸಾರವಿಸಾರಿಪೋದರುಂ। ಬೆನ್ನಿನಲ್ಲಿವ್ರಣಪುಟ್ಟದರುಂ। ಕರ್ಣಡುಬಳಿತವಳಗಡೆ ವ್ಯಾಪಿಸಿದರುಂ ಅನ್ನದ್ವೇಷಚಿರಕಾಲನಾದರುಂ। ಲಲಾಟದಲ್ಲಿಪಾಶರೇಖೆಯುದಂಡವಾಗಿ ಪುಟ್ಟದರುಂ। ಕೆಸ್ನಿಯಲ್ಲಿಕೊಳೆ ತುಟಿಯಲ್ಲಿಕಪ್ಪು। ಕಂಠದಲ್ಲಿಶ್ವೇತಶಿಶ್ನದಲ್ಲಿಕೆಂಪುಮಚ್ಚೆಗಳಾದರುಂ। ಬಯಲಂಕಂಡು ಭೀತಿಗೊಂಡರುಂ।ಆಗಾಗ್ಯೆಯಾರೋತನ್ನಂಕೂಗಿದಂತರಿತು ತಾನಾಗಿ ಪ್ರತ್ಯುತ್ತರಹೇಳಿದರುಂ ಅಭಿಮುಖನಾಗಿಪೋದರುಂ। ದಿನಮೂರರೊಳುತಪ್ಪದೆ ಸಿದ್ಧಾನ್ನವುತಪ್ಪಿಹೋದರುಂ ಪರ್ವಸಂಧಿಗಳೊಳುತಾನುಂಡನ್ನವು ವಮನವಾಗುತ್ತರಾತ್ರಿದುಸ್ಸ್ವಪ್ನಗಳಾದರುಂ। ನಾಯಿ, ಇಲಿ, ಹಾವು, ಹುಲಿ, ಚೇಳು, ಬೆಕ್ಕು, ಕುದುರೆ, ಮನುಷ್ಯ, ಕೋತಿಗಳಂ ಕಚ್ಚಲ್ಪಟ್ಟವಾಸಿಯಾದ ಬಳಿಕ ಕೆಲವುದಿನಗಳಮೇಲೆ ಅದೇಸ್ಥಳದೊಳಂಕುರುವಿದ್ದರುಂ। ಯೋಗ್ಯಾನ್ನಯೋಗ್ಯೌಷಧಾದಿಗಳು ದೋಷವನ್ನುಂಟುಮಾಡಿದರುಂ। ದಕ್ಷಿಣಶಿರನಾಗಿ ಮಲಗಿದತಾನು ಹೆಚ್ಚರಗೊಂಡೇಳುವಲ್ಲಿಉತ್ತರಶಿರನಾಗಿದ್ದಗುಂ।ದರ್ಪಣದೊಳು ತನ್ನಛಾಯೆಕಾಣದಿರ್ದರುಂ ತೈಲಾದಿಗಳಲ್ಲಿ ತನ್ನಛಾಯೆವಿಕಾರವಾಗಿಕಂಡನುಂ। ನೆಲನುಚತುರಂಗದಂತೆ ತೋರಿದರುಂ। ಸೂರ್ಯನುಚಂದ್ರನಾಗಿ। ಚಂದ್ರನು ಸೂರ್ಯನಾಗಿ ತೋರಿದೊಡಂ। ಯೆಲ್ಲರಿಗೂಕೇಳುತ್ತಿರುವ ಘನಗರ್ಜನೆತನಗೆಮಾತ್ರಕೇಳಬಾರದಿದ್ದೊಡಂ।ನರದಿದಸೊಡರುವಾಸನೆಬಾರದಿರ್ದೊಡಂ। ಮೊಣಪಸೊಳಂಖಾರವಿಲ್ಲದಿದ್ದರುಂ। ಪಗಲುಕಣ್ಣುತ್ತಲೆಯಾದರುಂ। ತನ್ನಹುಬ್ಬುತನಿಗೆ ಕಾಣಬಾರದಿರ್ದೊಡಂ। ನಾಲಿಗೆಯೊಳುದೋಷನಿಂತಿರ್ದರುಂ। ಅಂಗೈಯೊಳಾಯುಷ್ಯರೇಖೆಯು ಶಿಥಿಲವಾಗಿರ್ದರುಂ। ಮುಂಡೆಗೂದಲುಗಳಲ್ಲಿ ಗಂಟುಗಳುಬಿದ್ದಿದ್ದರುಂ।ಕಿವಿಮುಚ್ಚಿದರೆಶಬ್ದವಿಲ್ಲದೆ ದಿನವೆಲ್ಲಕಳೆದರುಂ। ಮೂರುದಿವಸ ತನ್ನಮೂಗಿನಕೊ

ನೆಯಂತಾಕಾಣದಿರ್ದೊಡಂ। ಕನಸಿನೊಳು ತಾನುಮದುವೆಯಾಗಿ। ಪಂಚಲೋಹ। ತವರಹತ್ತಿಯಂಪಡದರುಂ।ಕೇಶಗ್ರಾಹವಾಗಿಹಿಡಿಯಲ್ಪಟ್ಟರುಂ ಹಲ್ಲುದರಿಪೋದರುಂ। ಮಹಿಷವಾಹನಾರೂಢನಾದರುಂ। ಕತ್ತೆಒದ್ದರುಂ ನಾಯಿಕಚ್ಚಿದರುಂ। ಹೊಸಮಡಿಕೆ। ಹೊಸಹಗ್ಗ। ಬಿದುರುಕೋಲುಗಳು ಬೋಳಿಯರು। ವಿಮಾನ। ಚಗಮಕ್ರಿಯಾಸಾಮಗ್ರಿ। ಅಶುಭಗಮನಾದಿಗಳಂಕಂಡರುಂ। ಜಾಗ್ರದವಸ್ಥೆಯಲ್ಲಿ ದಿನಮೂರರೊಳು ನಿದ್ದೆಯೆದ್ದೊಡನೆ ದಿಗಂಬರದರ್ಶನವಾದರುಂ। ಪ್ರಬಲವಾದ ಧರ್ಮದ್ರೋಹ। ದೈವದ್ರೋಹ। ರಾಜದ್ರೋಹ। ವಿಪ್ರದ್ರೋಹ। ಜನದ್ರೋಹಗಳಂಮಾಡಿದರುಂ।ದಿನಮೂರರೊಳಗಿದ್ದಂತೆ ತಾನುಟ್ಟಬಟ್ಟೆಕಳಚಿಬಿದ್ದರುಂ। ಈತಾನುಸಾವನೆಂಬಜನವಾರ್ತೆಪುಟ್ಟಿದರುಂ। ಕೆಲಸಗಳೆಲ್ಲವೂ ಕೈಕೂಡಿ ತೃಪ್ತಿಗೆಕೊರತೆಯಿಲ್ಲದಿರ್ದೊಡಂ। ನಿಧಿನಿಕ್ಷೇಪಗಳು ಸಿಕ್ಕಿದವಡನೆ ದಿನಮೂರರೊಳು ಸಿದ್ಧಿಬಾರದಿರ್ದೊಡಂ। ಶುಭದಿನಂಗಳಲ್ಲಿ ಮಡದಿಯತಾಳಿಯು ತಟ್ಟನಹರಿದರುಂ। ಪ್ರಸ್ತುತದಲ್ಲಿ ಕೈಕಂಕಣಕತ್ತರಿಸಿಬಿದ್ದರುಂ।ಇಟ್ಟಪಾಗುಜಾರಿಜಾರಿಬೀಳುತಲಿಂದರುಂ। ಕೈಬಿಕ್ಕಸ್ಸೆಗೆದಾಲಿಟ್ಟರುಂ। ಮಲಗುವಮನೆಯೊಳು ಜೇನಿಟ್ಟರುಂ ಕೂಡನಗದ್ದಿಗೆಯೊಳು ಸಾಯಿವಿಷ್ಟಿಸಿದರುಂ। ತನ್ನದೇಹವರಂತಾನೇಮರತುಕಳಚಿಕೊಂಡರುಂ। ತಾಜಪಿಸುತ್ತಿರುವ ನಿತ್ಯಮಂತ್ರು ತನಿಗೇಮರತು ಹೋದರುಂ। ಇರುವೆ। ಗೆದ್ದಲು। ನೊಣ। ಇಲಿಗಳೇಕಕಾಲದೊಳುಪ್ರಬಲಿಸಿ। ತಾನುಡುವತೊಡಿಗೆಯುಂಕತ್ತರಿಸಿದರುಂ। ಮದಲಕಬಳದೊಳಗೇಳುದಿನತಪ್ಪದೆ ನಿತ್ಯವೂ ಕಲ್ಲುಸಿಕ್ಕಿದರುಂ। ಪರಿಮಳ ಪುಷ್ಪಮಾಲೆನಿರ್ಗಂಧವಾಗಿದ್ದರುಂ। ನಿತ್ಯವೂ ತನ್ನಮನೆಯಮೇಲೆ ಕಾಲತಪ್ಪಿಕಾಗಿಗಳು ಕೂಗಿ ಗೂಬೆಹಾಯ್ದರು। ಮಲಗುವತಾವಿನಲ್ಲೆಂದಿಗೂ ಇಲ್ಲದೆ ತಿಪ್ಪೆಹೊಡೆಯೆದ್ದು ಕಟ್ಟಿರುವೇ ಬುತಿಗಟ್ಟದರುಂ। ತನಿಗಾರುತಿಂಗಳೊಳಗನಿಷ್ಟತಪ್ಪದೆಂದು ನಿಶ್ಚಯಿಸಿ। ತನ್ಮೂಲಕವಾಗಿ ಮರಣವುಪ್ಪದೆಂಬುದಕ್ಕೆ ತಾನಂಜದೆ। ಯಜ್ಞದಾನತಪಸ್ಸುಗಳಂ ಪರಮೇಶ್ವರ ಸ್ವರೂಪಮಾದ ಧರ್ಮಮಂಭಜಿಸುತ್ತ। ಮುಖ್ಯವಾಗಿ। ಸ್ನಾನ। ಅನ್ನದಾನ।ದೀಪದಾನಗಳಂಮಾಡಿ।ಶಿವಧ್ಯಾನಪರಾಯಣನಾಗಿರಬೇಕೆಂದುನಿಶ್ಚಯಿಸಿವೇಳ್ಕುಂ॥

### ಜ್ಯೋತಿಷದಿಂಮರಣ ಸೂಚನೆ.

ಬಳಿಕಾವನ ಜನ್ಮನಕ್ಷತ್ರನಾವವರುಷಪ್ರವೇಶದೊಳಗಾದರೂ। ಜನ್ಮಮಾಸಜನ್ಮದಿನದೊಳಗಾದರೂ। ಕುಜಶನಿಲತ್ತೆಗಳಿಂದೊಡಗೂಡಿ।[illegible]

ದಯಕಾಲಕ್ಕೆ ಪರ್ವಸಂಧಿಯುಂಕೂಡಿ। ಜನನಲಗ್ನಕ್ಕೆ ಷಷ್ಠಾಷ್ಟಮವ್ಯಯಲಗ್ನಗಳಾಗಿರುದ್ರಶೂರದೆಶೆಬರುವಲ್ಲಿ। ಆಸಂವತ್ಸರದೊಳಗೆ ಮರಣಮೆಂದುನಿಶ್ಚಯಿಸುವದು। ಜನನಕಾಲದೊಳಷ್ಟಮಾಧಿಪತಿಯೂ ದ್ವಿತೀಯಸಪ್ತಮಾಧಿಪತಿಗಳೂ। ಮತ್ತುಕೇಂದ್ರಾಧಿಪತಿಗಳಾದ ಗುರುಶುಕ್ರರೂ। ದ್ವಿತೀಯಸಪ್ತಮಸ್ಥಿತರೂ। ಮೃತ್ಯುಸಹಮಾಧಿಪತಿಗಳೂ ಆದಗ್ರಹಂಗಳು ಮತ್ತು ಕುಜಶನಿಗಳು ಇಂತಿವರಕೂ ದಶಾಭುಕ್ತಿ ಪರಿಪಾಕಕಾಲಕ್ಕೆಸರಿಯಾಗಿ।ಗೋಚಾರಕ್ರಮವುಂ।ಅಂಗಚಾರಭಿದ್ರವುಂಚಂದ್ರಗರ್ಭಚಕ್ರದೊಳು ಕುಜಶೂಲವುಂ। ಅಯುಶ್ಚಕ್ರದೊಳಗಪಮೃತ್ಯುಸಂಧಿಯುಂ ॥ ಕಾಲಚಕ್ರದೊಳುಮಂಡೂಕಗತಿ ಮರ್ಕಟಗತಿ ಸಿಂಹಾವಲೋಕನಗಳುಂ, ಅಷ್ಟಕವರ್ಗದಾಯುಶ್ಚಾರ ಮಖಂಡನುಂ। ಯಾವಕಾಲದೊಳು ಸಂವತ್ಸರಾದಿಯುಕ್ತಮಪ್ಪುದೋ ಆವರುಷಮಾಸ। ದಿನ ಲಗ್ನಗಳಲ್ಲಿ ಮರಣಮಪ್ಪುದೆಂದು ಮುಂದಾಗಿಯೇ ನಿಶ್ಚಯಿಸಲಕ್ಕುಂ ಮತ್ತಮಾಮನುಷ್ಯನ ಜನ್ಮನಕ್ಷತ್ರದಿನಗಳು ಕ್ರಮದಿಂಬಿಡದೇಳುಶನಿವಾರಂಗಳೆಂಟು ಕುಜವಾರಂಗಳಲ್ಲಿಯೂ ಬಪ್ಪವರುಷಗಳ ಸಂಧಿಯಲ್ಲಿ ಮರಣಮೆಂದುನಿಶ್ಚಯಿಸಲಕ್ಕುಂ ಬಳಿಕ ಯಾವವರುಷದಲ್ಲಿ ಚೈತ್ರಶುಕ್ಲಪಾಡ್ಯಮಿ ಮೇಷಸಂಕ್ರಾಂತಿ ಆಷಾಢಶುಕ್ಲಪಂಚಮಿ ಕಾರ್ತಿಕದಲ್ಲಿಕಡೆ ಸೋಮವಾರಮಾರ್ಗಶಿರಶುಕ್ಲಏಕಾದಶಿ ಮಾಘಬಹುಳ ಅಮಾವಾಸ್ಯೆ ಫಾಲ್ಗುಣಶುದ್ಧಪೂರ್ಣಿಮೆ ಈ ದಿನಂಗಳಲ್ಲಿರ್ಪ ವಾರನಕ್ಷತ್ರಂಗಳು ಯಾವಮನುಷ್ಯನಜನ್ಮನಕ್ಷತ್ರವಾರದಿನಂಗಳಿಗೆ ಬೇಸಿಸಂಖ್ಯೆಯುಳ್ಳದ್ದಾಗಿಯೇ ಇರುತ್ತವೋ ಆಸಂವತ್ಸರದಲ್ಲಿ ಆಮನುಷ್ಯನಿಗೆ ಮರಣತಪ್ಪದೆಂದು ನಿರ್ಧರಿಸಲಕ್ಕುಂ ॥

### ಶಕುನದಿಂಮರಣ ಸೂಚನೆ.

ಬಳಿಕನರಂಗೆ ಮಂತ್ರೋಪದೇಶಕಾಲದೊಳು ಗುರುವಿತ್ತಫಲವಾದರುಂ ಗುರಿವಿಗೀವಫಲವಾದರುಂ ವಿವಾಹಾದಿಗಳಲ್ಲಿ ಅಭ್ಯುದಯ ಕಡಶಫಲಗಳುಂ ದೀಕ್ಷೆ ಅಭಿಷೇಕ ಉತ್ಸವಾದಿ ವಿಧಿಗಳಲ್ಲಿ ಶಿರಸ್ಸಿನಲ್ಲಿರಿಸಿದ ಪಾಗುಟೊಪ್ಪಿಗೆ ಕಿರೀಟವುಂತಾದವುಗಳುಂ ಆದಿಯೊಳುಧರಿಸಿ ಜಪಿಸುವಜಪಮಾಲೆಯುಂ ನಿತ್ಯಾರ್ಚನೆಗೆ ಕರಧೃತಮಾದಶಿವಲಿಂಗವುಂ ಭೋಜನದ ಪ್ರಥಮಕಬಳ ಮಂಜಾರಿಯಿಳಿಗುರುಳಿದೊಡೆ ಹನ್ನೆರಡುವರುಷ ಅಥವಾ ಹನ್ನೆರಡುಮಾಸಅಲ್ಲವೆ ಹನ್ನೆರಡುದಿನಗಳೊಳು ಪ್ರಾಣಹಾನಿಯಕ್ಕುಂ ಮತ್ತಮಾಮಾನವಂಗೆ ಯಜ್ಞಾದಿದೀಕ್ಷೆಗಳೊಳು ಅಗ್ನಿನಷ್ಟಮಾದರುಂ ಯಜ್ಞೋಪವೀತ

ಲಿಂಗಸೂತ್ರಗಳು ಕಳಚಿಬಿದ್ದರುಂ ಲಗ್ನಪತ್ರಿಕೆ ದೀಕ್ಷಾವಸ್ತ್ರಾದಿಗಳು ಸುಟ್ಟುಪೋದರುಂ ಆರಾಧಿತದೇವಪ್ರತಿಮೆ ಕಲಶಾದಿಗಳುಧರೆಗೆಬಿದ್ದರುಂ ಜಪಪಾರಾಯಣಗಳಲ್ಲಿಅಕ್ಷರವ್ಯತ್ಯಸ್ತವಾಗಿಅರ್ಥವೈಪರೀತ್ಯತೋರಿದರುಂ ಕ್ರೂರಸಮಯಗಳಲ್ಲಿ ನಡುನೆತ್ತಿಯೊಳು ಗೌಳಿಬಿದ್ದರುಂ ತಾಯಿತಂದೆ ಗುರುಗಳು ಮನಃಪೂರ್ವಕವಾಗಿ ಶಪಿಸಿದರುಂ ಆಗಬಾರದಶಪಥಂಗಳಂ ಮಾಡಿ ಪ್ರಕೃತದಲಿಗೆದ್ದರುಂ ವಿಶೇಷವಾದ ಅಕಾರ್ಯವಂಮಾಡಿದೆಕ್ಕಿಸಿಕೊಂಡಾಗಮನವಳುಕಿದರುಂ ತಾನೆಷ್ಟುಶುಚಿಯಾಗಿ ಕೊಳೆಯಿಲ್ಲದಿರ್ದರೂ ತಿಗಣೆ, ಸೊಳ್ಳೆ, ನೊಣ, ಜಿಟ್ಟೆ, ಉಂಣೆ, ಇರಿವೆ, ಚೇಳು, ಇಲಿ, ಮುಂತಾದ ಬಾಧೆಬಿಡದೆ ಪ್ರಬಲವಾಗಿರ್ದರುಂ ಮನೆಮುಂದುಗಡೆಯೊಳುತಾನಾಗಿಹುಣಿಸೆ ಯಕ್ಕೆ ಅಶ್ವತ್ಥ, ನೇರಳೆ, ಮುಳ್ಳುಮುತ್ತುಗ ಗಿಡಗಳು ಬೆಳದರುಂ ಶುಕ್ರಮಂಗಳ ವಾರಂಗಳಲ್ಲಿ ಮನೆಯೊಳಗಿದ್ದ ಪೂರ್ಣಗರ್ಭಿಣಿಯಾದ ಆಕಳುಮೃತವಾದರುಂ, ಸೋಮವಾರಕೃಷ್ಣಾಷ್ಟಮಿ ಶನಿವಾರಪ್ರದೋಷ ಮಹಾ ಶಿವರಾತ್ರಿಗಳೊಳು ಪೋಷಿತವಾದವೃಷಭವು ಮೃತವಾದರುಂ ತಾನುಅಭಿಮಾನದಿಂ ಸಲಹಿದ ಪಟ್ಟಾಶ್ವ ಗಜಾದಿಗಳು ಜಯೋತ್ಸವವ್ರತಾದಿಗಳಲ್ಲಿ ಪ್ರಾಣತ್ಯಾಗಮಾಡಿದರುಂ ನಾಗಸರ್ಪವು ಪಲಿಯೊಳು ಭಸ್ಮವಾದರುಂ ನಾಸ್ತಿಕನಾಗಿ ಶ್ವೇತಕುಷ್ಟವು ಹಿಡಿದವನಂ ಹೂಳಿದತಾವಿನೊಳುಬಿದ್ದರುಂ ಮನೆಯೊಳು ರಾತ್ರಿಮನುಷ್ಯನ ವೇದನಾಧ್ವನಿಯಂತೆ ಆಕಸ್ಮಿಕವಾಗಿ ಶಬ್ದಕೇಳಿದರುಂ ಅಖಂಡದೀಪವು ಸರ್ವಪ್ರಯತ್ನಗಳಿಂದಲೂ ನಿಲ್ಲದೆ ಭಂಗವಾದರುಂ ಧ್ವಜಪಟವು ಮುರಿದು ಬಿದ್ದರುಂ ಛತ್ರಭಂಗವಾದರುಂ ಪತಿವ್ರತೆಯಶಾಪತಟ್ಟಿದರುಂ ಪುತ್ರಶೋಕಕಾತುರನ ಗೋಳುತಟ್ಟಿದರುಂ ಅನ್ನಾತುರನಂನವಂಕೆಡಿಸಲಾತನು ಬಯಿದರುಂ ನಿದ್ರಾಕಾಲದಲ್ಲಿ ಮಂಡೆಯೊಳು ಹೋಗೆ ಹೊರಟಂತೆ ತೋರಿದರುಂ ತುಂತುರಿವಾಯು ಮುಚ್ಚೆಗಳುದಿಸಿದರುಂ ಹತ್ತುವರುಷ ಅಥವಾ ಹತ್ತುತಿಂಗಳು ಅಲ್ಲವೆ ಹತ್ತುದಿನಂಗಳಿಗೆ ತನಿಗಾದರುಂ ತನ್ನಮುಖ್ಯರಿಗಾದರುಂ ಪ್ರಾಣಮಾನ ಧನಾದಿಮುಖ್ಯಸ್ವತ್ವಗಳಿಗಾದರುಂ ಭಂಗಬಪ್ಪುದೆಂದು ನಿರ್ಧರಿಸಲಕ್ಕುಂ

ಮರಣಕ್ಕೆ ಮುಖ್ಯಹೇತುಗಳು.

ಬಳಿಕ ಮನುಷ್ಯನಿಗೆ ಮರಣವೆಂದರೆ ಪ್ರಮಾದವಶದಿಂದಾದ ಪ್ರಾಣವಿಯೋಗವಾಗಿರ್ಪುವದಕ್ಕೆ ಭಯವಿಲ್ಲದೆ ಬೇರೊಂದುಕಾರಣವಿಲ್ಲವು ಅಂತಾ ಭಯವು ಯಮದೂತರಿಂದಲೂ ಯೋಗಿಗಳಿಗೆ ದೇವದೂತರಿಂದಲೂ,

ತೋರ್ಪುದು ಆ ದೂತರೂ ಭೋಗಾದೃಷ್ಟಕ್ಷಯವಾಗೆಬಪ್ಪರು ಅಂಥಾ ಅದೃಷ್ಟಕ್ಷಯಕ್ಕೆ ಭೋಗ, ಮಹಾಪಾತಕ, ಮಹಾಪುರುಷಶಾಪಗಳೇಕಾರಣಗಳು ಅವುಗಳಿಗೆ ಪೂರ್ವೋಕ್ತವಾದ ಸ್ವರಧಾತುಗತಿ ಗ್ರಹಚಾರ ಸ್ವಪ್ನ ಶಕುನಾದಿಗಳೇ ಸೂಚಕಂಗಳೆಂದು ಕಾರ್ಯಕಾರಣಗಳಂ ಸರಿಯಾಗಿ ಪರಿಭಾವಿಸಿ ಶಾಸ್ತ್ರಲೋಕಾನುಭವಗಳಿಂ ನಿಶ್ಚಯಿಸಲಕ್ಕುಂ.

### ಮರಣಕಾಲನಿಶ್ಚಯ.

ಇಂತೀವೇಳ್ದ ಸರ್ವವಿಷಯಂಗಳುಂ ಆಸ್ತಿಕಂಗೆಸಿದ್ಧವಾಗಿ ಅನುಭವಕ್ಕೆ ಬಪ್ಪುವದಲ್ಲದೆ ನಾಸ್ತಿಕಂಗೆ ಸರಿಬಪ್ಪುದಲ್ಲವೆಂತಲುಂ ಕಲಿಕಾಲದೊಳಗಾಸ್ತಿಕ್ಯಸಿದ್ಧಿಯು ದುರ್ಲಭವಾಗಿ ಜ್ಞಾನಭಾಸಮುಳ್ಳವರಿಗುಂ ಕರ್ಮಾಭಾಸವರಿಗುಂ ಜ್ಞಾನಕತ್ವಲೋಕಸಾಂಕರ್ಯದಿಂ ನಾಸ್ತಿನಾಸ್ತಿಕಭೇದಮೇ ತೋರದವರಿಗುಂ ಮರಣಕಾಲವೊದಲೇ ನಿಳಿಯಕೂಡದಾಗಿ ಅಂತವರಿಗೆ ದೇಹತ್ಯಾಗದೊಳು ಸದ್ವಿಷಯಭಾವವಿಲ್ಲದೆ ದುರ್ಗತಿಯಾಗಬೇಕೆಂಬುದು ಶಿವಜ್ಞಾನ ಸಿದ್ಧಮಪ್ಪುದರಿಂ ಶಿಶ್ನೋದರಪರಾಯಣತೆಯಿಂ ಪಶುಗಳೆನಿಪಮಾನವರು ತಮ್ಮದೇಹತತ್ವವಂ ತಿಳಿಯಲಸಮರ್ಥರಪ್ಪುದರಿಂ ಸ್ವರಗತಿಯಂ ಕಾಣಲು ಸೂಕ್ಷ್ಮಬುದ್ಧಿಯೂ ಆಹಾರವ್ಯವಹಾರನಿಯಮವೂ ಸ್ಥಿರತೆಯೂಯಿಲ್ಲದೆ ಧಾತುಸ್ಥಿತಿಯಂತಿಳಿಯಲು ಶಾಸ್ತ್ರಾನುಭವಸಮನ್ವಯಗಳಿಲ್ಲದೆ ಜ್ಯೋತಿಸ್ತತ್ವವಂತಿಳಿಯಲು ದೈವಾನುಗ್ರಹಕಾಲಜ್ಞಾನ ಸಿದ್ಧಿಗಳಿಲ್ಲದೆ ಸ್ವಪ್ನವೂ ಶಕುನಗಳೂ ಫಲಿಸಲು ಸತ್ಯಧರ್ಮಗಳಿಲ್ಲದೆ ದುರ್ವಾದಿಗಳಂನೋಡಲು ಇಂದ್ರಿಯನಿಗ್ರಹವಿಲ್ಲದೆ ಸರ್ವಾಂಶಗಳಿಂದಲೂ ತಮ್ಮಆಯುಃಪರಿಮಾಣವಂ ತಿಳಿದುಕೊಳ್ಳಲಾರರೆಂತಲುಂ ಅದಕ್ಕಾಗಿ ಮೊದಲುಸಜ್ಜನಸಹವಾಸ ಅದರಿಂದಾಸ್ತಿಕ್ಯಸಿದ್ಧಿ ಅದರಿಂ ಗುರುಸೇವೆ ಅದರಿಂಗುರುವಾಕ್ಯಪ್ರಸಾದ ಅದರಿಂವಿಚಾರ ಅದರಿಂವಿವೇಕ ಅದರಿಂವೇದಶಾಸ್ತ್ರನಿಶ್ಚಯ ಅದರಿಂಕರ್ತವ್ಯನಿರ್ಣಯ ಅದರಿಂದನುಷ್ಠಾನಅದರಿಂಪಾಪನಿವೃತ್ತಿ ಅದರಿಂ ಸತ್ಯಧರ್ಮಸಿದ್ಧಿ ಅದರಿಂಪರಮೇಶ್ವರಪ್ರಸಾದ ಅದರಿಂಯೋಗಸಿದ್ಧಿ ಅದರಿಂಸರ್ವಫಲಸಿದ್ಧಿಗಳಹವೆಂದು ಸುರಲ್ಕೆ ಮೊದಲುಸಜ್ಜನರ ಧರ್ಮಗಳೇ ಸಂಕರವಾಗಿ ಪ್ರಯತ್ನಗಳೆಲ್ಲವೂ ಕೆಡುವವೆಂದು ಕಲಿಕಾಲಮೋಷಕ್ಕಂಜಿ ಪುರಾತನನಲಚರಿತ್ರಗಳಂವಿಚಾರಿಸಿ ವೇದಶಾಸ್ತ್ರಗಳಂ ಕಂಣಾಗಿ ಪರಿಗ್ರಹಿಸಿ ಶಮಾದಿಗಳಿಂದವಶ್ಯವಾಗಿ ಮನವಂಗೊಂಡು ತನ್ನಶಕ್ತಿಗೆ ಲೋಪವಿಲ್ಲದೆ ಸಾಧಿಸುವಂಗೆ ಪರಮೇಶ್ವರನು ಮರಣಕಾಲಜ್ಞಾನಾದಿಗಳ ಮುಂ

ದಾಗಿ ದಯಪಾಲಿಸುವನೆಂದು ಘಂಟಾಘೋಷಸದೃಶವಾಗಿ ಪೇಳುತಿರ್ಕುಂ.

## ಜನ್ಮಾಂತರವಿವೇಕ.

ಬಳಿಕಿಂತು ಪೂರ್ವೋಕ್ತಗಳಾದ ಸೂಚನೆಗಳಂ ಕಂಡಾಗ ತತ್ತ್ವಚ್ಛಾಂತಿಗಳಂ ಶಾಸ್ತ್ರೋಕ್ತವಿಧಾನದಿಂ ಮಾಡಿ ಶಿವಧರ್ಮಪರನಾಗಿರ್ಪಾತಂಗೆ ಪ್ರಾಣಾವಸಾನಸಮಯದೊಳು ಅನಾದ್ಯನುಸ್ಯೂತ ಸುಕೃತದುಷ್ಕೃತಪರಿಪಾಕವೈಚಿತ್ರ್ಯಾನುಸಾರವಾಗಿ ಚರಮವೃತ್ತಿಯೊಳಗಾವಭಾವವು ಸ್ಫುರಿಸುವದೋ ಅಂತಾ ಜನ್ಮಪ್ರಾಪ್ತಿಯಹುದೆಂದು, ನರಭೋಗ, ಶಿಲಾಭೋಗ, ಪ್ರತಿಮಾಭೋಗ, ದ್ರವ್ಯಭೋಗಾದಿಗಳ ವೈಚಿತ್ರ್ಯಮುಳ್ಳ ಲೋಕದೃಷ್ಟಾಂತಗಳಂ ನಂದಿ, ನಾರದ, ಭರತ, ದೇವಲಾದಿ ಪುರಾವೃತ್ತಗಳಂ ಸಮನ್ವಯಗೊಂಡು ತನ್ನ ಮರಣಕಾಲಕ್ಕೆ ಆಸದ್ವಿಷಯದಿಂ ಕೇಡುಂಟಾಗಿ ನರಕಯಾತನೆಬಾರದಂತೆ ಬಹುಪ್ರಯತ್ನದಿಂ ತನ್ನ ಶಿವಜ್ಞಾನಸಿದ್ಧಿಗೆ ತೀರ್ಥ, ಕ್ಷೇತ್ರ, ದೈವ, ಗುರು, ಶಾಸ್ತ್ರಗಳಂ ಸಹಾಯಗೊಳಿಸಿಕೊಳ್ಳಲಕ್ಕುಂ.

## ನರಕವೃತ್ತಿಗುಪಾಯ.

ಬಳಿಕಿಂತು ವಿಚಾರಿಸಿದ ಮನುಷ್ಯನು ಅವಶ್ಯಾನುಭಾವ್ಯವಾಗಿ ಧರ್ಮರಾಜಾದಿಗಳಂ ಬಿಡಮಣಿಸಿದ ನರಕಯಾತನೆಯಂ ತಪ್ಪಿಸಿಕೊಳ್ಳ ಸಿದ್ಧಾಂತಮಾದುಪಾಯಂಗಳಾವವೆಂದೊಡೆ ಪ್ರಪಂಚದೊಳು ಶಿವರಾಜಧಾನಿ ಎಂದೆನಿಸಿ ಮಹಾಶ್ಮಶಾನವೆಂದು ಉತ್ತರವಾಹಿನಿಯಾದ ಗಂಗಾಪಶ್ಚಿಮತೀರದೊಳು ತ್ರಿಶೂಲಾಗ್ರನಿಲಸಿತವಾಗಿ ತಾರಕೇಶ್ವರಸಾನ್ನಿಧ್ಯದಿಂದಲ್ಲಿ ಮೃತರಪ್ಪ ಸರ್ವಪ್ರಾಣಿಗಳಿಗಂ ಪ್ರಾಣಾವಸಾನದಲ್ಲಿ ಶ್ರೀರುದ್ರಸಾಕ್ಷಾತ್ತಾರಕೋಪದೇಶಗಳಂ ಶಿವಜ್ಞಾನಸಿದ್ಧಿಯನೀಗಿ ನರಕಾದಿಯಾತನೆಗೆ ಜನ್ಮಾಂತರವಿಲ್ಲದೆ ಕಾಲಭೈರವ ಶಿಕ್ಷೆಯಿಂದಲೇ ನಿಮಿಷದೊಳು ಪಾಪರಹಿತತ್ವದಿಂ ಮೋಕ್ಷಂ ಪೊರವುದೆಂದು ಅವಿಮುಕ್ತಕ್ಷೇತ್ರವೆನಿಸುವ ಕಾಶಿಯೆಂಬ ವಾರಣಾಸೀ ಪಂಚಕ್ರೋಶಸ್ಥಳದ ಮಹಿಮೆಯು ನಿಗಮಾಗಮಪುರಾಣಸಮ್ಮತವಾಗಿರಲ್ಕೆ ಸರ್ವರುಂ ಮರಣಾರ್ಥವಾಗಿ ಕಾಶೀವಾಸಮಾಡಬೇಕೆಂಬುದೊಂದುಪಾಯಮುಂ ಅಥವಾ ಶ್ರೀಶೈಲಕೇದಾರಾದಿ ಶಿವಕ್ಷೇತ್ರಂಗಳಲ್ಲಾದರುಂ ಶಿವಧರ್ಮಸಂಪನ್ನನಾಗಿರಬೇಕೆಂಬುದೊಂದುಪಾಯ ಅಲ್ಲವೆ ವೇದತಾತ್ಪರ್ಯಮಂ ಬಲ್ಲನುಭವಿಗಳಹುದೆನಲು ತನ್ನ ಶರೀರದೊಳಗಿಪ್ಪ ಶಿವಸಿದ್ಧಕಾಶೀತಾರಕಸ್ಥಾನದಲ್ಲಿ ಶಿವನಿಷ್ಠಾಪರನಾಗಬೇಕೆಂಬುದೊಂದುಪಾಯ ಅಥವಾ ವಿವೇಕಿಗಳು ತಮ್ಮ ತಮ್ಮ ಸುಖಾಶ್ರಯಸ್ಥಾನಂಗಳಲ್ಲಾದರುಂ ಶಿರಸ್ಸ

ಶ್ರೀಪರ್ವತ ಲಲಾಟವೇ ಕೇದಾರ ಭ್ರೂಮಧ್ಯವೇ ವಾರಣಾಸಿ ಕುಚಸ್ಥಾನ
ವೇ ಕುರುಕ್ಷೇತ್ರ, ಹೃದಯವೇ ಪ್ರಯಾಗ ವೆಂಬ ಭಾವನಾಯುಕ್ತನಾಗಿ ಅ
ನ್ನ ವಸ್ತ್ರ ಸುವರ್ಣಾದಿ ದಾನಧರ್ಮಯುತನಾಗಿ ಪಾಪಕರ್ಮಂಗಳಂ ಮಾಡ
ದೆ ಭಸ್ಮರುದ್ರಾಕ್ಷಧಾರಣಾನಿಷ್ಠನಾಗಿ ಶಿವಗುರುಪಾದೋದಕ ಪ್ರಸಾದಸ್ವೀ
ಕಾರಿಯಾಗಿ ಶಿವಾರ್ಚನೆ ಶಿವಮಂತ್ರಜಪ ಶಿವಧ್ಯಾನ ಶಿವಜ್ಞಾನಾದಿಗಳಿಂ
ಸಾವಧಾನಯೆನಿಸಿ ನರಕಬಾಧೆಯಂ ಜೈಸಬಹುದೆಂಬುದೊಂದುಪಾಯಂ
ವಿಂತಿವುಗಳಿಂ ಭೋಗಮೋಕ್ಷಂಗಳನೇ ಸರ್ವದಾ ಪಡೆಯಬೇಕೆಂಬುದೇ
ಆಸ್ತಿಕಮನುಜರಿಗೆ ಹಿತೋಪದೇಶವಾಕ್ಯಂ.

## ಕೂಶ್ಮಾಂಡರುದ್ರಭವನ.

ಬಳಿಕ ಪೇಳ್ದನರಕಲೋಕವತ್ತಣಿಂ ಮೂವತ್ತುಸಾವಿರದ ಯೋಜನಾಂ
ತರದಮೇಲೆ ನವಲಕ್ಷಯೋಜನಾಂತರ ಭೂಮಿಯಿರ್ಪುದಾದೊಡೆ ನಾಲ್ಕು
ವರೆಲಕ್ಷಯೋಜನವೇ ಸುವರ್ಣಮಯ ಉಳಿದನಾಲ್ಕುವರೆಲಕ್ಷಯೋಜ
ನಮುಳ್ಳದಃಪುರವೇ ಸಮಭಾಗದಿಂ ಮೃಣ್ಮಯಲೋಹಮಯಮಾಗಿಹು
ದರಲ್ಲಿ ಪೂರ್ವೋಕ್ತನರಕಂಗಳಿಗಧಿಪತಿಯಾದ ಯಮರಾಜನ ಮೇಲಮ್ಮ
ಕದಧಿಕಾರಿಯೆನಿಪ ಕೂಶ್ಮಾಂಡನೆಂಬರುದ್ರನತ್ಯಂತಭೀಷಣಾಕಾರದಿಂ ಕಾ
ಲಾನಲ ಪ್ರತೀಕಾಶನಾಗಿ ಚಾಪಬಾಣಖಡ್ಗಫಲಶವಾಂತಶಚತುಷ್ಟಯದಿಂ
ತನಗೆ ಸಮಾನರಾದ ಭೂತಗಣಕೋಟಿಗಳೊಡಗೂಡಿರ್ಪನಾತನಕೈಂಕರ್ಯ
ದಿಂ ಯಮರಾಜನು ಮೃತ್ಯು, ಗುಳಿಕನು ಅಪಮೃತ್ಯು, ದರ್ಮನು, ಪಾಪ
ನು, ನರಕಾಭಿಮಾನಿಗಳು, ಚಿತ್ರಗುಪ್ತರು, ಯಮದೂತರು, ರುದ್ರಗಣ
ಗಳು ಕೂಶ್ಮಾಂಡಗಣಗಳೂ ವಶವರ್ತಿಗಳಾಗಿರ್ಪರಾಗಿ ಕೂಶ್ಮಾಂಡ ರುದ್ರಾ
ರಾಧನೆಯೋ ಮುಖ್ಯಮಪ್ಪುದೆಂದು ಭೂಲೋಕದ ಮಾನವರೊಳು ಕ
ರ್ಮಾಧಿಕಾರಮುಳ್ಳವರಲ್ಲಿ ಶಿಷ್ಟರಾದವರೆಲ್ಲರುಂ ಶ್ರುತಿಸ್ಮೃತಿಶಾಸನದಿಂ
ಕೂಶ್ಮಾಂಡಸೂಕ್ತಾದಿಗಳಿಂದ ತಮ್ಮತಮ್ಮ ಪಾಪಪರಿಹಾರಕ್ಕೋಸುಗ
ಕೂಶ್ಮಾಂಡಗಣ ಹೋಮಗಳಂ ಆಗಾಗ್ಯೆ ಮಾಡುತ್ತಲೇ ಪರಿಪೂತರಾಗಿಯು
ಯಮಯಾತನೆಯಂ ತಪ್ಪಿಸಿಕೊಳ್ಳುವರೆಂತಲುಂ ಉಳಿದ ನಧಿಕಾರಿಗಳಾದ
ಮಾನವರೆಲ್ಲರುಂ ಸಂಕ್ರಮಣಾದಿ ಪರ್ವಕಾಲಂಗಳಲ್ಲಿ ಕೂಶ್ಮಾಂಡ ಫಲಶಾಕ
ಮಂ ತ್ರಿಶೂಲಮಂ ತಿಲಸಹಿತಮಾಗಿ ದಕ್ಷಿಣೆಯೊಡನೆ ವಿಪ್ರರ್ಗೀವುತ್ತ ಆ
ಗಾಗ್ಯೆ ತಮ್ಮಪಾಪಂಗಳಂ ತಪ್ಪಿಸಿಕೊಂಡು ಕೂಶ್ಮಾಂಡರುದ್ರಪ್ರಸಾದದಿಂ
ನರಕಶಿಕ್ಷೆಯಂ ಬಿಡಿಸಿಕೊಳ್ಳುವರೆಂತಲುಂ ಕೂಶ್ಮಾಂಡರುದ್ರಸೂಕ್ತಗಳಂ

ಜಪಿಸುವಂಗೆ ಮೃತ್ಯುಭಯವಿಲ್ಲವೆಂತಲುಂ ಕೂಶ್ಮಾಂಡರುದ್ರಭಜನೆ ಇಲ್ಲದ ವಂಗೆ ಯಮಬಾಧೆ ತಪ್ಪದೆಂತಲುಂ ಯಮಂಗೆ ಕೂಶ್ಮಾಂಡರುದ್ರನೇ ಅಂತರ್ಯಾಮಿಯೆಂತಲುಂ ತತ್ತದ್ವಿಷಯಗಳೆಲ್ಲವುಂ ವಿಚಾರಿಸಲಕ್ಕುಂ.

### ಸಪ್ತಪಾತಾಳಲೋಕಂಗಳು.

ಬಳಿಕಲ್ಲಿಂದ ಮೇಲೊಂದುಸಾವಿರ ಯೋಜನದಿಂ ದುತ್ತರೋತ್ತರವಾಗಿ ಪ್ರತ್ಯೇಕ ನವಸಹಸ್ರಯೋಜನೋನ್ನತವಾದ ಇಪ್ಪತ್ತುಸಾವಿರ ಯೋಜನದಗಲವೆನಿಪ ಪಾತಾಳ ಮಹಾತಳ ರಸಾತಳ ತಳಾತಳ ಸುತಳ ವಿತಳ ಅತಳಂಗಳೆಂಬ ಸಪ್ತಪಾತಾಳಕ್ರಮದಿಂ ಸುವರ್ಣ, ರಜಿತ, ತಾಮ್ರ ಕಾಂಸ್ಯ ಲೋಹ, ವಾಲುಕೆ ಮೃತ್ತಿಕೆಗಳು ಪ್ರಚುರವಾದ ಭೂಮಿಗಳುಳ್ಳವಾಗಿ ಪ್ರಾಕಾರಪುರಗೋಪುರಪ್ರಾಸಾದವನಾದಿ ವಿಚಿತ್ರರಚನೆಗಳಿಂ ಸಕಲಭೋಗಸಾಧನಂಗಳಿಂ ಸಂಪೂರ್ಣವೆನಿಸಿ ಸ್ವರ್ಗಲೋಕ ಸಮಾನವಾಗಿರ್ಪವಕ್ಕೆ ಬಲ ಅತಿಬಲ ಬಲವರ್ಧ ಬಲವಿಕ್ರಮ ಬಲೇಶ ಬಲಶಾಲಿ ಬಲಾಢ್ಯರೆಂಬಕ್ರಮದಿಂ ಈಶ್ವರಾಂಶಕರೇ ಕರ್ತೃಗಳಾಗಿ ತದ್ಗತಚೇತನಂಗಳನಾಳುತಿರ್ಪರು ಮತ್ತಮಾಪಾತಾಳಂಗಳಾದೊಡೆ ಮೂರುಮೂರು ಖಂಡದಿಂ ದಿಪ್ಪತ್ತೊಂದು ಬಗೆಯಾಗಿ ಪ್ರತ್ಯೇಕಖಂಡತ್ರಯದೊಳು ಕ್ರಮದಿಂ ದೈತ್ಯಭುಜಂಗ ರಾಕ್ಷಸರಿಗಾಶ್ರಯವಾಗಿಯುಂ ಧನರತ್ನಗ್ರಹಣವಾಯು ಕರ್ಷಣಗ್ರಹಗಣ ಮೂಲಧಾರಣಗ್ರಹಗಣಗಳೆಂಬ ಗಣತ್ರಯಾಧಾರವಾಗಿಯುಂ ರಹಸ್ಯಾಕರವಾಗಿಯುಂ ಶಿವಲಿಂಗಸಂಕುಲವಾಗಿಯುಂ ದೃಶ್ಯಂಗಳಾಗಿರುವವುಗಳಲ್ಲಿ.

### ಪಾತಾಳಾಧಿಪತಿಗಳು.

ಬಳಿಕಾ ಸಪ್ತಪಾತಾಳಂಗಳಲ್ಲಿಯು ಕ್ರಮವಾಗಿ ಬಲಾದಿರುದ್ರಸಿಯಾಮ್ಯತ್ವದಿಂ ಸಂಕರ್ಷಣ ಪ್ರಹ್ಲಾದ, ಶಿಶುಪಾಲ, ಕರ್ಕಂಧುಕ, ಹಿರಣ್ಯಾಕ್ಷ ಬೃಹದ್ಗರ್ಭ ಬಲಿಗಳೆಂಬವರೇ ದೈತ್ಯಗಣಾಧಿಪತಿಗಳಾಗಿಯುಂ ಬಳಿಕ ಕುಟಿಲ, ವಾಸುಕಿ, ಕಂಬಳ, ಕರ್ಕೋಟಕ ಕಾಳಾಂಗ ದುರ್ದರ್ಶನ, ತಕ್ಷಕರೆಂಬವರೇ ಭುಜಂಗಗಣಾಧಿಪತಿಗಳಾಗಿಯುಂ ಬಳಿಕ, ವಿಕಟ, ಲೋಹಿತಾಕ್ಷ, ಯಮ ವಿಕಟಾನನ ಕರಾಳ ಭೀಮನಿಹ್ರಾದ ಪಿಂಗಳರೆಂಬವರೇ ರಾಕ್ಷಸಗಣಪತಿಗಳಾಗಿಯುಂ ತಿಳಿಯಲ್ವೇಳ್ಕುಂ ॥

### ಪಾತಾಳಮಹಾಲಿಂಗಸಪ್ತಕ.

ಬಳಿಕಾಸಪ್ತಪಾತಾಳಂಗಳಲ್ಲಿ ಕ್ರಮದಿಂ ದೈತಭುಜಂಗರಾಕ್ಷಸರೆಲ್ಲ

ರು.। ತಮ್ಮತಮ್ಮಲೋಕಂಗಳಲ್ಲಿ। ವಿಶ್ವಕರ್ಮನಿರ್ಮಿತವಾದ ರತ್ನಾಲಯಂಗಳೊಳು। ಭಕ್ತಾನುಗ್ರಹಾರ್ಥವಾಗಿ।ಸಾನ್ನಿಧ್ಯಗೊಂಡಿರ್ಪ।ಶಿವಲಿಂಗ।ಶಂಭುಲಿಂಗ। ಶಂಕರಲಿಂಗ। ನೀಲಕಂಠಲಿಂಗ। ಉಮಾಪತಿಲಿಂಗ।ಸರ್ವೇಶ್ವರಲಿಂಗ। ಶ್ರೀಕಂಠಲಿಂಗವೆಂಬ। ಮಹಾಲಿಂಗಸಪ್ತಕಮಂ। ಸ್ವಸ್ವಶಕ್ತ್ಯನುಗುಣವಾಗಿ।ಭಕ್ತಿಶ್ರದ್ಧೆಗಳಿಂದಾರಾಧಿಸಿದನುಗ್ರಹಬಲದಿಂ।ಯೋಗಕ್ಷೇಮಗಳಂ ಪಡೆವರೆಂದು ವಿವೇಕಿಪೇಳ್ಕುಂ॥

## ಪಾತಾಳಪತಿಪಾಟಲೇಶ್ವರ.

ಬಳಿಕಲ್ಲಿಂದಮೇಲೆ ಭೂಪೃಷ್ಠಾಂತವಾಗಿ। ಎಂಟುಲಕ್ಷಯೋಜನದಗಲ ಎರಡುಕೋಟಿ ಯೋಜನದುದ್ದ ಪರಿಮಾಣದಲ್ಲಿ। ಸಪ್ತಪಾತಾಳಂಗಳಗಧಿಪತಿಯಾದ। ಪಾಟಲೇಶ್ವರರುದ್ರನಾದೊಡೆ। ಸಹಸ್ರಯೋಜನ ವಿಸ್ತಾರವಾದ ಮಣಿಖಚಿತದಿವ್ಯಸಿಂಹಾಸನದಮೇಲೆ। ಕೋಟಿಕಂದರ್ಪಲಾವಣ್ಯದಿಂ ಶೆಸೆದು।ಸಮಸ್ತಸುರಾಸುರಸಿದ್ಧಪ್ರಮುಖರಿಂದೋಲೈಸಿಕೊಳ್ಳುತಿರ್ಕುಂ॥

## ಪಾತಾಳ ಪ್ರಕಾಶ.

ಬಳಿಕ ಸೂರ್ಯಚಂದ್ರ ನಕ್ಷತ್ರಾದಿಖಚರಂಗಳಂತರಿಕ್ಷದಲ್ಲಿಯೇ ಮೇರುಪ್ರದಕ್ಷಿಣಂಗೈವುತ್ತ ಪಾತಾಳದೊಳಗವರಿಗೆ ಪ್ರವೇಶವೇಯಿಲ್ಲಾಗಿ। ಪ್ರಕಾಶಾವಕಾಶಮೆಂತೆಂದೊಡೆ। ಕಾಲಾಗ್ನಿರುದ್ರಮೊದಲು ಪಾಟಲೇಶ್ವರ ರುದ್ರಾಂತವಾದ ಸಪ್ತಪಾತಾಳಂಗಳಲ್ಲ ಆಯಾಭುವನವಾಸಿಗಳಗೆ ಶಿವಪೂಜಾ ಪ್ರಭಾವದಿಂದಾದ ಕಾಯಕಾಂತಿಯಿಂದಲುಂ ರತ್ನಾಭರಣ ರಶ್ಮಿಗಳಿಂದಲುಂ ಆಯಾಪ್ರದೇಶಂಗಳು ಇತರ ನಪೇಕ್ಷೆಯಿಂ ಪ್ರಕಾಶಮಯಂಗಳಾಗಿ, ಸಕಲವಿಷಯಂಗಳಂ ಬೆಳಗುತ್ತಿಹವಾ ಶಿವನಯನತ್ರಯವಾದ ಸೂರ್ಯಚಂದ್ರಾಗ್ನಿ ಜ್ಯೋತಿಗಳು ಶಿವಧರ್ಮಬಲದಿಂದವರೊಳ್ ಶೈವತೇಜೋರೂಪವಾಗಿ ಪ್ರಸಾದಗೊಂಡಿರ್ಪವೆಂದು ತಿಳಿಯಬ್ಬೇಳ್ಕುಂ॥

## ಪಂಚಾಶತ್ಕೋಟಿಯೋಜನ.

ಬಳಿಕಿಂತುನೋಡಲಾಬ್ರಹ್ಮಾಂಡ ದಡಿಯಣಕರ್ಪರದೊಳವಯಗುದಲ್ಲಿ ಕಾಲಾಗ್ನಿರುದ್ರಭವನವೊಂದು ಕೋಟಿಯೋಜನ (೧೦೦೦೦೦೦೦) ರುದ್ರಜ್ವಾಲೆಹತ್ತುಕೋಟಿಯೋಜನ (೧೦೦೦೦೦೦೦೦) ಅದರಧೂಮಮೈದುಕೋಟಿಯೋಜನ (೫೦೦೦೦೦೦೦) ಅದರಮೇಲೆನರಕಲೋಕವೆರಡುಲಕ್ಷಾಧಿಕವಾದ ಮೂವತ್ತುಕೋಟಿಯೋಜನ (೩೦೦೨೦೦೦೦೦) ಅದರಮೇಲೆ ಕೂಶ್ಮಾಂಡರುದ್ರಭವನ ಪೊಂಭತ್ತುಲಕ್ಷವೂ ಮೂವತ್ತುಸಾವಿರಯೋಜನ

ನ್, ೯೩೦೦೦೦ ಅದರಮೇಲೆ ಸಪ್ತಪಾತಾಳಂಗಳಂತರಾಳಸಹಿತವಾದ ಯಪ್ಪತ್ತುಸಾವಿರಯೋಜನ (೭೦೦೦೦) ಅದರಮೇಲೆ ಪಾಟಲೇಶ್ವರರುದ್ರಭವನಭೂಪೃಷ್ಠಾಂತವಾಗಿ ಎಂಭತ್ತೆಂಟು ಲಕ್ಷಾಧಿಕವಾದೆರಡು ಕೋಟಿ ಯೋಜನ (೨೮೮೦೦೦೦೦) ಅದರಮೇಲೆ ಮುಂದೆಪೇಳ್ವಭೂಮಿ ಯೊಂದು ಕೋಟಿಯೋಜನ (೧೦೦೦೦೦೦೦) ಇಂತುಬ್ರಂಹ್ಮಾಂಡದಧಃ ಕಟಾಕ್ಷದಿಂ ಭೂಮ್ಯಂತವಾಗಿ ಪಂಚಾಶತ್ಕೋಟಿ ಯೋಜನೋನ್ನತ ಮೆಂತಲುಂ (೫೫೦೦೦೦೦೦೦) ತತ್ತದ್ಭುವನವರ್ಣನದೊಳು ಮುನ್ನಪೇಳ್ದಸಂಖ್ಯಾಧಿಕ್ಯಮಂತರಾಳಸಹಿತವಾಗಿಯುಂ ಕ್ವಚಿತ್ ವಿಸ್ತಾರರೂಪವಾಗಿಯುಂ ಆಗಲಮುಂಸೇರಿಪೇಳ್ವುದಲ್ಲದೆ ಸ್ಮೃತಿ ಪುರಾಣ ಇತಿಹಾಸಗಳಲ್ಲಿ ಪರಸರವಿರುದ್ಧಸಂಖ್ಯಾಕವಾಗಿ ಪೇಳಿರುವದಕ್ಕಂ ಆಗಮಂಗಳಲ್ಲಿ ತ್ರಿವಿಧವಾಗಿ ಪೇಳಿರ್ಪುದಕ್ಕಂ ಜ್ಯೋತಿಸಿದ್ಧಾಂತ ನಿರ್ಣೀತವಾಗಿರ್ಪುದಕ್ಕಂ ಪರಿಮಾಣ ಸಂಖ್ಯಾವೈಪರೀತಮುಪ್ಪುದಾಗಿ ಪುರಾಣಸಿದ್ಧಾಂತಾದಿ ಸಾಮರಸ್ಯಂ ಮಾಡಲೋಸುಗ ಪೂರ್ವೋಕ್ತಸಂದರ್ಭಾದಿಗಳಂ ಪರ್ಯಾಲೋಚಿಸಲು ಶತಕೋಟಿಯೋಜನೋನ್ನತವಾದ ಬ್ರಹ್ಮಾಂಡವು ಶತಕೋಟಿಯೋಜನದಗಲದಿಂ ಒಂದು ನ್ಯರ್ಬುದ ಸಲೆಯೋಜನಮುಳ್ಳ ಗರ್ಭಾಕಾಶದಲ್ಲಿ ತತ್ತದಾಶ್ರಯದಿಂದಿಪ್ಪ ಭೂಭಾಗಸಂಖ್ಯೆಯಂಮಾತ್ರಗಣಿಸೆ ಪಂಚಾಶತ್ಕೋಟಿ ಯೋಜನಮಪ್ಪುದೆಂತಲುಂ ಅಂತರಾಳಸಹಿತಮಾಗೆ ಕಾಲಾಗ್ನಿರುದ್ರಭವನವೈದುಕೋಟಿಯೆಂಬುತೆ ಸಂಖ್ಯಾಧಿಕ್ಯಮಪ್ಪುದೆಂತಲುಂ ಸೂರ್ಯಪ್ರಕಾಶ ಯೋಗ್ಯವಾದುದನೇ ನಿರ್ದೇಶಿಪಜ್ಯೋತಿಷ್ಯೈಕದೇಶವು ನ್ಯೂನಸಂಖ್ಯೆಯಂದೆಂತಲುಂ ದೇವಭೂಮಿಯಂಬಿಟ್ಟ ಪುರಾಣಂಗಳುಕೆಲವು ಅದಕ್ಕಿಂತಲೂ ಹೆಚ್ಚುಪೇಳ್ವುವೆಂತಲುಂ ಇತಿಹಾಸಂಗಳಲ್ಲಿಕಲ್ಪಾಂತರವಿಷಯಮಂ ಲಕ್ಷೀಕರಿಸಿ ವಿಶೇಷಸಂಖ್ಯೆತೋರುವದೆಂತಲುಂ ಸಾಮರಸ್ಯದೊಳುಷಣ್ಣವತ್ಯಂಗುಳ ಪರಿಮಾಣಮುಳ್ಳಶರೀರವಂ ಊರ್ಧ್ವಬಾಹುಸಹಿತವಾಗಿ ಎಳದು ಅಧಿಕಾಂಗುಳವಾಗಿ। ಮೇಲಾಯಮಾತ್ರವಳದು ನ್ಯೂನಸಂಖ್ಯೆಯಾಗಿ। ಅಗಲವುದ್ದವಂಕೂಡಿಸಿ ವಿಶೇಷಸಂಖ್ಯೆಯಾಗಿಪೇಳ್ದಂತೆ ತಾತ್ಪರ್ಯಭೇದದಿ. ಪೊಂದೇಪೇಳಲ್ಪಟ್ಟತಾಗಿ ವಿರೋಧವಿಲ್ಲದಿರಲ್ಕೆ। ತತ್ಸರ್ವಪರಾಲೋಚನೆಯಿಂದಲೂ ಪೇಳ್ದಸಂಖ್ಯಾನಿರ್ಣಯವೇ ನಿಶ್ಚಯವೆಂತಲುಂ। ತಿಳವುದೇ ವಿವೇಕವುಕ್ಕಂ. ಮೂರನೇಪ್ರಕರಣ ಸಂಪೂರ್ಣವಾದುದು.

---

ಶ್ರೀರಸ್ತು.

ಜಯಮಹಾದೇವ.

ಚತುರ್ಥಪ್ರಕರಣಪ್ರಾರಂಭಃ.

ಕಂ ॥ ಗಣಿಸದೆನಜಾಂಡದೊಳಗಡಿ । ಯಣಕರ್ಪರದಲ್ಲಿಮೆರೆವಭುವನಂಗಳನಂ । ತಣಿಯರದೊಳಗೀಗಲೀಧಾ । ರಣಿಯವಿಚಿತ್ರತೆಯನೊಲಿದುಪೇಳ್ವೆನನೂನಂ ॥ ... ... ... *

ಭೂಲೋಕ.

ಗ ॥ ಅದೆಂತೆಂದೊಡೆ। ಪೂರ್ವೋಕ್ತಪಾತಲೇಶ್ವರರುದ್ರಭುವನದಿಂ ಮೇಲೆ ಒಂದುಕೋಟಿಯೋಜನ ದಳತೆಯದಟ್ಟವುಳ್ಳಜಂಬೂದ್ವೀಪ ಮೊದಲಾದ ಸಪ್ತದ್ವೀಪಸಮುದ್ರಗಳಿಂದನೇಕಗಿರಿನದೀವನಾದಿಗಳಿಂ ವಿಚಿತ್ರರಚನೆಯುಳ್ಳ ಭೂಲೋಕಮತಿರಮ್ಯಮೆನಿಸಿ ರಂಜಿಸುತ್ತಿಹುದದಕ್ಕೆ। ಬೇರೆಬೇರೆಬಹುಕರ್ತೃಗಳುಂಟೆಂತೆಂದೊಡೆ ॥

ಚತುರ್ದಶಮನುಗಳು.

ಪ್ರಪಂಚದೊಳು। ಸಕಲ, ಕುಲ, ಧರ್ಮ, ಪದ್ಧತಿಪ್ರವರ್ತಕರಾಗಿ।ಶಿವಪ್ರಸಾದದಿಂಲೋಕಾಧಿಪತ್ಯಂಗೈದು। ಸ್ವಾಯಂಭುವ। ಸ್ವಾರೋಚಿಷ ಉತ್ತಮ। ತಾಮಸ। ರೈವತ। ಚಾಕ್ಷುಷ । ವೈವಸ್ವತ। ಸೂರ್ಯಸಾವರ್ಣಿಕ। ದಕ್ಷಸಾವರ್ಣಿಕ। ಬ್ರಹ್ಮಸಾವರ್ಣಿಕ। ಧರ್ಮಸಾವರ್ಣಿಕ। ರುದ್ರಸಾವರ್ಣಿಕ।ರೌಚ್ಯ। ಇಂದ್ರಸಾವರ್ಣಿಕ । ರೆಂಬ ಹದಿನಾಲ್ಕುಮನುಗಳೊಳಗೆ। ಧರ್ಮಸಾವರ್ಣಿಯೇವಿಷ್ಣುಸಾವರ್ಣಿಯೆಂತಲೂ । ದಕ್ಷಸಾವರ್ಣಿಯೇ ಬ್ರಹ್ಮಸಾವರ್ಣಿಯೆಂತಲುಂ । ಬ್ರಹ್ಮಸಾವರ್ಣಿಯೇವೇದಸಾವರ್ಣಿಯೆಂತಲುಂ। ಇಂದ್ರಸಾವರ್ಣಿಯೇ ತೈಜಸಸಾವರ್ಣಿಕನೆಂತಲುಂ।ರೌಚ್ಯನೇದೇವಸಾವರ್ಣಿಕನೆಂದು ಪುರಾಣಭೇದಗಳಿಂ ನಾಮಾಂತರಮುಂಟಾಗಿ।ಪ್ರಸಿದ್ಧರಾದವರಲ್ಲಿಕ್ರಮದಿಂ ದಾರುಕಳದೀಗ ವೈವಸ್ವತಮೆಂಬೇಳನೆಯಮನ್ವಂತರವು ನಡಿಯುತ್ತಿಹುದೆಂದುವಿವೇಕಿಸಿ ॥

ಸ್ವಾಯಂಭುವನವಂಶ.

ಮೊದಲನೆಯಸ್ವಾಯಂಭುವಮನುವಿಂಗೆ । ಉತ್ತಾನಪಾದನೆಂದು। ಪ್ರಿಯವ್ರತನೆಂದು। ಈಶ್ವರುಮಕ್ಕಳು। ಮತ್ತಮವರೊಳು ಉತ್ತಾನಪಾದ

ನೆಂಬಾತಂಗೆ ಧ್ರುವನೆಂಬನೊಬ್ಬ ಮಗನಾತನು ನಕ್ಷತ್ರಮಂಡಲಕ್ಕಾಧಾರತ್ವದಿಂ ದಖಿಲೈಶ್ವರ್ಯಸಂಪನ್ನನಾಗಿ। ಮುಂದೆಮೇಲ್ವಭುವಲೋಕಾಗ್ರಸ್ಥಿತನಾಗಿರ್ದಂ। ಬಳಿಕಾಪ್ರಿಯವ್ರತನೆಂಬಾತಂಗೆ। ಅಗ್ನೀದ್ರ, ಮೇಧಾತಿಥಿ ವಪುಷ್ಮಂತ, ಜ್ಯೋತಿಷ್ಮಂತ, ದ್ಯುತಿಮಂತ, ಭವ್ಯ, ಸವರೆಂಬವರೇಳುಮಕ್ಕಳವರಿಗೆಪ್ರಿಯವ್ರತನೇಜಂಬೂದ್ವೀಪಮೊದಲಾದೇಳುದ್ವೀಪಂಗಳಂಹಂಚಿಕೊಟ್ಟನು। ಬಳಿಕವರೊಳಗೆ। ಹಿರಿಯಮಗನಾಗ್ನಿಧ್ರಂಗೆ, ನಾಭಿ, ಕಿಂಪುರುಷ, ಹರಿ, ಇಳಾವೃತ, ರಮ್ಯಕ, ಹಿರಣ್ಯಕ, ಉತ್ತರಕುರು, ಭದ್ರಾಶ್ವ, ಕೇತುಮಾಲರೆಂಬ, ಒಂಭತ್ತುಮಕ್ಕಳಾಗಲವರಿಗಾಗ್ನೀಧ್ರನು । ತನ್ನ ಜಂಬೂದ್ವೀಪಮಂ ನವಖಂಡವಾಗಿ ಕೊಡಲವರವರಪೆಸರಿನಲ್ಲಿ ಆಯಾಖಂಡಂಗಳಿರ್ದುವವುಗಳೊಳು ಮೊದಲನಾಭಿಯಮಗನೇ ವೃಷಭನು ಆತನಮಗನೇ ಭರತ ನಾತನಹೆಸರಿನಲ್ಲಿಭರತಖಂಡನಾಯಿತುಆಸಕಲಪ್ರಪಂಚಮೆಂತೆನೆ

—ಭೂಮಿ.—

ಬಳಿಕಸಮವೃತ್ತಗೋಳರೂಪಮಾದಭೂಮಿಯಮೇಲೆನಡುವೆ ವೃತ್ತಾಕಾರವೆನಿಸಿ। ಲಕ್ಷಯೋಜನವಿಸ್ತಾರಮಾದಚಿತ್ರವರ್ಣದಭೂಮಿಯುಳ್ಳಜಂಬೂದ್ವೀಪಮಿಪ್ಪ್ರದಾಭೂಕಾಂತೆಯನಾಭಿಮಂಡಲದಂತೆಪರಿಶೋಧಿಸಿ। ವಿಚಿತ್ರವಿಷಯಂಗಳುಳ್ಳದ್ದೆನಿಸಿಹುದದಱಮಧ್ಯಭಾಗದೊಳು.

ಮಹಾ ಮೇರುಪರ್ವತ.

ಸುವರ್ಣಮಯತೆಯಿಂ। ಹೇಮಾದ್ರಿಯೆನಿಸಿರತ್ನಸಾನುವಾಗಿ।ಸುರರಿಗಾಲಯಮಾದಮಹಾಮೇರುಪರ್ವತವು । ಆಭೂಕಾಂತೆಯ ಹೃದಯಕಮಲಕರ್ಣಿಕಾಕೃತಿಯಂ ಪಡದು ಸುವೃತ್ತಮೆನಿಸಿಪದಿನಾರು ಸಾವಿರಯೋಜನಂ ಭೂಮಿಯೊಳ್ಸೆಟ್ಟು ಯೆಂಬತ್ತುನಾಲ್ಕುಸಾವಿರ ಯೋಜನದುತ್ತರೋನ್ನತಮಪ್ಪುದರಿಂದೊಂದು ಲಕ್ಷಯೋಜನಪರಿಮಾಣಮುಳ್ಳದಾಗೆ। ಮೂಲದೊಳುಪದಿನಾರುಸಾವಿರ ಯೋಜನದಪೀನತ್ವ । ಅಗ್ರದಲ್ಲಿ ಮೂವತ್ತೆರಡುಸಾವಿರದ ಯೋಜನವಿಸ್ತಾರಮಂತಾಳ್ದು।ತೊಂಬತ್ತಾರುಸಾವಿರಯೋಜನದಬಳಸುಳ್ಳದ್ದಾಗಿರ್ಕುಂ.

ಬ್ರಹ್ಮಾದಿದೇವಸ್ಥಲವಿಶೇಷ.

ಬಳಿಕಾಮೇರುವಿನ ಪೂರ್ವದಿಕ್ಕಿನಲ್ಲಿ । ಬ್ರಹ್ಮಂಗೆಮಾನವತಿಯೆಂಬಪೆಸರಿನಚತುರ್ದಶಯೋಜನದಗಲದ ರತ್ನಮಯಕ್ರೀಡಾನಗರಿಗಳುಳ್ಳ । ಸಕಲ ದೇವತೆಗಳಿಂದುಪಾಸಿತಮಾದ, ಸರ್ವಸುಖಭೋಗ ಪರಿಕರಗಳಿಂದಾಢ್ಯಮಾ

ದ ಪಟ್ಟಣವೊಂದತಿರಮ್ಯವೆನಿಸಿ ರಂಜಿಸುತ್ತಿಹುದು। ಪಶ್ಚಿಮದಿಕ್ಕಿನಲ್ಲಿ ನಾರಾಯಣಂಗೆ ನಿವಾಸವಾದ। ಬೆಳ್ಳಿಯಕೋಟೆಯು ರಂಜಿಸುತಿರ್ಕುಂ ಮತ್ತಮಾ ಮಾನಸಪತಿಯಪಶ್ಚಿಮದಿಕ್ಕಿನೊಳು ಪಿತಾಮಹಂಗೆ ಸುಖಾಶ್ರಯಮಾದ। ಸುವರ್ಣಮಯಶಿಖರ ವೊಪ್ಪುತಿಹುದು । ಮತ್ತಮಾಪುರದೀಶಾನದಿಕ್ಕಿನೊಳು। ಸರ್ವೇಶ್ವರಂಗೆ ನೆಲೆಯಾದರತ್ನಮಯಶೃಂಗವೇ ಜ್ಯೋತಿಷ್ಕನೆಂಬನಾಮಧೇಯದಿಂದಿರ್ಪುದು। ಅದರ ನಿತಂಬಗಳಲ್ಲಿ। ಸ್ಕಂದನಂದಿ ಮಹಾಕಾಳೀಗಣೇಶಾದಿಗಳ ರಮ್ಯಾಶ್ರಯಂಗಳನೇಕಂಗಳಕ್ಕುಂ॥ ಮತ್ತಮಾಪುರದಗಳಗಳೆಂಬಂತೆ ಶಿವೆ, ಅಳಕನಂದೆ ಚಕ್ಷುರ್ಭದೆ, ಗಂಗೆಗಳೆಂಬ ಪೆಸರುಗಳಿಂ ಪ್ರಸಿದ್ಧಮಾದ ನಾಲ್ಕುದೇವನದಿಗಳಕ್ಕುಂ॥

## ಮೇರುಕಂಕಣತ್ರಯ.

ಬಳಿಕಾ ಮೇರುವಿನಂತರದಲ್ಲಿ। ಸಕಲರತ್ನೋಜ್ವಲವಾದ ನೇಮಿಗಳೆನಿಪವಲಯಾಕಾರಮಪ್ಪ ಕಂಕಣತ್ರಯದೊಳ ಗೊಂದೊಂದು ಮೂರು ಮೂರುಸಾವಿರ ಯೋಜನದಳತೆಯ ದಟ್ಟಮುಳ್ಳದ್ದಾಗಿ । ಇಪ್ಪತ್ತೈದು ಸಾವಿರ ಯೋಜನಕ್ಕೊಂದೊಂದಂತರ ಮಾಗಿರ್ಕುಂ ॥

## ಅಷ್ಟದಿಕ್ಪಾಲರಸ್ಥಾನಗಳು.

ಮತ್ತಮಾ ಕಂಕಣತ್ರಯದೊಳ ಗೂರ್ಧ್ವಕಂಕಣದಪೂರ್ವಾದ್ಯಷ್ಟದಿಕ್ಕುಗಳಲ್ಲಿ। ಎಂಟುಕೋಟೆಗಳುಂಟವುಗಳಲ್ಲಿ। ಇಂದ್ರಂಗೆ ಸುವರ್ಣಕೋಟೆ ನೀಲದತೆನೆಗಳಿಂದೊಪ್ಪಿದಮರಾವತಿಯೆಂಬನಗರವಿರ್ಪ್ಪುದು । ಅಗ್ನಿಗೆಕಪಿಲ ಲೋಹಿತವರ್ಣದಕೋಟೆ। ಪ್ರವ್ಯರಾಗದತೆನೆಗಳಿಂಮೆರೆವ ತೇಜೋವತೀ ನಗರವಿಪ್ಪುದು ಯಮಂಗಂಜನವರ್ಣದಕೋಟೆ। ಪ್ರವ್ಯರಾಗದತೆನೆಗಳಿಂ ಮೆರೆವಸಂಯಮವೆಂಬ ಪಟ್ಟಣವಿಹುದು । ನಿರಋತಿಗೆಕೃಷ್ಣಲೋಹಿತವರ್ಣದಕೋಟೆ। ಮುತ್ತಿನತೆನೆಗಳಿಂ ದೊಪ್ಪಿದರಕ್ಷೋವತೀನಗರವಿಹುದು। ವರುಣಂಗೆಸುಧಾಕರವರ್ಣದಕೋಟೆವಿಸುನಿಯ ತೆನೆಗಳಿಂಕಂಗೊಳಿಪಶುದ್ಧಿಮತಿಯೆಂಬ ಪಟ್ಟಣವಿಹುದು। ವಾಯುವಿಗೆಪಚ್ಚೆಯಕೋಟೆ। ವೈಡೂರ್ಯದತೆನೆಗಳಿಂ ವಿರಾಜಿಪಗಂಧವತೀನಗರವಿಹುದು। ಕುಬೇರಂಗೆ ನಾನಾವರ್ಣದಕೋಟೆ। ಮುತ್ತಿನತೆನೆಗಳಿಂದೊಪ್ಪುವ ಮಹೋದಯವೆಂಬ ಪಟ್ಟಣವಿಹುದು। ಈಶಾನಂಗೆ ಸ್ಫಟಿಕವರ್ಣದ ಧವಳಮಾದಕೋಟೆ।ರತ್ನದತೆನೆಗಳಿಂ ದಲಂಕೃತಮಾದ ಯಶೋವತೀನಗರವಿಪ್ಪುದು। ಇಂತೀಪುರಂಗಳೆಂಟೂ ಪ್ರತ್ಯೇಕಮಾದಾರು ಸಾವಿರಯೋಜನದಗಲಂಗಳಕ್ಕುಂ॥

ಉಪದೇವನಗರಂಗಳು.

ಮತ್ತು। ಮೇಘವಿಘ್ನವತಿ ಸುಂದರಕಾಮವತಿ ಸೌವರ್ಣಿ, ಸುಮತಿಕಾ ಸುಮವತಿಯೆಂಬೈದು। ಇಂದ್ರನಮರಾವತಿಗೆವಳಿತಪಟ್ಟಣಂಗಳಾಗಿರ್ಕ್ಕುವವು ವ್ರುಗಳೊಳು ಅಪ್ಸರಸ್ತ್ರೀಯರು। ಸಿದ್ಧರು। ದ್ವಾದಶಾದಿತ್ಯರೂ। ನಿವಸಿಸುವರು। ಬಳಿಕ। ಮಾನವತಿ, ರೇವತಿ, ಯೆಂಬೆರಡು, ಅಗ್ನಿಯತೇಜೋವತೀನೆಗರಕ್ಕೆ ವಳಿತವಾದ, ಪಟ್ಟಣಂಗಳಾಗಿರ್ಪವವ್ರುಗಳೊಳು।ಕ್ರಮದಿಂ ಮಯಾದಿರಾಕ್ಷಸ ಶಿಲ್ಪಿಗಳು। ವಿಶ್ವಕರ್ಮಾದಿ ದೇವಶಿಲ್ಪಿಗಳೂನಿವಸಿಸುವರು।ಬಳಿಕವಿಂತ್ರನಂದ, ಲೋಹಿತೆ, ಗುಣವತಿಗಳೆಂಬಮೂರು,ಯಮ ನಸಂಯಮನಗರಕ್ಕೆ, ವಳಿತಪಟ್ಟಣಂಗಳಾಗಿರ್ಪ ವವ್ರುಗಳೊಳು।ರುದ್ರಗಣಂಗಳೂ।ಏಕಾದಶರುದ್ರಾದಿಗಳೂ ವಾಸವಾಳ್ಪರು। ಬಳಿಕ। ಪಿಂಗಳೆ। ಕೃಷ್ಣಾವತಿ।ಸುಖವತಿ। ಗಾಂಧಾರಿಯೆಂಬ ನಾಲ್ಕುನಿಋರುತಿಯ ರಕ್ಷೋವತೀ ನಗರಕ್ಕೆ।ವಳಿತ ಪಟ್ಟಣಂಗಳಾಗಿಹವವ್ರುಗಳೊಳು। ಕರ್ಮದೇವತೆಗಳು ಪಿಶಾಚಾದಿಗಳೂ ನಿವಸಿಸುವರು। ಬಳಿಕ ಸಿದ್ಧಸೇನೆ। ಹೇಮಸಂಜ್ಞಾ। ಸಿದ್ಧವತಿಯೆಂಬಮೂರು। ವರುಣನ ಶುದ್ಧಮತೀನಗರಕ್ಕೆ। ವಳಿತಪಪಟ್ಟಣಗಳಾಗಿಹವ್ರು। ಅವ್ರುಗಳ್ಳಿಕ್ರಮದಿಂ ಭೂತಗಳು ವಸುಗಳು। ವಿದ್ಯಾಧರರುಗಳಿರ್ಪ್ಪಂ। ಬಳಿಕಸಿದ್ಧವತಿಯೆಂಬುದೊಂದೆ। ವಾಯುವಿನಗಂಧವತೀನಗರಕ್ಕೆ। ವಳಿತಪಟ್ಟಣವಾಗಿರ್ಪ್ಪುದದರೊಳು। ಕಿಂನರರಿಹರು। ಬಳಿಕ ಗಂಧರ್ವೆ। ಚಿತ್ರೆ। ಶುಭೆ।ಪ್ರಮದೆ ಚಿತ್ರವತಿಯೆಂಬೈದು ಕುಬೇರನ ಮಹೋದಯನಗರಕ್ಕೆ। ವಳಿತಪಟ್ಟಣಂಗಳವುಗಳೊಳು। ಕ್ರಮದಿಂಚಿತ್ರರಥರು। ಶಾರದೆತುಂಬುರರು। ಆಜಾನಜಾನದೇವತೆಗಳು ಗುಹ್ಯಕರಿರ್ಪರು। ಬಳಿಕ। ವೈಕುಂಠ। ಪದ್ಮವತಿ। ಕಾಮಶುಭವೆಂಬಮೂರು ಈಶಾನ ನಯಶೋವತೀನಗರಕ್ಕೆ ವಳಿತಪಟ್ಟಣಂಗಳವ್ರುಗಳೊಳು। ಕ್ರಮದಿಂ। ವಿಷ್ಣು। ಬ್ರಹ್ಮ। ಧನ್ವಂತರಿಗಳಿರ್ಪರು ॥

ದಿಕ್ಪಾಲಸ್ವರೂಪ.

ಅನಂತರದೊಳಿಂದ್ರಾದ್ಯಷ್ಟಲೋಕಪಾಲಕರಾದೊಡೆ। ಶುಕ್ಲ। ರಕ್ತ।ಕೃಷ್ಣಧೂಮ್ರ। ಹರಿತ। ಕಪಿಲ। ಚಿತ್ರ। ಧವಳವರ್ಣಂಗಳಿಂ। ಆನೆ। ಟಗರು। ಕೋಣ। ನರ। ಮೊಸಳೆ, ಹುಲ್ಲೆ, ಕುದರೆ, ಎತ್ತುಗಳೆಂಬ ವಾಹನಂಗಳಿಂ ವಜ್ರಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದೆ, ಶೂಲವೆಂಬಾಯುಧಾಷ್ಟಕದಿಂ ಪರಿವಿಡಿದು। ತಮ್ಮಧಿಕಾರಿಗಳಿಂಕೂಡಿಹರು ॥

ನವನಿಧಿಗಳು.

ಬಳಿಕ ದಿಕ್ಪಾಲಕರೊಳಗಾಕುಬೇರಂಗೆ ಕಾಮ್ಯ ಲಿಂಗಾರ್ಚನೆಯಿಂವಾ

ತಿ ಮೆಚ್ಚಿಸಿ ಕಡವರವರಮೇಶ್ವರಪ್ರಸಾದದಿಂ ಮಹಾಪದ್ಮ ಪದ್ಮ, ಶಂಖ, ಮಕರ, ಕಚ್ಛಪ,ಮುಕುಂದ, ಕುಂದನೀಲ, ವರವೆಂಬನವನಿಧಿಗಳಿ ಗಧಿಕಾರ ಮುಂಟಾಗಿ ಅಳಕಾ, ವಸುಧಾನೀ, ಮಹೋದನನೆಂಬ ಸ್ಥಾನತ್ರಯದಲ್ಲಿ ರಾಜರಾಜ ನೆನಿಸಿರ್ಪಂ ॥

ನಂದಿಕೇಶ್ವರಸ್ಥಾನ.

ಮತ್ತಮಾಮೇರುವಿನ ಈಶಾನ್ಯದಿಕ್ಕಿನೊಳು ಈಶ್ವರಕ್ಷೇತ್ರವೆಂಬು ದೊಂದು ಸ್ಥಾನಮುಂಟದರಲ್ಲಿ ನಂದಿಕೇಶ್ವರನಾದೊಡೆ ಕನಕವರ್ಣಮಯ ಶರೀರದಿಂ ಏಕಮುಖ ತ್ರಿಣೇತ್ರ ಚತುರ್ಭುಜಂಗಳಿಂ ಶ್ವೇತವಸ್ತ್ರ ದಿವ್ಯಾಭ ರಣ ಗಂಧ ಪುಷ್ಪಾದಿಗಳಿಂದಲಂಕೃತನಾಗಿ ಶೂಲಾಯುಧವಿಡಿದು ಸನತ್ಕು ಮಾರಾದಿ ಸಕಲಶಿಷ್ಯರೊಡಗೂಡಿ ಶಿವಾರಾಧನತತ್ಪರತೆಯಿಂ ಶಿವಜ್ಞಾನೋಪ ದೇಶನಾಗಿರ್ಪ್ಪಂ ॥

ಸಿದ್ಧಾದಿಸ್ಥಾನಗಳು.

ಮತ್ತಮಾ ಮಧ್ಯಕಂಕಣದಲ್ಲಿ ಸಿದ್ಧಾದಿಗಳು ಮಹಾಸುಖದಿಂದಿಹರು ಬಳಿಕಧಃಕಂಕಣದಲ್ಲಿ ದನುಜ, ದಿವಿಜ, ಗಂಧರ್ವಾದಿಗಳಿಹರು ಬಳಿಕ ಮೇರು ವಿನ ಮೂಲಗುಹಾಂತರಗಳಲ್ಲಿ ಮರುದ್ಗಣಂಗಳಿರ್ಪರೆಂಬುದು ಮಂತಾಗಿ ಸತ್ಯಾಧಿಕ ಗುಣೋತ್ತರ ಸಿದ್ಧ್ಯುತ್ತರ ಜಾನೋತ್ತರ ಮಹಿನೋನ್ನತರೆಲ್ಲ ಮೇರುವನಾಶ್ರಯಿಸಿರ್ಪರೆಂದು ತಿಳಿಯಲಕ್ಕುಂ ॥

ಕೀಲಕಪರ್ವತಂಗಳು.

ಅನಂತರದೆ ಳಾಮೇರುವಿನ ದೃಢತ್ವಕ್ಕೋಸುಗವೆ ಜವಿಂಕಲ್ಪಿತಮಪ್ಪ ಕೀಲಕಪರ್ವತಂಗಳೊಂದೊಂದೈವತ್ತು ಸಾವಿರ ಯೋಜನೋನ್ನತವೆನಿಸಿಹ ವವುಗಳಲ್ಲಿ ಶ್ವೇತವರ್ಣಮಾದ ಮಂದರಪರ್ವತವೇ ಮೇರುವಿಗೆ ಮೂಡಲಲ್ಲಿ ಹುದು ಪೀತವರ್ಣಮಾದ ಗಂಧಮಾಧನಶೈಲವೇ ಟೆಂಕಲಲ್ಲಿಹುದು ನೀಲವ ರ್ಣಮಾದ ವಿಪುಳನಗರವೇ ಪಡವಲಲ್ಲಿಹುದು ಅರುಣವರ್ಣಮಾದ ಸುಪಾ ರ್ಶ್ವಶಿಖರಿಯೋಪಡಗಳಲ್ಲಿಹುದಾನಾಲ್ಕು ಶಿಖರಿಗಳಮೇಲೆಯೂ ಸದಾಶಿವ ನಾಮಕಲಿಂಗಂಗಳಂ ದೇವತೆಗಳಾರಾಧಿಸುತ್ತಿಹುದು ಮತ್ತು ಮಂದರಾದಿ ಪರ್ವತಂಗಳಲ್ಲಿ ಅಗ್ರಭಾಗಗಳೊಳು ಕ್ರಮದಿಂ ಕದಂಬವೃಕ್ಷ ಜಂಬೂವೃ ಕ್ಷ ಅಶ್ವತ್ಥವೃಕ್ಷ ವಟವೃಕ್ಷಗಳೆಂದು ಕಲ್ಪವೃಕ್ಷಗಳಾಗಿ ಯೊಂದೊಂದು ಸಾವಿರಯೋಜನದುದ್ದದಿಂ ಬುಡದೊಳು ಶತಯೋಜನವಿಸ್ತಾರದಿಂ ಮೇ ಲೆಸಹಸ್ರಯೋಜನವಗಲ ಶಾಖಾವಿಸ್ತಾರನಾಗಿ ನಾಲ್ಕುಗಿಡಗಳಿರ್ಪ್ಪುವು ॥

## ಜಂಬೂವೃಕ್ಷ.

ಮತ್ತಮವುಗಳೊಳಗಾದಕ್ಷಿಣದಿಕ್ಕಿನ। ಗಂಧಮಾದನವೆಂಬಕೀಲಕಪರ್ವತದಮೇಲಿರ್ಪಜಂಬೂವೃಕ್ಷದಲ್ಲಿ। ಮಹಾಗಜಪ್ರಮಾಣಮುಳ್ಳಜಂಬೂಫಲಂಗಳಸಂಖ್ಯಾತಗಳಾಗಿರ್ಪವು। ಗಜಪ್ರಮಾಣವೆಂತೆನೆ। ನರರನಾನೂರುಮೊಳದುದ್ದವಹುದು। ಆಪ್ರಕಾರವಾದ ಫಲಂಗಳಾಗಿರಿಯಮೇಲುದಿರಿ।ಕಳತು। ಕರಗಿ। ರಸವಾಗಿಹರಿದು। ಪ್ರವಾಹಗೊಂಡು। ಜಂಬೂನದಿಯೆನಿಸಿ। ವಿಶಾಲದೀರ್ಘವಾಹಿನಿಯಾಗೆ। ಮೇರುವಿನಮೂಲವಂಬಳಸಿಪರಿದು।ಮೇರುವಂಆವರಿಸಿದ್ದ ಇಳಾವೃತವರುಷದಭೂಮಿಯಂ । ಪದಿನಾರುಬಂಣದಚ್ಚಕುಂದಣಮಾಗಿಮಾಡಿ। ತನ್ನನಾಶ್ರಯಿಸಿದ ಸಕಲಪ್ರಾಣಿಗಳ ಶರೀರಗಳಂ ಸುವರ್ಣಕಾಂತಿಯೊಡಗೂಡಿಸುವದಾ। ನದಿಯಮಳಲೆಲ್ಲವುಂ ಜಾಂಬೂನದವೆಂಬ ಪೆಸರಿನಿಂ ಚಿನ್ನದಮಳಲಾಗಿಪ್ಪುದದು।ದೇವತೆಗಳಗಾಭರಣಯೋಗ್ಯಮಾಗಿಪ್ಪ। ದಾನೀರಳೆಹಂಣುಗಳಂ।ಛಂದಸ್ಸಮುಪಾಸಕರಾದ ಮಹಾಸುವರ್ಣಾದಿಗಳು ನಿತ್ಯಶಿವಪೂಜೆಗೆ ನೈವೇದ್ಯಗೊಳಿಸಿ। ತದ್ಭೋಜನದಿಂ ಸುವರ್ಣವಕ್ಷರಾಗಿರ್ಪ। ರಾವೃಕ್ಷಕೆ ಗಂಧಮಾದನ ಶೈಲಾಗ್ರದೊಳಗುದಿಸಿದ ಶಿವಲಿಂಗದಭಿಷೇಕತೀರ್ಥವೆ। ಉಜ್ಜೀವಕವಾಗಿ। ಹಿರಣ್ಯರೇತನೆಂಬ। ರುದ್ರನಾಜಂಬೂವೃಕ್ಷಕ್ಕಭಿಮಾನಿಯಾಗೆ। ಪಾಲಿಸುತಿರ್ಪ್ಪಂ ॥

## ನಂದಾನದಿ.

ಮತ್ತಮಾಮಂದರಗಿರಿಯ ಮೂಲದಲ್ಲಿ ನಂದಿಯೆಂಬ ಮಹಾನದಿಯುಂ ಉತ್ತರಕೈಲಾಸ ಪ್ರಾಂತೋಪಾಶ್ರಿತಮಪ್ಪ। ಕುಬೇರಾದಿಗಳಕ್ರೀಡಾರ್ಥಮಾದ ಚೈತ್ರರಥಬನಮುಂ। ಹೇಮಾಬ್ಜಮಂಡಿತಮಾದರುಣೋದಯೆಮೆಂಬ ಕಾಸಾರಮುಂ। ಸುರಾರ್ಚ್ಚಿತಮಾದ ತತ್ಪುರುಷನಾಮತಲಿಂಗಕ್ಷೇತ್ರಮುಂ ಕಂಗೊಳಿಸುತಿರ್ಪ್ಪಂ ॥

## ಭದ್ರಾನದಿ.

ಮತ್ತಮಾ। ಗಂಧಮಾದನಗಿರಿಯಲ್ಲಿ। ಭದ್ರೆಯೆಂಬನದಿಯು। ಗಂಧರ್ವಾದಿಗಳಿಂ ಸೇವ್ಯಮಾದ। ನಂದನವೆಂಬವನಮುಂ। ಮನೋಹರಮಾದ ಮಾನಸವೆಂಬ ಸರೋವರಮುಂ। ಅಮರಾರ್ಚಿತಮಾದ ಅಘೋರನಾಮಕಲಿಂಗಕ್ಷೇತ್ರಮುಂ। ಬಳಸಿಮೆರದಿರ್ಪುವಂ ॥

## ಸುರಭಿನದಿ.

ಮತ್ತಮಾ ವಿಪುಳಾದ್ರಿಯಧೋಭಾಗದಲ್ಲಿ।ಸುರಭಿಯೆಂಬನದಿಯುಂ।ಸು

ರಸಂಗತಿಗಾಸ್ಪದವಾದ। ವೈಭ್ರಾಜವೆಂಬವನವುಂ। ಅರ್ಕರಶ್ಮಿ। ಪ್ರತೀಕಾಶವಾದಕಂಜರಂಜಿತವುಪ್ಪ।ಸಿತೋದಕವೆಂಬ ಸರೋವರವುಂ।ದೇವಾರ್ಚಿತವಾದಸದ್ಯೋಜಾತನಾಮಕಲಿಂಗಕ್ಷೇತ್ರವುಂ। ಪರಿಶೋಭಿಸುತ್ತಿರ್ಕ್ಕುಂ ॥

ಸುಮನೋನದಿ.

ಮತ್ತಮಾ ಸುಪಾರ್ಶ್ವ ಶಿಖರಿಯಮೊದಲೊಳ್ । ಸುಮನೆಯೆಂಬನದಿಯು। ಪಿತೃಗಳಿಂ। ಸೇವ್ಯವಾದ। ಧೃತಿಮತ್ತೆಂಬವನವುಂ । ಸುಗಂಧಕಮಲಾಲಂಕೃತವುಪ್ಪ। ಭದ್ರಕವೆಂಬಕೊಳನಂ ವಿಬುಧಾರ್ಚಿತವಾದ।ವಾಮದೇವನಾಮಕಲಿಂಗಕ್ಷೇತ್ರಮುಂ ಅಲಂಕರಿಸುತ್ತಿರ್ಕ್ಕುಂ ॥

ದೇವವನಾದಿಗಳು.

ಮತ್ತಮಾ ಚೈತ್ರವನಾದಿ ನಾಲ್ಕುವನಗಳಮಧ್ಯದಲ್ಲಿಯುಂ। ನಾನಾರತ್ನರಂಜಿತಗಳಾದ ಕ್ರೀಡಾಶೈಲಂಗಳೊಂದೊಂದಿರ್ಪವದರಂಬಳಿಸಿ। ದೇವತೆಗಳ ಕ್ರೀಡಾಯೋಗ್ಯಂಗಳಾದ ಅಮೂಲ್ಯವಸ್ತುಗಳುಂ । ಅನನ್ಯಸಾಧಾರಣವಾಗಿಯೂ ಪುಣ್ಯವಾತ್ರ ಲಭ್ಯಗಳಾಗಿಯೂ ಇಂದ್ರಿಯ ಸಂತರ್ಪಕಗಳಾಗಿಯೂ ಶಿವಪ್ರಸಾದ ಸಿದ್ಧಗಳಾಗಿಯೂ ಅಕ್ಷೀಣಗುಣ ಮಹಿತಗಳಾಗಿಯೂ ಹೊಳವವಸ್ತುವಿಗಳನೇಕಹುದವುಗಳೊಳು ॥

ಕಲ್ಪವೃಕ್ಷಗಳು.

ಮತ್ತಮಾದೇವಾಪ್ಸರೋ। ಗಂಧರ್ವ। ಕರ್ಮದೇವರ್ಷಿ।ದೇವಪಾಲಪ್ರಮುಖರಾದ। ಶಿವಪ್ರಸಾದಿಗಳೆಲ್ಲರಿಗುಂ। ಬಯಸಿದೊಡವೆಗಳಂ । ಯೋಚಿಸಿದೆಣಿಕೆಗಳಂ। ಕಾಮಿಸಿದಕಾಂಕ್ಷಿತಂಗಳಂ। ಪ್ರತ್ಯಕ್ಷವಾಗಿ ಕೈಗೂಡಿಸಲು।ಅಪ್ರತಿಹತವಾದ। ದಾತೃತ್ವಶಕ್ತಿಯುಕ್ತವಾಗಿ। ಪಂಚಬ್ರಹ್ಮಶಿವಮಂತ್ರಾಕ್ಷರಪ್ರಸಾದಸವೀರ್ಯವಾದ। ಮಂದಾರ। ಪಾರಿಜಾತ। ಸಂತಾನ। ಕಲ್ಪ। ಹರಿಚಂದನಗಳೆಂಬವೆಸರಿನಿಂ।ಪ್ರಸಿದ್ಧವಾದ। ಕಲ್ಪವೃಕ್ಷಪಂಚಕಮಿಪ್ಪುದು॥

ಕಾಮಧೇನು.

ಬಳಿಕಿಲ್ಲಿ। ಸತ್ಯಧರ್ಮಸ್ವರೂಪವಾದ। ಶಿವವೃಷಭದಲೀಲಾಮೂರ್ತಿಯೆನಿಸಿ। ಶರೀರಧಾರಿಣಿಯಾದ। ದಯಾರಸದಂತೆ। ಶಾಂತಿಕ್ಷಮಾದಿ ಸದ್ಗುಣಗಳಗೆ। ಪ್ರಾಣಕಲೆಯಾಗಿ।ಅಮೃತರಸಕಾಧಾರಮೆನಿಸಿ। ಕ್ಷುತ್ಪಿಪಾಸಾದಿ ಸಂಹಾರಿಣಿಯಾಗಿ। ಅನ್ನಪೂರ್ಣಾದೇವಿಯ ಪ್ರಸಾದರೂಪಿಣಿಯಂತೆ। ಜಗದ್ಧಾತ್ರಿಯಾದಧರಣಿಗೆ । ವಿವರ್ತವಾಗಿ। ಪುಣ್ಯರಾಶಿಗಳು। ಪುಂಜೀಭೂತವಾಗಿ। ಶಿವಾರಾಧನೆಗೆ। ಸಹಾಯವಾಗಿ। ಯಜ್ಞಗಳಿಗುಜ್ಜೀವಕವಾಗಿ

ಪಾರಿಶುಧ್ಯಕ್ಕೆಪರಾಕಾಷ್ಠೆಯೆನಿಸಿ। ತಪಸ್ಸಿದ್ಧರಿಗೆ। ಮೂಲಧನವಾಗಿ।ವೇದಗಣಕ್ಕೆ। ಜೀವಾಳವೆಂದು। ಸರ್ವದೇವತಾಕಲೆಗಳಿಂ ದೊಡಗೂಡಿದ ಶೃಂಗಪುಚ್ಛಾದ್ಯವಯವಗಳಿಂ। ಸರ್ವಾಲಂಕರಣಸಂಪನ್ನವಾಗಿ । ಶಿವಧರ್ಮವೆಂಬಾಹಾರದಿಂ। ನಿತ್ಯತೃಪ್ತವಾದ। ಕಾಮಧೇನುವೆಂಬಾಕಳು।ನಂದಿನೀಮೊದಲಾದಪರಿವಾರದಿಂದೊಡಗೂಡಿ। ಇಷ್ಟಪ್ರದಾನದಿಂ। ಸರ್ವಸಮುಪಾಸ್ಯವಾಗಿ ವೇದಸ್ತುತವಕ್ಕು ॥

ಚಿಂತಾಮಣ್ಯಾದಿರತ್ನಗಳು.

ಬಳಿಕಲ್ಲಿ। ಕಾಮ್ಯಲಿಂಗಾರ್ಚನೆಯೆಂಬ। ಚಿಂತಾಮಣಿಮಯ ಶಿವಲಿಂಗ ಪೂಜಾಪುಣ್ಯದಿಂದ। ತನ್ನಬಳಿಗೈದಿದವರ್ಗೆ ಚಿಂತಾಯುಕ್ತವಾಗಿ। ಕಾಮ್ಯಂಗಳನೀಯಲುಳ್ಳ। ಇಂದ್ರಾದಿದೇವರ್ಕಳಿಗೆ। ಶಿವಪ್ರಸಾದಲಬ್ಧವಾದ।ಚಿಂತಾಮಣಿಯೆಂಬ। ಮಹಾಜೀವರತ್ನವು। ಮತ್ತು। ತನ್ನಂಸ್ಪರ್ಶಗೊಂಡವರ್ಗೆ ನಕ್ಷತ್ರಗಳಂತೆ। ಚಿರಕಾಲಂ ಬೆಳಗಲುಳ್ಳ। ಕಾಂತಿಪ್ರದವಾದಜ್ಯೋತಿರ್ಮಣಿ। ತನ್ನಸ್ಪರ್ಶಮಾತ್ರದಿಂದ್ವಾದಶಯೋಜನಂಗಳು । ಪ್ರಸರಿಸುವಂತೆ ದಿವ್ಯಪರಿಮಳವೀವಗಂಧಮಣಿ ತನ್ನಂಸೋಂಕಿದ ಲೋಹಾದಿಗಳನ್ನೆಲ್ಲಸುವರ್ಣಮಯವಾಗಿ। ಮಾಳ್ಪರ್ಶಮಣಿ।ತನ್ನಂನೋಡಿದಮಾತ್ರದೊಳಮೃತಾಂಜನವೆಚ್ಚಿದಂತೆ। ನೇತ್ರಾನಂದಕರವಾದದರ್ಶನಮಣಿ। ತನ್ನಂಧರಿಸಿದಮಾತ್ರದಿಂ ಕ್ಷುತ್ಪಿಪಾಸೆಗಳಿಲ್ಲದ ಅಮೃತಮಣಿ।ತನ್ನಂಸೇವಿಸಿದಮಾತ್ರದಿಂದುಃಖನಿವೃತ್ತಿಯಪ್ಪಆನಂದಮಣಿ। ತನ್ನಂಅಭಿಷೇಕಗೊಳಿಸಿದತೀರ್ಥಸೇವನದಿಂ ರೋಗನಿವರ್ತಕಮಪ್ಪ ಆರೋಗ್ಯಮಣಿ।ತನ್ನಂಸ್ಮರಿಸುವರ್ಗೆನಾಸ್ತಿಕ್ಯಮಂಪೋಗೊಳಿಸಿ ಶಿವಜ್ಞಾನಮಂಕೊಡುವಜ್ಞಾನಮಣಿಮತ್ತ। ಮರುಜವಣಿ ಪರುಷಕಣಿ, ಸಂಜಾವಣಿ, ಸಿದ್ಧರಸ, ಸಂಜೀವನ ಸಂತೋಷಣ, ದಿವ್ಯಾಂಜನ, ರಸಾಯನ, ಅಮೃತಫಲ, ಸುಕಬೀಜ, ಸಿದ್ಧಲೀಪಾದಿಸುವಸ್ತುಗಳನೇಕವಾಗಿ, ಅಲ್ಲಿಯೆಉ, ಶಿವಭಕ್ತರಿಗೆ, ಸುಕೃತಾನುರೂಪದಿಂದಾನಂದಕರಗಳಾಗಿರ್ಕುಂ ॥

ಅಮೃತಸರೋವರಾದಿಗಳು.

ಮತ್ತಮಾಪ್ರಾಂತಗಳೊಳಗಮೃತರಸಮಯವಾದ ॥ ಅಕ್ಷೀಣವಾಪೀಕೂಪತಟಾಕನದ ನದೀನಿರ್ಜರಹ್ರದಕುಲ್ಯಾನಿಪಾನಧರಾಯೆಂತ್ಯಾದಿ ಜಲಾಧಾರಂಗಳುಂ ಕಮಲಕುಶೇಶಯಕುಮುದಕಲ್ಹಾರಹಲ್ಲಕೋತ್ಪಲತಲ್ಲ ಜಾತಿಸುರಭಿವಿಕಚಕುಸುಮರಾಜಿಗಳು। ವಿಚಿತ್ರತರಮರಂಜುಳ ಕಾಂತಿಕಾಂ

ತಕಲ ಮಧುರಕೂಜಚ್ಚಕೋರಚಕ್ರವಾಕ ಬಕಧಾರ್ತರಾಷ್ಟ್ರ ಹಂಸರಾಜ ಹಂಸಾದಿನೀರ್ವಕ್ಕಿಗಳುಂ । ಅಚ್ಛಸ್ಫಟಿಕದರ್ಪಣಸುವರ್ಣ ಸುವರ್ಣರತ್ನ ಕುಟ್ಟಿಮರಮ್ಯ ಸೋಪಾನ ಸೇತುವೇದಿನಿ ಶ್ರೇಣಿಕಾಸ್ತರಣ ಮಂಚಪೀಠಾದಿಗಳುಂ ಮನೋಹರಂಗಳಾಗಿರ್ಕುಂ ॥

## ದೇವಾರಾಮ ವೃಕ್ಷಾದಿಗಳು.

ಮತ್ತಮಾದೇವರ್ಕಳಿಗೆವಿಹಾರಶರಣಮಾಗೆ । ಸಾರ್ವಕಾಲಿಕಸುಧಾರಸಸಂಸಿಕ್ತಮೂಲಬಲಪ್ರವೃದ್ಧಗಳಾಗಿ । ರಸಭರಿತಭವ್ಯಫಲಭಾರಭಂಗುರತ್ವದಿಂ, ನಿಜಪರಿಮಳಪರೀಮೋದಮೇದುರಪವನಪ್ರಕಾರ । ಸಂವಾಸಿತದಿಗಂತಪುಷ್ಪಗುಚ್ಛಪ್ರಚಯಗಳಿಂ। ತರುಣಾರುಣಾರುಣ । ಶುಕಪಕ್ಷಪೀತ। ಶಿಖಿಪಿಂಛಚಿತ್ರವೈಡೂರ್ಯವಿಶದ। ಹರಿನೀಲನೀಲ । ಪಲ್ಲವಪುಟಪರಿಶೋಭಿತತ್ವದಿಂ। ದರ್ಶನೀಯಮಾಗಿ। ನಯನಾಸೇಚನಕಮಾದತರುವಾಟಗಳಿಂದೆಸೆವ ನಂದನಾದ್ಯಾರಾಮಂಗಳೊಳು ಜಾಜಿಮಲ್ಲಿಗೆ, ಪಾರಿಜಾತ, ಸಂಪಿಗೆ ಸುರಗಿ, ಪುನ್ನಾಗಾದಿ ಪುಷ್ಪಜಾತಿಗಳುಂ ಇಕ್ಷು, ಧವಳೇಕ್ಷು, ಪುಂಡ್ರೇಕ್ಷು, ರಸೇಕ್ಷು, ಬಾಳೆ, ರಸಬಾಳೆ, ಚಿರುಬಾಳೆ, ತನಿಬಾಳೆ, ಕೆಂಬಾಳೆ, ಹೊಂಬಾಳೆ, ಯಾಲಕ್ಕಿಬಾಳೆ, ಕರ್ಪೂರಬಾಳೆ, ತೆಂಗು, ಕೆಂದೆಂಗು, ಹಲಸು, ಚಿಟ್ಟಲಸು, ರುದ್ರಾಕ್ಷಹಲಸು, ನೆಲಹಲಸು, ಬಕ್ಕೆಮಳಸು ನೇರಳೆ, ಬಲುನೇರಳೆ, ನಿಂಬು, ಗಜನಿಂಬು, ಮಧುರದಾಡಿಮ, ಅಮ್ಲದಾಡಿಮ, ಜಟುಖರ್ಜೂರ, ಉತ್ತುತ್ತೆ, ಬೇಲ, ಕಿತ್ತಳೆ, ಕಿರುಕಿತ್ತಳೆ, ಚಕ್ಕೋತ್ತ, ಮಾದಳ, ದ್ರಾಕ್ಷೆ, ಗುಚ್ಛದ್ರಾಕ್ಷೆ, ಸೀಬಿ, ಪನ್ನೇರಳೆ, ದೇವತ್ತಿ, ಬದರ, ಮಾವು, ಶೀಮಾವು, ತನಿಮಾವು, ಗಿಣಿಮಾವು, ನೆಲ್ಲಿ, ಕಿರುನೆಲ್ಲಿ, ಮೊದಲಾದ।ರಸ್ಯ, ಸುಖಾರ್ಹ, ಸಾರ್ವರ್ತುಕಮಾದಫಲಂಗಳುಳ್ಳತರುನಿಕರಂಗಳುಂ । ರುದ್ರಾಕ್ಷ, ಭದ್ರಾಕ್ಷ, ಗುಂಜಾ, ಶಿರೀಷಾದಿ, ಲತಾಗೃಹಂಗಳುಂ, ನವರತ್ನಸೈಕತಪುಳಿನಂಗಳುಂ। ಯಲಿಬಳ್ಳಿಮುಂತಾದಹಬ್ಬುಗೆಗಳಿಂ। ವರ್ತುಳಶ್ರೇಣಿ, ವನವಾಟಚಕ್ರಾವರ್ತ, ತೋಪುಸಾಲು, ಗೋಪುರಚಿತ್ರನರ್ತನವಾಟ, ಗಾನವಾಟ, ಕ್ರೀಡಾರಾಜ, ಚಿತ್ರವ್ಯೂಹ, ಕೋಣಕ್ರಮದಳೆಂಬಹನ್ನೊಂದುವೃಕ್ಷ ಸನ್ನಿವೇಶಗಳುಂ, ನಂದನೀಯಗಳಾಗಿರ್ಕುಂ ॥

## ದೋಹಳವೃಕ್ಷಾದಿಜಾತಿಗಳು.

ಬಳಿಕಲ್ಲಿ। ಪ್ರೌಢೆಯರಾದವನಿತೆಯರೊದೆದೊಡೆ । ಮೇಲುಗಿದೊಡೆ । ಸೋಂಕಿದೊಡೆ। ನಕ್ಕರೆ, ನೋಡಿದೊಡೆ, ಆಲಂಗಿಸಿದೊಡೆ, ನುಡಿದೊಡೆ,

ಉಸುರುಸೋಂಕಿದೊಡೆ, ಪಾಡಿದೊಡೆ, ಮುಖಪ್ರಸನ್ನತೆಕಂಡರೆ। ಕ್ರಮದಿಂಕುಸುಮಿತಂಗಳಪ್ಪ। ಅಶೋಕ, ಮಕುಳ, ಚೂತ, ಸುರಹೊನ್ನೆ, ತಿಲಕ, ಕುರವಕ, ಕರ್ಣಿಕಾರ, ಸಿಂಧುವಾರ, ಪ್ರಿಯಾಳು, ಚಂಪಕಂಗಳೆಂಬ ದಶದೋಹಳವೃಕ್ಷಜಾತಿಗಳುಂ। ಅಂಕುರ, ಪಲ್ಲವ, ದಳ, ಜೋರಕ, ಕುಸುಮ, ಶಲಾಟು, ಫಲ, ಪಕ್ವಫಲಗಳಪಂಕ್ತಿಗಳುಂ। ಸಕಲರೋಗಹರಂಗಳಾಗಿ। ಷಡ್ರಸಪ್ರಧಾನಗಳೊಳಗೆ ಕೈಕರಸಮುಖ್ಯಂಗಳಾಗಿ। ರೂಪದಿಂಕೆಲವು ಆಕೃತಿಯಿಂಕೆಲವು, ರಸದಿಂಕೆಲವು, ವಾಸನೆಯಿಂಕೆಲವು, ಸ್ಪರ್ಶದಿಂಕೆಲವು, ಸಾಮೀಪ್ಯದಿಂಕೆಲವು ಆವಶ್ಯಕಂ ಳೆಂದೆನಿಸಿದ।ಕಂದವಿಶೇಷಂಗಳು ಮೂಲಿಕಾವಿಶೇಷಂಗಳುಂ ತ್ವಕ್ಕು। ಹಾಲು, ನಿರ್ಯಾಸ, ಚಕ್ಕೆ, ಕೇಸರ. ನಾರುಗಳಿಂಮುಖ್ಯಗಳಾಗಿ।ಪ್ರಯೋಜಕಂಗಳಾದರುಂ।ತತ್ತದ್ಗುಣ ವತ್ಯುತ್ಕಟವಾಗಿ ವಿರೋಧಗೊಳಲುಶಾಂತಿಸಂಪಾದಕಮಪ್ಪಂತೆ ಭಿನ್ನಭಿನ್ನಗುಣದೋಷಶಕ್ತಿಗಳಿಂ ದೊಡಗೂಡಿದ ಶಾಕಾದ್ಯುದ್ಭಿಜ್ಜಜಾತಿಗಳುಂ ಕ್ರೂರಜಂತುವಿಷವಾತದಹನ ವಜ್ರಘಾತಾದಿಪ್ರತಿಬಂಧಕಂಗಳಾ ದೋಷಧಿವಿಶೇಷಂಗಳುಂಕಂಗೊಳಸುತಿರ್ಕುಂ ॥

ಪಕ್ಷಿವಿಶೇಷಂಗಳು.

ಮತ್ತಮಾವನಂಗಳೊಳು।ಶುಕ, ಪಿಕ, ಕೇಕಿ, ಮಧುಕರ, ಕಪೋತ, ಶಾರಿವಾಳ, ಗೀಜುಗ, ಸೊಂಗೆ, ಬೈರಗೆ, ಲಾವುಕ, ಟಿಟ್ಟಿಭ, ಗಾಯುಕ, ಗಿಡಗ ರುಕ್ಮಕ, ವಾಸಕಮೊದಲಾದ ಚಿತ್ರರೂಪಶಕ್ತಿಗಳುಳ್ಳಪಕ್ಷಿಕುಲಂಗಳುಂ ತತ್ತತ್ಕಾರ್ಯಗಳಾದಹಾಡುವ, ಕುಣಿವ, ಸೂಚಿಸುವ, ಯೆಚ್ಚರಿಸುವ, ಧ್ವನಿಗೈವ, ಕರೆಯುವ, ಕೂಹಕಗೊಳ್ಳುವ, ಅಣಕಿಸುವ, ಹಾಸ್ಯಗೊಳ್ಳುವ। ಅನುಕರಿಸುವ, ಕೆಲಸಗೈವ, ತರುವ, ಇಡುವ, ಹುಡುಕುವ, ಕೊರೆವ, ಮುಚ್ಚುವ, ಪರೀಕ್ಷಿಸುವ, ರಚನೆಗೈವ, ಚಾತುರ್ಯಗಳುಂ, ಪರಮೇಶ್ವರಸೃಷ್ಟಿಯೊಳು ಜೀವಬುದ್ಧಿವಿಶೇಷವೈಲಕ್ಷಣ್ಯಕ್ಕೆ ನಿದರ್ಶನಗಳಾಗಿರ್ಕುಂ ॥

ಮೃಗವಿಶೇಷಂಗಳು.

ಬಳಿಕಲ್ಲಿ ಕಸ್ತೂರಿಮೃಗ, ಚಮರೀಮೃಗ, ಪುರುಷಮೃಗ, ಸುವರ್ಣಮೃಗ, ಚಿತ್ರಮೃಗ, ಕೃಷ್ಣಮೃಗ, ವೇದಮೃಗ, ಸಿದ್ಧಿಮೃಗಾದಿ, ದೇವಾರ್ಹ, ರಾಜಾರ್ಹ, ಶಾಸ್ತ್ರೀಯ, ಸಾಧು, ಪವಿತ್ರಮೃಗಜಾತಿಗಳುಂ।ಮಿಕ್ಕುಳಿದಚರಾಚರಂಗಳೊಳು ಶ್ರೇಷ್ಠವಸ್ತುಗಳೆಲ್ಲವುಂ ಕರ್ಮದೇವರ್ಕಳಿಗುಂ ಸಿದ್ಧರಿಗುಂ ವಿಲಾಸಹೇತುಗಳಾಗಿರ್ಕುಂ ॥

ದೇವಸುಖಸಾಧನಂಗಳು.

ಮತ್ತಮಲ್ಲಿರ್ಪಸಕಲವಸ್ತುಗಳುಂ। ಪಾಪಿಗಳಿಗೆದುರ್ಲಭಂಗಳಾಗಿ।ಶಿವಲೀಲಾವಿಭೂತ್ಯಂಶಾಂಶಯೋಗದಿಂ। ಮಹೋತ್ತಮಂಗಳೆನಿಸಿ।ತತ್ತಭಿಮಾನದೇವತಾವಿಶೇಷಂಗಳಿಂ। ಶಿವಧರ್ಮನಿಯಂತ್ರಿತಗಳಾಗಿ।ಗುಣಶಕ್ತ್ಯುತ್ಕರ್ಷದಿಂ।ಸುಖೋತ್ತರವಾಗಿರಲ್ಕೆ।ಯಾವದೊಂದಿಂದ್ರಿಯಮುಂ।ವಿಷಯಭೋಗದೊಳುದರಿದ್ರವಾಗದೆ । ವಿಷಯಾಧಿಕ್ಯದಿಂದೋಷಂಗಳುದಿಸದಂತೆ ಅಮೃತಾಸವಾದಿಬಲಯುಕ್ತವಾಗಿ। ರುತುಧರ್ಮಂಗಳಸಹ್ಯವಾಗದೆ।ಶೈತ್ಯಸೌರಭ್ಯಮಾಂದ್ಯವೆಂಬ। ತ್ರಿವಿಧಮದಸಮೃದ್ಧವಾದ।ಪನ್ನೀರು।ಲಾಮಂಚ, ಅಗರು, ಕೃಷ್ಣಾಗರು, ಧೂಪ, ಶ್ರೀಗಂಧ, ಪುಷ್ಪವೃಷ್ಟಿ, ದಿವ್ಯಮಾಲ, ಪರಿಮಳ, ಮೃಗ, ಕರ್ಪೂರವೃಕ್ಷ, ಹಿಮಾದಿಸಂಕಪರ್ಕದಿಂರಮ್ಯವಾದ ಮಂದಮಾರುತಸ್ಪರ್ಶನದಿಂದಪೇಕ್ಷಣೀಯಮಾಗಿರ್ಕುಂ॥

ದೇವಕ್ರೀಡೆ.

ಮತ್ತಮಾವನಂಗಳಲ್ಲಿ। ಚಿತ್ರಶಾಲೆ। ಚಂದ್ರಶಾಲೆ।ಶಿಶಿರಶಾಲೆ।ಸುರಭಿಶಾಲೆಪ್ರಪೆ। ನರ್ತನಶಾಲೆ। ಗಾನಶಾಲೆ। ಕ್ರಿಡಾಶಾಲೆ। ಭೋಜನಶಾಲೆ । ಮಜ್ಜನಶಾಲೆ। ವಿವಿಧವಸ್ತುಶಾಲೆ। ರತ್ನಶಾಲೆ, ಸುಂದರಶಾಲೆ। ಸಂಕೇತಸ್ಥಾನ। ಲತಾಮಂಟಪ। ದರ್ಪಣಮಂಟಪ। ಪಟಮಂಟಪ। ಪುಷ್ಪಮಂಟಪ, ಚಿತ್ರಮಂಟಪ ರತ್ನಮಂಟಪ ತರುವಾಟಿಗಳ ತನ್ನಳಲ್ಗಳೊಳಗೆಯುಂ ಹಂಸತೂಲತಲ್ಪಂಗಳಲ್ಲಿಯುಂ ಚಿತ್ರತರಶಯನಂಗಳಲ್ಲಿಯುಂ ಪಳುಕಿನಹಾಸರೆ ಶಶಿಕಾಂತವೇದಿಕೆ ಹುವ್ವಿನಹಾಸಿಗೆ ತೆರಳಹಸೆ ಬಳ್ಳಿಗಳುಯ್ಯಾಲೆ।ಪ್ರಳಿನಸ್ಥಳಂಗಳಲ್ಲಿಯುಂ ತಿಳಿಗೊಳನತೀರಂಗಳಲ್ಲಿ ಕೃತಕಾಶ್ರಯಂಗಳಲ್ಲಿಯುಂ ನೆರದು ಪೆರದು ಬೇರೆಬೇರೆವಸ್ತ್ರಾಭರಣಗಂಧಮಾಲ್ಯಾದಿಗಳಿಂ ರಲಂಕೃತರಾಗಿ ಗಾಡಿಯಿಂಗಮಕದಿಂ ಸೊಬಗುವೆತ್ತು ನೀಟೊಲಿದು ಮದನವಿಲಾಸದಿಂ ಸಂಚರಿಸುತಿರ್ಪ ವಿದ್ಯಾಧರ ಅಪ್ಸರ ಯಕ್ಷ ರಕ್ಷಸ್ಸು ಗಂಧರ್ವ ಕಿನ್ನರ ಕಿಂಪುರುಷ, ಪಿಶಾಚ, ಗುಹ್ಯಕ, ಸಿದ್ಧ, ಮಾಯಿ ಸ್ವಜ, ಕರ್ಮಿಗಳೆಂಬಾದಿಯಾದ ದೇವಯೋನಿವಿಶೇಷಂಗರೆಲ್ಲರುಂ ಸತಿಪುರುಷರೊಡಗೂಡುತ ಕ್ರೀಡಿಸುಮಲ್ಲಿ ಸಕಲಸುರಶ್ರೇಷ್ಠರುಗಳಲ್ಲಿಕೊನಬುಗಳಾದ ಮಕರಧ್ವಜ ನಳಕೂಬರ ಜಯಂತ ಅನಿರುದ್ಧ ಕೂಚಿಮಾರ ಪಾಂಚಾಲ ಪಲ್ಲವ ಪ್ರಮೀಣಾದಿದೇವವಿಟರುಂ ರಂಭೆ ಊರ್ವಶಿ ತಿಲೋತ್ತಮೆ ಚಿತ್ರಲೇಖೆ ಮಂಜುಘೋಷೆ ಮೇನಕೆ ಸುಕೇಶಿ ಘೃತಾಚಿಮೊದಲಾದ ದೇವಗಣಿಕೆಯರುಂ

ಗಾನಸಾಧನ ಭೋಗಸಾಧನ ಅಲಂಕರಣ ಪರಿಷ್ಕರಣ ಸಾಮಗ್ರಿಗಳಿಂ ಸಂಗೀತಸಾಹಿತ್ಯಾದಿ ವಿದ್ಯಾಗೋಷ್ಠಿಗಳಿಂ ಕ್ರೀಡಾಬಂಧ ರತಿಬಂಧಾದಿಗಳಿಂ ಮಲ್ಲಯುದ್ಧಲೀಲಾಯುದ್ಧಾದಿ ವಿಹಾರಗಳಿಂ ಚತುರಂಗಕಂತುಕದ್ಯೂತಾದಿಖೇಲನಗಳಿಂ ಜಲಕ್ರೀಡೆವನಕ್ರೀಡೆ ಗೇಹಕ್ರೀಡೆ ರಾಸಕ್ರೀಡೆ ವ್ಯೂಹಕ್ರೀಡೆ ಮೊದಲಾದ ಸುಖವ್ಯಾಪಾರಂಗಳಿಂ ಪುಷ್ಪಗಂಧ ತಾಂಬೂಲಾದ್ಯುಪಹಾರಂಗಳಿಂ ಆಲಿಂಗನಚುಂಬನಾದಿ ಚೇಷ್ಟಾವಿಶೇಷಂಗಳಿಂ ರಮಿಸುತ್ತ ದಿವ್ಯನದಿಗಳಲ್ಲಿ ಮಿಂದುಶುಚಿಯಾಗುತ್ತ ಅವರವರಿಗಿಷ್ಟಾರ್ಥಮಂ ಕೊಡಲಲ್ಲಿ ಸಾನ್ನಿಧ್ಯಗೊಂಡಿರ್ಪ ಶಿವಲಿಂಗಶಕ್ತಿವಿಗ್ರಹಾದಿಗಳಂ ಆರಾಧಿಸಿ ಶಿವಧರ್ಮಬಲದಿಂ ಸಂತುಷ್ಟರಾಗಿ ಪ್ರವರ್ಧಮಾನರಕ್ಕುಂ ||

## ಕೇಸರಾಚಲಂಗಗಳು.

ಅನಂತರದೊಳಾ ಮೇರುವಿನ ಪೂರ್ವಾದಿ ನಾಲ್ಕು ದಿಕ್ಕುಗಳೊಳಗಿರುವ ಮಂದರಾದಿ ಕೀಲಕಪರ್ವತಗಳ ಮಧ್ಯದಲ್ಲಿ ಕೇಸರಾಚಲಂಗಳಿರ್ಪವನಾವಾವವೆಂದೊಡೆ ಸಿತಾಂತ ಚಾರುಕುಂದ ಮಾಲ್ಯವಂತ ವೈಕಂಕತವೆಂಬೈದು ನಗಂಗಳೀಮೂಡಣಮಂದರಗಿರಿಯು ಟಂಕಣ ಗಂಧಮಾದನಶೈಲದಮಧ್ಯಭಾಗದಲ್ಲಿರುವವು ತ್ರಿಕೂಟ ಕುರನಿಂದ ಪತಂಗರುಚಕ ನಿಷಧವೆಂಬೈದು ಗಿರಿಗಳೀಟಂಕಣಗಂಧಮಾದನಶೈಲದ ಪಡುವಲವಿಪುಲಾದ್ರಿಯು ಮಧ್ಯಭಾಗದೊಳಗಿಹವು ಶಿಖಿವಾಹನ ವೈಡೂರ್ಯಕಪಿಲ ಉಪಗಂಧಮಾದನ ಚಾರುಧಿಯೆಂಬೈದುಬೆಟ್ಟಂಗಳೀ ಪಶ್ಚಿಮವಿಪುಲಾದ್ರಿಯು ಉತ್ತರಸುಪಾರ್ಶ್ವಗಿರಿಯು ಅಂತರಾಳದಲ್ಲಿಹವು ಶಂಕಕೂಟ ವೃಷಭ ಹಂಸ ಕಾಲಾಂಜನ ಶಿಖರಿಯೆಂಬೈದುಗಿರಿಗಳೀ ಉತ್ತರಸುಪಾರ್ಶ್ವಧರದ ಮೂಡಲಮಂದರಶೈಲದ ಮಧ್ಯದಲ್ಲಿಹವು ಇಂತಿಪ್ಪತ್ತುಕೇಸರಾಚಲಂಗಳೊಳಗೊಂದೊಂದಾರುಸಾವಿರಯೋಜನದುದ್ದಂಗಳೆನಿಸಿ ಸಮಸ್ತಸುರಸಂತತಿಗಾಶ್ರಯಗಳಾಗಿರ್ಕ್ಕುಂ||

## ಉತ್ತರಸೀಮಾಪರ್ವತತ್ರಯ.

ಅನಂತರದೊಳೀಪ್ರಕಾರಮಾದ ವಿಚಿತ್ರರಚನೆಯುಳ್ಳ ಮಹಾಮೇರುವಂ ಬಳಸಿರ್ದನವಖಂಡವಿಚಾರವಂ ಮಾಡಲುಸೀಮಾಪರ್ವತಗಳಂತೆನೆ ಮೇರುನುತ್ತರದಿಕ್ಕಿನಲ್ಲಿ ನೀಲ ಶ್ವೇತ ಶೃಂಗಗಳೆಂಬ ಸೀಮಾಗಿರಿತ್ರಯಮದರೊಳೊಂದೊಂದು ದ್ವಿಸಹಸ್ರಯೋಜನೋನ್ನತಮೆನಿಸಿ ನವಸಹಸ್ರಯೋಜನಾಂತರಾಳಮುಳ್ಳದ್ದಾಗಿ ಪೂರ್ವಪಶ್ಚಿಮಲವಣಾಬ್ಧಿಗಳ ಪರ್ಯಂತಮುಂ ನೀಲವಾಗಿರ್ಪವಾಮೂರುಪರ್ವತಂಗಳಮೇಲೆ ನಾನಾವರ್ಣವೃ

ಷುಗಳುಂಟಲ್ಲಿ ಕ್ರಮದಿಂ ದೇವ ಮಹೇಶ್ವರ ರುದ್ರ ನಾಮಧೇಯಂಗಳಿಂ ಪ್ರಸಿದ್ಧಂಗಳಾದ ಶಿವಲಿಂಗಂಗಳ ನಿರ್ಜರರೋಲೈಸುತಿರ್ಪರು ॥

ದಕ್ಷಿಣಸೀಮಾಗಿರಿತ್ರಯಂ.

ಮತ್ತಮಾಮೇರುವಿನದಕ್ಷಿಣಭಾಗದಲ್ಲಿ ನಿಷಧ ಹೇಮಕೂಟ ಮಹೇಂದ್ರಗಳೆಂಬ ಸೀಮಾಪರ್ವತತ್ರಯ ಮುಂಟಾನೀಲಾದಿಗಿರಿಗಳಿಂ ಯೋಜನ ಪರಿಮಾಣತುಲ್ಯಮಾದ ವಿಶಾಲೋನ್ನತಾಂತರಾಳಂಗಳೆಸೆವಗಿರಿಗಳ ಮೇಲೆ ಈಶಾನ ಈಶ್ವರ ಪಾರ್ವತೀಪತಿಗಳೆಂಬ ಮೂರುಶಿವಲಿಂಗಂಗಳಂ ದೇವರ್ಕಳಾರಾಧಿಸುತಿರ್ಪರಾಮಹೇಂದ್ರಗಿರಿಯೇ ಶಿವಾಚಲಮಕ್ಕುಂ ॥

ಪಶ್ಚಿಮಸೀಮಾನಗದ್ವಯಂ.

ಮತ್ತಮಾ ಮೇರುವಿನಪಶ್ಚಿಮದಿಕ್ಕಿನಲ್ಲಿ ಕ್ರಮದಿಂದೊಂದು ಸಹಸ್ರ ಯೋಜನಾಂತರದೊಳು ಮಾಲ್ಯವಂತ ಗಂಧಮಾದನವೆಂಬ ಸೀಮಾನಗದ್ವಯಮುಂಟದರೊಳಗೊಂದೊಂದು ಸಾವಿರಯೋಜನದಗಲದಿಂ ದ್ವೈದು ಸಾವಿರಯೋಜನದುದ್ದದಿಂದಕ್ಷಿಣೋತ್ತರವಾಗಿ ಪೂರ್ವೋಕ್ತನೀಲನಿಷಧಂಗಳೆಂದುತ್ತರದಕ್ಷಿಣ ಸೀಮಾಯುಗವನವಲಂಬಿಸಿಹವಾಗಿರ್ಪ್ಪಯದ ಮೇಲೆ ಬಹುವರ್ಣದವೃಕ್ಷಂಗಳುಂಟಲ್ಲಿಕ್ರಮದಿಂ ಮಹಾದೇವ ಮಹೇಶ್ವರನಾಮಕ ಶಿವಲಿಂಗಂಗಳಂ ಸಮಸ್ತಸುರರರ್ಚಿಸುತಿರ್ಪರು ॥

ನವಖಂಡಸ್ಥಾನ.

ಇಂತೀಮೂರುದಿಕ್ಕುಗಳಲ್ಲಿರ್ಪ ಸೀಮಾವಿಭಾಗ ಶೈಲಾಷ್ಟಕದೊಳಗನೋನ್ಯಪರ್ವತಾಂತರಾಳಪ್ರದೇಶಗಳೇ ನವವರುಷಗಳಾಗಿರ್ಪವವುಗಳೊಳಗೆ ಪೂರ್ವೋಕ್ತಮಾದಿಳಾವೃತಾದಿನಾಮಧೇಯಮುಳ್ಳವರೇ ಕರ್ತೃಗಳಾಗಿರ್ಪ್ಪರದರದರವಿಚಾರಮೆಂತೆಂದೊಡೆ ॥

ಇಳಾವೃತವರುಷ.

ಮೇರುವಿನುತ್ತರ ದಕ್ಷಿಣಪೂರ್ವಪಶ್ಚಿಮದಿಕ್ಕುಗಳಲ್ಲಿ ಕ್ರಮವಿಡಿದಿರ್ಪ ನೀಲ ನಿಷಧ ಮಾಲ್ಯ ಗಂಧಮಾದನವೆಂಬಸೀಮಾಗಿರಿಚತುಷ್ಟಯದೊಳ ವಲಯಮೇ ಇಳಾವೃತವರುಷವೆನಿಸುವದು ನವಸಹಸ್ರಯೋಜನದಗಲದ ಚತುರಶ್ರಾಕಾರಮಪ್ಪುದದರಲ್ಲಿ ಸಿತಾಂತ ಚಾರುಕುಂದ ಕುರರಿ ಅಚಲೋತ್ತಮ ಮಣಿಶಿಲಾದ್ರಿ ವೃಕ್ಷಪರ್ವ ರುಚಕ ಬಿಂದುಪರ್ವ ಮಂದರ ವೇಣುಪರ್ವ ಮೇಘಗಿರಿ ನಿಷಧ ದೇವನಗವೆಂಬ ಹದಿಮೂರುಶೈಲಂಗಳೇ ಪೂರ್ವೋಕ್ತಮಂದರವೆಂಬ ಕೀಲಕಪರ್ವತಕ್ಕೆ ಮೂಡಣದಿಕ್ಕಿನಲ್ಲಿಹವು

ಬಳಿಕಶ್ರೀಶೈಲದ್ರಿ ದ್ವಿಶಿಖರ ಮಹಾಶೈಲ ಗಜಶೈಲ ಪಿನಾಕಶೈಲ ಪಿಶಾಚಶೈಲ ಪಂಚಶೈಲ ಕೈಲಾಸ ವಾಸೋತ್ತರ ಹಿಮಾದ್ರಿಗಳೆಂಬದಶಕುಲಪರ್ವತಂಗಳೇ ಪೂರ್ವೋಕ್ತಗಂಧಮಾದನವೆಂಬ ಕೀಲಕಪರ್ವತಕ್ಕೆ ತೆಂಕಣದಿಕ್ಕಿನಲ್ಲಿಹವು ಮತ್ತು ಸುಗಂಧಿಶಿಖಿ ತ್ರಿಶ್ವೃಂಗಿ ಮಹಾಶೃಂಗಿ ಪುಷ್ಕರ ಸುಪಕ್ಷ ಕುಂಕುಮಶೈಲ ಸ್ವೈರ್ಯಕಪಿಲ ಭದ್ರ ಕುಮುದ ಮಧುಮಾರ್ಗ ಅಂಗನ ಮಕುಟ ಪಾಂಡುರಸಹಸ್ರಶಿಖರ ಪಾರಿಜಾತವೆಂಬ ಹದಿನಾಲ್ಕು ಕುಲಾಚಲಂಗಳೇ ಪೂರ್ವೋಕ್ತವಿಪುಳವೆಂಬ ಕೀಲಕಪರ್ವತಕ್ಕೆ ಪಶ್ಚಿಮದಿಕ್ಕಿನಲ್ಲಿಹವು ಬಳಿಕ ಶಂಖಕೂಟ ಮಹಾನಗ ಹಂಸಗಿರಿ ನಾಕಶೈಲ ಕಪಿಲಾದ್ರಿ ಇಂದ್ರಗಿರಿ ಸಾನುಮಾರ್ಗ ಚಾರುಧಿ ಹೇಮಕೂಟ ನೀಲಭದ್ರ ಕೋಟಿಶೃಂಗ ಪುಷ್ಯರಾಗ ಮೇಘಪರ್ವತ ಹೇಮಪ್ರಭೆ ವರಾಹಗಿರಿ ಮಯೂರನಗ ಶೈಲೇಂದ್ರವೆಂಬಹದಿನೇಳು ಕುಲಗೋತ್ರಂಗಳೇ ಪೂರ್ವೋಕ್ತ ಸುಪಾರ್ಶ್ವವೆಂಬ ಕೀಲಕ ಪರ್ವತಕ್ಕೆ ಬಡಗಣದಿಕ್ಕಿನಲ್ಲಿಹವು ಇಂತೈವತ್ತುನಾಲ್ಕು ಕುಲಾದ್ರಿಗಳುಂ ಸುರಸಿದ್ಧಸಂಗತಿಗಾಶ್ರಯಂಗಳಾಗಿರ್ಕುಂ ॥

## ಇಳಾವೃತನಗರಂಗಳು.

ಅನಂತರದೊಳಳಾವೃತವರುಷದಲ್ಲಿ ಬೇರೆಬೇರೆ ಯೆರಡುಸಾವಿರಯೋಜನೋನ್ನತವಾಗಿ ತೋರುವಿಪ್ಪತ್ತುನಾಲ್ಕು ಗಿರಿಗಳಮೇಲೆ ಮಹಾ ಪಟ್ಟಣಂಗಳುಂಟವಾವವೆಂದೊಡೆ ಚಂದ್ರಕಾಂತಶುಕ್ರಪಾರಿಜಾತ ಕುಮುದ್ವತಿಯೆಂಬ ನಗತ್ರಯದಲ್ಲಿ ದಾನವರಿಗೆಂಟು ನೂರುಪುರಂಗಳುಂ ತ್ರಿಕೂಟಚಾರುಧಿ ಸಹಸ್ರಶಿಖರಂಗಳಲ್ಲಿನಮುಚಿ ಮಹಾನಟಮಹಾದಂಭ ಅಗ್ನಿಮುಖಕಾಲನೇಮಿ ವಿರೋಚನಸುವರ್ಣಚಪಲಮುಕುಂದ ಸುಕುಂದರೆಂಬನರೊ್ಮದಲಾದ ದೈತ್ಯರುಗಳಗನಂತಪಟ್ಟಣಂಗಳುಂ ಶತಶೃಂಗಪರ್ವತದಲ್ಲಿ ಕನ್ಯಾದರುಮೊದಲಾದ ರಾಕ್ಷಸರುಗಳಗೆರಡುಲಕ್ಷಪುರಂಗಳುಂಸುವೃತವೆಂಬ ಗಿರಿಯುಲ್ಲಿ ನೀಲಾದಿಹಯಗ್ರೀವರಿಗೆ ತೊಂಭತ್ತಾರು ಪುರಂಗಳುಂ ಮಹಾನೀಲಗಿರಿಯುಲ್ಲಿ ಕಿನ್ನರರಿಗೈನೂರುಪುರಂಗಳುಂ ಶ್ವೇತೋದಕಪರ್ವತದಲ್ಲಿ ಅಶ್ವಸ್ಕಂಧ ರೇಣುಕ ಉಲೂಕ ಶ್ವಸನ ಗೃಧ್ರಾದಿಸುವರ್ಣರಿಗೈದುಸಾವಿರ ಪುರಂಗಳುಂ ವೇಣುಸಾನುಗಿರಿಯುಲ್ಲಿ ವಿದ್ಯಾಧರರಿಗೇಳುನೂರುಪುರಂಗಲುಂ ಕರಂಜಪರ್ವತದಲ್ಲಿ ಗಂಧರ್ವರಿಗನಂತಪುರಂಗಳುಂವವಸುಧಾರಾಪರ್ವತದಲ್ಲಿ ವಸುಗಳೆ ಗೆಂಟುಪುರಂಗಳುಂ ರತ್ನಧಾರಾಪರ್ವತದಲ್ಲ ಸಿದ್ಧಚಾರಣಗಂಧರ್ವರಿಗಸಂಖ್ಯಾತಪುರಂಗಳುಂ ॥

## ರುಷಿಸ್ಥಾನಗಳು.

ಸುಮೇಘ ಪರ್ವತದಲ್ಲಿ ಅತ್ರಿ ಅಂಗೀರಸ, ಅಗಸ್ತ್ಯ, ಭಾರ್ಗವ, ಭರದ್ವಾಜ ಭೃಗು। ವ್ಯಾಸ। ವಿಶ್ವಾಮಿತ್ರ ವಸಿಷ್ಟ ಉದಂಕ। ಶುಕ। ಶಾಕಲ್ಯ। ಸಾಲಂಕಾಯನ। ಸೂತ। ಶೌನಕ। ಗಾಲವ। ಗಾಧ। ಗೌತಮ। ಗಾರ್ಗ್ಯ ಮರೀಚಿ। ಮತಂಗ। ಮೃಕಂಡುಮಾಂಡೂಕ್ಯ। ಕಣ್ವ। ಕೌಶಿಕ। ಕಪಿಲ। ಕಾಶ್ಯಪ। ಕಾತ್ಯಾಯನ। ಕವೇರ। ದೇವಲ। ದದೀಚಿ। ದೂರ್ವಾಸ। ದತ್ತಾತ್ರೇಯ। ಜಮದಗ್ನಿ। ಜೈಮಿನಿ। ಜಹ್ನು। ಜಾಬಾಲಿ। ರೋಮಜ। ಮತಂಗ। ಪತಂಜಲಿ। ಪರಾಶರ। ಪುಲಸ್ತ್ಯ। ಶತಾನಂದ। ಸಾನಂದ। ಶ್ವೇತಕೇತು। ಉಪಮನ್ಯು। ಮೊದಲಾದ। ಅಷ್ಟಾಶೀತಿಸಹಸ್ರರುಷಿಗಳಗನಂತಾಶ್ರಯಂಗಳುಂ॥

## ತುಂಬುರುಮೊದಲಾದವರಸ್ಥಾನಂಗಳು.

ಪುಷ್ಪಕೇತು ಪರ್ವತದಲ್ಲಿ ನಾರದ। ತುಂಬುರು। ಭರತ। ಕೋಲಾಹಲೋಚಿತ। ದೇವಮುನಿಗಳ ದಿವ್ಯಾಲಯಂಗಳುಂ। ಹೇಮಕೂಟಪರ್ವತದಲ್ಲಿ। ಮಣಿಭದ್ರ। ಸುವೀರ। ಪಾಂಚಿತ। ವಿಭಾಂಡಕ। ಧೃತರಾಷ್ಟ್ರ। ಪೂರ್ಣಭದ್ರ। ವಿರೂಪಾಕ್ಷರೆಂಬವರು। ಮೊದಲಾದ ಕೋಟಿಯಕ್ಷರಪಟ್ಟಣಂಗಳುಂ। ಕುಮುದಪರ್ವತದಲ್ಲಿ ಪದ್ಮ ಮಹಾಪದ್ಮ ಶಂಖಗುಳಿಕಾದಿನಾಗರ್ಕಳನಿಕೇತನಂಗಳುಂ ಪಾರಿಯಾತ್ರಪರ್ವತದಲ್ಲಿ ಕುಬೇರನನಗರ ಮರ್ಯಾದಾಪರ್ವತದಲ್ಲಿ ವಿಘ್ನೇಶ್ವರನ ನಗರ ಗಜೋತ್ತುಂಗಪರ್ವತದಲ್ಲಿ ದುರ್ಗಿಯನಗರ ಏಕಶೃಂಗಪರ್ವತದಲ್ಲಿ ಬ್ರಹ್ಮನಗರ ಗಿರಿಕೂಟಪರ್ವತದಲ್ಲಿ ವಿಷ್ಣುವಿನಗರ ಶ್ರೀಕಂಠಪರ್ವತದಲ್ಲಿ ಈಶ್ವರನ ರಾಜಧಾನಿಯುಂ ರಂಜಿಸುತಿರ್ಕ್ಕುಂ॥

## ಭೂಕೈಲಾಸಗಿರಿ.

ಮತ್ತಮಾ ಶ್ರೀಕಂಠಪರ್ವತವೇ ಶಿವ ಶಿವಾ ಶೈವಸಿದ್ಧಾಶ್ರಯಮಾಗಿ ಶಿವದಿವ್ಯಕಲಾಪ್ರಸಿದ್ಧಸ್ಥಾನಮೆನಿಸಿ ಶಿವವಿಭೂತಿಗೆ ಮುಖ್ಯಗೋಚರಮಾಗಿ ಮೇರುದಕ್ಷಿಣಪ್ರಾಂತ ಗಿರಿಗಳೊಳು ಮಹಾದೇವ ಮಹಾತ್ಮ್ಯದಿಂದುತ್ಕೃಷ್ಟಮಾಗಿ ನಿತ್ಯಪ್ರದೋಷಾದಿಗಳೊಳು ಬ್ರಹ್ಮವಿಷ್ಣುಮಹೇಂದ್ರಾದಿ ಸಮಸ್ತಸುರರಿಂಸೇವ್ಯಮಾಗಿ ಸರ್ವರಜತಾಚಲವು ಮೂರುಸಾವಿರಯೋಜನವಿಸ್ತಾರವಾಗಿ ಮೂರುಸಾವಿರಯೋಜನದುದ್ದದಿಂ ಶುದ್ಧರಜತ ಭೂಭಾಗದಿಂ ಅಚ್ಛಸ್ಫಟಿಕರತ್ನಶಿಲಾಪ್ರಾಚುರ್ಯದಿಂ ದಿವ್ಯೌಷಧಿಗಣಸಾಂದ್ರತೆಯಿಂ ಜ್ಞಾನಸಿದ್ಧಮಹಿಮಾಸಿದ್ಧಸಂಘಸಂಮರ್ದದಿಂ ಜ್ಞಾನಗಂಗಾದೇವಗಂಗಾಭೂಗಂಗಾವಸತಿಗಳಿಂ ಸರ್ವೋತ್ತಮವಸ್ತುವಿಶೇಷಗಳಿಂ ಸರ್ವ

ಸಂವತ್ಸರಸಮೃದ್ಧಿಯಾಗಿ ಸರ್ವಭೂತಗಳ ದಹರದೊಳು ಪ್ರಕಾಶಿಪಚಿತ್ಕೈಲಾಸದ ಪ್ರಕೃತಿಮಂಡಲವಂತರಿಸಿ ಶತೋತ್ತರವಾಗಿ ಷಡಧ್ವಾತೀತವೆನಿಪ್ಪ ಶಿವಕೈಲಾಸದಹೋಲ್ವಿಕೆಯನನುಕರಿಸಿ ಭೂಕೈಲಾಸಗಿರಿಯೆಂಬ ಶಿವಕ್ಷೇತ್ರವು ಮೂರ್ತಿತ್ರಯಗಣ್ಯನಾದ ಮಹೇಶ್ವರನಿಂದಧಿಷ್ಠಿತವಾಗಿ ರುದ್ರಗಣಗಳಿಂದಾವೃತವಾಗಿ ಗೌರೀಶಂಕರವಿಲಾಸಾಸ್ಪದವಾಗಿರ್ಪುದು ॥

## ಕೈಲಾಸನಗರ.

ಇಂತು ಬಾಹ್ಯಪ್ರಪಂಚದಲ್ಲಿ ಸಿದ್ಧರಾದವರು ದೇಹಸಹಿತವಾಗಿಪೋಗಿನೋಡಲುಳ್ಳಭೂಕೈಲಾಸವೆಂಬಜಿತಗಿರಿಯಮೇಲೆ ಶಿವಪ್ರಸಾದಪ್ರಾಪ್ತಶಕ್ತಿಕನಾದ ವಿಶ್ವಕರ್ಮದಿಂದಾದಿಯೊಳು ಬ್ರಹ್ಮಸೃಷ್ಟಿಗೆ ಕೋಟಿಗುಣಗಳಿಂ ಮಿಗಿಲೆನಲು ಸರ್ವೇಂದ್ರಿಯಾನಂದಕರವಾಗಿಅನ್ನಮಯವೆಂಬ ರನ್ನರತುನ ರಜಿತಕೋಟಿಗಳು ಮೂರುಪ್ರಾಣಮಯವೆಂಬ ರೂಪವಿಲ್ಲದೆ ತಪೋನಿಷ್ಠರಲ್ಲದೆ ಇತರರಿಗಡ್ಡಿಯಾಗಿರ್ಪ ಕೋಟಿಯೊಂದು ಮನೋಮಯವೆಂಬ ಚಿತ್ತಶುದ್ಧಿಯಿಲ್ಲದವರಂತಡೆವ ಮಹಿಮಾರೂಪವಾದ ಕೋಟಿಯೊಂದು ವಿಜ್ಞಾನಮಯವೆಂಬ ಶಿವಜ್ಞಾನವಿಲ್ಲದವರಿಗೆ ಕಾಣಿಸದಂತಾವರಿಸುವ ಜ್ಞಾನಸಾಮರ್ಥ್ಯ ರೂಪವಾದ ಕೋಟಿಯೊಂದು ಆನಂದಾಮಯವೆಂಬನಿತ್ಯಸಂತೋಷಿಗಳಲ್ಲದವರಿಗೆ ಸಿಕ್ಕದಂತೆಮಾಳ್ಪ ಶಿವಮಾಯಾಸ್ವರೂಪವಾದ ಕೋಟಿಯೊಂದು ಇಂತೇಳುಕೋಟಿಗಳು ನಿರ್ಮಿಸಲ್ಪಟ್ಟ ಆಯಾತತ್ವಾಧಿಪತಿಗಳಾದ ಅಧಿಕಾರಿಕ ದೇವ ಪ್ರಮಥಸಿದ್ಧರೆಂಬ ಮೂರುಬಗೆಯಾದ ಸೇವಕರಿ ಆಯಾಸ್ಥಾನಗಳೊಳು ಪರಿಪಾಲಿಸಲ್ಪಟ್ಟ ಮಹೋನ್ನತವಾಗಿರ್ಕುಂ ॥

## ಭೂಕೈಲಾಸಮಹಿಮಾಸ್ಥಾನಗಳು.

ಬಳಿಕಾ ಕೈಲಾಸಗಿರಿಯೊಳು ಸರ್ವ ದೇವಸ್ಥಾನಗಳಿಂ ಸರ್ವಭೋಗಾಲಯಂಗಳಿಂ ನವವಿಧಸಭಾಸ್ಥಾನಂಗಳಿಂ ತ್ರಿವಿಧಪ್ರಭುಸ್ಥಾನಂಗಳಿಂ ಚತುಷ್ಷಷ್ಟಿಶಿವಲೀಲಾಸ್ಥಾನಂಗಳಿಂ ನವಕೋಟಿಸಿದ್ಧಿಸ್ಥಾನಂಗಳಿಂ ಸಮಸ್ತಸೌಭಾಗ್ಯವಿದ್ಯಾನಂದ ಸಮೃದ್ಧವಾದ ಶಿವರಾಜಧಾನಿಯೊಳು ಮಹೇಶ್ವರನರಮನೆ ಉಮಾರಾಮಾ ಗಜವದನಕ್ರೀಡಾಶೈಲ ಷಣ್ಮುಖನಿವಾಸ ಕುಬೇರನಅಳಕೆ ಮೂರ್ತಿತ್ರಯದಬಿಂದುಮಂಡಲಂಗಳು ಅರವತ್ತು ಗಣಸ್ಥಾನಂಗಳು ವೃಷಭಕ್ಷೇತ್ರನಂದಿವಿಹಾರಶಿಲಾದ ಗೋಪುರತಾಂಡವ ಮಂಟಪ ಸಭಾಪತಿಸ್ಥಾನ ರುದ್ರಸನ್ನಿಧಿ ವೀರಭದ್ರನ ಚಾವಡಿಭೈರವನ

ಕಟ್ಟಿಸಿದ್ದರ ಚತ್ರಂಗಳು ಯೋಳುಕೋಟಿಮಂತ್ರಾಲಯಂಗಳು ಪ್ರಣವಕುಂಡ ಶಿವಾಗ್ನಿಕುಂಡ ಮಾತೃಕಾಸ್ಥಾನ ಶಕ್ತಿತ್ರಯಪೀಠಗಳು ಆನಂದವನ ಅಮೃತಾಷ್ಟಕಸ್ಥಾನಂಗಳುಂ ಶಿವಯೋಗಿಗಳಿಗೆ ಫಲಸಂಪಾದಕಂಗಳಾದ ಪ್ರಪಂಚದುತ್ತಮಕಾರ್ಯಗಳಿಗೆಲ್ಲ ಪ್ರಭುಸಾನ್ನಿಧ್ಯ ಮೆನಿಸಿ ಗಂಡುಸರು ಹೆಂಗಳಹ ಸಮರ್ಥರುಜಡರಹ ಮುಮುಕ್ಷುಗಳು ಮುಕ್ತರಹ ಕಾಮಿಗಳುತೃಪ್ತರಹ ಅಶಕ್ತರುಶಕ್ತರಹ ದೀನರಾಢ್ಯರಾಗಲುಳ್ಳ ನ್ಯೂನರು ಪೂರ್ಣರಾಗಿಮಾಳ್ಪ ಅಸಂಖ್ಯಾತಗಳಾದ ಗೌರೀಶಂಕರಪಿಹಾರಯೋಗ್ಯ ಪರ್ವತಂಗಳುಂ ಕಂಗೊಳಿಸುತಿರ್ಪಮಾಕೈಲಾಸಕ್ಷೇತ್ರಿಯು ಅತ್ಯರ್ಕೇಂದು ತೇಜವಾಗಿ ಸುತ್ತಲು ಸಹಸ್ರಯೋಜನಾಯತಮಾನ ಹಿಮಾದಿದುರ್ಗಗಳುಂ ಗೋಪ್ಯವಾಗಿಯೂ ಶಿವಪ್ರಸಾದ ಸಿದ್ಧಿಯಿಲ್ಲದವರಿಂ ದುರ್ಲಭವಾಗಿಯೂ ಬಾಣರಾವಣ ಚಂಡಿ ಮೊದಲಾದ ಹಠಯೋಗಿಗಳುಂ ಸನಕ ನಾರದ ಸನತ್ಕುಮಾರ ದಧೀಚಿ ಮಾರ್ಕಂಡೇಯ ದೂರ್ವಾಸ ವಸಿಷ್ಠ ವಿಶ್ವಾಮಿತ್ರ ಪರಾಶರ ವ್ಯಾಸ ಶಂಕರಾದಿಸಾಧುಗಳಿಗುಂ ಶಿವಧರ್ಮಸಿದ್ಧಿಯುಳ್ಳ ನಂದಿ ಸ್ಕಂದಕುಬೇರ ಪ್ರಮಥಾದಿಗಳಿಗುಂ ಶಿವಾಜ್ಞಾಧಿಕಾರಮುಳ್ಳ ಬ್ರಹ್ಮವಿಷ್ಣು ಮಹೇಂದ್ರಾದಿಗಳಿಗುಂ ಸುಲಭವಾಗಿರ್ಕುಂ ॥

ಹೇಮಕೂಟ.

ಮತ್ತಮಾಶ್ರೀಕಂಠಗಿರಿಯ ಸಮೀಪದೊಳಗೀಶಾನ್ಯ ಭಾಗದಲ್ಲಿ ಸೇರಿಯಿರುವ ಸುವರ್ಣಮಯವಾದ ಮೇಲಾಯುಮುಳ್ಳ ಹೇಮಕೂಟವು ಪರಮಾಶ್ಚರ್ಯನಿಧಿಯಾಗಿ ವಿರಕ್ತರಾದವರಿಗುಂ ಮುಮುಕ್ಷುಗಳಿಗುಂ ಶಿವಜ್ಞಾನಿಗಳಿಗುಂ ಯೋಗಸಿದ್ಧರಿಗುಂ ಬ್ರಹ್ಮವಿಷ್ಣು ಮಹೇಂದ್ರಾದಿ ದೇವರ್ಕಗಳಿಗುಂ ನಾರದಾದಿದೇವರ್ಷಿ ಗಣಗಳಿಗುಂ ಶರಣವಾಗಿ ಜಗಕ್ಕೆಲ್ಲ ಗುರುಸ್ಥಾನವೆನಿಸಿ ಆಸ್ತಿಕರಿಂದ ಗೌರವ್ಯಮಕ್ಕುಂ ॥

ಸಿದ್ಧವಟವೃಕ್ಷ.

ಮತ್ತಮಾಹೇಮಕೂಟದಲ್ಲಿ ವಜ್ರವೈಡೂರ್ಯಗೋಮೇಧಿಕ ಪುಷ್ಯರಾಗ ಪದ್ಮರಾಗಮರಕತ ನೀಲವಿದ್ರುಮ ಮೌಕ್ತಿಕಮಯನವರತ್ನ ಜೀವವೃಕ್ಷಂಗಳಿಂದಲೂ ಅಷ್ಟಭೋತ್ಯಷ್ಟಸಿದ್ಧಿ ಸದ್ಗುಣೈಶ್ವರ್ಯತತ್ವ ಸಂತೋಷಶಕ್ತಿಗಳುಳ್ಳ ಶಿವವೃಕ್ಷಂಗಳಿಂದಲೂ ಶೋಭಿತವಾದಜ್ಞಾನಾರಾಮವೆಂಬ ದಿವ್ಯವನದೊಳು ಬಿಲ್ವಾಶ್ವತ್ಥಧಾತ್ರೀ ಚೂತಂಗಳೆಂಬ ಮಹಾವೃಕ್ಷಚತುಷ್ಟಯ ಮಧ್ಯಭಾಗದಲ್ಲಿ ಆಸ್ತಿಕ್ಯವೆಂಬ ಜಗುಲಿಯನಡುವೆ ಜ್ಞಾನನಿಷ್ಠೇ

ಯವಾಗಿ ಪ್ರಣವವೇಮೂಲ ಛಂದಸ್ಸುಗಳೇಶಾಖೆಗಳು ಋಗ್ವೇದವೇದಳ ಯಜುರ್ವೇದವೇಪುಷ್ಪ ಸಾಮವೇದವೇಫಲ ಅಥರ್ವಣವೇದವೇರಸ ಯಜ್ಞವೇಶೀತಳಚ್ಛಾಯೆ ಶಿವಧರ್ಮವೇಕಾಂಡವಾಗಿ ಶಿವಜ್ಞಾನಸದಾರ್ಢ್ಯದಿಮೆರೆವ ಸಿದ್ಧವಟಸಂಜ್ಞಿತವಾದ ಮಹಾಕಲ್ಪವೃಕ್ಷವಿರ್ಪುದಾದೊಡೆ ಸಹಸ್ರಯೋಜನ ವಿಶಾಲೋನ್ನತವಾಗಿರ್ಪುದದರ ಮೂಲದಲ್ಲಿ ॥

ಶ್ರೀಗುರುದಕ್ಷಿಣಾಮೂರ್ತಿ.

ತತ್ವಸಿದ್ಧಿಕನಕಮಣಿಖಚಿತ ದಿವ್ಯಸಿಂಹಾಸನದಮೇಲೆ ಶಿವಜ್ಞಾನವೈರಾಗ್ಯಶುದ್ಧ ಸತ್ವಾವತಾರವಾಗಿ ಜಗದ್ಗುರು ರಾಜರಾಜನಾಗಿರ್ಪ ಶ್ರೀದಕ್ಷಿಣಾಮೂರ್ತಿಯು ಸಚ್ಚಿದಾನಂದೈಕರಸ ಸ್ವಭಾವದಿಂ ಅಮೃತರಸ ಲೀಲಾವಿಗ್ರಹದಿಂ ಕಾಂಚನಕಪಿಶಕೋಮಲಕಪರ್ದಕಲಿತಶುದ್ಧಚಂದ್ರ ಕಳಾಲಂಕರಣದಿಂ ಮಂದಸ್ಮಿತಮುಗ್ಧಮಾದೇಕಮುಖದಿಂ। ತ್ರಿಜ್ಯೋತಿರಾತ್ಮಕ ತ್ರಿಣೇತ್ರಂಗಳಿಂ ಶರಚ್ಚಂದ್ರಚಂದ್ರಿಕಾಧವಳಶರೀರಕಾಂತಿಯಿಂ। ಕೋಟಿಕಂದರ್ಪ। ಶತಾತಿಶಾಯಿಸೌಂದರ್ಯದಿಂ ಭಸಿತತ್ರಿಪುಂಡ್ರೋದ್ಧೂಳನ। ಸುಭಗತ್ವದಿಂ। ಪ್ರಜ್ಞಾಮೇಧಾದಾಕ್ಷಿಣ್ಯದಯಾನುಗ್ರಹರಕ್ಷಣ। ಪ್ರಧಾನಮಾದ। ಹರ್ಷಾಪಾಂಗನಿಷ್ಪಂದಪ್ರಸರಣದಿಂ। ಸಂಪೂರ್ಣಮಾದ। ಸರ್ವಾಂಗಸೌಷ್ಠವದಿಂ। ಧ್ಯೇಯಮೂರ್ತಿಗಳೊಳಗುತ್ತಮೋತ್ತಮನೆನಿಸಿ। ಫಣಿಕುಂಡಲ। ನಾಗಯಜ್ಞೋಪವೀತಸರ್ಪಕಂಕಣಶೇಷಾಭರಣ। ರುದ್ರಾಕ್ಷಹಾರ। ಸ್ಫಟಿಕಾಕ್ಷಮಾಲಾದಿಗಳಂ ವಹಿಸಿ। ನೀಲಗ್ರೀವಾದಿಶಿವಲಕ್ಷಣಲಕ್ಷಿತಮಾಗಿ। ಉಮೆ ಎಂಬ। ದ್ವೈತಶಕ್ತಿಯುಸ್ಫುರಿಸಲಳವಲ್ಲದ। ಸ್ವಾತ್ಮಾರಾಮ ಬ್ರಹ್ಮವಿದ್ಯಾನಂದಪೂರ್ಣಾದ್ವಿತೀಯಸ್ವರೂಪನಾಗಿ। ನೃಶಂಸಾಧಿಗಳೊಳು ಜ್ಞಾನಕ್ರಿಯಾಶಕ್ತಿವೈಚಿತ್ರ್ಯಮಾತ್ರಮಂ ಗ್ರಹಿಸಲುಪದೇಶಂಗೈವಂತೆ ಚಿತ್ರವಾದವ್ಯಾಘ್ರಚರ್ಮಮಂಪೊದೆದು। ಗಜಚರ್ಮಪರಿಧಾನದಿಂದಳವಟ್ಟು। ನಿಖಿಲವಿದ್ಯಾವ್ಯಾಖ್ಯಾನಮುದ್ರೆ। ಅಕ್ಷಸೂತ್ರ। ಅಮೃತಕಲಶ। ಪುಸ್ತಕಂಗಳನಾಂತ ದಕ್ಷಿಣವಾಮಕರಚತುಷ್ಟಯದಿಂ। ಗಂಧಮಾಲ್ಯಾದಿಗಳಿಂದಲಂಕೃತನಾಗಿ। ವೀರಾಸನದಲ್ಲಿ ಕುಳ್ಳಿರ್ದು। ಶಾಪಶಾಸನ ಶಕ್ತಿಯನಾಂತು। ಮೋಹಾಪಸ್ಮಾರಸ್ಮಯ ಶಿರೋವಿನ್ಯಸ್ತದಕ್ಷಿಣ। ಪಾದಕಮಲದಿಂ ದೆಸದು ಯೋಗಪಟ್ಟ। ಯೋಗಸೂತ್ರಯೋಗದಂಡಾದಿಗಳಿಂದುಪಶೋಭಿಸಿ। ಯೋಗಪಟ್ಟಾಭಿಷಿಕ್ತನಾಗಿ। ನಿಜಪಾದಸೇವಕಶಿಷ್ಯಪರಂಪರೆಗೆಸೇರಿದ। ಜ್ಞಾನಸಿದ್ಧ ಮಹಿಮಾಸಿದ್ಧರೆಲ್ಲರೊಳುಮುಖ್ಯರಾಗಿ ಚಿತ್ರವೇಷಧಾರಿಗಳಾ

ದ। ಗಜಾನನ। ಹಯಾನನ। ಷಣ್ಮುಖ। ಚತುರ್ಮುಖ। ಸುರಪತಿ।ಜಲಪತಿ ಪ್ರಮುಖರಿಗಂ।ಸನಕಾದಿಬ್ರಹ್ಮರ್ಷಿಗಳಿಗಂ। ನಾರದಾದಿದೇವರ್ಷಿಗಳಿಗಂ। ಶಕ್ರ್ಯಾದಿಮಾನವರ್ಷಿಗಳಿಗಂ। ಬ್ರಹ್ಮವಿದ್ಯಾತಾತ್ಪರ್ಯಸೂಚಕವಾಗಿ ಸಂಖ್ಯಾದಿ ನಾನಾಸಮಯಸಾಧಕರಿಗೆ ತತ್ತಚ್ಛಾಸ್ತ್ರಂಗಳನೆಲ್ಲವಂ ವಿಸ್ತಾರದಿಂದುಪನ್ಯಾಸಂಗೈದು ಕೃತಾರ್ಥರಂಮಾಡಿ। ವೇದಾಂತಸಿದ್ಧಾಂತ ಪರ್ಯವಸಾನದೊಳು ಹೇಳಕೇಳತಕ್ಕದ್ದು ಬೇರೆಯಿಲ್ಲದೆ। ಮೌನವ್ಯಾಖ್ಯಾ ಪ್ರಕಟಿತಪರಬ್ರಹ್ಮತತ್ವನಾಗಿ। ಶುದ್ಧಶಿವಸ್ವರೂಪಾರೂಢಸಿದ್ಧವೃತ್ತಿಯಿಂ ಜಗದಾರಾಧ್ಯನಾಗಿರ್ಪಂ.

ಇಲಾವೃತ್ತದಲ್ಲಿಜದರು.

ಬಳಿಕಿಂತುಸಕಲದೇವತೆಗಳಿಗೆ। ಸುಖಾಸ್ಪದಮಾದಿಳಾವೃತವರುಷದಲ್ಲಿ। ದಿವ್ಯದೇಹಾನ್ವಿತರಾದಜನರು। ಸಾವಿರಬಣ್ಣದಿಂಮಹಾಪ್ರಕಾಶಮಪ್ಪಮೇರುವಿನದೀಪ್ತಿಯಿಂದುಕಾಣಲ್ಪಟ್ಟವಿಷಯವಿಸರಂಗಳುಳ್ಳವರಾಗಿ। ಜಂಬೂವೃಕ್ಷದಫಲಾಹಾರದಿಂ। ಪದಿಮೂರಸಾವಿರವರುಷದಾಯುಷ್ಯವಂತರೆನಿಸಿ। ಈಶ್ವರನಾಮಲಿಂಗಪೂಜಕರಾಗಿ। ನಿತ್ಯಸುಖಿಗಳಾಗಿರ್ಕುಂ.

ಭದ್ರಾಶ್ವವರುಷ.

ಅನಂತರದೊಳಾ ಮೇರುವಿನಮೂಡಿಲಭಾಗದೊಳ ಗೊಂಭತ್ತುಸಾವಿರಯೋಜನಾಂತರದಲ್ಲಿರ್ದ ಮಾಲವಂತವೆಂಬ ಸೀಮಾಗಿರಿವಿಡಿದು ಪೂರ್ವಲವಣಸಮುದ್ರಾವಧಿಯಾಗಿ ಚಂದ್ರಕಾಂತವರ್ಣದ ಭೂಮಿಯುಳ್ಳದ್ದೀ ಭದ್ರಾಶ್ವವರುಷಮಕ್ಕುಮದು ಮೂತ್ತೆರಡುಸಾವಿರಯೋಜನ ದಳತೆಯ ಚತುರಶ್ರವಹುದದರಲ್ಲಿ ಸಪ್ತಕುಲಪರ್ವತಂಗಳೊಳ್ ಪುಟ್ಟಿದ ಪುಣ್ಯನದಿಗಳುಂಟಾವರುಷದಲ್ಲಿ ಶಶಿಕಾಂತಿಯುಳ್ಳಜನರು ನೀಲಾಬ್ಜವೆಂಬಕಲ್ಪಲತಾಫಲಾಶನದಿಂ ಹತ್ತುಸಾವಿರವರುಷ ಜೀವಿಗಳಾಗಿ ಮಹಾದೇವನಾಮಕಲಿಂಗ ಪೂಜಕತ್ವದಿಂ ದುಃಖವರ್ಜಿತರೆನಿಸಿರ್ಕುಂ॥

ಕೇತುಮಾಲವರುಷ.

ಮತ್ತಮಾಮೇರುವಿಗೆ ಪಡವಲಭಾಗದೊಳು ಎಂಭತ್ತುಸಾವಿರಯೋಜನಾಂತರದಲ್ಲಿರ್ದ ಗಂಧಮಾದನವೆಂಬಸೀಮಾಶೈಲಂತೊಡಗಿ ಪಶ್ಚಿಮಲವಣಸಾಗರಕಡೆಯಾಗಿ ಕಂನೈದಿಲೆಕಾಂತಿಯ ಭೂಮಿಯುಳ್ಳದ್ದೀ ಕೇತುಮಾಲವರುಷವದು ಮೂವತ್ತೆರಡುಸಾವಿರಯೋಜನ ದಳತೆಯ ಚತುರಶ್ರವಹುದದರಲ್ಲಿ ಸಪ್ತಕುಲಗಿರಿಸಂಜಾತ ಮಹಾನದಿಪ್ರವಾಹನಿರಂತರ।

ಪ್ರದೇಶಂಗಳುಂಟಾಗಿ ವರುಷದಲ್ಲಿ ಕನ್ನೈದಿಲೆಕಾಂತಿಯುಳ್ಳವರು ಪನಸವೆಂಬ ಕಲ್ಪವೃಕ್ಷದ ಫಲಾನ್ನದಿಂ। ಹತ್ತುಸಾವಿರವರುಷದಾಯುಷ್ಯವುಳ್ಳವರೆನಿಸಿ ಮಹಾದೇವನಾಮಕಲಿಂಗ ಪೂಜಕತ್ವದಿಂಬಳಿಷ್ಠರಾಗಿರ್ಪರು.

ರಮ್ಯಕವರುಷ.

ಮತ್ತಮಾ ಮೇರುವಿನುತ್ತರಮೆಂಬುವ ಔಪಚಾರಿಕ ವ್ಯವಹಾರವಿಷಯಮಾಗಿರ್ಪಆಚೆಯಭಾಗದಲ್ಲಿ। ನೀಲಶ್ವೇತವೆಂಬ ಸೀಮಾಗಿರಿಯುಗಳದ। ನವಸಹಸ್ರಯೋಜನಪರಿಮಿತ ನೀಲವರ್ಣಭೂಮಿಯುಳ್ಳ ರಮ್ಯಕವರುಷವಿಹುದದು ಪೂರ್ವಪಶ್ಚಿಮಲವಣಾಬ್ಧಿಪರಿಯಂತರಂ ನೀಲಮಹುದದರಲ್ಲಿ ಸಪ್ತಕುಲಪರ್ವತಂಗಳೊಳು ಪುಟ್ಟಿದ ವಿಶಾಲನದಿಗಳುಂಟಾವರುಷದಲ್ಲಿ ನೀಲಾಬ್ಜಛವಿಯುಳ್ಳಜನರು ಇಕ್ಷುವೆಂಬಕಲ್ಪವೃಕ್ಷದ ರಸಾನ್ನದಿಂ ಪನ್ನೆರಡುಸಾವಿರ ವರುಷದಾಯುಷ್ಯವಂತಳೆದು ದೇವಪತಿನಾಮಕಲಿಂಗ ಪೂಜಕರಾಗಿ ಸದಾನಂದದಿಂದಿರ್ಪರು ॥

ಹಿರಣ್ಯಕವರುಷ.

ಮತ್ತಮಾಶ್ವೇತಶೃಂಗವೆಂಬ ಸೀಮಾಪರ್ವತದ್ವಯದನಡುವೆ ಒಂಭತ್ತುಸಾವಿರಯೋಜನ ಪರಿಮಾಣಮುಳ್ಳ ಧವಳವರ್ಣದಭೂಮಿಯಿಂ।ಹಿರಂಣ್ಯಕವರುಷವಿಹುದದು। ಮೂಡಲುಪಡುವಲಲ್ಲಿ ನೀಳವಾಗಿಲವಣ ಸಾಗರಾಂತಮಿರ್ಪುದದರಲ್ಲಿ ಸಪ್ತಕುಲಗಿರಿಸಂಜಾತವಾದ ಮಹಾನದಿಗಳುಂಟಾವರುಷದಲ್ಲಿ ಚಂದ್ರಪ್ರಭೆಯುಳ್ಳಜನರು ಲಾಕುಳವೆಂಬ ಕಲ್ಪವೃಕ್ಷದ ಫಲಾಹಾರದಿಂ ಪನ್ನೆರಡುಸಾವಿರವರುಷದಾಯುಷ್ಯಮಂ ಪಡದು ಮಹೇಶ್ವರನಾಮಕಲಿಂಗಪೂಜಕರಾಗಿ ಸುಕ್ಷೇಮದಿಂದಿರ್ಪರು ॥

ಕುರುವರುಷ.

ಮತ್ತಮಾಶೃಂಗಗಿರಿಪಿಡಿದುಕ್ಷೀರೋದಧಿಕಡೆಯಾಗಿ ನವಸಹಸ್ರಯೋಜನಸ್ಥಳವೇ। ಲೋಳಸದರ ಪೊಬಣ್ಣದ ಭೂಮಿಯುಳ್ಳಕುರುವರುಷವಾಗಿರ್ಪವದು। ಅರ್ಧಚಂದ್ರಾಕಾರಮಾಗಿರಲದರೊಳು ಸಪ್ತಕುಲಾದ್ರಿಗಳಲ್ಲಿ ಪ್ರಾದುರ್ಭವಿಸಿದಮನೋಹರನದಿಗಳುಂಟಾವರುಷದಲ್ಲಿ। ಪ್ರಿಯಂಗುಲತಾಕುಸುಮದ್ಯುತಿಯುಳ್ಳ ಜನರು ಇಚ್ಛಾಕಲ್ಪವೃಕ್ಷಫಲಾಹಾರದಿಂ।ಮೂವತ್ತುಸಾವಿರವರುಷದಾಯುಷ್ಯಮುಳ್ಳವರಾಗಿ। ರುದ್ರನಾಮಕಲಿಂಗವಂ ಪೂಜಿಸುತ್ತಲ್ಲಿಯ ಸ್ತ್ರೀಯರೊಂದೇಸಮಯದಲ್ಲಿ ಯಮಳಕಂನ್ಯಾಕು

ಮಾವರಂಪಡೆಯುತ್ತಿರಲವರವರೇ ದಂಪತಿಗಳೆನಿಸಿ। ನಿಷೇಧವಿಲ್ಲದೇ ಸ್ವಭಾವಾನಂದದಿಂರಮಿಸುತಿರ್ಪರು ॥

## ಚಂದ್ರಭದ್ರದ್ವೀಪಗಳು.

ಮತ್ತಮಾಕುರುವರುಷಕ್ಕೆಸಮೀಪವಾಗಿರ್ಪಸಮುದ್ರದಲ್ಲಿನಾಲ್ವತ್ತು ಸಾವಿರಯೋಜನದಳತೆಯೊಳುತ್ತರದಿಕ್ಕಿನಲ್ಲಿ ಸಿದ್ಧಮುನಿಗಳಿಗಾಸ್ಪದಮಪ್ಪ। ಕನ್ನೈದಿಲೆಯವರ್ಣದಭೂಮಿಯುಳ್ಳಚಂದ್ರಾಕಾರಭದ್ರಾಕಾರವೆಂಬದ್ವೀಪದ್ವಯಂಕೂಡವರ್ತಿಸುತಿರ್ಪವವುಗಳಲ್ಲಿ ಕ್ರಮದಿಂಶಿದ್ಯುತಿನೀಲಾಬ್ಜಕಾಂತಿಗಳುಳ್ಳಜನರು। ಜಂಬುವೆಂಬಕಲ್ಪವೃಕ್ಷದಫಲಾಹಾರಿಗಳಾಗಿ ಪದಿಮೂರುಸಾವಿರದಾಯುಷ್ಯಮಂಪಡದು ರುದ್ರನಾಮಕಲಿಂಗಪೂಜಕರಾಗಿ ಸಂತೋಷದಿಂದಿರ್ಪರು ॥

## ಹರಿವರುಷ.

ಮತ್ತಮಾಮೇರುವಿನದಕ್ಷಿಣದಿಕ್ಕಿನಲ್ಲಿ ನಿಷಧಹೇಮಕೂಟವೆಂಬ ಸೀಮಾನಗಯುಗಳದಂತರಾಳದ ನವಸಹಸ್ರಯೋಜನಾಯತಪ್ರದೇಶವೇ। ರಜತವರ್ಣದಭೂಮಿಯುಳ್ಳಹರಿವರ್ಷವಾಗಿರ್ಪುದದು। ಪೂರ್ವಪಶ್ಚಿಮಲವಣಾಬ್ಧಿಪರ್ಯಂತನೀಳವಾಗಿರಲದರೊಳು ಸಪ್ತಕುಲಗಿರಿಗಳಲ್ಲಿ ರಜತಪ್ರಭಾಮಯರಾದಜನರು ಪುಂಡ್ರೇಕ್ಷುವೆಂಬ ಕಲ್ಪವೃಕ್ಷದರ ಸಾಸ್ವಾದನದಿಂ ಹನ್ನೆರಡುಸಾವಿರವರ್ಷದಾಯುಷ್ಯಮುಳ್ಳವರಾಗಿ ಈಶಾನನಾಮಕಲಿಂಗಪೂಜನದಿಂ ಸುಖಿಗಳಾಗಿರ್ಪರು ॥

## ಕಿಂಪುರುಷವರುಷವು.

ಬಳಿಕ ಹೇಮಕೂಟಹಿಮವತ್ಪರ್ವತಂಗಳ ಮಧ್ಯದೊಳಗೊಂಭತ್ತು ಸಾವಿರಯೋಜನಸ್ಥಳವೇ ಸುವರ್ಣಮಯವಾದ ಭೂಮಿಯುಳ್ಳ ಕಿಂಪುರುಷವರುಷವದೇಮೂಡಲ್ಪಡುವಲ್ನೀಳವೆನಿಸಿ ಲವಣಸಮುದ್ರಾವಧಿಯಾಗಿಹುವದರೊಳಗೆ ಸಪ್ತಕುಲಗಿರಿಸಮುದ್ಭೂತಸುರಚಿರಮಹಾನದಿಗಳುಂಟಾವರುಷದ ಹೇಮವರ್ಣಜನರುಪ್ಲಕ್ಷವೆಂಬ ಕಲ್ಪವೃಕ್ಷದಫಲಾಹಾರದಿಂಭತ್ತುಸಾವಿರವರ್ಷದಾಯುಷ್ಯದಿಂ ದೀಶಾನನಾಮಕಲಿಂಗ ಪೂಜಕರಾಗಿ ಸುಖಜೀವಿಗಳೆನಿಸಿರ್ಪರು ॥

## ಅಷ್ಟಖಂಡಜನಲಕ್ಷಣ.

ಬಳಿಕೀಪ್ರಕಾರವಾದ ವರ್ಷಾಷ್ಟಕದೊಳಿರ್ಪಜನರಿಗೆ। ನಿರಂತರಕ್ರಿಯಮಾಣ। ಶಿವಪೂಜಾಪ್ರಭಾವದಿಂ ನಿಸರ್ಗನಿರ್ದುಷ್ಟಸತ್ವಾದಿಬಲದಿಂ।

ಕೃತಯುಗಾನುಕ್ರಮದಿಂ । ಜ್ಞಾನಾಯುಸ್ತೇಜೋಬಲಾದಿಗಳಗೆ ವೃದ್ಧಿಕ್ಷೆ ಯುವಿಲ್ಲದೊಂದೇತರನಾಗಿರಲವರಂ ಶಿವಯೋಗಸಂಬಂಧಿಗಳೆಂದು ತಿಳಿಯು ಲ್ಪೇಳ್ಕುಂ ॥

ಭರತವರುಷ.

ಪುತ್ತ್ರವಾ ಭೂವಲಯದೊಳು ಪೂರ್ವಪಶ್ಚಿಮಾಬ್ಧಿಗಳನಾಂತು।ಕ ರ್ಮಭೂವ್ಯಾವರ್ತಕವಾಗಿ। ಗಂಗಾದ್ವಾರ। ಸ್ವರ್ಗದ್ವಾರ। ಬಾದರಕೇತಾರಾ ದಿಕ್ಷೇತ್ರಗಳೆಂದೊಪ್ಪಿ । ಗುರುತರಹಿಮಪ್ರಸರವಿನಿವರ್ತಿತ ದಾಕ್ಷಿಣ್ಯಾತವ ಥಿಕಲೋಕವಾಗಿ।ಗೌರೀಲೀಲಾವಿರ್ಭಾವನಿದಾನವಾಗಿರ್ಪುದರಿಂ।ಸರ್ವೌ ಷಧಿಸ್ಥಾನಮಪ್ಪುದರಿಂ । ಲಕ್ಷಶಿಖರಪರಿಸ್ಕೃತಯೋಜನಸಹಸ್ರವಾಗಿ ರ್ಪುದರಿಂ। ಗಿರಿರಾಜನೆನಿಪಹಿಮಾಲಯಕ್ಕೆ ಟಂಕಲಾಗಿ।ದಕ್ಷಿಣಸಮುದ್ರಕ್ಕೆ ಖಡಲಾಗಿ ಪೂರ್ವಪಶ್ಚಿಮಸಮುದ್ರೋಪದ್ವೀಪಸಹಿತವಾಗಿ।ನವಸಹಸ್ರ ಯೋಜನಾಯತಮೆನಿಪ। ಅಸ್ಮದಾದಿಸಂಚಾರಸಾಧ್ಯವಾದ । ನಾನಾವರ್ಣ ವಿಭೂಮಿಯುಳ್ಳಧನುರಾಕಾರವಾದ। ಪ್ರದೇಶವೇ ಭರತಖಂಡವಿದು । ಸೋ ಮಸೂತ್ರದಂತೆಯುಂ। ಅಳಲಯೆಲೆಯಂತೆಯುಂ । ಹೆದೆಯನೇರಿಸಿದ ಬಿಲ್ಲಿನಂತೆಯು ಕುಂಚಿತದೀರ್ಘವಾಗಿ ಶನಿಗ್ರಹಪಾಲ್ಯವಾಗಿರ್ಪುದೀ ಭರ ತವರ್ಷದೊಳಗುಂ ಬಹುಖಂಡಂಗಳಾಗಿರ್ಪುದಂತೆ ನಲೀಖಂಡಪಂ ಪೂರ್ವ ದೊಳಗಾಳ್ದಮಹಾರಾಜರ ಸೀಮಾಸ್ವತ್ವಾದಿವಿಭಾಗದಿಂ ಚಿರಕಾಲ ನಿರೂ ಢವಾಗಿ ಪ್ರತ್ಯೇಕಿಸಿರೂಪನಾಮ ಧರ್ಮಾದಿವಿಭಿನ್ನವಾಗಿರ್ಕುಂ॥

ಷಟ್ಚಕ್ರವರ್ತಿಗಳು ಮಹಾರಾಜರು.

ಪೂರ್ವದಲ್ಲಿಕಳೆದಕೃತಾದಿಕಾಲಗಳೊಳು। ಹರಿಶ್ಚಂದ್ರ। ನಳ। ಪುರುಕು ತ್ಸ।ಪುರೂರವಸ್ಸು। ಸಗರ। ಕಾರ್ತವೀರ್ಯರೆಂಬ ಷಟ್ಚಕ್ರವರ್ತಿಗಳುಂ।ಗ ಯು।ಅಂಬರೀಷ। ಶಶಿಬಿಂದು। ದಂತಿ। ಪೃಥು। ಮರುತ್ವಂತ।ಭರತ।ಸಹೋ ತ್ರ।ರಾಮ। ದಿಲೀಪ। ರಘು। ರಂತಿದೇವ। ಯಯಾತಿ। ಮಾಂಧಾತೃ। ನೃಗ। ಭಗೀರಥರೆಂಬಷೋಡಶಮಹಾರಾಜರುಂ। ಜನಕ।ಭದ್ರಾಯು। ವಿಶ್ವಾಮಿತ್ರ ದಶರಥ । ಶಂತನುಪ್ರಮುಖಸಹಸ್ರರಾಜರುಂ । ತಮ್ಮತಮ್ಮ ಸ್ಥಿತಿಕಾ ಲಂಗಳಲ್ಲಿ ॥

ಅಷ್ಟೈಶ್ವರ್ಯ.

ಸೌಂದರ್ಯಸಂಚ್ಛೀಲ ಸಂಪನ್ನರಾದ ದಾಸೀಜನರುಂ। ಸ್ವಾಜ್ಞಾನಿರ್ವ ಹಣಸ್ಯಪ್ರಚತುರತಾದಿ ಸಮರ್ಥರಾದ ಭೃತ್ಯವರ್ಗಮುಂ।ನಿಜಗುಣಾದಿಕ

ವಂಶವರ್ಧನ ಕೃತಿವಿನೀತಧಾರ್ಮಿಕಪುತ್ರರಂ। ನಿಜಹಿತಚಿಂತಕದೇಹಸಂಬಂಧಿಬಂಧುವರ್ಗಮುಂ । ತ್ವಸ್ನೇತ್ರಾನಂದಜನಕಮಹಾರ್ಘವಸ್ತ್ರನಿಚಯಮುಂ।ನಿಜೇಂಗಿತಜ್ಞಜವನಾನರ್ಘ್ಯಪಟುಯೋಗ್ಯವಾಹನಂಗಳುಂ।ಲೌಕಿಕಸರ್ವಸ್ವಸಾಧನಭೂತರತ್ನ। ರುಕ್ಮಾದಿಸಂಪತ್ಸಮೃದ್ಧಧರ್ಮಾವಿರುದ್ಧಪ್ರಜಾಜ್ಞಾಧನಮುಂ। ಯಜ್ಞೋಪಭೋಗಬಹುಕುಟುಂಬಭರಣಕ್ಷಮಧಾನ್ಯಸಂಗ್ರಹಮೆಂಬ। ಅಷ್ಟೈಶ್ವರ್ಯಗಳಿಂದೊಡಗೂಡಿ ॥

ಅಷ್ಟಭೋಗಂಗಳು.

ಅಭ್ಯಂತರಬಾಹ್ಯಮಲ। ನಿರ್ಮೋಚಕಮಾದ। ಶಿವಧ್ಯಾನಜಲಾವಗಾಹನಾದಿಸ್ನಾನಮುಂ। ಯಜ್ಞಶಿಷ್ಟಮೃಷ್ಟಾಶನಾದಿ। ಭೋಜನಮುಂ।ವಸನಾರ್ಹತ್ವಕ್ಸೂತ್ರಾದಿವಸ್ತ್ರಮುಂ । ಸುವಾಸಿತಾಂಗರಾಗಾದಿ । ಚಂದನಮುಂ। ಚಕ್ಷುರ್ಘ್ರಾಣತರ್ಪಕಮಾದ। ಪ್ರಸಾದಪುಷ್ಪಮುಂ। ಮುಖವಾಸನಾನುರಂಜಕತಾಂಬೂಲಮುಂ । ಸುಖಸಂತಾನಸಾಧಕಸಂಯೋಗಗಳೆಂಬ। ಅಷ್ಟಭೋಗಂಗಳಿಂ। ಸಂಪನ್ನರಾಗಿ ॥

ಸಪ್ತಸಂತಾನಂಗಳು.

ಮಿತ್ರಮುಂ। ಪಶುಜೀವನಸಸ್ಯಾದಿ । ವರ್ಧನಾದ್ಯುಪಯುಕ್ತತಟಾಕಮುಂ। ದರಿದ್ರಸಂತರ್ಪಣಾದಿ ಧರ್ಮೋಪಯುಕ್ತಧನನಿಕ್ಷೇಪಮುಂ । ನಿಗಮಾಗಮ। ಪ್ರಚಾರಾದಿಶಿದ್ಧಾಸ್ತಿಕ್ಯನಿರ್ವಾಹನಿದಾನಮಾದ। ಉಪನಯನಾದಿಬ್ರಹ್ಮಸ್ಥಾಪನಮುಂ। ಸಕಲಪಾಪನಿವರ್ತಕಸ್ವರ್ಗಾಪವರ್ಗಸಾಧಕಶಿವಾಲಯ। ಪ್ರತಿಷ್ಠಾಪನಮುಂ। ಬಹುಪಕ್ಷಿಜನೋಪಯುಕ್ತಛಾಯಾಫಲಾದಿಪ್ರಧಾನ। ವನರಾಜಪ್ರತಿಷ್ಠಾಪನಮುಂ । ಶಿಷ್ಯಪಾರಂಪರ್ಯಸಂಪ್ರದಾಯ।ಶಿವಧರ್ಮಲೋಕಚರಿತಾದಿಜ್ಞಾಪಕಮಾಗಿ ! ಲೋಕೋಪಕಾರಮಾದ। ಪ್ರಜಾಜ್ಞಾವೈಲಕ್ಷಣ್ಯಮುಳ್ಳ । ಸದ್ಗ್ರಂಥರಚನೆಯುಂ । ಪಿತೃರುಣವರ್ತನ ವಂಶಲತಾವರ್ಧನ। ಸಂಪ್ರದಾಯಸ್ಥಾಪನ। ಧರ್ಮಾನುಪಾಲನ। ನಿಜಸೇವನಾದಿ। ನಿದಾನ। ಸುಪುತ್ರೋತ್ಪಾದನಮೆಂಬ।ಸಪ್ತಸಂತಾನಾನ್ವಿತರಾಗಿ ॥

ರಾಜಲಕ್ಷಣ.

ಸಾಮದಾನಭೇದದಂಡವೆಂಬ । ಚತುರುಪಾಯಂಗಳುಳ್ಳವರೆನಿಸಿ।ಸಂಧಿವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಂಗಳೆಂಬ। ಷಡ್ಗುಣಸಮೇತರಾಗಿ। ಭೇದಂತಂತ್ರ। ಪರೀಕ್ಷಾತಂತ್ರ। ವಿಶ್ವಾಸತಂತ್ರ। ವಂಚನಾತಂತ್ರ ಮಿತ್ರಕಾರ್ಯತಂತ್ರ। ವೆಂಬ। ಪಂಚತಂತ್ರ। ಪ್ರವೀಣರೆನಿಸಿ।ಪ್ರಭುಶಕ್ತಿ।

ಮಂತ್ರಶಕ್ತಿ। ಉತ್ಸಾಹಶಕ್ತಿ। ಎಂಬಶಕ್ತಿ। ತ್ರಯಸಹಿತರಾಗಿ।ಕ್ಷಯಸ್ಥಾನವೃದ್ಧಿಯೆಂಬವರ್ಗತ್ರಯವಿಶಿಷ್ಟರೆನಿಸಿ । ಹಸ್ತ್ಯಶ್ವರಥಪದಾತಿಯೆಂಬಚತುರಂಗಬಲದಿಂದಲಂಕೃತರಾಗಿ। ವಿದ್ವಾಂಸರು, ಕವಿಗಳು, ಭಟ್ಟರು, ಗಾಯಕರು, ಪರಿಹಾಸಕರು, ಇತಿಹಾಸಜ್ಞರು, ಪೌರಾಣಿಕರೆಂಬ।ಸಪ್ತಾಂಗಪರಿವೇಷ್ಟಿತರೆನಿಸಿ। ಮತ್ತಮಾಸಭಾಸ್ಥಿತದಿವ್ಯಸಿಂಹಾಸನದಿಕ್ಕೆಲ್ಲದೋಲಗದಲ್ಲಿ ಕಿಕ್ಕಿರಿದು ಕುಳ್ಳಿರ್ದ ಮಂತ್ರಿಮನ್ನೆಯರುಸಂಧಿವಿಗ್ರಹಿಸಾಮಂತಪ್ರರ್ೂದಲಾದ ಸಕಲಯೋಗಿ ನಿಕರಂಗಳಿಂದುಪಾಸ್ಯರಾಗಿರ್ಕುಂ ॥

ಛಂದಸ್ಸುಗಳು.

ಮತ್ತಮಲ್ಲಿ। ಉಕ್ತಾ, ಅತ್ಯುಕ್ತಾ, ಮಧ್ಯಾ, ಪ್ರತಿಷ್ಠಾ, ಸುಪ್ರತಿಷ್ಠಾ, ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಂಪ್ ಜಗತೀ, ಅತಿಜಗತೀ, ಶಕ್ವರಿ, ಅತಿಶಕ್ವರೀ, ಅಷ್ಟಿ, ಅತ್ಯಷ್ಟಿ, ಧೃತಿ, ಅತಿಧೃತಿ, ಕೃತಿ, ಪ್ರಕೃತಿ, ಅಕೃತಿ, ವಿಕೃತಿ, ಆಕೃತಿ, ಸಂಕೃತಿ, ಉತ್ಕೃತಿಯೆಂಬ। ಇಪ್ಪತ್ತಾರುಛಂದಸ್ಸುಗಳನರಿತು ॥

ಅಲಂಕಾರಗಳು.

ಸಮಾಸೋಕ್ತಿ, ಪರ್ಯಾಯೋಕ್ತಿ, ಆಕ್ಷೇಪ, ವ್ಯಾಜಸ್ತುತಿ, ಉಪಮೇಯೋಪಮೆ, ಅನನ್ವಯ, ಅತಿಶಯೋಕ್ತಿ, ಪರಿಕರ, ಅಪ್ರಸ್ತುತಪ್ರಶಂಸೆ, ರೂಪಕ, ಪರಿಣಾಮ, ಸಂದೇಹ, ಭ್ರಾಂತಿಮತ್ ಉಲ್ಲೇಖ, ಅಪಹ್ನವ, ಉತ್ಪ್ರೇಕ್ಷೆ, ಸ್ಮೃತಿಸಾಮ್ಯಯೋಗಿತೆ, ದೀಪಕ, ಪ್ರತಿವಸ್ತೂಪಮ, ದೃಷ್ಟಾಂತಸಹೋಕ್ತಿ, ವ್ಯತಿರೇಕ, ನಿದರ್ಶನ, ಶ್ಲೇಷೋಪಮೆ, ವಿನಯೋಕ್ತಿ, ಅರ್ಥಾಂತರನ್ಯಾಸ, ವಿರೋಧವಿಭಾವನೆ, ವಿಶೇಷೋಕ್ತಿ, ವಿಷಮ, ಉದ್ಯೋಗ, ಅಧಿಕ, ಅನ್ಯೋನ್ಯಕಾರಣಮಾಲೆ ಏಕಾವಳಿ, ವ್ಯಾಘಾತ, ಸೂಕ್ಷ್ಮೋತ್ತರ, ಮಾಲಾ, ದೀಪಕವಾಚ್ಯಲಿಂಗ, ಅನುಮಾನ, ಸಾರಾವಳಿ, ಸಂಖ್ಯಾ, ಅರ್ಥಾಪತ್ತಿ, ಪರ್ಯಾಯ, ಪರಿವೃತ್ತಿ, ಪರಿಸಂಖ್ಯೆ, ವಿಕಲ್ಪ,ಸಮುಚ್ಚಯ, ಸಮಾಧಿ, ಪ್ರತ್ಯನೀಕ, ಪ್ರತೀಪ, ವಿಶೇಷಮೇಳನ, ಸಾಮಾನ್ಯಸತ್ಯ, ಸಂಗತ, ತದ್ಗುಣ, ವಾಚೋಕ್ತಿ, ವಕ್ರೋಕ್ತಿ, ಸ್ವಭಾವೋಕ್ತಿ, ಭಾವಿಕ, ಉದಾತ್ತಾದ್ಯಲಂಕಾರಗಳೊಡಗೂಡಿ ॥

ಮಹಾಕಾವ್ಯವರ್ಣನಾದಿಗಳು.

ಪುರಗಿರಿಋತುನಂದನ ಸೋಮೋದಯ ಸಮುದ್ರಜಲಕೇಳೀಮಧುಪಾನಗೋಷ್ಠೀಸಂಭೋಗ ವಿಪ್ರಲಂಭವಿವಾಹ ಪುತ್ರೋತ್ಸವ ಮಂತ್ರಿನೃಪ

ತಿದಊತ ವೃಗಯಾಯಾನವೆಂಬಷ್ಟಾದಶವರ್ಣನಸಹಿತವಾಗಿ ದ್ವೇಷವು ಸೊದ ಸಮತೆ ಮಾಧುರ್ಯ ಸುಕುಮಾರತೆ ಅರ್ಥವ್ಯಕ್ತಿ ಉದಾರತ್ವ ಓಜಸ್ಸು ಕಾಂತಿಸುಖಾದಿಗಳೆಂಬ ದಶಪ್ರಾಣನಿಡಿದು ॥

ಕಾವ್ಯರೀತ್ಯಾದಿಗಳು.

ಗೌಡೀರೀತಿ, ವೈದರ್ಭಿರೀತಿ, ಪಾಂಚಾಲಿರೀತಿ, ತ್ರಯಸಮೇತವಾಗಿ ರಸಭಾವಚಿತ್ರಚಮತ್ಕಾರಂದೋರಿ, ಸಂಧಿ, ಸಮಾಸ, ತದ್ಧಿತ, ಅಖ್ಯಾತ ಧಾತು, ಅಪಭ್ರಂಶಅವ್ಯಯವೆಂಬಷ್ಟಪ್ರಕಾರಮಂ ಪ್ರಪಂಚಿಸುವ ವ್ಯಾಕರಣದೋಷಮಿಲ್ಲದೆ, ಅನರ್ಥಕ, ಶ್ರುತಿಕಠೋರ, ವ್ಯಾಹತಾರ್ಥ, ಅಲಕ್ಷಣ, ಸ್ವಸಂಕೇತಪ್ರಕ್ಲೃಪ್ತಾರ್ಥ, ಅಸಂಮತ, ಅಪಛಂದಸ್ಸು, ಯತಿಭ್ರಷ್ಟ, ದುಷ್ಟ, ಅಸತ್ಕ್ರಿಯೆಯೆಂಬ ಯೆಂಟುವಾಕ್ಯದೋಷಮಿಲ್ಲದೆ ॥

ಶಬ್ದದೋಷಂಗಳು.

ಶಬ್ದಪುನರುಕ್ತಿ। ಅರ್ಥಪುನರುಕ್ತಿ। ಅರ್ಥಲೋಪವಿರುದ್ಧಾರ್ಥಚ್ಯುತಕ್ರಮ। ವ್ಯವಹಿತ। ವಿಸಂಧಿ।ನೇಯಾರ್ಥವೆಂಬೆಂಟುಶಬ್ದದೋಷಂಗಳಿಲ್ಲದೆ॥

ಕಾವ್ಯಭೇಧಗಳು.

ಗದ್ಯಕಾವ್ಯ। ಪದ್ಯಕಾವ್ಯ। ಚಂಪುಕಾವ್ಯ। ಗೀತಪ್ರಬಂಧ। ಪ್ರೌಢಪ್ರಬಂಧಗಳೆಂಬ। ಪಂಚವಿಧಕಾವ್ಯಪ್ರಬಂಧಗಳಂ। ಸಂಸ್ಕೃತ। ಪ್ರಾಕೃತ। ಪೈಶಾಚಿಕ। ಮಾಗಧ। ಶೌರಸೇನ। ಭಾಂಡೀರ।ಅಪಭ್ರಂಶ। ವೈಕೃತ।ಶುದ್ಧ ಮಿಶ್ರಾದಿಭಾಷಾಭೇದಗಳಂವೇಳ್ವಲಾಕ್ಷಣಿಕರಪ್ಪ। ಕವಿಗಳಂ ॥

ಗಮಕಿಗಳು.

ಮತ್ತಮಾಗಾನತಾನಮಾನಂಗಳಂತೋರಿ। ಯತಿಚರಣಾರ್ಥೋಲ್ಲೇಖಾದಿಸಾಂದರ್ಭಿಕವಿಶ್ರಮನರಿತು। ಪದಸಂವ್ಯಕ್ತಿಗೈದು। ಕೇಳ್ವರಿಗಿಂಪುಗೊಳಿಸಿಮೃದು ಮಧುರವ್ಯಕ್ತವರ್ಣೋಚ್ಚಾರಣದಿಂ। ಭಾವಸೂಚಕರಾದ ಗಮಕಿಗಳಿಂದುದ್ಗೀತರಾಗಿ॥

ವಾದಿಗಳು.

ಮತ್ತು। ನ್ಯಾಯ। ವೈಶೇಷಿಕ। ಖಂಡನ। ಪ್ರಾಭಾಕರ।ಕೈಯ್ಯಟ।ಬಾಹಟ। ಪ್ರಾತಿಶಾಖ್ಯ। ಕಲ್ಪ।ಹೋರಾ। ದೋಹಳ। ಧರ್ಮವೇದಾಂತ।ಸಿದ್ಧಾಂತಗಳಲ್ಲಿ। ಪ್ರಮಾಣಪ್ರಮೇಯೋಪನ್ಯಾಸದೃಷ್ಟಾಂತ। ಸಮನ್ವಯಾದಿ ಸದ್ಯುಕ್ತಿನಿರೂಪಕರಾದವಾದಿಗಳಂ ॥ ವಾಗ್ಮಿಗಳು.

ಮತ್ತು। ಸ್ಥಾನಸಮಯ ಪ್ರಕ್ರಿಯಾನುರೂಪಮಾಗಿಪ್ರಸ್ತಾವೋಚಿ

ತಮುಪ್ಪಸರಸಾಲಂಕಾರ ಮೃದುಮಧುರ ವ್ಯಕ್ತಾರ್ಥಭಾವಪ್ರಧಾನವಾಗ್ವೈಖರೀವೈಚಿತ್ರ್ಯದಿಂ ಶ್ರೋತೃಜನಕರ್ಣರಸಾಯನವಾಗಿ ಚಾತುರ್ಯವಂತರೊರ್ಪವಾಗ್ಮಿಗಳಂ॥

## ಸ್ಥಾಯಿಭಾವಂಗಳು.

ಬಳಿಕ। ರತಿ, ಹಾಸ, ಶೋಕ, ಕೋಪ, ಉತ್ಸಾಹ, ಭಯ, ಜಿಗುಪ್ಸೆ ವಿಸ್ಮಯಶಮವೆಂಬಕ್ರಮದಿಂ। ಶೃಂಗಾರಾದಿನವರಸಂಗಳಿಗೆ ಬೀಜಭೂತಂಗಳಪ್ಪದಸ್ಥಾಯಿಭಾವಂಗಳು। ದಕ್ಷಿಣಾದಿನಾಯಕಹೃದಯದೊಳಗಭಿವ್ಯಕ್ತವಾಗಿರ್ದು॥

## ಆಲಂಬನವಿಭಾವಂಗಳು.

ಬಳಿಕ। ಸ್ವಕೀಯೆ। ಪರಕೀಯೆ। ಸಾಮಾನ್ಯೆಯರೆಂಬನಾಯಿಕೆಯರ್ಗುಚಿತಮಾದತಥ್ಯಾತಥ್ಯಡಂಭಾದಿ। ಚಾಟುವೃತ್ತಿಭೇದ। ಮೆನಿಪಸಾಲಂಬನ।ವಿಭಾವಂಗಳಿಂದಾಸ್ಥಾಯಿಭಾವಂಗಳಂಕುರಿಸಿ॥

## ಉದ್ದೀಪನವಿಭಾವಂಗಳು.

ಬಳಿಕಿಂದುಮಂದಾನಿಲಪದ್ಮಪಲ್ಲವಭೃಂಗಲತಾಮೇಘಕೋಕಸೈಕತಬಿಂಬಪ್ರವಾಳ ಪುಷ್ಪಗಂಧತಾಂಬೂಲಶಯ್ಯಾಸೌವಿಹಾರಾದ್ಯುದ್ದೀಪನ ವಿಭಾವಂಗಳಂಪ್ರಕಟಗೊಂಡು। ಪರಹೃದಯಗೋಚರಂಗಳಾಗಿ॥

## ಸಾತ್ವಿಕಭಾವಾನುಭಾವಂಗಳು,

ಆಯಾರಸಕಾರ್ಯಮಪ್ಪುದರಿಂರಸಾನಂತರಭಾವಿಗಳಾದ। ಸ್ತಂಭ।ಸ್ವೇದರೋಮಾಂಚ। ಸ್ವರಭೇದ। ಕಂಪನ। ವಿವರ್ಣ। ಅಶ್ರು। ಪ್ರಳಯಂಗಳಂಬಷ್ಟವಿಧಸಾತ್ವಿಕಭಾವಂಗಳಂದರಹಾಸಕಟಾಕ್ಷೇಕ್ಷಣ। ಭ್ರೂವಿಕ್ಷೇಪಣ। ಕುಚಶಿಖರಚಾಲನಾದಿಚೇಷ್ಟಾವಿಶೇಷಂಗಳೆಂಬ ಅನುಭಾವಂಗಳಂ॥

## ಸಂಚಾರೀಭಾವಂಗಳು.

ಮತಿ। ಲಜ್ಜೆ। ಆವೇಗ। ಶಂಕೆ। ಮರಣ। ಚಪಲತೆ। ಹರ್ಷ। ನಿರ್ವೇಗ।ದೈನ್ಯ। ಸ್ಮೃತಿ। ಮೋಹ। ಆಲಸ್ಯ। ಗರ್ವ। ಶ್ರಮ। ದಮೆ। ಜಡತೆ। ಜ್ಞಾನ। ಸುಪ್ತಿ। ನಿದ್ರೆ। ಧೃತಿ। ತರ್ಕ। ಉನ್ಮಾದ। ಬೋಧೆ। ಆಮಯ। ಭಯ।ವಿಷಾದ। ಔತ್ಸುಕ್ಯ। ಅಮರ್ಷ। ಚಿಂತೆ। ಅಸೂಯೆ। ಅವಹಿತ್ಥ। ಉಗ್ರ।ಅಪಸ್ಮಾರಗಳೆಂಬ। ಮೂವತ್ತುಮೂರುಸಂಚಾರೀಭಾವಂಗಳಂಪರಿವರ್ಧಿಸಿ॥

## ನವರಸೋತ್ಪತ್ತಿ.

ಬಳಿಕ ಶೃಂಗಾರಹಾಸ್ಯಕರುಣ ರೌದ್ರವೀರ ಭಯಾನಕಭೀಭತ್ಸಾದ್ಭು

ಶಾಂತಂಗಳೆಂಬ ನವರಸಾವಸ್ಥೆಯುಂ ಘಡವೃತ್ತಿರ್ಪುದೆಂಬ ರಸಜ್ಞತೆಯುಂ ಲೌಕಿಕರಸಲುಬ್ಧರಾದನಾಗರಿಕರಿಂ ॥

ರತ್ಯಾತ್ಮಕಮನೋವೃತ್ತಿವೈಕಲ್ಯ.

ಬಳಿಕ ಪರಮಾರ್ಥದೊಳಗಾದೊಡೆ। ಅನುರಾಗರೂಪಮಾದರತಿ ಎಂಬುದೊಂದೇ ತತ್ತದುಪಾಧಿವಿಷಯಭೇದದಿಂ। ದಾಯಾಸ್ಥಾಯಿಭಾವಾಂತರ। ಸಂಜ್ಞೆಯುಂಪಡದು ವಿಷಯ ವೈಲಕ್ಷಣ್ಯದಿಂ ಬಹುರೂಪಮಾಗಿರ್ಪುದೆಂತನೆ। ರತಿಯೊಂದೇ ಕಾಂತಾದಿವಿಷಯಕಮಾಗಿ। ರಾಗಮಯಮಹತನದಿಂ। ಶೃಂಗಾರಸಂಜ್ಞೆಯಂಪಡೆವುದು। ಪುತ್ರಾದಿವಿಷಯಕಮಾಗಿಸ್ನೇಹಮಯಮಹತನದಿಂ। ಬಂಧುವಿಷಯಮಾಗಿ ಪ್ರೇಮಾತ್ಮಕಮಹತನದಿಂ। ನೃಪಗುರುದೇವತಾ ವಿಷಯಕಮಾಗಿ। ಭಕ್ತಿರೂಪಮಹತನದಿಂ। ಸ್ವಾತ್ಮವಿಷಯಕಮಾಗಿಪರತರ। ಪ್ರೀತಿವಿಷಯಮಪ್ಪುದರಿಂ। ಮತ್ತಮಪ್ರಾಪ್ತವಸ್ತುವಿಷಯಕಮಾಗಿತದಿಚ್ಛಾರೂಪಮಹತನದಿಂ। ತತ್ತದಭಿಧಾನಮಂಪಡದು।ಬಳಿಕ।ಹಸಿತವ್ಯ। ಶೋಚ್ಯ। ದ್ವೇಷ್ಯಪ್ರತಿಭಟ। ಭೀಷಣ। ಜಿಗುಪ್ಸನೀಯ॥ ಆಶ್ಚರ್ಯ। ಸಾಮ್ಯಾಸ್ಪದಂಗಳೆಂಬರಸಾಷ್ಟಕರೂಪಮಾಗಿ। ತತ್ತದ್ವಾಚ್ಯಮಹುದೆಂದುವೈದಿಕನವಸಂನಿಪುಣರಾದವಿವಕ್ಷಿತರಿಂ ॥

ನಾಯಕಾದಿಭೇದಗಳು.

ಬಳಿಕ ಧೀರೋದಾತ್ತ। ಧೀರೋದ್ಧತ। ಧೀರಲಲಿತ। ಧೀರಶಾಂತ। ರೆಂಬ ಚತುರ್ವಿಧಶೃಂಗಾರನಾಯಕರಿಂ। ಶಶ। ವೃಷಹಯ। ರೆಂಬತ್ರಿವಿಧಪರಿಮಾಣಪುರುಷರಿಂ। ಮಂದವೇಗ। ಚಂಡವೇಗ। ರೆಂಬದ್ವಿವಿಧರತಿಪರಿಣತರಿಂ।ಬಳಿಕ।ವಿಟ।ವಿದೂಷಕನಾಗರಿಕ। ರೆಂಬಚತುರ್ವಿಧಭೋಗಸಖರಿಂ ॥

ನಾಯಕ್ಯಾದಿಗಳು.

ಬಳಿಕ। ಸ್ವಕೀಯ। ಪರಕೀಯ। ಸಾಮಾನ್ಯೆಯರೆಂಬ ತ್ರಿವಿಧನಾಯಕಿಯರಿಂ। ಜ್ಯೇಷ್ಠೆ। ಕನಿಷ್ಠೆಯರೆಂಬದ್ವಿವಿಧಗುಣವಿಶೇಷವನಿತೆಯರಿಂ ॥೮॥ ೯॥೧೬॥ ೨೦॥ ೩೦॥ ೪೦॥ ೫೦॥ ವರ್ಷಗಳನುಕ್ರಮದಿಂ। ಮೊಳೆಜೌವನ। ಉಳಿಜೌವನ। ನೆರೆಜೌವನ। ತುಂಬುಜೌವನ। ಮೋಟುಜೌವನ। ಬಲುಜೌವನ। ಬಿಡುಜೌವನಂಗಳಿಂ। ಗೌರಿ। ಕನ್ಯಕೆ। ಬಾಲೆ।ಮುಗ್ಧೆ।ವಿದಗ್ಧೆ। ಪ್ರಗಲ್ಭೆ। ಇಚ್ಛಾವತಿಯರೆಂದು। ಪೆಸರ್ಪಡೆದಸಪ್ತವಯೋವಿಶಿಷ್ಟಕಾಂತೆಯರಿಂ। ಮುಗ್ಧೆ। ಮಧ್ಯೆ।ಪ್ರೌಢೆಯರೆಂಬ। ಚಿತ್ತಾಕಾರವಿಶೇಷಮುಳ್ಳಸೀಮಂತಿನಿಯರಿಂ। ಉತ್ತಮೆ। ಮಧ್ಯಮೆ। ಅಧಮೆಯರೆಂಬತ್ರಿವಿಧಕೋಪ

ಪ್ರಸಾದ ಸಮಲಕ್ಷಣಲಕ್ಷಿತಲಲನೆಯರಿಂ। ಕನ್ಯೆ। ಊಢೆ। ಯೆರಂಬೆರಡುಪ್ರಕಾರಮಾದನಾಯಕಿಯರಿಂ ॥

ನಾಯಿಕಾವಿಶೇಷಗಳು.

ಸ್ವಾಧೀನಭರ್ತೃಕೆ। ಖಂಡಿತೆ। ವಿಪ್ರಲಬ್ಧೆ।ಅಭಿಸಾರಿಕೆ।ವಾಸವಸಜ್ಜಿಕೆ। ಪ್ರೋಷಿತಭರ್ತೃಕೆ। ವಿರಹೋತ್ಕಂಠಿತೆ।ಕಲಹಾಂತರಿತೆಯರೆಂಬ ಯೆಂಟುತೆರದವಸ್ಥಾನಿಬದ್ಧರಾಪಕಾಮಿನಿಯರಿಂ। ಬಿಬ್ಬೋಕ।ಮೋಟ್ಟಾಯಿತ।ಲಲಿತ ಕಿಲಕಿಂಚಿತ।ವಿಜಿತ।ವಿಲಾಸ।ವಿಸ್ಮೃದಿತ।ವಿಭ್ರಮ।ವಿಹೃತಿ। ಕುಟ್ಟಮಗಳೆಂಬ ದಶವಿಧಕೇಳೀಬಾವಂಗಳುಳ್ಳವಿಲಾಸಿಯರಿಂ । ಹಸ್ತಿನಿ, ಚಿತ್ತಿನಿ, ಶಂಖಿನಿ, ಪದ್ಮಿನಿಯರೆಂಬಚತುರ್ವಿಧಜಾತಿಸ್ತ್ರೀಯರಿಂ । ಹರಿಣಿ। ಅಶ್ವಿನಿ।ಇಬಾಯಿತೆಯರೆಂಬತ್ರಿವಿಧಪರಿಮಾಣಪ್ರಮದೆಯರಿಂ । ಮಂದವೇಗಿನಿ।ಮಧ್ಯವೇಗಿನಿ । ಚಂಡವೇಗಿನಿಯರೆಂಬ ತ್ರಿವಿಧರತಿಭೇದಕಾಂತೆಯರಿಂ। ದೇವಸತ್ವ। ಯಕ್ಷಸತ್ವ। ಗಂಧರ್ವಸತ್ವ। ನರಸತ್ವ। ನಾಗಸತ್ವ ಕಾಕಸತ್ವ ವಾನರಸತ್ವ ಮುನಿಸತ್ವ ಪಿಶಾಚಸತ್ವ ರಾಕ್ಷಸಸತ್ವ ಕಿನ್ನರಸತ್ವ ಖರಸತ್ವವೆಂಬದ್ವಾದಶಸತ್ವದಶತಿಯರಿಂ ॥

ಸಖೀಪ್ರಮುಖರು.

ಬಳಿಕ। ಅಭಿಸಾರಿಕೆ। ಚತುರಿಕೆ । ಸಹಸಂಚಾರಿಕೆ। ದೂತಿಯರೆಂಬಚತುರ್ವಿಧಸಖಿಯರಿಂ। ಅಭಿಮಾನಪ್ರೀತಿ। ವಿಭವಪ್ರೀತಿ। ಸಗೃಹಪ್ರೀತಿ।ವಿಷಯಪ್ರೀತಿಯೆಂಬನಾಲ್ಕುತರದಪ್ರೀತಿತತ್ಪರರಿಂ। ಲಜ್ಜಾಮೋಹ । ವಿಭವಮೋಹ। ಕರುಣಮೋಹ। ನಿಜಮೋಹವೆಂಬ । ಮೋಹಚತುಷ್ಟಯವಿಷಯರಿಂ! ಕೂರ್ಮಮೋಹ। ಮತ್ಸ್ಯಮೋಹ। ಮೃಗಮೋಹವೆಂಬುತ್ತಮಮಧ್ಯಮಾದವು ಮೋಹಮಯರಿಂ ॥

ಕಲಾಸ್ಥಾನಗಳು.

ಬಳಿಕ, ಚಿಟ್ಟು, ಅಡಿ, ಹರಡು, ಮೊಳಕಾಲು, ಜಘನ, ಹೊಕ್ಕಳು ಎದೆ, ಕುಚಕಕ್ಷ, ಕೊರಳು, ಕದಪು, ತುಟಿ, ಕಣ್ಣು, ಫಣೆ, ನೆತ್ತಿಗಳೆಂಬ ಪಂಚದಶಕಲಾಸ್ಥಾನ ಶುಕ್ಲಪಕ್ಷಾದಿತಿಥಿಯೋಗಕ್ರಮವಿಜ್ಞಾನಪೂರ್ವಕಕ್ರೀಡಾವಿಚಕ್ಷಣರಿಂ ॥

ಆಲಿಂಗನಚುಂಬನಾದಿಗಳು.

ಬಳಿಕ ಪುಷ್ಕರ, ವಿವಿಧಕ, ಧೃಷ್ಟಕ, ಪೀಡನ ವೃಕ್ಷಾರೋಹಣ, ಲತಾವೇಷನ, ತಿಲಕಂಡುಲತೆ, ಕ್ಷೀರನೀರಾಯಿತ, ಊರೂಪಗೂಹನ, ಜಘ

ನೋಪಗೂಹನ, ಸ್ತನಾಶ್ಲೇಷ, ಲಲಾಟಕವೆಂಬ, ದ್ವಾದಶವಿಧಾಲಿಂಗನ ಗಳಂ। ಬಳಿಕ। ನಿಮಿತ್ತಕ, ಸಂಘಟಿಕ, ಸ್ಫುರಿತಕ, ಭ್ರಾಂತಿಕ, ತಿರ್ಯಗಾಯಿತಕ, ಅತಿದೃಷ್ಟಕ, ಉತ್ತರಸಂಘಟಿತಕ, ಜಿಹ್ವಾಮೇಳನಕ ಜಿಹ್ಮಕ, ಅತಿಜಿಹ್ಮಯೋಗ। ಸೀತ್ಕಾರದಂಶನಕವೆಂಬ, ದ್ವಾದಶವಿದಚುಂಬನಸಂಭ್ರಮಿಗಳಂ ॥

ದಂತಕ್ಷತನಖಕ್ಷತಾದಿಗಳು.

ಬಳಿಕ। ವರೋಪಗೂಢ। ಅಂಕುಶಯಾನಕ। ಪ್ರವಾಳಮಣಿ। ಸ್ಫುಟಮಾಲಿಕೆ। ಖಂಡಾಭ್ರಕ। ಮಂಡಲಾಕೃತಿ। ಕ್ರೋಡಚರ್ವಿತ। ವರಾಹಚರ್ವಿತವೆಂಬಅಷ್ಟವಿದರದನಕ್ಷತಲಾಕ್ಷಣಿಕರಿಂ। ಪಂಚನಖಯೋಗ।ದ್ವಂದ್ವಯೋಗ। ಅರ್ಧಚಂದ್ರಕ। ಮಂಡಲ। ಮಯೂರಪ್ಲುತ। ಶಶಪ್ಲುತ। ಉತ್ಪಲವೆಂಬ ಸಪ್ತವಿದನಖೋಪಕ್ಷತವಿಹಿತರಿಂ। ಮದಸಾಂದೋಳನ। ಮದನಚ್ಛತ್ರ ಪೂರ್ಣಚಂದ್ರಾದಿನಾಡೀಮರ್ಮಜ್ಞರಿಂ ॥

ರತಿಚತುರರು.

ಬಳಿಕ ಸಂಯುತೋರುಕರುಣ ವಿಕೃತೋರುಕರುಣ ತಿರ್ಯಕ್ಕರಣ ಸ್ಥಿತಿಕರಣ ಉಪಾನಕರಣ ಪ್ರಚ್ಛನ್ನಸಂಭೋಗ ಪ್ರಕಾಶಯಾಭನ ವೀರಾಯಿತಕ ಧೋಟೀನಿಗೂಹನ ಬಂಧಾನುಬದ್ಧ ಕಪೋತಾಪಸಾಯಿ ಮಣಿತೋನ್ಮುಖರವೆಂಬಕ್ರಿಯಾವಿಶೇಷಗಳಂದಾದಿಮಧ್ಯಾಂತರತಿತಂತ್ರಚತುರರಿಂ ಪೂರ್ವಾನುರಾಗ ಮಾನಾಖ್ಯ ಪ್ರವಾಸ ಕರುಣಾತ್ಮಕವೆಂಬವಿಯೋಗಚತುಷ್ಟಯುಪಶಿಷ್ಟಪ್ರಚ್ಛನ್ನಪ್ರಕಾಶವಿಪ್ರಲಂಭವಿದಗ್ಧರಿಂ ಕಾರ್ಶ್ಯಜಾಗರಣ ಸಂತಾಪನವೆಂಬ ಅವಸ್ಥಾತ್ರಯುಪರೀಕ್ಷಕರಿಂ ಉನ್ಮಾದನ ಮದನ ಮೋಹನ ಸಂತಾಪನ ವಶೀಕರಣವೆಂಬಪಂಚಮಂತ್ರಬಾಣಪ್ರಯೋಗಪತ್ರಾಪಪ್ರವೀಣರಿಂ ಅಶೋಕ ಅರವಿದ ಚೂತ ಮಲ್ಲಿಗೆ ನೈದಿಲೆಯೆಂಬ ಪಂಚಕುಸುಮಾಸ್ತ್ರಸ್ವರೂಪಕಾರ್ಯ ಸಂಧಾನಕೋವಿದರಿಂ ॥

ದಶಕಾಮಾವಸ್ಥೆಗಳು.

ಬಳಿಕ ಪಂಚಬಾಣಂಗಳಿಗೆಲಕ್ಷ್ಯಸ್ಥಾನವಾದ ಮಸ್ತಕ ಮುಖ ವಕ್ಷಸ್ಸು ಪೃಷ್ಠ ಹೃದಯವೆಂಬ ಪಂಚಾವಯವಂಗಳೊಳ್ಕ್ರಮದಿಂ ದೊಂದೊಂದಕ್ಕೆರಡರಡಾಗಿಪುಟ್ಟುವ ಅಭಿಲಾಷೆ ಚಿಂತೆ ಸಂಸ್ಮೃತಿ ವಿಭುಗುಣಸ್ಮೃತಿ ಸಂತಾಪನಕ್ರಿಯಾದ್ವೇಷ ವಿಕಲ ಮೌನ ಮೂರ್ಛೆ। ಮರಣವೆಂಬದಶಾವಸ್ಥಾವಿಚಾರಪರರಿಂದುಪಾಶ್ರಿತರಾಗಿ ॥

ಸರೋತ್ಪತ್ತ್ಯಾದಿಕ್ರಮ.

ಅನಂತರದಲ್ಲಿ। ಅಕಾರ। ಉಕಾರ। ಮಕಾರವೆಂಬ ಮೂರು। ಬೀಜಾಕ್ಷರಂಗಳಲ್ಲಿ। ಅಕಾರವೇರಜೋಗುಣಾತ್ಮಕಬ್ರಹ್ಮನು। ಉಕಾರವೇಸತ್ವಗುಣಾತ್ಮಕವಿಷ್ಣುವು। ಮಕಾರವೇತಮೋಗುಣಾತ್ಮಕರುದ್ರನು। ಮತ್ತಮಾ. ಅಕಾರವೇವಾಮನಾಸಾಪುಟದ। ಇಡೆಯೆಂಬಚಂದ್ರನು। ಉಕಾರವೇದಕ್ಷಿಣನಾಸಾಪುಟದಪಿಂಗಳೆಯೆಂಬಸೂರ್ಯನು।ಮಕಾರವೇತನ್ಮಧ್ಯದಸುಷುಮ್ನೆಎಂಬಗ್ನಿ। ಬಳಿಕ ಅಕ್ಷರತ್ರಯದೊಂದು। ಕೂಟದಿಂ। ಸಕಲದೇವತಾ।ಮಂತ್ರಾತ್ಮಕ। ಮಾಮೋಂಕಾರವಾಯಿತು ॥

ದಶವಿಧನಾದಗಳು.

ಮತ್ತಮಾ।ಓಂಕಾರವೆಂಬ। ನಾದದಿಂಸ್ವರನಿರ್ಘೋಷ।ನಿರ್ಣಯಧ್ವನಿ ಘಂಟಾಧ್ವನಿ। ಕಾಹಳಧ್ವನಿ। ಶಂಖಧ್ವನಿ। ಮೇಘಧ್ವನಿ। ಮೃದಂಗಧ್ವನಿ। ಭೇರೀಧ್ವನಿ। ಮಂತ್ರಧ್ವನಿ। ಅವ್ಯಕ್ತಪ್ರಣವಧ್ವನಿಯೆಂಬ। ದಶವಿಧನಾದಂಗಳಾದವವುಗಳಲ್ಲಿ। ಮೊದಲನೇಸ್ವರವೇ। ನಾಭಿ। ಉರಸ್ಸು। ಕಂಠವೆಂಬ ತ್ರಿಸ್ಥಾನದಿಂಪುಟ್ಟಿ। ಜೀವಸ್ಥಾನಸಂಚಾರಿಯಾದ। ಮಾರುತೋದ್ಗತಿಯಿಂದಭಿವ್ಯಕ್ತಮಾಗಿ। ಹೃದಯ। ಕಂಠ।ಶಿರಸ್ಸೆಂಬಸ್ಥಾನತ್ರಯದಲ್ಲಿಕ್ರಮದಿಂ ಮೃದು। ಮಧುರ। ಮಂತ್ರಾಕಾರವೆಂಬ। ತ್ರಿವಿಧಸ್ವರಭೇದಾತ್ಮಕತ್ವಮಂ ಪಡೆವುದಾಸ್ವರದಿಂಬಳಿ।ಷಡ್ಜಾದಿಸ್ವರಂಗಳಾದವೆಂದು। ಪ್ರಣವಾದ್ಯಂತನಾದಮೂರ್ತಿಯೆಂಪರಿಭಾವಿಸಿ ॥

ಸಪ್ತಸ್ವರೋತ್ಪತ್ತಿಸ್ಥಾನಮುಂತಾದ ಗಾನಶಾಸ್ತ್ರ.

ಬಳಿಕ ಸಪ್ತಸ್ವರಂಗಳುತ್ಪತ್ತಿಕ್ರಮದಲ್ಲಿ।ಪರಶಿವನ। ಈಶ್ವರ।ಸದ್ಯೋಜಾತವಾಮದೇವ। ಅಘೋರ। ಸತ್ಪುರುಷ। ಈಶಾನ। ನಿರಂಗ।ವೆಂಬೇಳು ಮುಖಂಗಳಕ್ರಮವಿಡಿದು। ಷಡ್ಜ।ರುಷಭ। ಗಾಂಧಾರ। ಮಧ್ಯಮ। ಪಂಚಮ।ಧೈವತ। ನಿಷಾದವೆಂಬಸಪ್ತಸ್ವರಂಗಳುದಿಸಿದವು। ಬಳಿಕ। ಕಂಠ।ಶಿರಸ್ಸು।ನಾಸಿಕೆ। ಹೃದಯ। ಮುಖಕಾಲು। ಪೂರ್ವಾಂಗವೆಂಬವೇ। ಪರಿವಿಡಿಮ ಷಡ್ಜಾದಿ। ಸಪ್ತಸ್ವರಸ್ಥಾನಂಗಳೆಂದುಂಪರೀಕ್ಷಿಸಿ ॥

ಸರ್ವಕಾಲಧ್ವನಿನಕ್ಷತ್ರಾದಿಗಳು

ಸೂರ್ಯೋದಯ। ಮಧ್ಯಾಹ್ನ। ಅಪರಾಹ್ನ। ಸಾಯಾಹ್ನ। ಪೂರ್ವರಾತ್ರಿ। ಅಪರರಾತ್ರಿ। ನಿಶಾವಸಾನಂಗಳೇಕ್ರಮದಿಂ। ಷಡ್ಜಾದಿಸರ್ವಂಗಳೆಂರಂಜನಕಾಲಂಗಳುಬಳಿಕನಾಲುಕೂಗು। ಗೂಳಿಗೂಟು। ಅಜಧ್ವನಿ। ಕ್ರೌಂ

ಚೆಸ್ವನ। ಕೋಗಿಲೆಯಹಾಡು। ಜಾತ್ಯಶ್ವದಹಲಹಲಧ್ವನಿ। ಮತ್ತಗಜಬೃಂಹಿತಂಗಳಪರಿಪಾಟಿಯಿಂದ। ಷಡ್ಜಾದಿಸಪ್ತಸ್ವರಂಗಳಿಗನುಕರಣಧ್ವನಿಗಳು ಶಾಸ್ತ್ರಗಳಾಗಿರ್ಪವು। ಆರ್ದ್ರಪೂರ್ವಾಷಾಢೆ। ರೇವತಿ। ವಿಶಾಖೆ। ಮೂಲ। ಅನೂರಾಧೆ। ಮಖೆಯೆಂಬವೇ। ಕ್ರಮದಿಂದಷಡ್ಜಾದಿಸ್ವರಂಗಳಜನ್ಮನಕ್ಷತ್ರಂಗಳು। ಅಮಾವಾಸ್ಯೆ। ತ್ರಯೋದಸಿ। ಪಂಚಮಿ। ಅಷ್ಟಮಿ।ಸಪ್ತಮಿ ತದಿಗೆ। ನವಮಿಯೆಂಬವೆ। ಸರಣಿಯಿಂಷಡ್ಜಾದಿಸ್ವರೋತ್ಪತ್ತಿತಿಥಿಗಳು। ಆಂಗೀರಸಭೃಗು। ಕಶ್ಯಪವಸಿಷ್ಠ।ನಾರದ। ಅತ್ರಿ। ಕಪಿಲರೆಂಬವರೇಕ್ರಮದಿಂದಾಷಡ್ಜಾದಿಸ್ವರಗಳಿಗೆರುಷಿಗಳು। ಬ್ರಾಹ್ಮಿ। ಮಾಹೇಶ್ವರಿಕೌಮಾರಿ ವೈಷ್ಣವಿ। ವಾರಾಹಿ। ಮಾಹೇಂದ್ರಿ। ಚಾಮುಂಡಿ। ಎಂಬವರೇಕ್ರಮದಿಂದಾಷಡ್ಜಾದಿಸ್ವರಾಧಿದೇವತೆಗಳು। ಅರುಣಾಬ್ಜ।ಕಪಿಲ। ಹೇಮ। ನೀಲೋತ್ಪಲ।ಕೃಷ್ಣ। ಶ್ವೇತ। ಚಿತ್ರವೆಂಬನುಕ್ರಮದಿಂದಾಷಡ್ಜಾದಿಸ್ವರವರ್ಣಂಗಳು। ಷಡ್ಜಮಧ್ಯಮಪಂಚಮವೆಂಬಮೂರುಸ್ವರಂಗಳೇ।ಬ್ರಹ್ಮಜಾತೀಯಗಳು।ರುಷಭಧೈವತವೆಂಬೆರಡೇಕ್ಷತ್ರಿಯಜಾತೀಯಗಳು।ಗಾಂಧಾರನಿಷಾದವೆಂಬೆರಡೇ। ವೈಶ್ಯಜಾತೀಯಗಳು। ಬೇರೆ।ಅಂತರಕಾಕಳಿಯೆಂಬೆರಡೂ ಶೂದ್ರಜಾತೀಯಗಳು। ಶೃಂಗಾರ। ಹಾಸ್ಯ।ಕರುಣ। ರೌದ್ರ।ವೀರ।ಭಯಾನಕ।ಬೀಭತ್ಸಗಳೆಂಬವೇ।ಪರಿಪಿಡಿದಾಷಡ್ಜಾದಿಸ್ವರಫಲಗಳೆಂದುನಿಶ್ಚಯಿಸಿ॥

## ಸ್ವರದಿಂಶ್ರುತಿಸಮುತ್ಪತ್ತಿ.

ಬಳಿಕ। ಗಹ್ವರಿ। ನಿಷ್ಕಳ। ಗೂಢೆ। ಸಕಲೆಯರೆಂಬ ನಾಲ್ಕುಶ್ರುತಿಗಳೆ ಷಡ್ಜಸ್ವರದಿಂಪುಟ್ಟಿದವು। ಮಧುರೆ। ಆವಳಿ। ಏಕಾಕ್ಷರಿಯೆಂಬ। ಮೂರು ಶ್ರುತಿಗಳೇ। ರುಷಭಸ್ವರದಿಂಜನಿಸಿದವು। ಭೃಂಗಜಾತಿ। ಪರೇಂಗಿತೆಯೆಂಬೆರಡುಶ್ರುತಿಗಳೇ ಗಾಂಧಾರಸ್ವರದಿಂದುದಿಸಿದವು। ರಂಜಕಿ।ಪೂರ್ಣೆ।ಅಲಂಕಾರಿಣಿ। ವಾಂಶೆಯೆಂಬನಾಲ್ಕುಶ್ರುತಿಗಳೇಮಧ್ಯಮಸ್ವರದಿಂಪುಟ್ಟಿದವು। ರೇಣುಕಿ। ಲಲಿತೆ। ತಸ್ಥಿವಾಸಕೆ। ಯೆಂಬನಾಲ್ಕುಶ್ರುತಿಗಳೇಪಂಚಮಸ್ವರದಿಂದೊಗೆದವು। ಭಾಷಾಂಗಿ। ವರ್ತಿಕಿ। ಸಂಪೂರ್ಣೆ ಯೆಂಬಮೂರುಶ್ರುತಿಗಳೇ। ಧೈವತಸ್ವರದಿಂದುದ್ಭವಿಸಿದವು। ಪ್ರಸನ್ನೆ। ಸರ್ವವ್ಯಾಪಿಯೆಂಬೆರಡುಶ್ರುತಿಗಳೇ। ನಿಷಾದಸ್ವರದಿಂದುತ್ಪತ್ತಿಯಾದವಿಂತುಸಪ್ತಸ್ವರಗಳಿಂದಿಪ್ಪತ್ತೆರಡು। ಶ್ರುತಿಗಳಾದವೆಂದು। ಪ್ರಕೃತಿವಿಕೃತಿಸ್ವರತಾಳಲಯಮೇಳವಂವಿಭಾವಿಸಿ॥

## ಶೃತಿಗಮಕದೇಶಿಗಮಕಂಗಳು.

ಬಳಿಕ, ಸ್ಫುರಿತ, ಪ್ರಮಿತ, ದೀರ್ಘ, ಲಲಿತ, ಉಭ್ರಿತ, ಗುರುಶ್ರಿತ,

ಉಲ್ಲಸಿತಕಂಪಿತ, ಸೂಕ್ಷ್ಮಾಂತ, ದೀರ್ಘಾಯಿತ, ದೀರ್ಘೋಚ್ಛ್ರಿತಲೀಲೋಚ್ಛ್ರಿತಲೀಲಾದೀರ್ಘ, ದೀರ್ಘಲಲಿತ, ಲಲಿತೋಚ್ಛ್ರಿತ, ಪ್ರಸೃತ, ಕಾಂಡಿತ, ಕ್ಷಿಪ್ರಹತ, ಅಕ್ಷಿಪ್ತ, ಸಮುಲ್ಲಾಸಿತ, ಕೋಮಲ, ಉಲ್ಲಸಿತ, ಕೋಮಲವೆಂಬ, ಇಪ್ಪತ್ತೆರಡೇಶ್ರುತಿಗಮಕಂಗಳೆಂತಲುಂ। ಕಂಪಿತ, ಸ್ಫುರಿತ, ಲೀನ, ತ್ರಿಭಿನ್ನ, ಸಪ್ತದ, ಆಂದೋಳಿಕ ಆಹತವೆಂಬೇಳುದೇಶಿಗಮಕಂಗಳೆಂತಲುಂ ತತ್ತಲ್ಲಕ್ಷಣಂಗಳಂತಿಳಿದು ॥

## ರಾಗೋತ್ಪತ್ತಿಲಕ್ಷಣ ಗ್ರಾಮಾದಿಗಳು.

ಬಳಿಕಿಂತುಪೇಳ್ದ ಸರ್ವಶ್ರುತಿಗಮಕಂಗಳಂ। ಪುಟ್ಟಿದಗೀತಮಾದೊಡೆ। ಸ್ವರ। ಸುಸ್ವರ। ಸುರಾಗ। ಮಧುರ।ಅಕ್ಷರ। ಅಲಂಕಾರವೆಂಬಾರುಲಕ್ಷಣಂಗಳುಳ್ಳದ್ದಾಗಿಹುದಾರಾಗೋತ್ಪತ್ತಿಗೆ। ಷಡ್ಜಗ್ರಾಮ। ಮಧ್ಯಗ್ರಾಮ।ಗಾಂಧಾರಗ್ರಾಮವೆಂಬಗ್ರಾಮತ್ರಯಮುಂಟಲ್ಲಿ।ಗಾಂಧಾರಗ್ರಾಮವೇಗಂಧರ್ವಲೋಕದಲ್ಲಿವರ್ತಿಸುವದು। ಉಳಿದೆರಡುಗ್ರಾಮಗಳೇಮರ್ತ್ಯಲೋಕದಲ್ಲಿವರ್ತಿಸುತ್ತಿಹವಲ್ಲಿದೈವತ। ನಿಷಾದಿನಿ। ಷಡ್ಜಕೇಸರಿ। ಷಡ್ಜದಿವ್ಯವತಿ। ಷಡ್ಜಮಧ್ಯಮವೆಂಬೈದು ರಾಗಂಗಳು ಷಡ್ಜಗ್ರಾಮದಿಂ ಪುಟ್ಟುವವು। ಗಾಂಧಾರಿ ರಕ್ಷೋಗಾಂಧಾರಿ। ಮಧ್ಯಮಗಾಂಧಾರಿ। ದಿವ್ಯವತಿ ಮಧ್ಯಮದಿವ್ಯವತಿ। ಚಂಚಮ ಗಾಂಧಾರಿ ಪಂಚಮೋಂದಿಯ ನಂದಿನಿ। ನಂದಯಂತಿ। ಕರ್ಮರವ್ಯಭಿಚಾರಿಣಿ। ಕಾಶಿಕಿ। ಯೆಂಬ ಹತ್ತು ರಾಗಂಗಳು। ಮಧ್ಯಮಗ್ರಾಮದಿಂಪುಟ್ಟಿದವಿಂತು। ಗ್ರಾಮದ್ವಯದಿಂಪುಟ್ಟಿದ। ರಾಗಂಗಳು ಹದಿನೈದೆಂದವುಗಳೆಲ್ಲವಂಪತಿಕರಿಸಿ ॥

## ರಾಗಜಾತಿಗಳು.

ಬಳಿಕ, ಶುದ್ಧ, ಭಿನ್ನ, ಗೌಡ, ಅಷ್ಟಸಾಧಾರಣ, ಸಪ್ತಸಾಧಾರಣ, ಷಟ್ಸ್ವರವೆಂಬಾರು, ಸಾಧಾರಣಜಾತಿಗಳವುಗಳಲ್ಲಿ, ಷಡ್ಜಗ್ರಾಮ, ಮಧ್ಯಗ್ರಾಮ, ಗೌಡ, ಪಂಚಮಸಾಧಾರಣ, ಕಾಶಿಕಿ. ಮಾಳವಕೌಶಿಕಿಯೆಂಬಾರುಶುದ್ಧಜಾತಿಯಿಂದಾದರಾಗಂಗಳು। ಭಿನ್ನಷಡ್ಜ। ಭಿನ್ನತಾನ।ಭಿನ್ನಕೌಶಿಕಿ। ಮಧ್ಯಭಿನ್ನವೆಂದುನಾಲ್ಕುರಾಗಂಗಳುಂ। ಗೌಡಜಾತಿಯೆಂಗಳು। ಷಡಾರ। ಟಕ್ಕರಾಗಮಾಳ। ಷಡ್ಜಮಾಳವಿ, ಕೌಶಿಕಿ। ಧಕ್ಕಾಕೌಶಿಕಿ ಸೌವೀರ। ಹಿಂದೊಳವೆಂಬೆಂಟುರಾಗಂಗಳುಂ। ಅಷ್ಟಸಾಧಾರಣಜಾತಿಯೆಂಗಳು। ನರ್ತಕಿ। ಕಕುಭಷಡ್ಜಕೌಶಿಕಿ। ಭ್ರಮಾಳ। ಪಂಚಮಭ್ರಮಾಳ। ಪಂಚಮಗಾಂಧಾರ।ರೂಪಸಾಧಾರಣವೆಂಬೇಳುರಾಗಂಗಳಂಸಪ್ತ

ಸಾಧಾರಣಜಾತೀಯೆಂಗಳು । ಟಕ್ಕೆ-ಸೈಂಧವಿಪಂಚಮ । ಷಾಡವ । ದೇವಗುಪ್ತ । ಗಾಂಧಾರಗುಪ್ತ । ಕೌಶಿಕಗುಪ್ತ । ಉಪಾಂಗವೆಂಬೆಂಟುರಾಗಂಗಳುಂ ಷಟ್ಸ್ವರಜಾತೀಯೆಂಗಳು । ಇಂತುಷಡಕ್ಷರಷಡಾವ್ನಾಯಷಟ್ಪ್ರಳಷಡಧ್ವಸೇವ್ಯಂಗಳಾದ । ಷಡಾಗ್ರಜಾತಿಗಳಿಂ । ಷಟ್ತ್ರಿಂಶತ್ತತ್ವಾತ್ಮಕಂಗಳಾದ ಮುವತ್ತಾರುರಾಗಮೂರ್ತಿಗಳುದಿಸಿದ । ಪಂಚಮುಖಹರನಾದಸ್ವರವಿದ್ಯೆಯೆಂಧ್ಯಾನಿಸಿ ॥ ... ... ... ...

## ರಾಗಾಂಗಂಗಳು.

ಬಳಿಕ ರಾಗಾಂಗ, ಭಾಷಾಂಗ, ಕ್ರಿಯಾಂಗ, ಉಪಾಂಗ, ವೆಂಬನಾಲ್ಕುಅಂಗಂಗಳವುಗಳಲ್ಲಿ, ಮಧು, ಮಾಧವಿ, ಶಂಕರಾಭರಣ, ಹಿಂದೋಳ, ಬಂಗಾಳ, ಗುಂಡಕ್ರಿಯೆ, ಶ್ರೀರಾಗ, ಸಾರಂಗ, ಅಬ್ರಪಂಚಮ, ದಿವ್ಯಘಟಾರಾಗ, ಘೂರ್ಜರಿ, ಸೋಮರಾಗ, ಧನ್ಯಾಸಿ, ದೇಶಿ, ದೇಶಾಕ್ಷಿ, ಮಾಳವಶ್ರೀ, ವರಾಳಿ, ನಾಗದಿವ್ಯ, ಕರ್ಣಾಟಬಂಗಾಳ, ವೆಂಬಿಪ್ಪತ್ತು ರಾಗಂಗಳೇ ರಾಗಾಂಗದಿಂದುದಿಸಿದವು । ಕೌಶಿಕಿ, ವೇಳಾವಳಿ, ಶುದ್ಧಾವಳಿ, ಮೋದಿನಾಟಿ, ಸುಹರಿ, ಲಲಿತೆ, ಆಂದೋಳಿಗೌಡಿ. ಸೈಂಧವಿ, ನಾಗಧ್ವನಿ, ಆಹರಿ ತಾಂತ್ರವಳಿ, ಶುದ್ಧಹರಿ, ಕಾಂಭೋಜಿ, ಶ್ರೀಕಂಠೆ ಬೃಹಸ್ಪತಿ, ದಾಕ್ಷಿಣಾತ್ಯ, ಡೊಂಬಾಕ್ರಿಯೆ ಸೌರಾಷ್ಟ್ರ, ಸೈಂಧವಿ, ಕಲ್ಯಾಣಿ, ಶಂಬರಾವಳಿ, ಮಧುಕರಿ, ಕಾಂದಿ, ಪುಳಿಂದಿನಿ, ತರಂಗಿಣಿ, ಮೇಘರಂಜನಿ, ಕುರಂಜಿ, ಶುದ್ಧವಾಹಿನಿ, ಪ್ರಥಮಮಂಜರಿ, ನಾಟೀ ನಾರಾಯಣಿ, ಫಲಮಂಜರಿ, ಶಯುಸೋದರಿಯೆಂಬ, ಮೂವತ್ತನಾಲ್ಕುರಾಗಂಗಳೇ, ಭಾಷಾಂಗದಿಂದ ಪುಟ್ಟಿದವು, ನೀಲೋತ್ಪಲಿನಿ, ಏಕಚಕ್ರ ವಿಜೋಹರಿ, ಉತ್ಪಲಿ, ಕಿನ್ನರಿಕೆ, ಗೀತಿ, ರಾಜಜ್ಞಾ, ತುರಂಗಿ, ಗಾಂಧಾರಿ, ಗೌಳ, ರಾಕ್ಷಸಿ ನಾದೋತ್ತರಿ, ವಸಂತ, ಭೈರವಿ, ಸಾವಳ, ದೇವಗುಪ್ತ, ಸಾರಂಗಭೈರವಿ ಗಂಧಿಕಾಮೋದಿ ಸಿಂಹಾವಳಿ, ಕಾಮದೇವ, ದೇವನಾದೋತ್ತರ, ವಸಂತಬಂಗಾಳ, ವೆಂಬಿಪ್ಪತ್ತೆರಡು ರಾಗಂಗಳುಂ ಕ್ರಿಯಾಂಗದಿಂದ ಪುಟ್ಟಿದವು ॥ ಸಿಂಧುವರಾಳಿ ಕನ್ನಡವರಾಳಿ ದ್ರಾವಿಡವರಾಳಿ ಪ್ರಥಮವರಾಳಿ ಯೆಂಬ ನಾಲ್ಕು ರಾಗಂಗಳುಂ ಉಪಾಂಬವರಾಳಿಗಳು ಮಹರಾಷ್ಟ್ರ ಘೂರ್ಜರಿ ಸೌರಾಷ್ಟ್ರಘೂರ್ಜರಿ ದ್ರಾವಿಡಘೂರ್ಜರಿ ದಕ್ಷಿಣಘೂರ್ಜರಿ ಯೆಂಬ ನಾಲ್ಕುಂ ಉಪಾಂಗಘೂರ್ಜರೀರಾಗಂಗಳು ॥ ಕರ್ಣಾಟಗೌಳ, ದೇಶಗೌಳ ತುರುಷ್ಕಗೌಳ, ಮಾಳವಗೌಳ, ಛಾಯಾಗೌಳ, ಸೌರಾಷ್ಟ್ರಗೌಳ, ದ್ರಾವಿಡಗೌಳವೆಂ

ಜೀಳುಂ ಉಪಾಂಗ ಗೌಳರಾಗಂಗಳು ಛಾಯಾತೋಡಿ ತುರುಷ್ಕತೋ ಡಿಯೆಂಬೆರಡುಂ ಉಪಾಂಗ ತೋಡಿರಾಗಂಗಳು ಬಿಲಹರಿ ಭೈರವಿಯೆಂಬೆರಡು ನಾಟಿಯ ಉಪಾಂಗಗಳು ॥ ಸಾಳಗನಾಟ ಛಿಲ್ಲಜಾರಂ ಯೆಂಬೆರಡುಂ ರಾಮಕ್ರಿಯಾರಾಗಕ್ಕೆ ಉಪಾಂಗಂಗಳು ॥ ದೇವಕ್ರಿಯೆ ತ್ರಿನೇತ್ರಕ್ರಿಯೆ ಭೂತಾಳಕ್ರಿಯೆ ಯೆಂಬ ಮೂರುಂ ಕೋಲಾಹಲರಾಗಕ್ಕುಪಾಂಗಂಗಳು ಇಂತು ಚತುರ್ವಿಧಾಂಗದಿಂ ನೂರಾರುರಾಗಂಜನಿಸಿತೆಂದು ಗ್ರಾಮ ಜಾತಿ ಅಂಗವೆಂಬಮೂರರಿಂ ನೂರೈವತ್ತೇಳು ರಾಗಂಗಳುದಿಸುವವೆಂದವುಗಳಂ ಪರಾಮರ್ಶಿಸ್ಯೆದು.

ಮೂವತ್ತಾರು ರಾಗಂಗಳು.

ಬಳಿಕ ಸಮಸ್ತರಾಗಂಗಳೊಳಗೆ, ರಾಮಕ್ರಿಯೆ ಭೂಪಾಳಿ, ವಸಂತ, ನಾಟಸಾರಂಗ, ಭೌಳಿ, ಕಾಂಬೋಜಿ. ಘೂರ್ಜರಿ, ಭೈರವಿ, ಗುಂಡಕ್ರಿಯೆ, ಬಿಲಹರಿ, ಧನ್ಯಾಸಿ, ಕಲ್ಯಾಣಿ, ಪಡಮಂಜರಿ, ಬಂಗಾಳಿ, ದೇಶಿ, ದೇವಗಾಂಧಾರಿ, ಮೇಘರಂಜನಿ, ಕುರಂಜಿ, ಆಹರಿ, ಶ್ರೀರಾಗ, ಪಹಾದಿ, ಗೌಳ, ಸಿಂಧು, ರಾಮಕ್ರಿಯೆ, ಶಂಕರಾಭರಣ, ಬಿಲ್ಲಹರಿ, ದೇಶಾಕ್ಷಿ, ವರಾಳಿ, ಸಾವೇರಿ, ಮಂಗಳಕೌಶಿಕಿ, ನಾರಾಯಣಿ, ಅಠಾಣಾ, ಅರಭಿ, ತೋಡಿ, ಮಧ್ಯಮಾವತಿಯೆಂಬ ಮೂವತ್ತಾರು ರಾಗಂಗಳೇ ಮುಖ್ಯವಾಗಿ ಬಳಕೆಯೊಂದ ಧುನಾತರನಲ್ಲಿ ಪ್ರಸಿದ್ಧಗೊಂಡಿರ್ಪವು ॥

ಶುದ್ಧ ಮಿಶ್ರಸಂಕೀರ್ಣ ರಾಗ ಸಂಗ್ರಹ.

ಬಳಿಕ ಮೂವತ್ತಾರು ರಾಗಂಗಳಲ್ಲಿ । ೧-೨-೩-೪-೫-೬-೭-೮-ರಾಗಂಗಳೇ ಪುರುಷಸಂಜ್ಞಕಂಗಳು । ಬಂಗಾಳ ರಾಗವೊಂದೇ ನಪುಂಸಕವಹುದು. ಮಿಕ್ಕುಳಿದ ಇಪ್ಪತ್ತೆಂಟು ಸ್ತ್ರೀರಾಗಂಗಳಲ್ಲಿ ಪುರುಷರಾಗವೊಂದಕ್ಕೆನಾಲ್ಕು ನಾಲ್ಕುಸ್ತ್ರೀರಾಗಂಗಳಂತೆ ಕುಟುಂಬೀಕರಿಸಿರ್ಪುದಲ್ಲದೆ ಪೇಳ್ದ ಮೂವತ್ತಾರು ರಾಗಂಗಳಿಗುಂ ಗುಣತ್ರಯಾತ್ಮಕವಿಭಾಗದಿಂ ಮೂರು ಮೂರು ದಾಸೀರಾಗಂಗಳುಂಟಾಗಿ ನಾಲ್ಕೆಂಟಿಸಿಪ್ಪುದಲ್ಲದೆ ಸರಿಗಮ ಪಧನಿಯೆಂಬ ಸಪ್ತಸ್ವರ ಪ್ರಕೃತಿಗಳಿಂ ಅಂಕುರಸ್ಥಾಯಿ ಶೃತಿಸ್ಥಾಯಿ ಮೂರ್ಛನಾಸ್ಥಾಯಿ ಚಾಕ ಖೇಚರೀಸ್ಥಾಯಿ ರವಸಂಗತಿ ಮುಕ್ತಾಯಗಳೆಂಬ ಸಪ್ತಾವಸ್ಥೆಗಳಲ್ಲಿಯುಂ ಒಂದಕ್ಕೆ । ೨-೩-೪-೫-೬-೭-ಈತೆರದಿ ಸಂಯೋಗವಿಯೋಗಗಳಿಂ ಗರ್ಭಾಂಗವೆಂಬ ೩-೪-೫ ಸ್ವರಪ್ರಸ್ತಾನಂಗಳುಂಟಾಗಿ ಮೇಲವುಗಳ ಪ್ರಸ್ತಾರದೊಳು ವರ್ಜಾವರ್ಜವಿಕಲ್ಪ ವೈಚಿತ್ರ್ಯದಿಂದು

ಚ್ಚಾವಚ ಪ್ರಪಂಚದಂತರಾಗಂಗಳನಂತಸಂಖ್ಯಾತಂಗಳಾಗಿರಲು । ಸ್ವರ ವಿದ್ಯಾಧಿದೇವತೆಯಾದ ಸದಾಶಿವಮೂರ್ತಿ ಯೆಂದಹರಪ್ರಣವನಾದಾತ್ಮಕ ವಪ್ಪುದರಿಂ ಪ್ರಣವದಿಂದುದಿಸಿ ಪ್ರಣವಗರ್ಭವಾಗಿ ಪ್ರಣವದೊಳಂಮು ಕ್ತಾಯಮಪ್ಪುದಹರಸಾಮವೊ ಶಾಸ್ತ್ರಯಂ ಶಿವಯೋಗಿಗಲ್ಲದೆ ಶಿಶ್ನೋದರ ಪರಾಯಣರಾದ ನರಕುರಿಗಳಿಗಸಾಧ್ಯವಾದರುಂ ಕಲಿತನಜನಸಾಧ್ಯವಾ ಗಿ ಪ್ರಚಾರದೊಳಗಿಪ್ಪುವುಗಳಲ್ಲಿ ಕೆಲವಂಶಗಳನಾದರುಂ ತಥ್ಯವಾಗಿರಿಳ ದುನಾದೋಪಾಸ್ತಿಗೈವ ॥

ಕೆಲವು ಮಿಶ್ರರಾಗಂಗಳು.

ಬಳಿಕಿವುಗಳಲ್ಲಿವಸಂತಭೈರವಿ-ಶಾಂತಬಿಲಹರಿ- ನಾದರಾಮಕ್ರಿಯೆ ಯೆಂ ಬಮೂರುಂ ರಾಮಕ್ರಿಯೆಯಮಿಶ್ರರಾಗಂಗಳು ಮುಖಾರಿ ಹಿಂದೋಳವೆ ರಡುಂ ವಸಂತಕ್ಕೆ ಮಿಶ್ರರಾಗಂಗಳು, ನಾಟ, ಆಹರಿ, ಸಾಳಗನಾಟ, ಹ ಮೀರನಾಟ, ಘೂರ್ಜರನಾಟಿಯೆಂಬವೇ ಪಂಚವಿಧನಾಟಗಳು. ಸೌರಾ ಷ್ಟ್ರ, ಗೌಳ, ವಸಂತಗೌಳ, ಮಾಳವಗೌಳ, ಕೇತಾರಗೌಳ, ಛಾಯಾ ಗೌಳ, ಕನ್ನಡಗೌಳ, ತಾಪಗೌಳ, ಮೋಹನಗೌಳಂಗಳೇಗೌಳ ಮಿಶ್ರಂ ಗಳು, ಮಿಶ್ರಭೌಳಯೊಂಪೆ ಭೌಳಮಿಶ್ರವು. ಗುಂಪ. ಕಾಂಭೋಜಿ ತೆನು ಗು ಕಾಂಭೋಜಿ, ದೈಶ್ಯಕಾಂಭೋಜಿಯೆಂಬ ಮೂರೇಕಾಂಭೋಜಿ ಮಿ ಶ್ರಂಗಳು, ಶೋಕವರಾಳಿ, ವಸಂತವರಾಳಿ, ಜೋಗಿವರಾಳಿ. ಪಂತುವರಾಳಿ ಪ್ರಥಮವರಾಳಿ, ಪ್ರತಾಪವರಾಳಿ ಲಕ್ಷ್ಮವರಾಳಿ, ನಾಗವರಾಳಿ ಯೆಂಬವರಾ ಳೀ ಸಪ್ತಕವೇಶುದ್ಧವರಾಳಿಗೆ ಮಿಶ್ರಂಗಳತ್ತೆರದಿಂಶುದ್ಧಮಿಶ್ರಸಂಕೀರ್ಣ ಭೇದಂಗಳುಂ ಗುರುಮುಖದಿಂತಿಳದು ॥

ಗಾನಸ್ವೈಖರಿ.

ಮತ್ತಮಾರಾಗಂಗಳಂಪಾಡುವಲ್ಲಿ ಗ್ರಾಮವರ್ಜಂಗಳಂತೊರದು ಜನ್ಯ ಜನಕಂಗಳಂ ಬಳ್ಕಗೊಳಿಸಿ, ಕಾವುಳ, ಬಬ್ಬೊಳ, ನಾಂಟ, ಮಿಶ್ರವೆಂ ಬ ಚತುರ್ವಿಧ ಸುಸ್ವರಗಳಿಂದುರುಳಿಸಿ, ಮಂದ,ಮಧ್ಯ, ವೇಗ, ಕುಂಚನ ಉಚ್ಚ್ಚಾನನ, ಸ್ತಂಭನ, ದೀರ್ಘಭೇದಗಳಿಂ ರವವಿಕಲ್ಪಗಳಂ ತೋರಿ, ಆ ಲಾಪ, ಭಜಾವಣಿ, ಮೇಳಂಗಳ ಛಾಯೆತಪ್ಪದೆ, ನಾಡಪತಿ, ಭಗವತಿ, ವಿನ ಯವತಿ ಭೋಗವತಿ ಯೆಂಬೈದು ತೆರದಿಂದಿಂಪ್ಪುಗೊಳಿಸುವ ಶಾಪಸ್ವಕ್ರ ಮದ ಗಾಡಿ ವೈದರ್ಭಿ, ಪಾಂಚಾಲಿ ಯೆಂಬರೀತಿತ್ರಯಂಗೂಡಿ। ಪರ,ಪರ ವಿಕೃತಿ ವಿಣ್ಣಾಣವೆಂಬ ಚತುರ್ವಿಧ ದಂಡರೀತಿಯಲ್ಲಿ ರಂಗು। ರಕ್ತಿ। ರೀತಿ

ದೋರಿ। ಕಂಪಿತ। ಚಿಂತಿತ। ಅನುನಾಸಿಕ। ಶಿರೋದ್ಗತ। ಕಂಠಕುಂಚನ।ವಿಕ್ಲಿಷ್ಟ। ನೀರಸ। ನಿಷ್ಠುರ।ದುಃಶಾಸ್ತ್ರ। ಚಿಂತಾಂತ। ಪರುಷ। ಶ್ರುತಿಹೀನ। ಪ್ರಯಾಣ ಅಸಮಾನಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊರೆದು ನಿಜಹೃದಯಾಕೃಷ್ಟಿಯಿಂ ವಿಜ್ಞಾನವಿಚಕ್ಷಣಶ್ರೋತೃಜನಕರ್ಣರಸಾಯನವಾಗಿ ಮಾಡಿ ಮೋಹಿಸಿ ಶ್ರಮನಿವೃತ್ತಿಯಿಂ ವಿಶ್ರಾಂತಿಸೈರ್ಯಪ್ರದಾಯಿಕರಾದಗಾಯಕರಿಂದುದ್ಗೀತರಾಗಿ ॥

ವಾದ್ಯಭೇದಗಳು.

ಬಳಿಕ ತಂತಿಯಂಕಟ್ಟಿನುಡಿಸುವ ವೀಣಾದಿಕವೇ ತತವೆನಿಸುವದು ಚರ್ಮವಂಕಟ್ಟಿನುಡಿಸುವಮುರಜಾದಿಕವೇ ಆನದ್ಧವೆನಿಸುವದು ಕಂಚಿನತಾಳಾದಿಕವೇ ಘನವೆನಿಸುವದು ಊದಿಬಾರಿಸುವ ನಾಡಿಮೇಳವೊದಲಾದುದೇ ಸುಷಿರವೆನಿಸುವದು ಇಂತು ಚತುರ್ವಿಧವಾದ್ಯಂಗಳಂ ಅವುಗಳಲ್ಲಿ ಅವಾಂತರಭೇದಗಳಾದಶೃಂಗವಾದ್ಯವೆಂಬ ಕೊಂಬು ತಮ್ಮಟೆವೆಂಬ ಹಲಿಗೆ ಶಂಖವೆಂಬ ಧವಳ ಭೇರಿಯೆಂಬ ಭಾಜಾಜಯಘಂಟೆಯೆಂಬ ಜಾಗಟೆ ಇತ್ತರದವಂಚಮಹಾವಾದ್ಯಂಗಳಂ ಭಿನ್ನವೆಂಬಕರಾಡಿಕಾಸಕವೆಂಬ ನಗಾರಿಭೀಷಣವೆಂಬ ತಾಸೆಘೋಷಣವೆಂಬಹುಡುಕ್ಕಾ ಡಿಂಡಿಮವೆಂಬ ಡಿಕ್ಕಿಡಮರ ವೆಂಬ ಡೋಲು ಜರ್ಜರವೆಂಬ ಜಯಿಕಾಹಳವೆಂಬ ಗೌರಿ ಕಾಳೆದುಂದುಭಿಯೆಂಬ ಧೋರ ಘಂಟಿಕೆಯೆಂಬ ಘಂಟೆ ಇತ್ತೆರದ ದಶವಾದ್ಯಂಗಳಂ ಬಾರಿಸಲ್ಪಟ್ಟ ವಿಚಕ್ಷಣರಿಂ ವಿನುತರಾಗಿ.

ತಂತ್ರೀವಾದ್ಯಂಗಳು.

ಬಳಿಕ ವಿಪಂಚಿಕೆ ಚಿತ್ರಿಕೆ ಚಿತ್ರಘೋಷಾವಳಿ ತುಲಾಪ್ಪಿಟ್ಟ ಕೂರ್ಮಿಕಿ ಕುಬ್ಜಿಕಿ ಪರಿವಾದಿನಿ ಕಿನ್ನರಿ ತುಂಬುರಿ ವೀಣೆ ತಿಸತಿ ರಾವಣ ಹಸ್ತರವಾಬು ಕಿನ್ನರ ರವಾಬ ಚಕಳ ವಲ್ಲಕಿ ಆಳಾವಿನಿ ಅನಾದವಿಧ ಕಚ್ಛಪವೀಣೆ ನಾರದವೀಣೆ ಎಕ್ಕಂಜೆ ಸುಂದರಿ ಸಾರಂಗಿಣಿ ಬ್ರಹ್ಮವೀಣೆ ಸ್ವರವೀಣೆ ಭಾರತಿ ಅಲಾಬುವಲ್ಲಕಿ ಆಕಾಶವೀಣೆ ಅಂತರ್ವೀಣೆ ರುದ್ರವೀಣೆ ಮುರಶೃಂಗಿ ಮಾಯಿನೀ ರಾಗಮಾಲಿನೀ ಕಾಲಕೀ ಯೆಂಬ ಮೂವತ್ತುಮೂರು ತಂತ್ರೀವಾದ್ಯಂಗಳಲ್ಲಿ। ಮುಕ್ತಾಡಿ ಗೀತಾನುಗಂತ-ಶ್ರೋತ್ರಾನುಗಂತ-ಉಭಯಾನುಗಂತ-ವೀಣಾನುಗಂತ-ವೆಂಬ ಪಂಚರೀತಿಗಳೊಳಗೆ। ಜಾತಿ ಮುಖ್ಯ ಬೈಸಂಣಗೆ ಮುಂತಾ ತರಗಳಂ ಪರಿವರ್ತಿಸಿ। ಬಿಟ। ಚಕ್ಕು। ಸನ್ನೆ। ಬಿಗಿ। ಜಬ್ಬುಜೀವಾಳವೆಂಬಾರುಬಗೆಯಾದ ನಾದಕಟ್ಟುಗಳಿಂ ತಂತ್ರಿಗಳಂಸವಂಸಿ।ಸಾಣೆ॥

ಪರಶು।ವಿಶಾಟಂಗಳೆಂಬವಗೆಯೊಳೆಸಿ। ಆಧಾರರಾಗಾನುಗುಣ್ಯವಾಗಿಮೇಳೈಸಿ ತಂತಿಗಳಂಗಳೆಯೇರಿಸಿ ಸಪ್ತಸ್ವರಪ್ರಕೃತಿವಿಕೃತಿಭೇದವರಿತು ಜನ್ಯಜನಕ ಭಾವಂಗಳವಾರ್ಬೈದುಕಾಲ। ದೇಶ।ಕರ್ತೃ। ಕ್ರಿಯೆಗಳಿಗೆತಕ್ಕಂತೆ।ಶ್ರುತಿರಸಾಲಂಕಾರಸ್ವರಸುಭಗೆವತ್ತಾಗೆ ವಿಚಾರಿಸಿಕೇಳ್ವರಂಕಿವಿಗೊಳಿಪ ತಂತ್ರೀವಾದ್ಯಾಸಿ ಪ್ರಣಾರಿಂದುಪಗೀತನಿಜಾಪದಾನಚರಿತರಾಗಿ ॥

ಗಾಯಕರಿಂದುರು.

ಬಳಿಕ ಹದಿನೆಂಟಂಗುಳವೊದಲಾಗಿ ಒಂದಂಗುಳಪರ್ಯಂತವಾದ ಪರಿಮಾಣ ಕ್ರಮವಿಶಿಷ್ಟ-ಜಾತಿವಾಸ-ಸಜಾತಿವಾಸ-ಸುಕುಮಾರಿಕಾಶಾಸ ಪಕ್ಷಿವಾಸ-ಭುವನವಾಸ--ಶ್ವೇತವಾಸ--ಆದಿತ್ಯವಾಸ-ರುದ್ರವಾಸ-ಹರಿವಾಸ-ದಿಗ್ವಾಸ-ನಿಧಿವಾಸ-ಋಷಿವಾಸ-ಕುಮಾರವಾಸ-ಅಘೋರವಾಸ-ಬ್ರಹ್ಮವಾಸ-ತ್ರಿಪುರವಾಸ-ಶಿವಶಕ್ತಿವಾಸ-ಭುವನಾಧಿಪವಾಸ-ವೆಂಬ ಹದಿನೆಂಟುತೆರದ ವಾಸಂಗಳ ಲಕ್ಷಣ ವರಿತಾಜಾತಿಮುಖದ ಕಳೆಯಿ ಲಕ್ಷಣವಂ ನೃತ್ಯಮಾದಿ ಧಾತ್ವಾಕರವೊಮ್ಮಲು।ಆಲಾಪ-ಕಾಲಾಪ-ಆಲಾಪ್ತ-ಕಾಲಾಪ್ತ-ಚೀಳಿಕೆ-ಹೇಳಣಿ-ವ್ಯಾಪ್ತಿ ಮುಂತಾದಿಪ್ಪತ್ನಾಲ್ಕು ತೆರದಲ್ಲಿ ಸರಿಗಮಪಧನಿಸ ವೆಂಬ ಸಪ್ತಸ್ವರಂಗಳ ನಾರೋಹಣ ಅವರೋಹಣ ಮುಂತಾದ ನಾಲ್ವತ್ತೆರು ಭೇದವರಿದಾಲಾಪಿಸ ಕೇಳಿಸುವ। ಭಾಸುರ ಕರವಾರ ವಿಲಾಸಿನಿಯರಿಂ ದುಪಸ್ತುತ ನಿಜಗುಣರತ್ನರಂಜಿತರಾಗಿ ॥

ಮದ್ದಳೆಕಾರರುಮುಂತಾಗಿ.

ಬಳಿಕ। ಶುದ್ಧ। ಸಾಳಗ। ಸಂಕೀರ್ಣ। ರವಣಿಗಳೆಂಬ ಚತುರ್ವಿಧಮೃದಂಗಮುಂಮೇಳೈಸಿ ಕರ್ತರ ದೋಟ ಗಡಾದಿಭೇದಿಗಳವನುಸರಿಸಿ। ತ್ರ್ಯಂಕ್ಯ, ಆಲಿಂಗ್ಯಊರ್ಧ್ವಕವೆಂಬ ತ್ರಿವಿಧಕ್ರಮವರಿತು ನುಡಿಸಿಬಾರಿಸುವಕಡುಜಾಣರಪ್ಪಮದ್ದಳೆಕಾರರಿಂಕೊಂಡಾಡಲ್ಪಟ್ಟು। ಕುಂದ।ಪ್ರಜ।ಪಟ್ಟಾವುಜ। ಕುಡುಬಾಹುಜ। ಆಡಾಹುಜ। ಗಡಾಣಿಯೆಂಬೈದುತೆರವಾದವಾಜವನೋಜಯೆಂಬಾರಿಸುವಾಜಕಾರರಿಂದಾಶ್ರಿತರಾಗಿ ॥

ತಾಳಪ್ರಕ್ರಿಯೆ.

ಬಳಿಕ ತಾಳವೇಶಕ್ತಿ ಶಬಳ ಬ್ರಹ್ಮಲಿಂಗವಾಗಿರ್ಕ್ಕು ಮಾತಾಳದೊಳು ತಕಾರ ವ್ಯಂಜನ ವಕಾರ ದೀರ್ಘಂ ಕೂಡಿ ಯಾಕಾಶಲಿಂಗದಿಂ ಪುಟ್ಟಲದು ರುದ್ರಾತ್ಮಕವಾಗೆ ಲಕಾರ ವ್ಯಂಜನ ವಕಾರ ವಿಸರ್ಗಗಳು ಬಿಂಧುವಿನಿಂ ಮುಡಿಸಿ ಶಕ್ತ್ಯಾತ್ಮಕವಾಗೆ ತಾಳವೆಂಬುದು ಗೌರೀ ಶಂಕರ ದೇವತಾಕ

ವಾಗಿ ಯುದರಿಂದುದಿಸಿದ ಪ್ರಥಮ ಸ್ಫುಟನಾದ ವೇ ಧ್ರುವವೆನಿಸುವದು. ಧ್ರುವವೆರಡಾಗಲೊಂದು ಮಾತ್ರೆಯೆನಿಸುವದು. ಆ ಮಾತ್ರೆ ಎರಡೊಂದು ಗುರುವೆನಿಸುವದು. ಸಾರ್ಧ ಪ್ಲುತವೆ ವಿರಾಮ ಮಾತ್ರೆಯೆನಿಸುವದು. ಇಂತೀ ಮಾತ್ರೆಗಳ್ ಹೆಚ್ಚಲು ಸೂಕ್ಷ್ಮ ನಿಮೇಷಾರ್ಥಕ್ಕೆ ವ್ಯಂಜನ ಕಾಲದತೀತಾನಾಗತ ವರ್ತಮಾನ ಕ್ರಮದಿಂ ಕ್ರಿಯಾಕಾರವನೇಕವಾಗಿ ತಾಳವ್ಯವಹಾರೋತ್ಪತ್ತಿಯಾಯಿತೆಂದು ತಾಳೋದಯಮಂ ತಿಳಿದು, ತಾಳದ ಕಾಲ-ಮಾರ್ಗ-ಕ್ರಿಯೆ-ಅಂಗಜಾತಿ-ಗ್ರಹ-ಕಳೆ-ಲಯ-ಯತಿ,ಪ್ರಸ್ತಾರಗಳೆಂಬ ದಶಪ್ರಾಣಂಗಳ ನಾರೈದು.

### ತಾಳಭೇದಗಳು.

ಚಳಿಕ, ಧ್ರುವ, ಮಟ್ಟ್ಯ, ರೂಪಕ, ಜಂಪೆ, ತ್ರಿಪುಟ, ಅಟ್ಟ, ಏಕವೆಂಬ ಸಪ್ತತಾಳ ಭೇದಂಗಳಂ ಅವುಗಳೊಳು, ಚಂಚತ್ಪುಟ, ಚಾಚತ್ಪುಟ, ಷಟ್ಪೀತ, ಪತ್ರುಘದ, ಸಂಪ್ರಜಿತ, ಸಂಮಿಳಿತ, ಎಳಜೊಂಬಡೆ, ಗಾರುಗಿಡೆಕ್ಕೆ ಸರಕರಣ, ಪಾಟೀಕರಣ, ಪಿಂಡಕರಣ, ಕ್ರೌಂಚಪದ, ಕಳಹಂಸ, ಆದಿಲಲಿತ, ಮತ್ತಮಾತಂಗ, ಫಲಚಕ್ರ, ಆಸ್ಥಾನಮಂಟಪ, ಮಯಮಂಡಿತ, ಯಕ್ಕಸರ, ರಚ್ಚೆ, ಉತ್ತರವಾಣಿ, ಪಂಚವಾಣಿ, ಸಂಕೃಷ್ಟ, ಖಂಜಾಖಂಜ, ಅಖಂಡಿತ,ವಿಲಂಬಿತ,ಕುಟಿಲ,ಚತುರಶ್ರ,ಹಂಸವೃದ್ಧ, ಉಪವೃದ್ಧ,ಸುಭದ್ರ,ಸಂಗತ,ಪ್ರಚ್ಛನ್ನಲಯ,ಚಾರುಕಲ್ಯಾಣ,ಗೌರೀಕಲ್ಯಾಣ,ಧ್ರುವಲಯ,ಜಾಂಬಾಯಾರ,ಹರಿಣೀವಿಷ್ಣು,ವಿದ್ಯಾಧರ,ಮಾತಂಗ,ಬ್ರಹ್ಮನಂದನ, ಸರಸ್ವತೀಕಂಠಾಭರಣ, ವಿಮತಯಮ,ಸ್ವರಮತಯಮ,ತಗದ ಮಾನಮತಯಮ, ಪೂರ್ವಕಂಕಣ, ಕಾಮ್ಯಕಂಕಣ, ಪ್ರಕಸ್ತ, ಕೋಕಿಲಪ್ರಿಯ, ಸಿಂಹಾನಂದನ, ಸಿಂಹವಿಕ್ರೀಡಿತ,ಸಿಂಹನಾದ, ಸಪ್ತಮುದ್ರಿಕ,ಜಯತಾಳವೆಂಬಿವು ಮೊದಲಾದನೂರೆಂಟು ತಾಳಂಗಳುಂ;ಭಂಗತಾಳ,ಉಪಭಂಗತಾಳ,ವಿಭಂಗತಾಳ, ವಿತಾಳ, ಶುದ್ಧತಾಳ,ಅನುತಾಳವೆಂಬಾರುವರ್ಗಸಂಖ್ಯಾಭೇದವಾಗಿರುವೆಂದು ಪೇಳ್ವ ಭರತಶಾಸ್ತ್ರಪ್ರವೀಣರಪ್ಪ ತಾಳಧಾರಿಗಳುಂ.

### ನೃತ್ತಭೇದಗಳು.

ಚಳಿಕ ನಾಟಕವಲ್ಲಿ ದಿನದಿನಕಭಿನಯಿಸಲ್ತಕ್ಕ ರಸ, ಭಾವ, ಸಂವಿಧಾನ, ಆಶ್ರಯಂಗಳೆಂಬ ಚತುರ್ವಿಧ ಪ್ರಬಂಧಾಂಶಮಂ ತಿಳಿದು ಮುಖದೃಷ್ಟಿ ಹಸ್ತಪಾದಂಗಳಭಿನಯಿಪ ಲಕ್ಷಣಂ ತಪ್ಪದವೋಲ್ ಮುಖರಸವೇ ಹಾವ ನೇತ್ರಸ್ಪಂದವೇ ಭಾವ ಪದನ್ಯಾಸವೇ ವಿಲಾಸ ಭ್ರೂವಿಕ್ಷೇಪಣವೇ ವಿಭ್ರ

ಮವೆಂಬ ಚತುರ್ವಿಧ ಮೋಹವಂ ಮೈವೆತ್ತು ಶುದ್ಧ ದೇಶೀಯುವೆಂಬ ಮಾರ್ಗದ್ವಯುವಾವಿವರಗೊಂಡು, ತಾಂಡವನಾಟ್ಯ ನೃತ್ತ ಲಾಸ್ಯ ಗುಂಡಿಲ ಪ್ರೇಕ್ಷಣ ಲಚ್ಛಲ ಅಪರಿಪಾತ್ರ ಸುಪಾತ್ರ ಸರ್ವತೋಭದ್ರವೆಂಬ ದಶವಿಧಪಾತ್ರಂಗಳಂಬೇರಿ ಲಯ ಗಾನಾಭಿನಯ ರಸಾಲಂಕಾರ ಭಾವ ಸೌಮರಸ್ಯವಂ ತೋರಿ ಶೃತಿ ನಯನ ಹೃದಯಾಕರ್ಷಣವಂ ಗೈವ ನರ್ತಕ ನರ್ತಕಿಯರಿಂ ದುಪಾಸಿತರಾಗಿ ತೌರ್ಯತ್ರಿಕವೆಂಬ ನೃತ್ತಗೀತಗಳಿಂ ಸಾಮಗಾನಪ್ರಿಯತ್ವದಿಂ ಗಾನಾಚಾರನೆನಿಸಿ ಜಗನ್ನಾಟಕಧಾರಿತ್ವದಿಂ ಮಹಾನಟನೆನಿಸಿ ನಿಜಾನಂದದಿಂ ಕುಣಿವ ಶಂಭುವಿನ ಮಹಿಮಾಲೀಶದೊಳಗಣುಪಾತ್ರವಂ ನಿಗಮಾಗಮಂಗಳು ಕೊಂಡಾಡಲದರಂ ಪಾಡಿ ಬಾರಿಸಿ ಕುಣಿದಭಿನಯಿಸುತ್ತಿಂತು ಸರ್ವೇಂದ್ರಿಯ ವ್ಯಾಪಾರಗಳಿಂ ಲೌಕಿಕವೃತ್ತಿಯೊಳಗುಂ ಶಿವಸಂಬಂಧಿಗಳಾದಿ ಮಹಿತರೆನಿಸಿ.

## ರಾಜಭೋಗ.

ಅನಂತರದೊಳಾಂದೋಳನ ವಸ್ತ್ರಾಭರಣ ವಾಹನ ರಾಜ್ಯವಧೂ ಕರ್ಪೂರ ವೀಳ್ಯವೆಂಬ ತ್ಯಾಗಾಂಗ ಸತ್ಕರೆನಿಸಿ ಸಮಸ್ತಮುದ್ರಾಧೀಶ್ವರರಾಗಿ ಪ್ರಜಾಪರಿಪಾಲನಾದಿ ಸದ್ಧರ್ಮ ಸದ್ಗುಣ ಸಂಪನ್ನರೆನಿಸಿ, ದೀಕ್ಷಾಕ್ರಮದಿಂ ಶಿವಪ್ರಸಾದವಂ ಪಡೆದದರಿಂ ದಶದಿಗ್ಭರಿತ ಪುಣ್ಯಕೀರ್ತಿ ಮಯರಾಗಿ ಶ್ಲಾಘೋತ್ತಮಾನ ಘಾನರ್ಘ್ಯ ಪದಾರ್ಥೋಪಭೋಗದಿಂ ಸುಖಮಾನಭಾಜನರೆಂದು ಜಗನ್ಮಾನ್ಯರಾಗಿ ದುಷ್ಟಶಿಕ್ಷಣಾದಿ ಧುರೀಣತ್ವದಿಂದನುಲ್ಲಂಘ್ಯ ಶಾಸನರಾಗಿ ಚಿರಕಾಲವಿರಾಧರಣಿಯೊಳು ರಾಜ್ಯಂಗೆಯ್ಯುತ್ತಿರಲು.

## ಸಗರ ಸಾಗರಾದಿ ವಿಷಯಂ

ಮತ್ತಮವರೊಳಗಾ ಸಗರಚಕ್ರವರ್ತಿ ಗರವತ್ತುಸಾವಿರ ಕುಮಾರಕರಶ್ವಮೇಧ ಯಾಗದ ನೆವದಿಂದ ದಕ್ಷಿಣ ಸಮುದ್ರ ತಟವಿನಿದೆಂಟುಸಾವಿರಯೋಜನದಗಲ ದರವತ್ತುಸಾವಿರ ಯೋಜನದ ನೀಳದಲ್ಲಿ ಪೂರ್ವ ಪಶ್ಚಮವಾಗಿಯಗಿಯಲಾ ಖಾತದೊಳಾ ಮಹಾ ಸಮುದ್ರೋದಕವಾಪರಿಸಿದೆಡೆ ದಿಕ್ಕಗಳೇ ಪೂರ್ವಾದಿಯಾಗಿ ಇಂದ್ರದ್ವೀಪ-ಕುಶದ್ವೀಪ-ತಾಮ್ರವರ್ಣ ದ್ವೀಪ-ನಾಗ ದ್ವೀಪ--ಸೌಮ್ಯದ್ವೀಪ--ಗಂಧರ್ವ ದ್ವೀಪ--ಗಭಸ್ತಿ ದ್ವೀಪ-ವಾರುಣ ದ್ವೀಪಗಳೆಂಬೆಂಟು ದ್ವೀಪಂಗಳಾದಪವೆಲ್ಲಂ ಪ್ರತ್ಯೇಕಮೊಂದೊಂದು ಸಾವಿರ ಯೋಜನದಗಲಂಗಳುಳ್ಳವಾಗಿ ಮ್ಲೇಚ್ಛಾದಿ ಹೀ

ನಿಜಜಾತಿಗಳಿಗಾಶ್ರಯಂಗಳಾಗಿರ್ಪ್ಪುವು. ... ... ...

### ಕರ್ಣಿಕಾದ್ವೀಪವೆಂಬಸ್ಮದಾದಿಸ್ಥಾನ.

ಮತ್ತಮಾ ಸಗರಪುತ್ರರಿಗೆ ಯುಳಿದ ಸಾವಿರ ಯೋಜನದಗಲದ ಭೂಮಿಯೇ ಹಿಮವತ್ಪರ್ವತ ರ್ಪ್ಯಂತರಂ (ಕರ್ಣಿಕಾದ್ವೀಪ) ವೆಂಬ ಪೆಸರುವಡೆದು ಬ್ರಾಹ್ಮಣಾದಿ ಸಕಲ ವರ್ಣಂಗಳ ಗಾಸ್ಪದಮಾಗಿಹುದಿದರೊಳಗೆ ಮರ್ಯಾದಾಪರ್ವತ ಸಹಾದ ಲಕ್ಷ ಶಿಖರಪರ್ವತಸಹ ಮುನ್ನೂರು ಯೋಜನಸ್ಥಳವೇ ಹಿಮಜಲದೊಳಗಾಯಿತು. ಮಿಕ್ಕ ಹಿಮಸೇತು ಮಧ್ಯದ ಏಳುನೂರು ಯೋಜನವೇ ಪ್ರಸಿದ್ಧಮಾಗಿ ಭರತಖಂಡಮೆನಿಸಿತದರೊಳಗೆ.

### ಮಹಾಕುಲಶೈಲ ಸಪ್ತಕನದಿಗಳು.

ಮಹೇಂದ್ರ-ಮಲಯ-ಸಹ್ಯ-ಶುಕ್ತಿಮಾನ್-ಋಕ್ಷ-ವಿಂಧ್ಯ-ಪಾರಿಯಾತ್ರವೆಂಬ ಸಪ್ತ ಕುಲಶೈಲಂಗಳುಂಟವುಗಳಲ್ಲಿ ಜನಿಸಿದ ನದಿಗಳಾವಾವವೆನೆ ತ್ರಿಸಾಮ ಋಷಿಕುಲ್ಯೆ ಯೆಂಬೆರಡು ನದಿಗಳೇ ಮಹೇಂದ್ರಪರ್ವತದಲ್ಲಿ ಪುಟ್ಟಿದವು. ಕೃತಮಾಲಿನೀ ತಾಮ್ರವರ್ಣಿಗಳೆಂಬೆರಡು ನದಿಗಳುಂ ಮಲಯದಲ್ಲಿ ಪುಟ್ಟಿದವು. ಕಾವೇರಿ ತುಂಗಿ ಯೆಂಬೆರಡು ನದಿಗಳುಂ ಸಹ್ಯದಲ್ಲಿ ಪುಟ್ಟಿದವು. ಫಲ್ಗುನೀ, ಗಂಡಕಿಗಳೆಂಬೆರಡು ನದಿಗಳು ಶುಕ್ತಿಮಾನ್ಪರ್ವತ ದಧ ಪ್ರಸ್ತರದೊಳಗುದಿಸಿದವು. ತಂಪಿ ಪಯೋಷ್ಣಿಗಳೆಂಬೆರಡು ನದಿಗಳುಂ ಋಕ್ಷಪರ್ವತದೊಳ ಗುದಿಸಿದವು. ಕೃಷ್ಣ ಗೋದಾವರಿ ಭೀಮರಥಿ ನರ್ಮದಗಳೆಂಬ ನಾಲ್ಕುನದಿಗಳುಂ ವಿಂಧ್ಯಪರ್ವತದಿಂ ಪುಟ್ಟಿದವು. ವೇದ ಸ್ಮೃತಿಗಳೆಂಬೆರಡು ನದಿಗಳುಂ ಪಾರಿಯಾತ್ರ ಪರ್ವತದಲ್ಲಿ ಪುಟ್ಟಿದವು. ಇಂತು ಸಪ್ತಕುಲ ಶೈಲಗಳಿಂ ಷೋಡಶ ಮಹಾನದಿಗಳಾಗಿ.

### ಶ್ರೀ ಗಂಗಾನದಿ.

ಬಳಿಕ ಗಂಗೆಯೆಂಬುದು ಚಿದಾನಂದಾತ್ಮಕ ಸುಕೃತ ಪ್ರವಾಹದಿಂ ಶಿವಭಕ್ತಿಯೆಂಬ ವೇದಸಾರಮಾಗಿ ಮಹಾಕೈಲಾಸದೊಳು ಶ್ರೀರುದ್ರ ದಿವ್ಯಲಿಂಗಾಭಿಷೇಕ ತೀರ್ಥಮಪ್ಪುದರಿಂ ದದಕಧೋಭಾಗದೊಳಪ್ಪ ಚತುರ್ಮುಖ ಕಮಂಡಲದೊಳಗಡಗಿ ತ್ರಿವಿಕ್ರಮ ಭರಣಾಹತಿಯಿಂದಾಕಮಂಡಲ ವೊಡೆಯಲಲ್ಲಿಂ ಭೂಕೈಲಾಸಕ್ಕೈದಿ ಬಳಿಕ ಪುತ್ರಿಕಾರ್ಥಿಯಾಗಿ ಪ್ರಾರ್ಥಿಸುವ ಹಿಮಾಲಯದೊಳುದಿಸಿ ಗೌರಿಗಕ್ಕನೆನಿಪ ಸುರರೊಳ್ಪ್ಯಲಲ್ಲಿಂ ಭಗೀರಥ ಪ್ರಾರ್ಥಿತ ಸಗರಾತ್ಮಜೋತ್ತಾರಣ ನಿಮಿತ್ತದಿಂ ಭೂಲೋಕಮಂ ಪಾವನಂಗಯ್ಯಲವತರಿಸುವಲ್ಲಿ ಹರಜಟಾಜೂಟದೊಳ್ಳ ಲೀನಮಾಗಿ ಮತ

ಳ. ಪ್ರಾಲೇಯವಾಕೇಶ ಶೈಲಾಗ್ರದಿಂ ಬಂದು ಸರಿಸಿಗಳ ದೇಳುಪ್ರವಾಹಗಳಾಗಿ ಮೂರರ್ಕ್ಕರು ಮೂಡಲ್ಪಡುವಲ್ಲೈದ ದಕ್ಷಿಣವಾಹಿನಿಯರಾದ ಭಾಗೀರಥಿಯು ಭರದ್ವಾಜಾಶ್ರಮದೊಳು ಕಾಳಿಂದಿಯೊಡನೆ ಸರಸ್ವತಿಯುಂ ಬೆರಸಿ ತ್ರಿವೇಣಿ ಯೆನಿಸಿ ಬಂದು ವಾರಾಣಸಿಯೆಂಬ ವಿಮುಕ್ತ ತಾರಕೇಶ್ವರ ಸನ್ನಿಧಿಯೊಳು ಮಣಿಕರ್ಣಿಕೆ ಕೂಡಿ ಸಾರ್ಧ ತ್ರಿಕೋಟಿ ತೀರ್ಥಗಳಂ ದುತ್ತರವಾಹಿನಿ ಯಾಗಿ ಬರುವಲ್ಲಿ ಪಾಟಲೀಪುರ ಪ್ರಾಂತದೊಳು ಪದ್ಮಾಸುರಂಗಾಗಿ ಬರ ಮದೇಶವಂ ಪೊಕ್ಕು ಮಿಕ್ಕುಳಿದ ಶುದ್ಧಗಂಗೆ ಕಾಳಖಂಡಕ್ಷೇತ್ರದೊಳು ಶತಮುಖವಾಗಿ ಪೂರ್ವಸಾಗರವಂ ಗಮಿಸಿ ತೀರ್ಥಪುಣ್ಯನದಿಯು ಮಹಾ ನದೀಮುಖ್ಯಮೆನೆ. ಗಂಗೆ ಮಂದಾಕಿನಿ ಸ್ವರ್ಧುನಿ ತ್ರಿಪಥಗೆ ಭಾಗೀರಥಿ ಜಾಹ್ನವಿ ಯೆಂಬ ಪುಣ್ಯನಾಮಂಗಳಂ ವೇದಪ್ರತಿಪಾದ್ಯವಾಗಿ ಸಕಲ ನಾಪನಿವರ್ತಕ ಪ್ರತ್ಯಕ್ಷ ಸಿದ್ಧಾಂತಮಪ್ಪುದರಿಂ ಕಲಿತಾರಕವಾಗಿರ್ಕ್ಕುಂ.

ಲಿಂಗೋದ್ಭವನದಿ.

ಬಳಿಕ ವಿಂಧ್ಯಾಚಲ ಪ್ರಾಂತ್ಯದೊಳುದಿಸಿದ ನರ್ಮದೆಯೊಳ ಗೋಂಕಾರಕುಂಡಮಿರ್ಪ್ಪುದದರೊಳಗೆ ಯುಗಮೊಂದಕೆ ಶತಕೋಟಿ ಶಿವಲಿಂಗಂಗಳು ಚಂದ್ರಕಲಾದಿ ಸಲ್ಲಕ್ಷಣಗಳಿಂದುದಿಸಲಪ್ಪುಗಳಂ ಚಿರಕೃತಿಗಳಾರಾಧಿಸು ಪರಮಮಹಾನದಿಯೊಳಗವಗಾಹನಂಗೈವಾತಂಗೆ ಸ್ನಾನಮೊಂದರಿಂ ಸಹಸ್ರಲಿಂಗಾರ್ಚನ ಫಲಮಹುದೆಂಬ ಸ್ಮೃತಿಪುರಾಣಾಗಮಗಳಿಂ ವಿಶ್ರುತಮಾಗಿರ್ಕ್ಕುಂ.

ವಿಷ್ಣುಗಣೇಶ ನದಿಗಳು.

ಮತ್ತಮಾರ್ಯಾವರ್ತದೊಳಿರ್ಪ ಗಂಡಕಿಯೊಳು ಸಾಲಗ್ರಾಮಂಗಳೆನ ಘನಕ್ಷತೆ ವಿವರ ಗರ್ಭದೊಳು ಗುಹ್ಮಚಕ್ರ ಸಮೇತವಾಗಿರ್ಪ ಶಿಲೆಗಳು ದಿಸಿ ಪೂಜಾಯೋಗ್ಯವಾಗಿರ್ಪವೆಂತಲುಂ ಶೋಣಭದ್ರೆಯೊಳು ಗಜಾನನಾಕೃತಿಯುಳ್ಳ ರಕ್ತಶಿಲೆಗಳುದಿಸಿ ಭಕ್ತಗಿಷ್ಟನೀವವೆಂತಲುಂ ತಿಳಿಯಲಕ್ಕುಂ.

ಪಂಚಪಾವನ ನದಿಗಳು.

ಬಳಿಕ ವಿಂಧ್ಯದಕ್ಷಿಣದೊಳಿರ್ಪ ಪಂಚನಂದಗಿರಿಯೊಳು ಉತ್ತರಪಿನಾಕಿನಿ ದಕ್ಷಿಣಪಿನಾಕಿನಿ, ಪಾಪಘ್ನಿ, ಅರ್ಕಾವತಿ, ಚಿತ್ರಾವತಿ, ಕ್ಷೀರನದಿಗಳುದಿಸಿ ಪರಿದು ಪಾಪವಂ ಕಳವವೆಂದು ವಿಶ್ರುತವಾಗಿರ್ಕ್ಕುಂ.

ಮರುದ್ವೃಧೆ.

ಬಳಿಕ ಸಹ್ಯಾದ್ರಿಯೊಳುದಿಸಿದ ಮಹಾನದಿಯೇ ಮರುದ್ವೃಧೆ ಕಾವೇ

ರಿಯೆಂಬ ಪೆಸರುಗಳಿಂ ವೇದಪುರಾಣ ಪ್ರತೀತವಾಗಿ ದಕ್ಷಿಣಗಂಗಾ ತ್ರಿವೇಣಿಯೆನಿಸಿ ಅಗಸ್ತ್ಯಕಮಂಡಲದಿಂದೊಗೆದು ಅರ್ಕಪುಷ್ಕರಾದಿ ಕ್ಷೇತ್ರಗಳಂ ಬಳಸಿ ಗಜಾರಣ್ಯಮಂಪೊಕ್ಕು ಕಪಿಲೆಕೂಡಿ ರಂಗತ್ರಯಂ ಕೂಡಿ ಜಂಬುಕೇಶ್ವರ ಕುಂಭಕೋಣಾದಿ ಪ್ರಾಂತ್ಯವಾಗಿ ಚೋಳ ಜೀವಿಕೆಯೆನಿಸಿ ಪೂರ್ವಸಾಗರವಂ ಪೊಕ್ಕುಂ ಪ್ರಸಿದ್ಧವಾಗಿಹುದು.

### ನದೀವಿಶೇಷಗಳು.

ಮತ್ತು ಹಿಮಾಲಯದೊಳು ಶತದ್ರುಚಂದ್ರಭಾಗೆ ಮುಂತಾದಮಹಾನದಿಗಳನೇಕ ಮುದಿಸಿರ್ಪುದಲ್ಲದೆ ಸೇತು ಸೀತಾಚಲ ಮಧ್ಯವರ್ತಿ ಕ್ಷೇತ್ರಪರ್ವತಾದಿಗಳೊಳುದಿಸಿದನದಿಗಳನೇಕವಾಗಿರಲವುಗಳೊಳು ಮಲಾಪಹಾರಿ ಕಪಿಲೆ ಪಾಪಘ್ನ ಕುಮಾರಧಾರೆ ನೇತ್ರಾವತಿ ಭದ್ರೆ ಸುವರ್ಣಮುಖಿ ಕೌಂಡಿನ್ಯನದಿ ಕೌಶಿಕಿ ಸರಯು ಸರಸ್ವತಿ ಚಿತ್ರವಾಹಿನಿ ವಾರುಣಿ ಮೊದಲಾದ ಮಹಾನದಿಗಳೈನೂರು ಪರಿವೃತ್ತಿರ್ಪವು ಅವುಗಳ ಜಲತಟಂಗಳಲ್ಲಿರ್ಪ ಶಿವಲಿಂಗವಿಭೂತಿಗಳಂ ಯಜಿಸಿ ಕರ್ಣಿಕಾದ್ವೀಪದೊಳಗಿರ್ಪ ಬ್ರಹ್ಮಹಾದಿ ಸರ್ವಾಸ್ತಿಕರುಂ ಗತಪಾಪರಕ್ಕುಂ.

### ಪುಣ್ಯಕ್ಷೇತ್ರಗಳು.

ಬಳಿಕ-ಕೇತಾರ-ಕಪಾಲ-ಬಾದರ-ರೇವಣ-ಜ್ವಾಲಾಮುಖಿ-ತ್ರಿಕೂಟ-ಅವಿಮುಕ್ತ-ಕಾಳೀಖಂಡ-ವಿಂಧ್ಯವಾಸ-ಶ್ರೀಗಳ-ಗಯಾ-ಶ್ರೀಶೈಲ—ಜಗನ್ನಾಥ-ವಿಟ್ಠಲ-ಕೋಲಾಹಲ-ಭದ್ರಾಚಲ-ಶೇಷಾಚಲ-ಘಟಿಕಾಚಲ-ಚಿದಂಬರ--ವೀಕ್ಷಾರಣ್ಯ-ಕಾಂಚೀ-ಅರುಣಾಚಲ-ಮಧ್ಯಾರ್ಜುನ-ಕುಂಭೀಶ ಸುಂದರ-ಸೇತು-ಶಯನ-ನಾಭ-ಕುಮಾರ-ಸ್ಥಳ-ವಿಘ್ನಾಂಡಕ-ಗೋಕರ್ಣಭ-ಗಜಾರಣ್ಯ-ದೌಪರ್ವಸ-ಸಂಗಮ-ಗದಳ-ಮಹಿಷಾರಿ-ರಂಗ-ಶ್ವೇತ-ಹರಿಹರ-ನಂದಿ-ವಿರೂಪಾಕ್ಷ-ಕಲ್ಯಾಣ-ಕೂರು—ಸಿದ್ಧನೇಪಾರಣ್ಯಾದಿಪ್ರಮುಖಪುಣ್ಯಕ್ಷೇತ್ರಂಗಳು-ನೂರೆಂಟುಸೇವ್ಯಂಗಳಾಗಿರ್ಕ್ಕುಂ.

### ಶಕ್ತಿಪೀಠತ್ರಯವು.

ಜ್ವಾಲಾಮುಖಿಯೊಳು ದಾಹಶಕ್ತಿ-ಉಜ್ಜಯಿನಿಯೊಳು ಕಾಳೀಶಕ್ತಿ-ಧರ್ಮಸ್ಥಳದೊಳು ರಾಹುಶಕ್ತಿಗಳೆಂಬ ಶಕ್ತಿಪೀಠತ್ರಯಮುಂ--ಕಾಶಿಯೊಳುವಿಶಾಲಾಕ್ಷಿ-ಕಂಚಿಯೊಳುಕಾಮಾಕ್ಷಿ-ಮಧುರೆಯೊಳುಮೀನಾಕ್ಷಿ-ಯೆಂಬಕ್ಷಿ ಪೀಠತ್ರಯಮುಂ-ಶ್ರೀಶೈಲದೊಳು ಭ್ರಮರಾಂಬೆ-ಶಿವಲಿಂಗೆಯೊಳು ಹೊನ್ನಾಂಬೆ-ಶಂಬರದೊಳು ಜೋಗಮ್ಮಾಂಬೆ ಯೆಂಬ ಬಾತ್ರಯ

ವಮಂ ಮಹಿಮೋನ್ನತ ಪಠಾಗಿರ್ಪ್ಪಂ. ... ... ೯೦.

## ದೇವೀ ವಿಭವಗಳು.

ಬಳಿಕ ಕೊಲ್ಲಾಪುರದಲ್ಲಿ ಮಹಾಲಕ್ಷ್ಮಿ ಜಾಲಂಧರದಲ್ಲಿ ಮಹಾದೇವಿಕನ್ಯಾಕುಬ್ಜೆಯಲ್ಲಿ ಕುಬ್ಜೆ ಸಿಂಹಳದಲ್ಲಿ ಸಿಂಹಿಕೆ ಚಕ್ರವಾಪಿಯಲ್ಲಿ ಮಣಿಕರ್ಣ್ಣಿಕೇಶ್ವರಿ ಪೂರ್ಣಕ್ಷೇತ್ರದಲ್ಲಿ ಪೂರ್ಣಿಕಾದೇವಿ ಪರ್ವತದಲ್ಲಿ ಪಾರ್ವತಿ ವಿಂಧ್ಯಾದ್ರಿಯೊಳು ವಿಂಧ್ಯವಾಸಿನಿ ಮಹಾಕಾಲಕ್ಷೇತ್ರದಲ್ಲಿ ಮಹಾಕಾಲೇಶ್ವರಿ ಯೋಗಿನೀಪುರದಲ್ಲಿ ಯೋಗಾವಳಿ ಹಿಮಾಚಲದಲ್ಲಿ ಹೈಮವತಿ ಶ್ವೇತದ್ವೀಪದಲ್ಲಿ ಪದ್ಮವಾಸಿನಿ ಸುಮೇರುವಿನಲ್ಲಿ ಸುಪ್ರಭೆ ಶ್ರೀಶೈಲದಲ್ಲಿ ಭ್ರಮರಾಂಬಿಕೆ ಕಾಶಿಯೊಳಗನ್ನಪೂರ್ಣೆ ಧರ್ಮಸ್ಥಳದಲ್ಲಿ ಕಾಳರಾತ್ರಿ ಶೃಂಗಪುರದಲ್ಲಿ ಶಾರದೆ ಲಂಬಿಕೆಯಲ್ಲಿ ಲಲಿತೆಯೆಂಬಷ್ಟಾದಶ ಶಕ್ತಿಯೋಗಪೀಠವಾದೊಡೆ ಬಾಲಾರ್ಕತೇಜದಿಂ ತ್ರಿಣೇತ್ರದಿಂ ಪಾಶಾಂಕುಶಚಾಪವಾಂತಕರಚತುಷ್ಟಯದಿಂ ಸರ್ವಾಲಂಕಾರದಿಂದೆಸೆದು ತ್ರಿಸಂಧ್ಯೆಯಲ್ಲಿ ತಂಮಾತಮ್ಮ ಧ್ಯಾನಪೂರ್ವಕವಾಗಿ ನಾನುಜಪಕರ್ಗೆ ರಾಜ್ಯವಶ್ಯಾದಿ ಸಿದ್ಧಿಪ್ರದಮಕ್ಕುಂ.

## ಮುಕ್ತಿಕ್ಷೇತ್ರಸಪ್ತಕ.

ಬಳಿಕಲ್ಲಿ ಅಯೋಧ್ಯೆ ಮಥುರೆ ಮಾಯಾಕಾಶಿ ಕಾಂಚಿ ಅವಂತಿಗದ್ವಾರವತಿಯೆಂಬೇಳು ನಗರಂಗಳುಂ ತದ್ವಾಸಿಗಳಿಗೆ ಪಾಪಮುಕ್ತಿದಾಯಕಂಗಳಾಗಿರ್ಪವವುಗಳಲ್ಲಿ ಕಾಶಿಯೊಂದೇ ವಾರಣಾಸಿ ಅವಿಮುಕ್ತ ಅಂತರ್ಗೇಹ ಮಹಾಶ್ಮಶಾನ ಶಿವರಾಜಧಾನಿ ತ್ರಿಕಂಟಕಭೂಷಣ ನಿತ್ಯನಗರವೆಂಬೆಂಟಭಿಧಾನಯುಕ್ತಮಾಗಿ ವಿಶ್ವೇಶಮಾಧವಢುಂಡಿದಂಡಪಾಣಿ ಭೈರವಗುಹೆ ಗಂಗೆ ಅನ್ನಪೂರ್ಣೆ ಮಣಿಕರ್ಣಿಕೆ ಆನಂದವನ ತಾರಕಲಿಂಗಜ್ಞಾನವಾಪಿಗಳೆಂಬ ಹನ್ನೆರಡರಿಂದುಪಪನ್ನಮಾಗಿರ್ಪುದಲ್ಲಿ ಮೃತವಾಗುವ ಪಿಪೀಲಿಕಾದಿ ಸಕಲ ಪ್ರಾಣಿಗಳಿಗುಂ ಪ್ರಾಣೋತ್ಕ್ರಮಣ ಸಮಯದೊಳು ಜಗದ್ಗುರುವಾದ ಶಂಭುವೇ ತಾರಕೋಪದೇಶಂಗೆಯ್ಯೆ ತದನುಗ್ರಹಬಲದಿಂ ಶಿವತ್ವಮಾವಿರ್ಭವಿದುಃಖ ಲೇಶವಿಲ್ಲದೆ ನಿತ್ಯಚಿತ್ಸುಖ ಪೂರ್ಣಾವ್ಯಯ ಕೈವಲ್ಯಮೆಂಬ ಮೋಕ್ಷವು ಸಿದ್ಧವಾಗುವದೆಂದು ನಿಗಮಾಗಮಸ್ಮೃತಿ ಪುರಾಣಾದಿ ಸಕಲ ಶಾಸ್ತ್ರಂಗಳು ಸಿದ್ಧಾಂತವಾಗಿ ಪ್ರತಿಪಾದಿಸುತ್ತಿರಲು ಆಸ್ತಿಕರೊಳು ಮುಮುಕ್ಷುಗಳಾದೆಲ್ಲರುಂ ಮುಮೂರ್ಷುಗಳಾಗಿ ಕಾಶೀವಾಸಮಂ ಮಾಳ್ಪರವರಿಗೆ ಸುರಾಭಾಂಡಲಿಂಗನಿದರ್ಶನಮಲ್ಲದೆ ಮ್ರಿಯಮಾಣಜಂತುಗಳೆಲ್ಲವುಂ ವಾಮಪಾರ್ಶ್ವದಿಂ ಮಲಗಿದಕ್ಷಿಣಕರ್ಣಮಂ ಶಿವೋಪದೇಶಕ್ಕಭಿನಯಿ

ಸುವವಾಗಿ ಕಾಶಿಯೊಂದೇ ಸರ್ವೋತ್ಕರ್ಷವೆಂದು ನಿರ್ಧರಿಸಿ ನಂಬಿ ಕೃತಾರ್ಥರಾಗಲಿದು ಸುಲಭೋಪಾಯಮಾಗಿರ್ಕುಂ.

### ಛಪ್ಪನ್ನ ದೇಶಗಳು.

ಮತ್ತಮಾಭರತವರುಷದಲ್ಲಿಯೇ—ಅಂಗ-ವಂಗ-ಕಳಿಂಗ-ತ್ರಿಲಿಂಗ-ಕೊಂಗ-ಲಾಟ-ಬಂಗಾಳ-ಚೋಳ-ಕೇರಳ-ಗೌಳ-ಪಾಂಚಾಳ-ಸಿಂಹಳ-ಕುಂತಳ-ನೇಪಾಳ-ಮಳಯಾಳ-ತುಳುವ-ಸೈಂಧವ-ಕೊಂಕಣ-ಕುರು-ಮಗಧ-ಮತ್ಸ್ಯ-ವಿದರ್ಭ-ಕೋಸಲ-ಶೂರಸೇನ-ಕಾಶ್ಮೀರ-ಮಹಾರಾಷ್ಟ್ರ ಕರ್ಣಾಟ-ಕಿರಾತ-ತುರುಷ್ಕ-ಶಂಕರ-ಬರಮ-ತ್ರಿಗರ್ತ-ನಿಷಧ-ಮಾಧ್ಯ-ಚೈನ-ಬರ್ಬರ-ಬಾಹ್ಲೀಕ—ಲಾಟ-ಚೈನ-ಕರಾಳ--ಓಢ್ರ-ಘೂರ್ಜರ-ಕಾಂಭೋಜ-ಸೌರಾಷ್ಟ್ರ-ಸೌವೀರ-ಪಾಂಡ್ಯ-ಹೂಣ--ಯವನ-ಮ್ಲೇಚ್ಛ-ಹೈಹಯ-ಆರ್ಯಾವರ್ತ-ದ್ವೈರ-ಅಮರಕ-ಉತ್ತರಕುರು-ಗೈರಟಗಳೆಂಬೈವತ್ತಾರು ಬಗೆಯ ಜನರಿಂದಾ ಈ ಸನ್ನಿವೇಶ ಕ್ರಿಯಾದಿ ನಿಬದ್ಧ ಸಂಕೇತಗಳಿಂ ನಿರೂಢಮಾದೈವತ್ತಾರು ಪ್ರಾಂತಂಗಳಿರ್ಪವಾದೇಶಂಗಳಲ್ಲಿ.

### ದೇಶಾಲಂಕಾರ ಶಕ್ತಿಕಂಗಳು.

ನಗರ-ಪಟ್ಟಣ-ಪುರ-ಗ್ರಾಮ-ಪಲ್ಲೀ-ಶಿಬಿರ ವ್ರಜಗಳೆಂಬ ಸಪ್ತ ವಿಧಗಳಿಂ ರಾಜಧಾನಿ-ವಣಿಗ್ಧಾನಿ-ಜನಧಾನಿ-ಕರ್ಷಕಧಾನಿ-ಕಿರಾತ ಧಾನಿಗಳೆಂಬ ಪಂಚವಿಧಗಳಿಂ ಖೇಟ-ಖರ್ವಟ-ದ್ರೋಣ-ಮಂಡಲ--ಆಲಯ-ಸ್ಥಾನೀಯಾದಿ ಗ್ರಾಮಭೇದಗಳಿಂ ದೆಸೆವಮಾನವಾ ವಾಸಂಗಳಿರ್ಪವಪ್ರಗಳೊಳು ಸಾವಿರಕ್ಕೆ ಕೆಲವೈನೂರಕ್ಕೆ ಕೆಲವೀಪರಿಮಿತ ವತ್ಸರೋಭ್ರಯು ಶಿಥಿಲಂಗಳಾದರುಂ ತತ್ತತ್ಕಾಲದೊಳಗಾಳುವ ನರಪತಿಗಳಸ್ವಾಮ್ಯಮಾತ್ಯ ಬಂಧುಕೋಶರಾಷ್ಟ್ರ ದುರ್ಗಬಲಂಗಳೆಂಬ ರಾಜ್ಯಾಂಗಸಪ್ತಕದಿಂ ಜಲದುರ್ಗ-ವನದುರ್ಗ-ಗಿರಿದುರ್ಗ-ಕೃತಕಾವನೀದುರ್ಗ-ಸಾಲದುರ್ಗ--ಸೇನಾದುರ್ಗ-ಮಂತ್ರದುರ್ಗಗಳೆಂಬ ಸಪ್ತವಿಧದುರ್ಗಗಳಿಂ ಮಂತ್ರಕಸಂಘ-ಪಾಲಕಸಂಘ-ವಿಚಾರಕ ಸಂಘ-ಆಪ್ತಕಸಂಘ-ಶಿಲ್ಪಿಸಂಘ-ವಿದ್ವತ್ಸಂಘ-ವಣಿಕ್ಸಂಘ-ವೀರಸಂಘ-ಪೋಷಕಸಂಘ-ಅರ್ಜಕಸಂಘ-ವಿನಿಯೋಕ್ತೃಸಂಘ-ಸಾಕ್ಷಿಸಂಘ-ವೃತ್ತಸೂಚಕಸಂಘ-ಪರೀಕ್ಷಕಸಂಘ-ನ್ಯಾಯಸಂಘ—ಆವೇದಕಸಂಘ-ವಿನಿಮಯಕರ್ತೃಸಂಘ-ಶಾಸಕಸಂಘ-ವೆಂಬಷ್ಟಾದಶಮಹಾಸಂಘ-ಪ್ರಸಿದ್ಧಜ್ಞಾನಸ್ಪೃದ್ಧಶತ್ಯೈಕಮತ್ಯ ಸಂಪಾದಿತಯೋಗಕ್ಷೇಮಾತಿಶಯಗಳಿಂ ದನುಪಹತಾಭಿವೃದ್ಧಿಯಂಪಡದು ಸ್ವಸ್ವನಗರಾದಿಗಳಿಂ ಜೀರ್ಣೋ

ಪ್ಪರಂಗ್ಳೈಯುತ್ತಿರಲು ದೇಶಗಳೊಳಗೆಲ್ಲ ದ್ವಾದಶಯೋಜನ ವರ್ಗವಾ
ದ ಸಹಸ್ರನಲವತ್ತುನಾಲ್ಕು ಯೋಜನಗಳಿಗೊಂದೊಂದು ವಿಭಾಗವಹದು
ಸೀಮಾ ನಿರ್ದಿಷ್ಟವಾಗಿರಲಂತ್ಯವತ್ತರಿಂ ಹಾರುನೂರ ಯೆಪ್ಪತ್ತೆರಡು
ಯೋಜನವಾಗಿರಲುಳಿದಿಪ್ಪತ್ತೆಂಟುಯೋಜನಂಗಳೇ ಕೇವಲದ್ವೈಪವಾಹಿ
ಮಿಯುಳ್ಳ ನಿರ್ಕ್ಷೇತ್ರರಸಿದ್ಧಿಭೂಮಿಯಕ್ಕುಂ.

ಭರತವರುಷ ಭರತಖಂಡದ ಜನರು.

ಬಳಿಕಿಂತಾರುನೂರ ಯೆಪ್ಪತ್ತೆರಡು ಯೋಜನದ ವರ್ಗವಾದ ನಾಲ್ಕು
ಲಕ್ಷದ್ವೈವತ್ತೊಂದು ಸಾವಿರದ್ವೈನೂರೆಂಭತ್ತು ಯೋಜನಂಗಳ ಚತುರಸ್ರ
ಪ್ಪ ರಾಮಸೇತು ಹಿಮಾಚಲಮಧ್ಯದೊಳು ಚಾತುರ್ವರ್ಣಿಕರುಂ ಹದಿನೆಂ
ಟುಜಾತಿಗಳವರುಂ ನೂರೊಂದುಕುಲದವರುಂ ಸಾವಿರದೆಂಟುನೂರ ಬಗೆ
ಯವರುಂ ತೊಂಭತ್ತೆರಡುವಿಭಿನ್ನವಾದಿಗಳುಂ ಕೂಡಿದಾರುಮತದವರುಂ
ಇವರೆಲ್ಲರೊಳು ಚರಮ ಶರೀರಗಳೆನಿಪ ಸಿದ್ಧಾಂತಿಗಳುಂ ಮತ್ತು ಕ್ಷೇತ್ರ
ಯೋನಿವಿಕಲ್ಪಂಗಳಿಂ ಸಂಕರಜಾತೀಯರು ಪೇಳ್ದೆಲ್ಲರೊಳುಂ ಬೇರೆಬೇರೆ
ಸಾಂಪ್ರದಾಯಿಕರೆಂಬಾಸ್ತಿಕಸಂಬಂಧಿಗಳುಮಲ್ಲದೆ ನಾಸ್ತಿಕರೊಳ್ಯುವ
ನಮ್ಲೇಚ್ಛತುರುಷ್ಕಪಾಶ್ಚಾತ್ಯರೆಂಬಚತುರ್ವಿಧಘಾತಕಜಾತೀಯರುಂ
ಜಾತಿಚಂಡಾಲ-ಕರ್ಮಚಂಡಾಲ-ವೃತ್ತಿಚಂಡಾಲ-ಸಂಕಲಿತ ಚಂಡಾಲರೆಂ
ಬ ಚತುರ್ವಿಧ ಚಂಡಾಲರುಂ-ಬೌದ್ಧ-ವೈನಾಸಿಕ-ಕ್ಷಪಣಕ-ಕಾಪಾಲಿಕರೆಂ
ಬಚತುರ್ವಿಧನಿಂದ್ಯರುಂ ಜೈನ ಲೋಕಾಯುತಿಕರೆಂಬದ್ವಿವಿಧಭ್ರಾಂತರುಮಿ
ವರೆಲ್ಲರೊಳು ಭ್ರಾಂತಿ ಪ್ರಧಾನವಾದ ನಾಸ್ತಿಕ್ಯಮಿರಲು ನಿರೀಶ್ವರವಾದಿ
ಯೋರ್ವನೇನಾಸ್ತಿಕನೆನಿಸಿ ದೀಪಮಾನವರೆಲ್ಲರುಂ ದೇಶಕ್ರಿಯಾಕಾಲವೈಪ
ರೀತ್ಯಗುಣಧರ್ಮಸಾಂಕರ್ಯದಿಂ ಕೆಲವರು ಕುಬ್ಜವಾಮನರಂತೆ ಹ್ರಸ್ವಾಕಾ
ರರಾಗಿಯುಂ ಕೆಲವರು ಮಹಾಶ್ವದಂತುನ್ನತಾಕಾರವಾಗಿಯುಂ ಕೆಲವ
ರು ನಿಶ್ಚಂಚಲರುಂ ಜೀರೆಕೆಲವರು ದಯಾಳುಗಳುಂ ಕೆಲರಾರಣ್ಯಕರುಂ-
ಕೆಲವರು ನಾಗರಿಕರುಂ-ಕೆಲವರು ಪಶುತುಲ್ಯರುಂ-ಕೆಲವರು ಕಪ್ಪು-ಕೆಲವ
ರು ಬಿಳಪು-ಕೆಂಪುಬಣ್ಣಗಳುಳ್ಳವರು ಮಿಾಪರಿಪ್ರಾಯಿಕವಾಗಿ ಸಾಂಸಾರಿ
ಕಚಕ್ರಪರಿಭ್ರಾಂತಿಯಿಂ ಶಿಶ್ನೋದರಪರಾಯಣತ್ವದಿಂ ಧನೈಕಲುಬ್ಧರಾಗಿ
ಕ್ರಿಯಾಭ್ರಷ್ಟ-ಜಾತಿಭ್ರಷ್ಟ-ಕುಲಭ್ರಷ್ಟರಾಗಿರ್ಪವರ ಸಹವಾಸಕ್ಕೆ ತ
ಕ್ಕವರೆನಿಸಿ ಶಿವಧರ್ಮ ವಿರಕ್ತಿಗಳಿಲ್ಲದೆ ಶಿವಧ್ಯಾನ ವಿಮುಖರಾಗಿ ಪತಿತರೆನಿ
ಸಿ ಕೆಡುತ್ತಿರ್ದರುಂ, ಕೆಲರಿವರೊಳಗುಂ ಸೃಷ್ಟ್ಯಾದಿ ಚಿರನಿರೂಢ ಶಿವಸಂ

ಪ್ರದಾಯಾಗತ ನಿಗಮಾಗಮ ಧರ್ಮನಿಷ್ಠಾಗರಿಷ್ಠರಾದ ವೇದಾಂತಿ ಸಿದ್ಧಾಂತಿಗಳೊಳು, ಕರ್ಮಠರು-ಜ್ಞಾನಿಗಳೆಂಬೆರಡು ಬಗೆಯವರಾದ ಬ್ರಾಹ್ಮಣಾದಿಗಳುಂ ಶಿವ ಸಂಬಂಧ ಕರ್ಮ ಧರ್ಮಗಳಿಂ ದುತ್ತಮರೆನಿಸಲೀ ವೇದಾಂತಿ ಸಿದ್ಧಾಂಗಳೀರ್ವರ ನುಳಿಯೆ ಸರ್ವರೊಳಗುಂ ಪ್ರಚುರಗೊಂಡ ದೋಷಗಳೀ ತೋರುತಿರ್ಪವೆಂತೆನೆ.

ಜನಧರ್ಮ ಕರ್ಮಗಳು ಯುಗಚರ್ಯೆ.

ಮಾನವರೆನಿಸಿದ ಜ್ಞಾನ ಜಂತುಗಳೊಳ ಗೆಲ್ಲರುಂ ಪ್ರಾಯಿಕವಾಗಿ ಕೃತಾದಿ ಯುಗಗಳೊಳು ಧರ್ಮ ಕರ್ಮ ಜ್ಞಾನಾದ್ಯನುಕ್ರಮ ತಾರತಮ್ಯದಿಂ ದುತ್ತಮರೆನಿಸಿದರುಂ ಕಲಿಯೊಳು ಮೊದಲೊಂದು ಸಾವಿರ ವರುಷದೊಳು ಕ್ರಮದಿಂದಾಸ್ತಿಕ್ಯ ಕ್ಷಯಮಾಗಲೈದು ಸಾವಿರ ವರುಷಗಳು ಕಳೆಯಲೀ ಮಹಿಯೊಳು ಕ್ಷೇತ್ರಕಳೆ-ತೀರ್ಥಕಳೆ-ಮಂತ್ರಕಳೆ-ತಂತ್ರಕಳೆ-ಯಂತ್ರಕಳೆ--ಯೆಂಬವು ಕ್ಷೀಣಿಸಿ ಪೋಗಲೀ ನರರೆಲ್ಲರುಂ ಮುನ್ನ ಪೇಳ್ದ ಪಾತಿತ್ಯ ದುಷ್ಕೃತಗಳಿಗೆ ಕರ್ತೃಗಳೆನಿಸಿ ದುರ್ಗತಿ ಭಾಜನರಾಗಲು ದೋಷಂಗಳೀ ಪ್ರಚುರಗೊಂಡಿರ್ಪ ವಾವವನೆ.

(ದುರ್ಜೀವನ ದುರ್ವೃತ್ತಿ ದೋಷಂಗಳು.)

ಬಳಕ-ವಾಣಿಜ್ಯ-ಕೃಷಿ-ಅಧಿಕಾರ-ಸೇವನ-ಯಾಚನಂಗಳಿಂದಲೇ ಕೃಛ್ರ ಜೀವಿಗಳೆನಿಸಿ-ಸಿದ್ಧವಿದ್ಯೆಯ ಕೀಲು ಕಾಣದ ನರಕುಂಗಳು ಕಷ್ಟಾನ್ನ ಭೋಜಗಳಾಗಿ, ಅಶುಚಿ, ಅನಿತ್ಯ, ಅನಾತ್ಮ, ಅಸುಖಂಗಳಲ್ಲಿ ಕ್ರಮದಿಂ, ಶುಚಿ, ನಿತ್ಯ ಆತ್ಮ, ಸುಖಗಳ ಭ್ರಾಂತಿ ಯೆಂಬಧ್ಯಾಸದಿಂ ಮಾಯೆಯಿಂ ಮೋಹಿಸಿ, ಅವಿದ್ಯೆ, ಅಸ್ಮಿತ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚ ಕ್ಲೇಶಗಳಿಂ ಘಾಸಿಯಾಗಿ, ಜ್ಞಾನವಿಕೃತಿ ಭಾವ ವರ್ತನವಿಕೃತಿ ಭಾವ, ಮೋಹನ ವಿಕೃತಿ ಭಾವವೆಂಬ ಭಾವ ತ್ರಯದಿಂ ಭ್ರಮಿಸಿ, ಅರ್ಥೇಷಣ-ಪುತ್ರೇಷಣ-ದಾರೇಷಣವೆಂಬ ಈಷಣ ತ್ರಯದಿಂ ಕಟ್ಟುವಡದು ಜಾತಿ ವರ್ಣಾಶ್ರಮ ಕುಲಗೋತ್ರ, ನಾಮಂಗಳೆಂಬ ಷಡ್ಭ್ರಮೆಯಿಂ ಭ್ರಾಂತಿಸಿ, ಪ್ರಾಣ ಬುದ್ಧಿ ದೇಹಂಗಳಿಗೆ ಕ್ರಮದಿಂದೆರಡಾದ, ಅಶನ-ಪಿಪಾಸೆ-ಶೋಕ-ಮೋಹ-ಜರೆ-ಮರಣವೆಂಬ ಷಡೂರ್ಮಿಯಿಂ ಪ್ರಜ್ಞೆಯಡಗಿ । ತನುವ್ಯಸನ । ರಾಜ್ಯವ್ಯಸನ । ವಿಶ್ವವ್ಯಸನ । ಸ್ತ್ರೀವ್ಯಸನ । ಧಾನ್ಯವ್ಯಸನ । ದ್ರವ್ಯವ್ಯಸನ । ವಿದ್ಯಾವ್ಯಸನ । ಉತ್ಸಾಹಕ ವ್ಯಸನ । ಸೇವಕವ್ಯಸನ । ಕಾಷ್ಠ ವ್ಯಸನಂಗಳೆಂಬ ದಶವ್ಯಸನಗಳಿಂ ಹಸೆಗೆಟ್ಟು, ಕುಲ, ಬಲ, ಧನ,

ರೂಪ, ಯೌವ್ವನ, ವಿದ್ಯಾ ರಾಜ್ಯ, ತಪಸ್ಸದೆಂಳ್ಗೆ ಯೆಂಬಷ್ಟ ಮದದಿಂ ಮದಿಸಿ, ತೃಷೆ । ಶಂಕೆ । ಭೀತಿ । ಲಜ್ಜೆ । ಜೆಗುಪ್ಸೆ । ಕುಲ । ಶೀಲ । ಗರ್ವವೆಂಬ ಪಾಶಷಷ್ಟಕದಿಂ ಮಿಗೆ ಬಿಗಿವಡದು ಭೂಮಿ । ಜಲ। ವಹ್ನಿ। ವಾಯು। ನಭ। ಮನಸ್ಸು । ಬುದ್ಧಿ । ಅಹಂಕಾರ ವೆಂಬಷ್ಟ ಪ್ರಕೃತಿಯಿಂ ವಿಕಾರಿಸಿ ಬುದ್ಧಿ । ಸುಖ । ದುಃಖ । ರಾಗ । ದ್ವೇಷ। ಪ್ರಯತ್ನ । ಧರ್ಮ । ಅಧರ್ಮ। ಭಾವನೆ ಯೆಂಬ ನವ ಗುಣಗಳಂ ವ್ಯವಹರಿಸಿ । ಅಸುರವಾಸನೆ । ದೈವವಾಸನೆ । ಲೋಕವಾಸನೆ। ದೇಹವಾಸನೆ । ಶಾಸ್ತ್ರವಾಸನೆ ಯೆಂಬವು ಮೊದಲಾದನೇಕ ವಾಸನೆಗಳಂ ಘಾಸಿಯಾಗಿ ವಿಯದಾದಿಭೂತ। ತನ್ಮಾತ್ರ । ಶ್ರೋತ್ರಾದಿಜ್ಞಾನೇಂದ್ರಿಯ। ವಾಗಾದಿ ಕರ್ಮೇಂದ್ರಿಯ । ಪ್ರಾಣಾದಿವಾಯು। ಮಾನಸಾದ್ಯಂತಃಕರಣ। ಕಾಮಕರ್ಮ। ತಮವೆಂಬಷ್ಟಪುರದೊಳು ವಿಕಾರಿಸಿ । ಜ್ಞಾನೇಂದ್ರಿಯ ಪಂಚಕ । ಕರ್ಮೇಂದ್ರಿಯ ಪಂಚಕ । ಚಿತ್ತ । ಮನಸ್ಸು । ಅಹಂಕಾರ । ವಿದ್ಯೆ। ವಾಕ್ಯ । ಶಕ್ತಿಗಳೆಂಬ ಷೋಡಶ ಕಲೆಗಳಂ ವಿಕಲವಾಗಿ ಜನನ। ಮರಣ। ರಾಗ। ದ್ವೇಷ । ಜರೆ। ರೋಗ। ಮದ । ಮೋಹ । ಸ್ವೇದ । ಖೇದ । ವಿಷಾದ । ನಿದ್ರೆ। ಕಾಂಕ್ಷೆ । ಕ್ಷುಧೆ । ತೃಷೆ । ಭ್ರಮೆ । ಚಿಂತೆ । ಕ್ಲೇಶ ವೆಂಬ ಪದಿನೆಂಟು ದೋಷದಿಂ ದೂಷಿತವಾಗಿ ತ್ರಿಗುಣ್ಯಗಳಾದ ದ್ವಂದ್ವ ದುಃಖಂಗಳೊಳು ಸುಖ ದುಃಖ ಪೊಳ್ಳಿತಲ್ಲದು। ಪುಣ್ಯಾಪಾಪವಹುದಲ್ಲ । ಏದೆಯಿಲ್ಲ । ನಾನುನೀನು । ಅದು ದುಪೋದುದು । ಬಡತನ। ಮೊಡೆಯನವಹೋರಾತ್ರ । ಸ್ತ್ರೀಪುರುಷ। ಶುದ್ಧಾಶುದ್ಧಸತ್ಯಾನೃತ । ನಿರುಕ್ತಾ ನಿರುಕ್ತಾ ಚಿಜ್ಜಡವೆಂಬುದು ಮುಂತಾದ ಭೇದಭ್ರಾಂತಿಯಿಂ ಶುದ್ಧಾಖಂಡ ಸಂವಿತ್ಸತ್ತಾ ಶಿವಸ್ವರೂಪವ ನರಿಯದೆ ಮರುಳುಗೊಂಡು ಕರಣ ತ್ರಯದೊಳು ಸಿಲುಕಿ ಬಿಡಲಾರದೆ ಸಿಕ್ಕುಗೊಂಡು ॥

( ಕರಣತ್ರಯ ದೋಷಾದಿಗಳು. )

ಬಳಿಕ–ಪರದಾರಗಮನ । ಪರದ್ರವ್ಯಾಪಹರಣ। ಅಭಕ್ಷ್ಯಭಕ್ಷಣ । ಹಿಂಸೆ ಯೆಂಬೀ ನಾಲ್ಕು ಕಾಯದೋಷಗಳಂ ಚಂಡಾಲಾದಿ ಹೀನ ಯೋನಿಯನೈದಿ, ಅನುಚಿತತ್ವ । ನಿಷ್ಠುರತ್ವ । ಪುಸಿ । ಪೈಶೂನ್ಯವೆಂಬೀ ನಾಲ್ಕು ವಾಚಕ ದೋಷಗಳಂ । ಪಶುಪಕ್ಷ್ಯಾದಿಗಳಾಗಿಪುಟ್ಟಿ । ಜನವಿರುದ್ಧಕಾರ್ಯಾಪೇಕ್ಷೆ । ಅನಿಷ್ಟಚಿಂತನೆ । ದುಷ್ಟಚಿಂತನೆ । ಅನ್ಯಸತ್ಯನ್ಯಧನಕಾಂಕ್ಷೆಗಳೆಂಬೀ ನಾಲ್ಕು ಮಾನಸ ದೋಷಗಳಂ ಕಲ್ಮಷ ಖಣಿಗಳಾಗಿ । ದೇಹಾಭಿ

ಮಾನ । ಮಲಿಮಲಾಂಚ್ಯ । ಮೋಸ । ಜಡಭಾವ । ನಿದ್ರೆ । ನಿರುದ್ಧಕರ್ಮ । ಆಲಸ್ಯ । ಚಪಲತ್ವ । ಕೃತಘ್ನತೆ । ವಿಶ್ವಾಸಘಾತಕತೆ । ಪಿಶುನತ್ವ । ದುರಾಶೆ । ಮಾತ್ಸರ್ಯ । ಅಪಲಾಪ । ಅನೃತ । ಪಾರುಷ್ಯ । ವಕ್ರತೆ । ಮೌರ್ಖ್ಯ । ಪಂಡಿತಮಾನ್ಯತೆ । ದುರ್ಮೋಹ ಮುಂತಾದ ತಾಮಸ ಗುಣಗಳಿಂದಧೋಲೋಕವ ನಾಶ್ರಯಿಸಿ । ದುರ್ಮದ । ದುರಭಿಮಾನ । ಸ್ವೈರ । ನಿರ್ದಾಕ್ಷಿಣ್ಯ । ನಿಷ್ಕಾರುಣ್ಯ । ದುಷ್ಕಾಮ । ಕಾಪಟ್ಯ । ದಂಡಕೋಪ । ಕದನ । ಕರ್ಕಶತೆ । ಕಠೋರ । ಡಂಭಾದಿ ರಜೋಗುಣದಿಂ ಮಧ್ಯಮ ಲೋಕಸ್ಥಿತನಾಗಿ । ವಿರತಿ । ವಿವೇಕ । ವಿತರಣ । ವಿನಯ । ದಯೆ । ಸೌಶೀಲ್ಯ । ಮೇಧಾ । ಪ್ರಜ್ಞಾಧೃತಿ । ಸ್ಮೃತಿ । ಶುದ್ಧಿ । ಬುದ್ಧಿ । ಸಿದ್ಧಿ । ವಿದ್ಯಾ । ಶಮ । ದಮ । ತಿತಿಕ್ಷೆ । ಸಮಾಧಾನ । ಉಪರತಿ । ಧರ್ಮ । ಸತ್ಕರ್ಮ । ಧೈರ್ಯ । ಸ್ಥೈರ್ಯ । ದಾನ । ಆಸ್ತಿಕ್ಯ । ಭಕ್ತಿ । ವಿಶ್ವಾಸ । ತಪಸ್ಸು । ಯೋಗ । ನಿಶ್ಚಯ । ಮುಂತಾದ ಸಾತ್ವಿಕ ಗುಣಗಳಿಂ ಸುಖ ಮಹಿತೋರ್ಧ್ವ ಲೋಕಂಗಳಂ ಪೊರ್ದು.

( ಕರ್ಮತ್ರಯ ದೋಷಗಳು. )

ಪೂರ್ವಜನ್ಮದಲ್ಲಿ ಮಾಡಿದ ಸುಕೃತ ದುಷ್ಕೃತ ಕರ್ಮವೇ ಸಂಸಾರ ರೂಪದಿಂದನೇಕ ಭವಂಗಳಿಗೆ ಬೀಜವಾಗಿ ಬುದ್ಧಿಯಲ್ಲಿರ್ಪ ಸಂಚಿತ ಕರ್ಮವೆಂಬ ಬೀಜದೊಳಗೆಲಿದೊಂದು ದೇಹವ ನಾರಂಭಿಸಿ ಭೋಗವನೀವ ಪ್ರಾರಬ್ಧ ಫಲವ ನುಂಣುತ ಮಾಡಿದ ಪಾಪಾದಿಕವೇ ಆಗಾಮಿ ಕರ್ಮವೆಂಬೀ ಕರ್ಮತ್ರಯ ದೋಷಗಳಂ ದುಮ್ಮಳಿಸಿ ಕೇಡುಗೊಂಡು.

( ತಾಪತ್ರಯ ದೋಷಗಳು. )

ಬಳಿಕ ಪಾಪ ಕರ್ಮಾಧೀನತೆಯಿಂ ವ್ಯಾಕುಲತೆಯುಳ್ಳ ಚಿತ್ತವೆಂಬ ಆಧ್ಯಾತ್ಮಿಕದಿಂ ಪುಟ್ಟಿದ ದುಃಖರೂಪವಾದ ವ್ಯಾಘ್ರಾದ್ಯಾಧಿ ಭೌತಿಕ ಭಯದಿಂ ಪುಟ್ಟಿದ ದುಃಖರೂಪವಾದ ಅನಿಷ್ಟ ವಾತ ವರ್ಷಾದಿಕವೆಂಬಧಿದೈವದಿಂ ಪುಟ್ಟಿದ ದುಃಖರೂಪವಾದ ತಾಪತ್ರಯದಿಂ ರೂಪುಗೆಟ್ಟು.

( ತ್ರಿಧಾತು ದೋಷಗಳು )

ಮತ್ತಮಾ ಶರೀರದೊಳು ದೋಷತ್ರಯವೆನಿಪ ॥ ೮೦ ॥ ತೆರದ ವಾತ ೬೪ ॥ ಬಗೆಯ ಪಿತ್ಥ ॥ ೨೧೬ ॥ ವಿಧದ ಶ್ಲೇಷ್ಮ ವೀಪರಿ ಭೇದಗಳಿಂ ಮುನ್ನೂರರವತ್ತು ತೆರನಾದ ದೋಷಗಳಿಂ ಪುಟ್ಟುವ ನಾಲ್ಕು ಸಾವಿರದ ನಾನೂರ ನಲವತ್ತೆಂಟು ವ್ಯಾಧಿಗಳಿಂ ಸಂಕೀರ್ಣ ರೋಗ ಸಹಸ್ರದಿ ದುದಿ

ಸುವ ದುಃಖದೇಳ್ಗೆಯಿಂ ದುಸ್ಸಹ ಚಿಂತಾಪರಿ ಪೀಡಿತರಾಗಿ ಬಾಳ್ಗೆಟ್ಟ.

ಅರಿಷಡ್ವರ್ಗ ಮೂರ್ತಿಗಳು.

ಬಳಿಕ ಖರವಾಹನವ ನೇರಿ ಇಕ್ಷುದಂಡಮಂ ಪಿಡಿದು ಪೀತವರ್ಣವಾದ ಕಾಮದಿಂ ಗುರುದಾರಾದಿಗಳಂ ಗಮಿಸಿ ಮಹಿಷ ವಾಹನವನೇರಿ ದಾಣಿಯಿಂ ಪಿಡಿದು ರಕ್ತವರ್ಣವಾದ ಕ್ರೋಧದಿಂ ದೊಡಲೊಡವೆಗಳಂ ಕೆಡಿಸಿ, ಮಾರ್ಜಾಲ ವಾಹನವನೇರಿ ಸುರಗಿಯಂ ಪಿಡಿದು ತಮೋವರ್ಣವಾದ ಲೋಭದಿಂ ದಿಹಪರ ಭೋಗಮಂ ನೀಗಿ, ಶುನಕ ವಾಹನವನೇರಿ ಸಿಕ್ಕುಗೋಲ್ಪಿಡಿದು ಬಹುವರ್ಣವಾದ ಮೋಹದಿಂ ನಿತ್ಯಾನಿತ್ಯ ವಿವೇಕಹೀನ ವಾಗಿ, ಸೂಕರವಾಹನವನೇರಿಯಂಕುಶಮಂ ಪಿಡಿದು ಕೃಷ್ಣವರ್ಣವಾದ ಮದದಿಂ ಗುರು ಸೇವಾತಿಥಿ ಸತ್ಕಾರಮಂ ತೊರೆದು ಸಿಂಹವಾಹನವೇರಿ ಮುಸಲಮಂ ಪಿಡಿದು ಮೇಘವರ್ಣವಾದ ಮತ್ಸರದಿಂ ಪರಗುಣಮಂ ನಿರಾಕರಿಸುತ್ತಿಂತು ಮನೋವಿಕಾರವಾದ ಷಡ್ವರ್ಗದಿಂಭೂತ ನಿಜಸ್ವರೂಪ ಸುಕೃತ ಕರ್ತವ್ಯರಾಗಿ.

ಹೃದಯ ಕಮಲವು.

ಬಳಿಕ ದಹರ ಕುಹರ ಮೇಲ್ಭಾಗಮೆನಿಪ ಹೃದಯ ಕಮಲದೊಳು ಪೂರ್ವದಳದಲ್ಲಿ ಪುಣ್ಯಮತಿಯುಂ ಆಗ್ನೇಯ ದಳದಲ್ಲಿ ನಿದ್ರಾಲಸ್ಯಂಗಳು, ಯಾಮ್ಯದಳದಲ್ಲಿ ಕ್ರೋಧಬುದ್ಧಿಯುಂ, ನೈರುತ್ಯ ದಳದಲ್ಲಿ ಪಾಪಕೃತ್ಯವು, ವಾರುಣದಳದಲ್ಲಿ ವಿಲಾಸಬುದ್ಧಿಯುಂ, ವಾಯುವ್ಯ ದಳದೊಳಗೆ ಗಮನೇಚ್ಛೆ, ಕುಬೇರದಳದಲ್ಲಿ ರತಿ ಪ್ರೀತ್ಯಾದಿಗಳು, ಈಶಾನ್ಯ ದಳದಲ್ಲಿ ದ್ರವ್ಯ ಧಾತೃತ್ವವು, ಮಧ್ಯದೊಳಗೆ ವೈರಾಗ್ಯಮಿಂತುದಿಸುವ ಹೃದಯ ಕಮಲದಳಗತಿಗಳಂ ತೊಳಲಿ ಬಳಲಿ, ಈಶ್ವರ ಸೂತ್ರಾತ್ಮ ವಿರಾಟ್ ರುದ್ರ, ಬ್ರಹ್ಮ, ವಿಷ್ಣು, ವಿಘ್ನೇಶ್ವರ, ವೀರಭದ್ರ, ಕುಮಾರ, ವೃಷಭ, ಭೈರವ, ವೇತಾಳ, ಯಕ್ಷ, ರಾಕ್ಷಸ, ಗೌರಿ, ದುರ್ಗಿ, ಲಕ್ಷ್ಮಿ, ಶಾರದೆ, ಮಾತೃಕೆ, ಯಕ್ಷಿಣಿ, ಯೋಗಿನಿ, ಮಾರಿ, ಮಸಣಿ, ವಿಪ್ರ, ಕ್ಷತ್ರಿಯ, ವೈಶ್ಯ, ಶೂದ್ರ, ಗೋವು ಅಶ್ವ, ಮೃಗ, ಪಕ್ಷಿ, ಘಂಟೆ, ಸಾಲಗ್ರಾಮ, ಪುಸ್ತಕ, ಅಶ್ವತ್ಥ ಜಲಶಿಲೆ, ಕಾಷ್ಠ, ಮೃತ್ತಿಕೆ, ಚಿತ್ರಬಾಚಿ, ಗುದ್ದಲಿ, ದೇಹಲಿ, ತೃಣಕರೀಷಾದಿ ದೇವತಾ ಭಜನಗಳಿಂದಾಯಾ ಪೂಜ್ಯ ಪೂಜಾನು ಸಾರವಾದ ತಾರತಮ್ಯ ಗತಿವಡೆದಿಂತು ಸಕಲವಿಧ ಸಂಸಾರಿಗಳಾಗಿರ್ಕುಂ.

ಕರ್ಮಭೂಮಿ ಜನರು.

ಬಳಿಕ ಭರತಖಂಡದಲ್ಲಿ ಮಾಡಿದ ಕರ್ಮಫಲಮಂ ಪೂರ್ವೋಕ್ತಮಾದಿ

ಳಾವೃತಾದಿ ವರ್ಷಷಟ್ಕದಲ್ಲಿಯುಂ, ಮುಂದೆ ಪೇಳ್ವ ದ್ವೀಪಾಂತರಗಳಲ್ಲಿಯುಂ, ಸ್ವರ್ಗಾದಿ ಲೋಕಾಂತರಗಳಲ್ಲಿಯುಂ, ಅನುಭವಿಸುತ್ತಿಹರಾಗಿ ಇದೇ ಕರ್ಮಭೂಮಿಯಾಗೆ ಮಿಕ್ಕವೆಲ್ಲವುಂ, ಭೋಗ ಭೂಮಿಗಳಪ್ಪುದರಿಂದಾ ಭೋಗಭೂಮಿಗಳಿಗೆ ಕರ್ಮಭೂಮಿಯೇ ಸಾಧಕಮಹುದಾಗಿ ಕರ್ಮಬದ್ಧಮಾದ ಪ್ರಾಣಿಗಳ್ಗೆ ಪಾಪವಶದಿಂದಲೇ ಅಕಾಲ ಮರಣಮಪ್ಪುದಾದರಿಂ ಪೂರ್ಣಾಯುರ್ಯೋಗ ಮುಂಟಾಗುವಲ್ಲಿ ವಿಧಿಕಲ್ಪಿತಮಾದ ಸಾಧಾರಣಾಯುರ್ವರುಷದಿ ನಾಡಿಗಳ ಪರಿಮಾಣಮೆಂತೆನೆ.

### ಜಂತುಗಳ ಆಯುರ್ನಿರ್ಣಯಂ.

ಬಳಿಕ ಭರತಖಂಡದೊಳಗಿಪ್ಪ ಪ್ರಾಣಿಗಳಿಗೆ ಕಲಿಕಾಲದೊಳು ಗಾಯುರ್ವಿಶೇಷವಿಪ್ಪುದದರೊಳಗೆ ಇರುವಿಗೆ ಹದಿನೈದು ದಿನ, ಆಡಿಗೆ ಹನ್ನೆರಡು ವರುಷ, ಶುನಕಂಗೆ ಹದಿನೈದುವರುಷ, ಗೋವಿಗಿಪ್ಪತ್ತು ವರುಷ, ಪ-ಟಿಗಿಪ್ಪತ್ತುವರುಷ, ಮಹಿಷಕ್ಕೆಮೂವತ್ತು ವರುಷ, ಕುದುರೆಮೂವತ್ತೆರಡುವರುಷ, ಆನೆಗೆ ನೂರು ವರುಷ, ಕಪಿಭೇಕಂಗಳಿಗೆ ಮುನ್ನೂರುವರುಷ, ಕಾಗಿಗರವತ್ತುವರುಷ. ಪಕ್ಷಿಸರ್ಪಂಗಳಿಗೆ ಸಾವಿರವರುಷ, ಜೆಕ್ಕಿಗೇಳುವರುಷಗಳುಳಿದ ತತ್ತಜ್ಜಂತುಗಳಿಗೆ ಹೃದಯನಾಳನಾಡೀ ಕುಹರ ಕೀಲಕಾತ್ರಾರತವ್ಯಕ್ತಮದಿಂ ದಾಯುರ್ವೈರ್ಪರೀತ್ಯ ಮಿರಲು ನೂರಿಪ್ಪತ್ತು ವರುಷಮೈದುದಿನವೆಂಬ ಪೂರ್ಣಾಯುಃ ಪರಿಮಾಣಮುಳ್ಳ ನರರಿಗೆ (ಶತಾಯುರ್ವೈಪುರುಷಃ) ಎಂಬುವ ಶಿವಶಾಸನದಿಂ ದಿಪ್ಪತ್ತೊಂದು ಸಾವಿರದಾರುನೂರು ಹಂಸ ಗಮನಾಗಮನಕೊಂದು ದಿನವು, ಮುನ್ನೂರರವತ್ತಾಗೆ ವರ್ಷವೊಂದದು ನೂರಾಗಲಾಯು ಪೂರ್ಣತೆ ಯೆಂಬಲ್ಲಿ ದವಕಲತ್ರ ಬಲದಿಂದಾಯುರ್ಹರಣ ಕಾರಣಂಗಳುದಿಸಿ ಕಾಮಾದಿಗಳು ಸಹಕಾರಿಗಳಾಗಿ ಕೇಡುಗೊಳಿಸುತಿರ್ಕ್ಕುಂ.

### ಆಯುಹ್ರಾಸ ಕಾರಣಗಳು.

ಬಳಿಕಾ। ನರರಶತಾಯುಷ್ಯದೊಳಗೆ। ಬಾಲ್ಯ। ವೃದ್ಧಿ। ಬಲ। ನೇತ್ರ। ಚರ್ಮ। ಮತಿ। ಶ್ರೋತ್ರ। ವಿಷಯ। ಉತ್ಥಾನ। ಪತನವೆಂಬೀದಶಕದನ ಕ್ರಮದಿಂ। ಹತ್ತು। ಹತ್ತು। ವರುಷಕ್ಕೊಂದೊಂದು। ನಷ್ಟಮಹುದರಿಂದಲುಂ। ಬಳಿಕಲ್ಲಿ। ವನಿತಾದಿ। ವಿಷಯಜಾತಂಗಳಿಗೆ। ತಾತ್ಕಾಲಿಕಭೋಗಹೇತುತ್ವಪರಿಣಾಮಿತ್ವ। ನೀರಸತ್ವ। ಅವಿಚಾರರಮಣೀಯತ್ವ। ಕ್ಷಣಭಂಗುರತ್ವಾದಿಗಳಿಂ। ಸ್ವಪ್ನಪ್ರಪಂಚದೊಡನೆ। ಸಮಾನಮಪ್ಪುದರಿಂತ

ಲುಂ। ಬಳಿಕಿಲ್ಲಿಯೊಳಾಸಕಲವಿಷಯಂಗಳುಂ । ಸುರಚಾಪ । ಸುಳಿಗಾಳಿ ಸಂಜೆಗೆಂಪು । ಮಂಜುಮುಗಿಲು । ಮಿಂಚು । ತೆರೆ। ನಿರಕ್ಕರ । ಆನೆಗಲ್ಲು ಬಬ್ಬುಳಿಕೆ । ಗಗನಜ್ವಾಲೆ । ರಜ್ಜುಭುಜಂಗ । ಮರುಮರೀಚಿಕೆ । ಚಂದ್ರಮಾವೇಶಿಕತೆ । ಸ್ಫಟಿಕಲೌಹಿತ್ಯ । ಮುಂತಾದವುಗಳಂತೆ । ಭ್ರಾಂತಿಸ್ಫುರಿತಂಗಳಾಗಿ । ಸ್ಥಿತಿನಿಯಮವಿಲ್ಲದೆ । ವ್ಯವಹಾರಪ್ರತಿಭಾಸಮಾತ್ರದೊಳಿರ್ದುಕೆಡಲುಳ್ಳದರಿಂದಲುಂ । ಸರ್ವಥಾ। ಸುಸ್ಥಿರಮಲ್ಲಮೆಂಬುದನು ಕಂಡುಕೇಳಿಯುಂ । ಶಿವಧರ್ಮಸತ್ಯಾಚರಣ । ಮಿಲ್ಲದಿರ್ಪುದು । ದುಷ್ಕೃತ ಕೆಳಸುವದು । ದಿವಾಸ್ವಪ್ನಂಗೈಯ್ಯುವದು । ಪರಮಾರಿಯುಂ । ಗಮಿಸುವದಿವು। ಕಾರಣಗಳಾಗಿ। ಕ್ಲಿಷ್ಟಾಯುಷ್ಯಮಂ। ಹ್ರಾಸಗೊಳ್ಸುತಿರ್ಪ್ಪರ್ಗಂ.

## ನರ ಹಿತೋಪದೇಶ.

ಬಳಿಕೀಭರತವರ್ಷದೊಳಗಿರ್ಪ। ಜನಂಗಳಿಗೆ । ಮುಂದೆಕಲಿಪ್ರಾಬಲ್ಯದಿಂ। ಸತ್ಸಿದ್ಧಿದುರ್ಲಭಮಪ್ಪುದಾಗಿ । ಸ್ವಸ್ವಾಧಿಕಾರಕ್ಕರ್ಹಮಪ್ಪಂತೆ ಸುಖರೂಪಮಪ್ಪ । ದೇವತ್ವಮನೀವಯಜ್ಞಗಳಂ । ಸಂಪದಂಗಳನೀವ ದಾನಂಗಳಂ। ಬ್ರಹ್ಮಾದಿಪದವೀವ । ತಪಸ್ಸುಗಳಂ। ಸಕಲೈಶ್ವರ್ಯವಿಷ್ಣುತ್ವಚಿತ್ತಶುದ್ಧಿನಿತ್ಯಸುಖಂಗಳ । ನೀವಶಿವಾರ್ಚನೆಗಳಂ । ಮುಕ್ತಿದಾಯಕಮಪ್ಪ ಸಮ್ಯಜ್ಞಾನಮಂ । ಚೆನ್ನಾಗಿ ಪಡೆದಾಚರಿಸಲ್ವೇಳ್ಕುಮೆಂಬುದೇ ಸಾಧುಜನ ಸಹಸಲ್ಲಾಪ ಸಿದ್ಧಾಂತಿತಮಕ್ಕುಂ.

ಮತ್ತಮಿಂತುಪೇಳ್ದ ಭರತವರುಷ ಮೊದಲಾದ ನವಖಂಡ ವಿಭಾಗಕ್ಷೇತ್ರಂಗಳಯೋಜನಕ್ರಮದಿಂ ಒಂದು ಲಕ್ಷಯೋಜನದ ವೈಶಿಷ್ಟ್ಯಮನೋಹರಮಾಗಿರ್ಪುದೇ ಜಂಬೂದ್ವೀಪಮೆಂಬಲ್ಲಿಗೆ ನಿಜಗುಣ ಶಿವಯೋಗೀಂದ್ರ ವಿರಚಿತವಾದ ವಿವೇಕ ಚಿಂತಾಮಣಿ ಯೆಂಬೀ ಗ್ರಂಥದಲ್ಲಿ ಜಂಬೂದ್ವೀಪ ಕಥನವೆಂಬ ಚತುರ್ಥಪ್ರಕರಣಕ್ಕೆ ಮಂಗಳಮಸ್ತು.

---

ಜಯಜಗದೀಶ್ವರ.

## ಪಂಚಮಪ್ರಕರಣ ಪ್ರಾರಂಭಃ.

---

ಕಂದ॥ ಇಂಬಾಗಿರಭೂಲೋಕದ। ಜಂಬೂದ್ವೀಪಮನೆಸೆವಲ್ಲಿಂತೊಳಿದು ಬಳಿ। ಕ್ಕಂಬೇರುಳಿದದ್ವೀಪಕ ॥ ದಂಬಂಗಳನಂಬುಧಿಗಳನಭಿವರ್ಣಿಸುವೆಂ ॥

ಗದ್ಯ ॥ ಅದೆಂತೆಂದೊಡೆ। ಪೂರ್ವೋಕ್ತವಾದ ಜಂಬೂದ್ವೀಪದಸುತ್ತ

ಟುಂ। ಸಗರಸುತನಿಖಾತ ಮಹಾಗರ್ತನಿಭೃತಜಲಸಮಿಶ್ರ ಖರ್ವಲಯ ದೊಳಗೆ ವಾಡಿಯಾಗಿ। ಪಸರಿಸಿರ್ಪ ಲವಣಜಲಧಿ.

## ಲವಣಸಮುದ್ರ.

ಲವಣಸಮುದ್ರವೊಂದು ಲಕ್ಷಯೋಜನವಿಶಾಲವಾಗಿಹುದದರೊಳು ವಿಶಾನು। ಮಹಾವಿಶಾನು। ರಾಜಿಲ। ಆನೆ। ಜಿಗಣಿ। ನೆಗಳು ಕುಂಭೀ। ಚಕ್ರ ಕೊಕ್ಕರಿ। ಕಪ್ಪೆ। ಹಾವು। ಮುಂತಾದಮಹಾಲಕ್ಷಜಲಚರಪ್ರಾಣಿಗಳ ಗಾಶ್ರಯವಾಗಿ। ಮುತ್ತು ಮಾಣಿಕ್ಯ। ಪವಳ। ರತ್ನಂಗಳಾದಿಸುವೆಡೆಯೆನಿಸಿ ಫೇನತರಂಗಾಗದಿಳಂಕಂಗೊಳಿಸಿ। ಲಕ್ಷಯೆವೇಜನಖಾತದಿಂಕೂಡಿ। ಭೀಕರ ಶಬ್ದಗಳಿಂ। ಷಷ್ಟಿಯೋಜನಗಂಭೀರಮಹಾವರ್ತದಿಂ। ಬಡಬಾಮುಖ ಮಾಕೃಷ್ಯನಾಣಜಲಪ್ರವಾಹದಿಂ। ದೊಪ್ಪಿಬಹುದ್ವೀಪೋದ್ವೀಪನಗರ ಪರ್ವತಾದಿ। ಗರ್ಭಿತವಾಗಿರ್ಕುಂ.

## ಶಾಕದ್ವೀಪ.

ಮತ್ತಮಾ ಲವಣಸಮುದ್ರಮಂ। ಪೊರಗಾವರಿಸಿ। ಶುಭ್ರವರ್ಣದ। ಭೂಮಿಯುಳ್ಳಶಾಕದ್ವೀಪ। ಮೆರಡುಲಕ್ಷಯೋಜನದಿಂ। ದಿಹುದವಕೆ। ಮೇಧಾತಿಥಿಯೆಂಖಾತನರಸಾಗಿರ್ಪನಾತಂಗೆ। ಶಾಂತಭಯ। ಶಿಶಿರ। ಸಂಜೋಧ ಅನಂತ। ಶಿವ। ಕ್ಷೇಮಕದ್ರುವ। ರೇಳುಮಂದಿಮಕ್ಕಳು। ಬಳಕಾದ್ವೀಪವ ನೇಳು। ಭಾಗವಂಮಾಡಿಕೊಡ। ಲವರವರ। ಪೆಸರಿನಲ್ಲಿ। ಆಯಾಖಂಡಗಳ ರ್ಪವುಗಳ। ವಿಭಾಗಶೈಲಂಗಳಾವಾವವೆಂದೊಡೆ। ಪೂರ್ವಾದಿಪ್ರದಕ್ಷಿಣ ಮಾಗಿ। ಗೋಮೇದಗಿರಿ। ಚಂದ್ರಗಿರಿ। ನಾರದಗಿರಿ। ದುಂದುಭಿಗಿರಿ। ಸುಮ ಸೋಗಿರಿ। ಆಲಂಭ್ಯಗಿರಿ। ವೈಭ್ರಾಜಗಿರಿಗಳೆಂಬ ವಿಪ್ರುಗಳಲ್ಲಿ ಜನಿಸಿದ ನದಿ ಗಳಾವಾವವೆನೆ। ಅನುತಪ್ತ ಶಿಖಿ। ವಿಪಾಕೆ। ತ್ರಿದಿವ। ಕ್ರಮುಹರಿ। ಅಮೃತ। ಸುಕೃತಗಳೆಂಬ ಏಳು ನದಿಗಳಾಯಾ ಖಂಡಗಳಲ್ಲಿ ಕ್ರಮದಿಂಸುಳಿದು ಸಮುದ್ರಗಾಮಿನಿಗಳಾದವಾ ಖಂಡಂಗಳೇಳರಲ್ಲಿಯೂ ಯೇಳೇಳು ಕುಲ ಪರ್ವತಂಗಳುಂ ಕ್ಷುದ್ರಗಿರಿ ನದೀವನಾದಿಗಳುಂ ಪುಟ್ಟಿರ್ಪವಲ್ಲಿ ಯುಳಜನ ರು ಮೂರು ತಾಳದುದ್ದವಾಗಿ ಕಲ್ಪವೃಕ್ಷ ಫಲಾಹಾರದಿಂ ದಿಪ್ಪತ್ತುಸಾವಿ ರವರುಷದಾಯುಷ್ಯದಿಂ ಜರೆ ರೋಗಂಗಳಿಲ್ಲದೆ ಹರನಾಮತ ಲಿಂಗ ಪೂ ಜಕರಾಗಿ ಪರಮೈಶ್ವರ್ಯದಿಂದಿರ್ಪರು.

## ಕ್ಷೀರಸಮುದ್ರ.

ಮತ್ತಮಾಶಾಕಾದ್ವೀಪವಂ। ಪೊರವಳಸಿ। ಕ್ಷೀರಸಮುದ್ರಮೆರಡುಲಕ್ಷ

ಯೋಜನವಿಂದಿಹುದದಾದೊಡೆ । ಅಹಲ್ಯೆ-ಸಿರಿ--ತಾರಾದೇವಿ--ಸುಧೆ-ಸುಧಾಂಶ-ಸುರತರು-ಸುರಧೇನು-ಚಿಂತಾಮಣಿ-ಮೊದಲಾದ । ಶ್ರೇಷ್ಠವಸ್ತುಗಳುದಿಸಿದೆಡೆಯೆನಿಸಿ ಶೋಭಿಸುತ್ತಿಹುದಲ್ಲಿ ಹತ್ತುಸಾವಿರ ಯೋಜನ ವಿಶಾಲದ ಕನಕಮಯಮಾದರಮನೆಯಲ್ಲಿ ನಾರಾಯಣ ನನಂತಶಯನನಾಗಿ ವಿಷ್ವಕ್ಸೇನಾನಂತ ಖಗಾದಿ ಪಾರಿಷದರಿಂ ವಂದಿಸಿಕೊಳುತಿರ್ಪಂ.

## ಕುಶದ್ವೀಪ.

ಮತ್ತಮಾಕ್ಷೀರಸಮುದ್ರ । ಹೊರವಳಸಿನ । ನೀಲವರ್ಣದ । ಭೂಮಿಯುಳ್ಳಕುಶದ್ವೀಪವು । ನಾಲ್ಕುಲಕ್ಷಯೋಜನದಗಲ । ವಿಹುದದಕ್ಕೆವಪುಷ್ಮಂತ ನೆಂಬಾತನಧಿಪತಿಯಾಗಲಾತಂಗೆ। ಶ್ವೇತ । ಹರಿತ । ಜೀಮೂತ ಲೋಹಿತಕ। ವೈದ್ಯುತಕ। ಮಾನಸಕ। ಸುಪ್ರಭನೆಂಬೇಳುಮಕ್ಕಳವರ್ಗೆ। ಭಾಗಂಮಾಡಿ। ಕೊಡಲವರವರ। ಪೆಸರಿನಲ್ಲಿ। ಆಯಾಖಂಡಗಳಿರ್ಪವವುಗಳ ಸೀಮಾಪರ್ವತಂಗಳ್। ಪೂರ್ವಾದಿಪ್ರದಕ್ಷಿಣಮಾಗಿ। ಕುಮುದನಗ। ಉನ್ನತ ವರಾಹಕೇತು। ದ್ರೋಣ। ಮಹಿಷ। ಕಕುದ್ಮಂತಗಳೆಂಬವುಗಳಲ್ಲಿ ಪುಟ್ಟಿದ ನದಿಗಳು ಯೋಗಿನಿ। ತೋಯ। ವಿತೃಷ್ಣ। ಚಂದ್ರ। ಶುಕೆ। ವಿರೋಚನಿ ನಿವೃತ್ತಿಯೆಂಬ ಏಳುನದಿಗಳಾ ಪರ್ವತಂಗಳಲ್ಲಿ ಕ್ರಮದಿಂ ಸುಳಿದು ಸಮುದ್ರದಲ್ಲಿ ಬೆರತವಾ ಖಂಡಂಗಳಲ್ಲಿಯೂ ಯೇಳೇಳು ಕುಲಾಚಲಂಗಳುಂ ಸಾಮಾನ್ಯ ಗಿರೀನದೀನಂದನಾದಿಗಳ ಸಂಖ್ಯಾತಂಗಳುಂಟಲ್ಲಿ ಯಣಜನರೊಂದೊಂದು ತಾಳದುದ್ದದವರು ಕಲ್ಪವೃಕ್ಷ ಫಲಾಹಾರದಿಂ ಪತ್ತು ಸಾವಿರವರುಷ ಜೀವಿಗಳೆನಿಸಿ ಜರೆರುಜೆಗಳಿಲ್ಲದೆ ರುದ್ರನಾಮಕ ಲಿಂಗಪೂಜಕರಾಗಿ ನಿತ್ಯ ಸುಖಿಗಳಾಗಿರ್ಪರಾ ತಾಳವೃಕ್ಷ ಪರಿಮಾಣವೆಂತೆಂದೊಡೆ, ನರರ ನಾಲ್ವತ್ತು ಗೇಣುಗಳಿಂದೈದಾಳುದ್ದ ವಿಂತಾ ಪರಿಮಾಣದಿಂದವರೊಡಗೂಡಿರ್ಪರಂ.

## ದಧಿ ಸಮುದ್ರ ಕ್ರೌಂಚದ್ವೀಪ.

ಮತ್ತಮಾ ಕುಶದ್ವೀಪಮುಂ ಹೊರಗಾವರಿಸಿರ್ಪ ದಧಿಸಮುದ್ರವೇ ನಾಲ್ಕು ಲಕ್ಷಯೋಜನ ದಗಲಮಾಗಿರ್ಪ್ಪಂ, ಬಳಿಕದ ನಾವರಿಸಿದ ಕಪಿಲವರ್ಣದ ಭೂಮಿಯುಳ್ಳ ಕ್ರೌಂಚದ್ವೀಪ ವೆಂಟು ಲಕ್ಷಯೋಜನ ವಿಶಾಲಮದಕ್ಕೆ ಜ್ಯೋತಿಷ್ಮಂತನೇ ಧೊರೆಯಾಗಲಾತಂಗೆ, ವೃದ್ಧಿದ-ವೇಣುಮಂತ-ಸ್ವೈರಧ-ಲಂಬ-ಧೃತಿ-ಪ್ರಭಾಕರ-ಕಪಿಲರೆಂಬೇಳು ಮಕ್ಕಳು, ಬಳಿಕವರಿಗಾ ದ್ವೀಪವ ನೇಳುಭಾಗಂ ಮಾಡಿ ಕೊಡಲವರವರ ಪೆಸರಿನಲ್ಲಿಯಾ ಖಂಡಗ

ಾರ್ದವವುಗಳ ಸೀಮಾ ಪರ್ವತಂಗಳೇ ಪೂರ್ವಾದಿ ಪ್ರದಕ್ಷಿಣವಾಗಿ, ವಿದ್ರು ಮ-ಹೇಮ-ದ್ಯುತಿಮಂತ-ಪುಷ್ಪವಂತ-ಕುಶೇಶಯ-ರತ್ನ, ಮಂದರ ಪ ರ್ವತಂಗಳವುಗಳಲ್ಲಿ ಪುಟ್ಟಿದ ನದಿಗಳೋ, ದೂತಪಾಪೆ-ಶಿವೆ-ಪವಿತ್ರೆ-ಸ ಮ್ಮತಿ-ದ್ಯುತಿ-ದಂಭೆ-ಮಹೀಚಕೆ-ಸರ್ವಪಾಪಹಾರಿಗಳೆಂಬೇಳು ನದಿಗಳಾ ಪರ್ವತಂಗಳಲ್ಲಿ ಕ್ರಮದಿಂ ಚರಿಸಿ, ಸಮುದ್ರಂ ಕೂಡುವಾ ಖಂಡಗಳಲ್ಲಿಯು ಏಳೇಳು ಕುಲಗೋತ್ರಂಗಳುಂ ಸಾಧಾರಣ ಗಿರಿನದೀ ವನಾದಿಗಳನೇಕಂಗ ಳುಂಟಾದ ವರುಷದಲ್ಲಿಯು ಜನರು ಮೂರು ತಾಳದುದ್ದದವರಾಗಿ ಕಲ್ಪವೃ ಕ್ಷ ಫಲಹಾರ ಪತ್ತುಸಾವಿರ ವರುಷ ದಾಯುಷ್ಮಂತರೆನಿಸಿ, ಜರ ರೋ ಗಗಳಿಲ್ಲದೆ ಸ್ಥಾಣು ನಾಮಕ ಲಿಂಗಪೂಜಕರಾಗಿ ಸದಾನಂದಿಗಳೆನಿಸಿರ್ಪ್ಪಂ.

( ಘೃತ ಸಮುದ್ರ, ಶಾಲ್ಮಲಿದ್ವೀಪ. )

ಅನಂತರದೊಳಾ ಕ್ರೌಂಚದ್ವೀಪದ ಹೊರಗಾಂದರಿಸಿರುವ ಘೃತ ಸಮು ದ್ರವೆಂಟು ಲಕ್ಷ ಯೋಜನದಗಲವಾಗಿರ್ಪ್ಪಂ, ಬಳಿಕದ ನಾವರಿಸಿದ ರಕ್ತ ವರ್ಣದ ಭೂಮಿಯುಳ್ಳ ಶಾಲ್ಮಲೀ ದ್ವೀಪವೇ ಹದಿನಾರು ಲಕ್ಷ ಯೋಜ ನದಗಲವದಕ್ಕೆ ದ್ಯುತಿಮಂತನಸಂಜಾತನೇ ರಾಜನಾಗ ಲಾತಂಗೆ ಕುಶಲ, ಮನೋನುಗ, ಪುರೋನುಗ, ಪ್ರವರ, ಅಂಧಕಾರ, ಮುನಿ, ವಸಿಷ್ಠರೆಂ ಬವರೇಳು ಮಕ್ಕಳು ಬಳಿಕಾ ದ್ವೀಪವ ನೇಳು ಭಾಗಂಮಾಡಿ ಕೊಡಲವ ರವರ ಪೆಸರಿನಲ್ಲಿ ಆಯಾ ಖಂಡಗಳರ್ವ ವವುಗಳ ಸೀಮಾ ಪರ್ವತಂಗಳೇ ಪೂರ್ವಾದಿ ಪ್ರದಕ್ಷಿಣವಾಗಿ, ಕ್ರೌಂಚ-ವಾಮನ-ಅಂಧಕಾರ-ದಿವಾವೃತ್ ವಿವಿಧಶಿಖರಿ-ಪುಂಡರೀಕಾದ್ರಿ-ದುಂದುಭಿ-ಗೋತ್ರ ವೆಂಬವುಗಳಲ್ಲಿ ದೇವ ಗಂಧರ್ವಾದಿಗಳರ್ವರಲ್ಲಲ್ಲಿ ಜನಿಸಿದ ನದಿಗಳೇ ಗೌರಿ, ಕುಮುದ್ವತಿ, ಸಂ ಧ್ಯೆಗೆ, ಮನೋಜವೇ, ಖ್ಯಾತಿ, ಪುಂಡರೀಕೆ, ಪುಣ್ಯಾವತಿಗಳೆಂಬೇಳು ನದಿ ಗಳಾಯಾ ಖಂಡಗಳಲ್ಲಿ ಕ್ರಮದಿಂ ಪರಿದು ಸಮುದ್ರದಲ್ಲಿ ಕೂಡುವವಾ ಖಂಡಂಗಳೇಳರಲ್ಲಿಯೂ ಏಳೇಳು ಕುಲಗೋತ್ರಂಗಳುಂ, ಸಾಮಾನ್ಯ ಗಿರಿ ನದೀ ನಂದನಾದಿ ವಿಚಿತ್ರಂಗಳು ಮನೇಕಂಗ ಳುಂಟಾವರುಷದಲ್ಲಿಯೂ, ಜನರು ಮೂರು ತಾಳದುದ್ದದವರು ಕಲ್ಪವೃಕ್ಷ ಫಲಾಹಾರದಿಂ ಪತ್ತುಸಾ ವಿರ ವರುಷದಾಯುಷ್ಯದಿಂ ಜರ ರೋಗಗಳಿಲ್ಲದೆ ಭೀಮೇಶ್ವರ ನಾಮಕ ಲಿಂಗ ಪೂಜಕರಾಗಿ ತದನುಗ್ರಹ ಬಲದಿ ಸುಖದಿಂದಿರ್ಪ್ಪರ್ಗಂ.

( ಇಕ್ಷುಸಮುದ್ರ, ಗೋಮೇಧಿಕ ದ್ವೀಪ. )

ಅನಂತರದೊಳಾ ಶಾಲ್ಮಲಿ ದ್ವೀಪದ ಹೊರಗಾವರಿಸಿದ ಇಕ್ಷುಸಮುದ್ರ

ವೇ ಹದಿನಾರು ಲಕ್ಷ ಯೋಜನ ದಗಲಮುಕ್ಕುಂ, ಬಳಿಕದ ನಾಪರಿಸಿದ ರಕ್ತವರ್ಣದ ಭೂಮಿಯುಳ್ಳ ಗೋಮೇಧಿಕ ದ್ವೀಪವೇ ಮೂವತ್ತೆರಡು ಲಕ್ಷ ಯೋಜನ ದಗಲವದಕ್ಕೆ ಭವ್ಯನೆಂಬಾತನೇ ವಲ್ಲಭನಾಗ ನಾತಂಗೆ ಜಲದ-ಕುಮಾರಕ-ಮಣೀಚಕ--ಸುಕರ-ಉತ್ತಮ-ಸುದಾಕಿ-ವಿಶಿಖ-ರೂಪರೆಂಬವರೇಳು ಮಕ್ಕಳವರಿಗಾ ದ್ವೀಪವ ನೇಳುಭಾಗಂ ಮಾಡಿಕೊಡಲರವರವೆಸರಿನಿಂದಾ ಯಾಖಂಡಾಗಳರ್ಪ್ಪವವುಗಳ ಸೀಮಾ ಪರ್ವತಂಗಳೇ ಪೂರ್ವಾದಿ ಪ್ರದಕ್ಷಿಣಮಾಗಿ, ಉದಯಾಚಲ-ಜಲದಾಚಲ-ರೈವತಕ-ಮಹೇಂದ್ರ-ಶ್ಯಾಮಾದ್ರಿ-ಅಂಭೋಗಿರಿ ಯೆಂಬವುಗಳಲ್ಲಿ ಜನಿಸಿದ ನದಿಗಳು, ಸಾವಭಯೆ-ಮಹಾಪ್ರಸ್ಯೆ-ಕುಮಾರಿ-ಸುಕುಮಾರಿ-ನಳಿನೀ-ವೇಣುಕೆ-ಜಯೆಗಳೆಂಬೇಳು ನದಿಗಳಾಯಾ ಖಂಡಂಗಳಲ್ಲಿ ಜನಿಸಿ ಸಮುದ್ರಗಾಮಿಗಳಾದವಾ ಖಂಡಗಳೇಳರಲ್ಲಿಯೂ ಪೇಳೇಳು ಕುಲಗಿರಿಗಳುಂ ಕ್ಷುದ್ರನದೀ ವನಾದಿಗಳನಂತಂಗಳುಂಟಾ ವರುಷದಲ್ಲಿ ಜನರು ಮೂರು ತಾಳದುದ್ದದಾಕಾರದಿಂ ಕಲ್ಪವೃಕ್ಷ ಫಲಾಹಾರಿಗಳಾಗಿ ಇಪ್ಪತ್ತು ಸಾವಿರ ವರುಷದಾಯುಷ್ಯದಿಂ ಜರೆ ರುಜೆಗಳಿಲ್ಲದೆ ವಿಶ್ವೇಶ್ವರ ನಾಮಾಕ ಲಿಂಗ ಪೂಜಕತ್ವದಿಂ ಸ್ಥಿರ ಸುಕೃತಮಂ ಪಡದು ಸ್ವಸ್ಥರಾಗಿರ್ಕ್ಕುಂ.

### ಸುರಾಸಮುದ್ರ ಪುಷ್ಕರ ದ್ವೀಪ.

ಅನಂತರದೊಳಾ ಗೋಮೇಧಿಕ ದ್ವೀಪದ ಪೊರಗಾವರಿಸಿದ ಸುರಾ ಸಮುದ್ರವು ಮೂವತ್ತೆರಡು ಲಕ್ಷ ಯೋಜನದಗಲಮುಕ್ಕುಂ, ಬಳಿಕದರ ಪೊರವಳಸಿನ ಧವಳವರ್ಣದ ಭೂಮಿಯುಳ್ಳ ಪುಷ್ಕರದ್ವೀಪ ರರವತ್ತುನಾಲ್ಕು ಲಕ್ಷ ಯೋಜನದಗಲ ವದಕ್ಕೆ ಶಿವನೆಂಬನೇ ನೃಪನಾತಂಗೆ, ಧಾತಕಿ, ಸುಖೋತ್ಕರರೆಂಬೀರ್ವ್ವರು ಮಕ್ಕಳು ಬಳಿಕವರಿಗಾ ದ್ವೀಪವ ನೆರಡು ಭಾಗಂ ಮಾಡಿ ಕೊಡಲವರವರ ಪೆಸರಿನಿಂದಾಯಾಖಂಗಳರ್ಪವಾ ಮಧ್ಯದಲ್ಲಿ ವೃತ್ತಾಕಾರವಾದ ಮಾನಸೋತ್ತರವೆಂಬು ದೊಂದು ಪರ್ವತವಿಹುದದರಮೇಲೆ ಯಕ್ಷ ರಕ್ಷೋ ಗರುಡ ಗಂಧರ್ವಾದಿಗಳ ಪಟ್ಟಣಂಗಳನಂತಗಳ ಪಟ್ಟಣಂಗಳನಂತಗಳುಂಟಾ ಗಿರಿಯ ಉತ್ತರ ಭಾಗವೇ ಧಾತಕಿ ಎಂಬಾತನದು, ದಕ್ಷಿಣಭಾಗವೇ ಸುಖೋತ್ಕರ ನೆಂಬಾತನದು, ಅಖಂಡದ್ವೀಯದಲ್ಲಿಯೂ ಮಹಾ ನದಿಗಳುಂ ಕ್ಷುದ್ರಗಿರಿನದೀ ನಂದನಾದಿಗಳುಂ ನಾನಾ ರಂಜನಗಳುಂಟಾದ ವರುಷದಲ್ಲಿ ಜನರು ಮೂರು ತಾಳದುದ್ದದವರು ಕಲ್ಪವೃಕ್ಷ ಫಲಾಹಾರದಿಂ ಪತ್ತುಸಾವಿರ ವರುಷ ದಾಯುಷ್ಯದಿಂ ಜರೆ

ರೋಗಂಗಳಿಲ್ಲದೆ ಸೋಮೇಶ್ವರ ನಾಮಕ ಲಿಂಗಪೂಜಕರಾಗಿ ನಿತ್ಯಸುಖಿಗಳೆನಿಸಿಕ್ಕುರ್ಗಂ.

ಸ್ವಾದೂದಕ ಸಮುದ್ರ.

ಮತ್ತಮದರ ಪೊರಗಾವರಿಸಿರ್ದ ಸ್ವಾದೂದಕ ಸಮುದ್ರದ ಅರವತ್ತುನಾಲ್ಕು ಲಕ್ಷ ಯೋಜನ ದಗಲವಾಗಿ ಸಮಸ್ತ ಮೇಘಮಾಲಿಗಳುದಕವ ನಿತ್ತು ಸಕಲ ಲೋಕೋಪಕಾರವಾಗಿರ್ಕುಂ. ಬಳಿಕದರ ಹೊರವಳಿಸಿ ಸರ್ವ ದೇವತಾ ಕ್ರೀಡಾರ್ಥಮಾದ ಹಿರಣ್ಮಯ ಭೂಮಿಯು ದಶಕೋಟಿಯೋಜನ ದಗಲದಿಂ ಜಂಘಾಮಾತ್ರ ಜಲಮಯವಾಗಿ ನಿರ್ಜನ ಪ್ರದೇಶವೆನಿಸಿಕ್ಕುರ್ಗಂ.

( ಲೋಕಾಲೋಕ ಮಹಾಗಿರಿ. )

ಮತ್ತಮದ ನಾವರಿಸಿದ ಮಹಾ ತಮಸ್ಸಿನೊಳು ಸುರಸಂತತಿ ಗಾಶ್ರಯಮಾದ ಸೂರ್ಯನ ರಥ ಪ್ರಸರಣೆಯೇ ಇಲ್ಲದರಿಂದಾ ಲೋಕಮಡಗಲಾಗಿರಿಯು ಲೋಕಾಲೋಕಮೆಂಬ ಪೆಸರ್ವಡೆದಿಹುದಾಮಹಾ ಶೈಲದ ಕೋಟಿಯು ಹಿರಣ್ಮಯ ಭೂಮಿಯಿಂ ಬಳಸಿ, ಹತ್ತುಸಾವಿರ ಯೋಜನದುದ್ದಮಾಗಿರ್ಪ ದಾಗಿರಿಯಮೇಲೆ ತಮೋ ಭೂಮಿಯೊಳು ಸೂರ್ಯನ ರಥಕ್ಕೆ ವಿಘ್ನವಾಗದಂತೆ ಇಂದ್ರಾದಿ ದಿಕ್ಪಾಲಕರ ಪದಾತಿ ಮೊದಲಾದ ಬಲವು ತಮ್ಮ ತಮ್ಮ ದೆಸೆಯಲ್ಲಿ ಕಾಯುಕೊಂಡಿರ್ಕುಂ.

( ತಮೋಭೂಮಿ. )

ಮತ್ತಮದರ ಛಾಯೆಯಲ್ಲಿ ಬರಿಯೆ ತಮಸ್ಸು ಮುಸುಕಿದ ಭೂಮಿ ಮೂವತ್ತೆರಡು ಕೋಟಿಯುಂ ಹತ್ತೊಂಭತ್ತು ಲಕ್ಷಮುಂ ನಾಲ್ವತ್ತುಸಾವಿರ ಯೋಜನದ ಪರಿಮಾಣಮದರಲ್ಲಿ ನಿಶಾಚರ ರಾಕ್ಷಸಾದಿಗಳು ನೆಲೆಗೊಂಡು ಸ್ವಸ್ವ ತಪೋಜ್ಯೋತಿಯಿಂ ಬೆಳಗುತ್ತಲ್ಲಿಯಣ ಪ್ರಾಂತಂಗಳಂ ಕಂಡುಪಭೋಗಿಸಿ ಸುಖದಿಂ ಸಂಚರಿಸುತಿರ್ಕುಂ.

( ಗರ್ಭೋದಕ ಸಮುದ್ರ. )

ಮತ್ತಮದ ರಾಚೆಯಲ್ಲಿ ಗರ್ಭೋದಕ ಸಮುದ್ರಮೊಂದುಕೋಟಿಯುಂ ಇಪ್ಪತ್ತೇಳು ಲಕ್ಷ ಯೋಜನಂಗಳ ವಿಶಾಲಮಾಗಿಹುದಲ್ಲಿ ಬಲಮುರಿಯ ಶಂಖದ ಗಿರಿಯುಂ ತಿಮಿತಿಮಿಂಗಿಲಾದಿ ಮಹಾಜಲಚರ ಪ್ರಾಣಿಗಳುಂ ವಿಹರಿಸುತ್ತಿರ್ಪ್ಪವಾ ಮೀನುಗಳೊಂದೊಂದು ನೀಕ್ಷಿಸಿ ಜಿರಸಿ ಸಂಯೋಗ ಮಥನದಿಂದ ಗರ್ಭೋದಕ ಸಮುಥ್ರ ತುಳುಕಿ ಪೊರೆಗಳದು ಸಮಸ್ತ ದ್ವೀಪಂ

ಗಳ ನೊಳಕೊಂಡು ಜಲಪ್ರಳಯವಾಗದಂತದರ ಮಧ್ಯದಲ್ಲಿ ಮಹಾಪರ್ವ ತಾಕಾರನಾದ ಕಮಠನೊಂದು ಮರೆಯಾಗಿ ನೆಲಸಿರಲದರಾಚೆಯಲ್ಲಿ ಬ್ರ ಹ್ಮಾಂಡಕಟಾಹಾಂತವಾದಬಯಲೊಂದೊಂದುಕೋಟಿಯೆ ೞಜನಮಕ್ಕು

( ಭೂಲೋಕಯೋಜನ ಸಂಖ್ಯೆ. )

ಬಳಿಕೀ ಕ್ರಮದಿಂ ಯೋಜನ ಸಂಖ್ಯೆಯ ನೆಣಿಸಿದೊಡೆ ಜಂಬೂದ್ವೀಪ ಮೊದಲಾದ ದ್ವೀಪವೇಳುಕೋಟಿಯೂ ಇಪ್ಪತ್ತೇಳು ಲಕ್ಷ ಯೋಜನ ಪ ರಿಮಾಣವಹುದು, ಆ ಹಿರಣ್ಮಯ ಭೂಮಿಯು ದಶಕೋಟಿ ಯೋಜನ ಪ ರಿಮಿತವಹುದು. ಲೋಕಾಲೋಕ ಪರ್ವತವೇ ಹತ್ತುಸಾವಿರ ಯೋಜನ ಪರಿಮಿತವಹುದು. ಆ ತಮೋಭೂಮಿಯು ಮೂವತ್ತೈದು ಕೋಟಿಯುಂ ತೊಂಭತ್ತು ಲಕ್ಷವುಂ ಮೂವತ್ತುನಾಲ್ಕು ಸಾವಿರ ಯೋಜನ ಪರಿಮಿ ತವಹುದು. ಅದರಾಚೆಯ ಗರ್ಭೋದಕ ಸಮುದ್ರ ಮೊಂದುಕೋಟಿಯುಂ ಇಪ್ಪತ್ತೇಳುಲಕ್ಷ ಯೋಜನವಹುದು, ಮತ್ತದರಾಚೆಯ ಬಯಲೊಂ ದು ಕೋಟಿ ಯೋಜನವಹು ದಿಂತೈವತ್ತು ಕೋಟಿಯು ಪೈವತ್ತು ಸಾವಿ ರ ಯೋಜನಗಳೊಳು ಜಂಬೂದ್ವೀಪ ಮೊಂದು ಲಕ್ಷ ಯೋಜನವಾಗೆ ಮೇರುವು ಸರ್ವ ಮಧ್ಯವಾದ ಕಾರಣದಿಂ ಮೇಲಣೈವತ್ತು ಸಾವಿರ ಯೋ ಜನಮುಂ ಕಳದು ಮೇರುವಿನರ್ಧದಿಂ ಬ್ರಹ್ಮಾಂಡ ಕಟಾಹಾಂತ ಭೂಮಿ ಪಂಚಾಶತ್ಕೋಟಿ ಯೋಜನಮಿತವಹು ದೀಕ್ರಮದಿಂ ಮೇರುವಿನ ಪಶ್ಚಿಮ ದಕ್ಷಿಣೋತ್ತರಗಳೊಳು ನೋಡೆ ಬ್ರಹ್ಮಾಂಡದಾಯತ ನೂರು ಕೋಟಿ ಯೋಜನವಹುದೆಂದು ನಿಶ್ಚಿತವಾಗಿಕ್ಕುಗುಂ.

ಇಂತೆಂಬಲ್ಲಿಗೆ ನಿಜಗುಣ ಶಿವಯೋಗಿಯಿಂದ್ರ ವಿರಚಿತವಾದ ವಿವೇಕಚಿಂ ತಾಮಣಿ ಎಂಬ ಗ್ರಂಥದಲ್ಲಿ ಸಪ್ತದ್ವೀಪ ವರ್ಣನನೆಂಬ ಪಂಚಮಪ್ರಕರ ಣಕ್ಕೆ ಮಂಗಳಮಸ್ತು.

---

ಜಯಜಗಧೀಶ್ವರ.

ಷಷ್ಠಪ್ರಕರಣ ಪ್ರಾರಂಭಃ.

---

ಕಂದ॥ ಅನುಮಿದಿಂಭೂಲೋಕದ । ಘನತೆಯನಿಂತುಸುರ್ದೆನೂ ರ್ಧ್ವಲೋಕಂಗಳನೀ ॥ ಜನವರಿದಚ್ಚರಿಪಡುವಂ । ತಿನಿವಾತುಗಳಿಂದಪೇ

ಳ್ವನೀಗಳನೂನಂ ॥ ಆದೆಂತೆಂದೊಡೆ ॥ ಗದ್ಯ ॥ ಭೂತಳದಿಂ ಧ್ರುವಮಂ ಡಲ ಪರ್ಯಂತವಾಗಿ ಪದಿನೈದು ಲಕ್ಷ ಯೋಜನ ಪರಿಮಾಣಮಪ್ಪುದೇ ಭುವರ್ಲೋಕವದು ಪವನ ಮೇಘಾದ್ಯಾಧಾರವಾಗಿರ್ಪುದದರಲ್ಲಿ.

ಖಗೋಳ ವಾಯುಗತಿ ವೈಚಿತ್ರ್ಯ.

ವಾಯ್ವಾಧಾರಕಗಳಾದ ಸಮಸ್ತಮೇಘಂಗಳುಸಿದ್ಧ ಗಂಧರ್ವಾದಿಗಳ ಗಾಶ್ರಯಂಗಳುಂ ಸೂರ್ಯಾದಿ ನವಗ್ರಹಂಗಳುಂ ಕ್ರಮದಿಂದುತ್ತರೋತ್ತರಮಾಗಿರ್ಪವದೆಂತೆಂದೊಡೆ, ಮೊದಲು ತನುವಾಯುವೀ ಭೂತಳದಿಂಮೇಲೆ ಐವತ್ತುಯೋಜನಮುನ್ನತವಾಗಿ ವ್ಯಾಪಿಸಿಕೊಂಡಿರ್ದು ಭೂಮಿಯೊಳು ಸಕಲೌಷಧಿಗಳಂ ಬೆಳಸುತ್ತಿಹುದು, ಮತ್ತಮಾವಾಯುವಿನೊಳೆಗೆ ದಧಿವಾಹನೆಂಬ ವಾಯುವೀ ಧರೆಯಂ ವ್ಯಾಪಿಸಿ ಸಮಸ್ತರ್ಗೆ ಜೀವನಮುಂ ಪುಟ್ಟಿಸಿದನು. ಜಗಮನಕ್ಕೆ ಪಕ್ಷಿಗಳು ಹಾಡುವದಕ್ಕೆ ಆಧಾರವಾಗಿ ಸುಖಕರಮೆನಿಸುವದು ಮತ್ತಮಾವಾಯುವಿನೊಳುದಿಸಿದ ಪ್ರಚೇತನವೆಂಬ ವಾಯು ತಾನೊಂದುವೇಳೆ ಬಿರುಗಾಳಿಯಾಗಿ ಬೀಸಿ ವೃಕ್ಷಂಗಳಂ ಮುರಿದು ಪಾವಕನ ನೆಬ್ಬಿಸಿ ಗೃಹಂಗಳಂ ದಹಿಸಿ ಸಮುದ್ರದ ಬಡಬಾಗ್ನಿಯಂ ಸ್ಫುಟಗೊಳಿಸಿ ಪ್ರಾಣಿಗಳಂ ಶೋಷಿಸಿ ಲೋಕಮಂ ಕದರಿಜಲವಂ ಹೀರಿ ದಿಕ್ಕುಗಳಂಧೂಳೀಕರಿಸಿ ಪಕ್ಷಿಗಳಂ ಕೊಂದು ವಿಪದಂಕೂಡಿ ಲಯ ಕಾರಣವಾಗಿ ನಿಜಾವರ್ತಭ್ರಮಣದಿಂ ದುಗ್ರಮಾಗಿರ್ಕ್ಕುಂ.

ವರ್ಷಪ್ರದವಾಯು.

ಅಲ್ಲಿಂದ ಮೇಲುನ್ನತ ಶತಯೋಜನಾಂತರದಲ್ಲಿರ್ದ ಸೇಚನಿ ಯೆಂಬ ವಾಯುವು ಮಿಂಚುಗಳಂ ಭರಿಸಿದ ಜೀಮೂತವೆಂಬ ಮೇಘಂಗಳಂ ಸ್ವಾದೂದಕ ಸಮುದ್ರಕ್ಕಾದರುಂ ಲವಣಾಬ್ಧಿಗಾದರುಂ ಸಾಗಿಸಿಕೊಂಡುಪೋಗಿಸಮುದ್ರೋದಕದೊಳು ಪೊಗೆದೆತ್ತಿ ಮೇಘಂಗಳಂ ತುಂಬಿ ಭೂಮಿಯ ಮೇಲೆ ನೂರೈವತ್ತು ಯೋಜನದುನ್ನತದೊಳಾ ಮೇಘಂಗಳಂ ತಪ್ಪದತೆ ತೇಲಿಸಿ ತಂದು ಧರಣಿಯುಮೆಲ್ಲೊಂದು ಹರಿದಾರಿಯು ಹವಣಿನೊಳಾ ಮೇಘಂಗಳಂನಿಲ್ಲಿಸಿ ಬಳಿಕಲ್ಲಿರ್ದ್ದ ಉದಕಮಂ ಛಳಿಗೊಡುವಂತೆ ಕೆದರಿ ಚಲ್ಲಿ ವೃಷ್ಟಿ ಗಳಾಗೆ ಕರಗು ಮತ್ತಮಾ ಮೇಘಂಗಳಂ ಮೇಲಕ್ಕೆ ತೇಲಿಸಿಕೊಂಡುಪೋಗಿ ಗಿರಿ ವನ ಕ್ಷೇತ್ರಗ್ರಾಮಾದಿ ಯೋಗ್ಯಾಗಾರ ನೆಲನ ಸುಸಿನಕಿಳುಹಿ ತಂದು ಮೊದಲ ಹವಣಿನಲ್ಲಿಯೇ ನಿಲ್ಲಿಸಿದೊಡದು ಮಳೆಸುರಿವಮಾಮೇಘಂಗಳ ಅಂಗಕಾಂತಿ ಪ್ರಸ್ಫುರಣವೇ ಮಿಂಚೆನಿಸೆ ವಾಯು ವಹ್ನಿ ಜಲಸಂಚಾ

ಧದಿಂದಾನೆಕಲ್ಗಳಕ್ಕುಂ. ಮತ್ತಮಾಸ್ವಾದೂದಕವೇ ವಿಚಿತ್ರಮಾಡೀಭೂಮಿಯ ಸಂಬಧದಿಂ ರಸವಿಚಿತ್ರಮಪ್ಪಂತೆ ಲವಣಸಮುದ್ರೋದಕವಾಯಾವಾಸನಾಮೇಘ ಸಂಪರ್ಕದಿಂ ವಾಯುಘರ್ಷಣದಿಂ ದ್ವಾಪಾಧಿಕ ರಸನಾಶಮಾಗಸ್ವಾಭಾವಿಕಸ್ಫೂರ್ತಿಯಿಂ ಸ್ವಾದೂದಕಮಕ್ಕುಂ. ಮತ್ತಮಾಮಳೆಯಾಗುವಲ್ಲಿ ಭೂಮಿಮೇಲೊಂದು ಹರಿದಾರಿಯ ಹವಣಿನಲ್ಲಿಯೇ ಮೇಘಂಗಳೆರಗಿ ನಿಂದಿಹುದೆಂದು ತಿಳಿಯಲ್ಪೇಳ್ಕುಂ.

## ವರ್ಷಜಲದಿ ಜಂತುಪತನ.

ಮತ್ತಮಾನೂರೈವತ್ತು ಯೋಜನದಿಂ ಮೇಲುನ್ನತ ನೂರುಯೋಜನಾಂತರದೊಳು ಸೇಚನಿಯೆಂಬ ವಾಯುವೇ ಸತ್ವವಹವೆಂಬ ಮೇಘಂಗಳಂ ತಂದುದಕದಲ್ಲಿ ಪಂಚಭೂತ ಸಂಸರ್ಗಮಿರಲ್ಕೆ ಮಂಡೂಕಮತ್ಸ್ಯಕೂರ್ಮಮವೆರಸಿದ ಮಳೆಗಳಿಂದ ದುರ್ದಿನಂಗಳಕ್ಕುಂ.

## ವಾಯುವಿನಿಂ ವೃಷ್ಟಿಭೇದ.

ಮತ್ತಮಲ್ಲಿಂದ ಮೇಲುನ್ನತವೈವತ್ತು ಯೋಜನನಾಂತರದಲ್ಲಿರ್ದಮೇಘವೆಂಬ ವಾಯುವೌಷಧಂಗಳೆಂಬ ಮೇಘಂಗಳಂತಂದ ಜಲವೃಷ್ಟಿಯಾಗೆ ಧರೆಯ ಜನರ್ಗೆ ತಜ್ಜಲಪಾನಾದಿಗಳಿಂ ದುಃಖಂಗಳಕ್ಕುಂ ॥ ಮತ್ತಮಲ್ಲಿಂದ ಮೇಲುನ್ನತ ವೈವತ್ತುಯೋಜನಾಂತರದಲಿ ಅಮೋಘವೆಂಬ ವಾಯುಮಾರುತನಾಮಕ ಮೇಘಂಗಳಂ ತಂದಜಲದಿಂ ಮಳೆಯಾಗೆ ಪ್ರಾಣಿಗಳಗಾಜಲಪಾನಾದಿಗಳಿಂ ಮರಣಮಕ್ಕುಂ ॥ ಮತ್ತಮಲ್ಲಿಂದ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ವಜ್ರಾಂಗವೆಂಬ ವಾಯುವು ಫಲಕಾಹ್ವಯಂಗಳೆಂದ ಮೇಘಂಗಳಂತಂದ ಜಲಂ ಗರೆಯೆ ಭೂಮಿಯ ಸಕಲವೃಕ್ಷಾದಿಕವೆಲ್ಲಂ, ಪಲ್ಲವ ಕುಸುಮ ಜಲಭರಿತಗಳಕ್ಕುಂ ॥ ಮತ್ತಮಲ್ಲಿಂದ ಮೇಲುನ್ನತ ವೈವತ್ತು ಯೋಜನಾಂತರದಲ್ಲಿರ್ದ ೯ೃವತಶವೆಂಬ ವಾಯು ಪುಷ್ಟಿಕರವೆಂಬ ಮೇಘಂಗಳಂತಂದ ಜಲದಿಂವರ್ಷವಾಗೆ ತಜ್ಜಲಪಾನಾದಿಗಳಿಂಧರೆಯ ಜನರ್ಗೆಪುಷ್ಟಿಗಳಕ್ಕುಂ ॥ ಮತ್ತಮಲ್ಲಿಂದ ಮೇಲುನ್ನತವೈವತ್ತು ಯೋಜನಾಂತರದಲ್ಲಿರ್ದ ಸಂವರ್ತಕವೆಂಬ ವಾಯು ರೋಷದವೆಂಬ ಮೇಘಂಗಳಂ ತಂದ ಜಲಂಧರೆಯೊಳಾಗೆ ತಜ್ಜಲಪಾನಾದಿಗಳಿಂ ಧರೆಯಜನರ್ಗೆ ವ್ಯಾಧಿಗಳಕ್ಕುಂ ॥ ಮತ್ತಮಲ್ಲಿಂದಮೇಲೈವತ್ತು ಯೋಜನದಲ್ಲಿ ಮಹಾಸಂವರ್ತಕವೆಂಬ ವಾಯುಕ್ರೋಧನಾಮಕ ಮೇಘಂಗಳಂ ತಂದ ಜಲಂ ಸೋನೆಯಾಗೆ ತಜ್ಜಲಪಾನಾದಿಗಳಿಂ ಭೂಮಿಯ ಜನರ್ಗೆ

ಕ್ರೋಧ ಯುದ್ಧಂಗಳಪ್ಪವಾಪ್ಪೃಷ್ಟಿಯಿಂದಲೇ ರಾಕ್ಷಸ ಸಂಹಾರವಕ್ಕು ಮಾಪರಿ ಜಗತ್ಕಾರ್ಯ ಸರ್ವಸಹಾಯಕವಾದ ಮಳೆಯು ದೂಮಜ್ಯೋತಿಸ್ಸಂಬಂಧವೇ ಮುಖ್ಯಮಹುದಾಗಿ ಖಗೋಳದೊಳು ಸೂರ್ಯಪ್ರಧಾನವಾದ ಗ್ರಹಮಂಡಲದಿಂ ದೊಡಗೂಡಿದ ಭಜ್ಯೋತಿಶ್ಚಕ್ರದಲ್ಲಿ.

ಜ್ಯೋತಿಶ್ಚಕ್ರವು ರಾಶಿಗ್ರಹಗಳು.

ಮತ್ತಮಾ ಖಗೋಳದಲ್ಲಿ ಮೇಷ, ವೃಷಭ, ಮಿಥುನ, ಕರ್ಕಟ, ಸಿಂಹ, ಕನ್ಯೆ, ತುಲೆ, ವೃಶ್ಚಿಕ, ಧನಸ್ಸು, ಮಕರ, ಕುಂಭ, ಮೀನವೆಂಬ ಪನ್ನೆರಡುರಾಶಿಗಳೆ, ಅಶ್ವಿನಿ, ಭರಣಿ, ಕೃತ್ತಿಕೆ, ರೋಹಿಣಿ, ಮೃಗಶಿರ್ಷೆ, ಆದ್ರ್ರೆ, ಪುನರ್ವಸು, ಪುಷ್ಯಮಿ, ಅಶ್ಲೇಷೆ, ಮಖೆ, ಹುಬ್ಬೆ, ಉತ್ತರೆ, ಹಸ್ತೆ, ಚಿತ್ತೆ, ಸ್ವಾತಿ, ವಿಶಾಖೆ, ಅನೂರಾಧೆ, ಜ್ಯೇಷ್ಠೆ, ಮೂಲೆ, ಪೂರ್ವಾಷಾಢೆ, ಶ್ರವಣ, ಧನಿಷ್ಠೆ, ಶತಭಿಷಕ್, ಪೂರ್ವಾಭಾದ್ರೆ, ಉತ್ತರಾಭಾದ್ರೆ, ರೇವತಿಗಳೆಂಬಿಪ್ಪತ್ತೇಳು ತಾರೆಗಳಾದ ನಾಲ್ಕುನಾಲ್ಕು ಪಾದಗಳಿಂದ ನೂರೆಂಟಾಗಿ ಯವುಗಳೊಳು ರಾಶಿಗೊಂಬತ್ತರಂತೆ ಪಾಲ್ಗೊಂಡು ಜ್ಯೋತಿರ್ಗೋಹವೀಥಿಯಾಗೆ ತನ್ಮಧ್ಯದೊಳು ಕ್ರಮದಿಂ ಸಂಚರಿಪ ಸೂರ್ಯಚಂದ್ರರುಂ ಋಜುವಕ್ರಚಾರಿಗಳಾದ ಕುಜ, ಬುಧ, ಗುರು, ಶುಕ್ರ, ಶನಿಗಳೆಂಬ ಪಂಚಗ್ರಹಗಳುಂ ಸರ್ವಾಧಿಪತಿಗಳಾಗಿಕ್ಕುರ್ಗಂ.

ವರ್ಷಯೋಗ.

ಮತ್ತಮಾಸೂರ್ಯನುದಯಿಸುವಲ್ಲಿ ಕೂಡಿಸೆಳತಂದರಾಶಿಯೇ ಉದಯವೆನಿಸೆ ಕಾಲಕ್ರಮದಿಂ ದುದಯಕ್ಕೈದುವ ರಾಶಿಗಳೇ ಲಗ್ನಂಗಳೆನಿಸಿ ಅವುಗಳೊಳು ಮೀನಾದಿ ಚತುಷ್ಟಯ ಕ್ರಮದಿಂ ಪೂರ್ಣಜಲಾದಿ ಕ್ಲುಪ್ತಿಯಾಗಿ ಮೇಷಾದಿ ದ್ವಿತಯದೊಳಗೋಜಯುಗ್ಮ ಪರಿಪಾಟಿಯಿಂ ಕ್ರಮವ್ಯುತ್ಕ್ರಮವೆನಿಸಿ ಕ್ರಿಯಾದಿ ತ್ರಿಕ್ರಮದಿಂ ಚರಸ್ಥಿರ ದ್ವಿಸ್ವಭಾವಮೆನಿಸಿ ಮೀನಾದಿ ತ್ರಿರಾವರ್ತನದಿಂ ಗರ್ಭದ್ವಾರ ಬಾಹ್ಯಮೆನಿಸಿದ ಸ್ವಾದಿತ್ರಿಕ್ರಮ ವ್ಯುತ್ಕ್ರಮದಿಂ ಸಾಗರತೀರ ಕುಕ್ಷಿ ಪರ್ವತಂಗಳೆನಿಸಿ ರೌದ್ರಾದಿ ಸಪ್ತಮ ವ್ಯುತ್ಕ್ರಮಗಳಾದ ದಾಹ, ತಾಪ, ವಾತ, ಮೇಘ, ಶೀತ, ವರ್ಷ, ಮಹಾಜಲಂಗಳೆಂಬ ನಾಡೀ ಸಂಜ್ಞೆಯನ್ನೈದಿಕಾರ್ತಿಸಂಜ್ಞೆಯುಂ ಪಡದ ನಕ್ಷತ್ರೋದಯ ರವಿಚಾರಸುಮಸಿಯಾತಾನು ರೂಪನಾಮಕ ಫಲಪ್ರದಮಾಗಿರಲು ರವಿರಥದ ಮುಂದೆಬುಧನೋಡೆಗಾಳಿಯಕ್ಕುಂ॥ ಶುಕ್ರನೆದುರಾಗೆ ಸುವೃಷ್ಟಿಯಕ್ಕುಂ, ಬುಧ ಶುಕ್ರಯೋಗದೊಳು ಮಹಾವೃಷ್ಟಿಯಕ್ಕುಂ,

ರವಿ ಮಧ್ಯದೊಳಿರೆ ನಿರ್ವರ್ಷಮಕ್ಕುಂ, ಮೂಡಲೆಸೆಯೊಳು ಮಖಾದಿ ಪಂಚ
ಕ್ಷತ್ರಂಗಳೊಳಗುಂ ಪಡುವಲಲ್ಲಿ ಸ್ವಾತಿ ಮೊದಲು ಮೂರು ನಕ್ಷತ್ರಂಗ
ಳೊಳಗುಂ ಶುಕ್ರನು ಸಂಚರಿಸುವಲ್ಲಿ ಸುವೃಷ್ಟಿಯಕ್ಕು ಮಾಶುಕ್ರಂಗು
ಕ್ತಕ್ರಮದೊಳು ದಿಗ್ವೈಪರೀತ್ಯವಾಗೆ ಮಳೆಯಾಗದಿರ್ಕುಂ ಮಂಗಾರಕ
ನು ಸ್ತಂಭಿಸಲನಾವೃಷ್ಟಿಯಕ್ಕುಂ, ವರ್ಷನಾಡಿಯೊಳು ಸಂಚರಿವ ಚಂ
ದ್ರಂಗೆ ಕ್ರೂರಗ್ರಹ ಯೋಗದಿಂ ಸುವೃಷ್ಟಿಯಕ್ಕುಂ, ಋತು ಪರ್ವ
ಸಂಧ್ಯಾದಿಗಳೊಳು ಸಾಧಾರಣಮಕ್ಕು, ಮೀ ವರ್ಷದ ಗರ್ಭಗಳಾವ ಕಡೆ
ಯಾವ ದಿನವಾವ ಪರಿತೋರ್ಪುದೋ ಅದು ನಾಲ್ಕನೆಯ ವರುಷ
ದಲ್ಲಿ ಮತ್ತದಕೆ ಮುಂದ್ಯೈದನೆಯ ತಾರಕೆಯೊಳು ಸದೃಶವರ್ಷ ಮಥವು
ಪ್ರಡಂಬನು ಭೂತಿಯಿಂ ಗ್ರಹಂಗಳೇ ಅಧಿಪತಿಗಳಾಗಿರಲು ಸೂರ್ಯನವ
ರೊಳು ಮುಖ್ಯವಾದುದರಿಂ ದೇಶಕಾಲ ಜೀವಕ್ರಿಯಾದ್ಯನುಗುಣವಾಗಿ
ತನ್ನ ಕಿರಣಂಗಳಿಂ ಕಲವಂ ಹೀರಿ ಮೇಘಂಗಳಿಗಿತ್ತು ವೃಷ್ಟಿಯಂ ಕರೆಯಿ
ಸುವ ಸೂರ್ಯನ ಶಕ್ತಿಯಿಂ ಕೆಲವು ಪ್ರಾಂತಂಗಳೊಳು ಪೂರ್ಣ ಮಧ್ಯಾಲ್ಪ
ವೃಷ್ಟಿಗಳಾಗೆ ತತ್ತದ್ದೇಶತಾತ್ಕಾಲಿಕ ನೈಸರ್ಗಿಕ ವೈತ್ಯಾದಿ ಬಲಯು
ಕ್ತ ಗ್ರಹ ಸಂಬಂಧವೆಂದೆಲ್ಲಕ್ಕು ಮಷ್ಟಮೂರ್ತಿ ಯಾದೀಶ್ವರನ ಜ್ಯೋ
ತಿರ್ನೇತ್ರಂಗಳೇ ಕಾರಣಗಳಾಗಿರ್ಕುಮಿಂತು ಖಗೋಳದೊಳು, ವಾಯು-
ರವಿ-ತಾರೆ-ಧೂಮ-ಮೇಘ-ಜಲಗಳ ಕ್ರಮವ್ಯುತ್ಕ್ರಮ ಸಂಯೋಗ ವೈ
ಚಿತ್ರ್ಯದಿಂ, ಮಳೆಮಿಂಚು, ಗರ್ಜನ, ಸಿಡಿಲು, ಆನೆಕಲ್ಲು, ಜಲಜಂತುಪತ
ನ, ಬೆಳೆಗಳಾಗುವವೆಂದು ತಿಳಿಯಲಕ್ಕುಂ.

(ಸಪ್ತ ಪವನಾಧಾರಗಳು.)

ಬಳಿಕಲ್ಲಿಂದ ಮೇಲೊಂಭತ್ತು ಸಾವಿರ ಯೋಜನದಲ್ಲಿ, ಮೇಘ-ಅಮೋ
ಘ-ವಜ್ರಾಂಗ-ವೈದ್ಯುತಿ-ರೈವತಕ-ಸಂವರ್ತ-ವಿಸಂವರ್ತ ವೆಂಬೇಳು ಪ
ವನಾಧಾರದಿಂ ದುತ್ತರೋತ್ತರವಾದ ವಿಚಿತ್ರ ಮೇಘಾಶ್ರಯಂಗಳೆನಿಪ ಪ
ಟ್ಟಣಂಗಳಿರ್ಪವ ವಾನಾವೆಂದೊಡೆ.

(ಅಭ್ರನಗರ ನಿವಾಸಿ ಬಾಲಗ್ರಹಾದಿಗಳು.)

ಮೊದಲು ಮೇಘವೆಂಬ ಪವನಾಧಾರದ ಮೇಘಾಶ್ರಯ ಪಟ್ಟಣದಲ್ಲಿ
ಮೂವತ್ತು ಸಾವಿರ ರೌದ್ರಮೂರ್ತಿಗಳಪ್ಪ ಕಾಮರೂಪಿಗಳಾದ ಮಹಾ
ಪರಾಕ್ರಮಿಗಳೆನಿಸುವ ಭೂಮ್ಯಾದಿ ಸಕಲಲೋಕಸಂಚಾರಮುಳ್ಳ ಷಣ್ಮಾ
ಬ [illegible]ಸಾಧಿಸುತ್ತಿರ್ಪ ದೈತ್ಯಕಾಚ ದೇವಯೋನಿಗಳುಂ, ಧನದೆ-ಭೀಷಣೆ-

ಕಾಳಿ । ಭೀಮರೂಪಿ । ಹಂಸಿನಿ । ಮುಕ್ತಕೇಶಿ । ಮಾತಾಳಿನಿ । ಹರಿತೆ । ರೋದಿನಿ । ಶಕುನಿ । ಭೂಮರಾವಳಿ । ಉತ್ತಮೆ । ಪಿಸಿನಗಳ । ಗೋಕರ್ಣೆ । ಮಂಕಜೆ । ಶ್ರೀಮುಖಿ । ಜನಿ । ಕುಂಭಕರ್ಣೆ । ತಾಪಸೆ । ಕಾಳರಕ್ಷಿ । ನಂದಿನಿ । ಮಕ್ರೋಧಿನಿ । ಧನೆ । ಕಾಶಿನಿ । ಜಚ್ಚಿಳ । ಕಾಮಿನಿ । ಮೋದಿನಿ । ನಳಿನಿ । ಮಹಾಕುಂಭಿನಿ । ಹರಿ । ಮಹಾಕರ್ಣೆ । ವಾಯುವಿ । ಬಿಕ್ಕಾಕ್ಷಿ । ಸುಗಂಧಿನಿ । ವನದೇವಿ । ಕುಂತಳೆ ಯೆಂಬದು ಮೊದಲಾದ ಮೇರಿನ ಕ್ಷುದ್ರದೇವತೆಗಳೆಂ ಸೆಲಸಿದುಸ ಭೂಲೋಕದ ಮಾನವರೊಳು ೪-೬-೮-೧೦-೧೨-೧೬-೨೪-ದಿನಂಗಳುಂ, ೨-೪-೬-೮-೧೦-೧೨-೧೪-೧೬ । ವರುಷಂಗಳುಂ ಉಳ್ಳ ಶಿಶುಗಳಿಗೆ ನಾನಾ ಹಿಂಸೆಗಳಂ ಮಾಡುವ ಬಾಲಗ್ರಹಗಳೆನಿಸಿ । ತಮ್ಮತಮ್ಮ ವಿಕಾರಂಗಳಂ ಸೂಚಿಸಿ । ಬೇರೆಬೇರೆ ಬಲಿಭೋಜನ ಪೂಜೆಗಳಂ ಕೊಂಡು ತಮ್ಮತಮ್ಮ ಬಾಧೆಗಳಂ ಬಿಡಿಸುತ್ತಿರ್ಪ್ಪಂ ॥

(ವಿನಾಯಕರು.)

ಬಳಿಕಲ್ಲಿಂದಮೇಲೆ । ಅಗ್ನೇಯವೆಂಬೆರಡನೇ ಪವನಾಧಾರದ ಮೇಘಾಶ್ರಯಪಟ್ಟಣದಲ್ಲಿ । ರುದ್ರನಿಂ ಪುಟ್ಟಿದ ನೀಲಾಂಜನಛಾಯೆಯುಳ್ಳ ಸ್ಥೂಲಕಾಯದ ಮಹೋದರ ಗಜವಕ್ತ್ರರು । ಸರ್ವಗಣಾದ ಮೂವತ್ತುಕೋಟಿ ವಿನಾಯಕರಿದ್ದು ಮರ್ತ್ಯಲೋಕದ ಜನರು ಮಾಳ್ಪ ಸತ್ಕರ್ಮಫಲವ ನಪಹರಿಸುತ್ತ ಮಹಾಬಲವಂತರಾಗಿಹರು । ಬಳಿಕಲ್ಲಿಂದಮೇಲೆ ವಜ್ರಾಂಗವೆಂಬ ಮೂರನೆಯ ಪವನಾಧಾರದ ಮೇಘಾಶ್ರಯ ಪಟ್ಟಣದಲ್ಲಿ ಭಿನ್ನಾಂಜನಕಾಂತಿಯ ಭೀಮಕಾಯದ ಕೋಟ್ಯಾನುಕೋಟಿ ಭೂತವೀರರಿಹರವರು ಭೂಲೋಕವಲ್ಲಿಯ ಸುಡುಗಾಡುಗಳಲ್ಲಿಯುಂ । ಹಾಳುಹೊಳ್ಳು ಭೂಮಿಗಳಲ್ಲಿಯುಂ ಬಲಿಗಳಂಕೊಳುತ್ತಲ್ಲಿಯೇ ನಲಿದಾಡುತ್ತಿಹರು ॥

(ವೀರಸ್ವರ್ಗ.)

ಬಳಿಕವರಿಂದ ಮೇಲೆ ವೈದ್ಯುತವೆಂಬ ನಾಲ್ಕನೆಯ ಪವನಾಧಾರದ ಮೇಘಾಶ್ರಯಪಟ್ಟಣದಲ್ಲಿ । ಅಪ್ಸರರೆನಿಸುವ ವೀರದೇವತೆಗಳಿರುವರೀ ಭೂಲೋಕದಗ । ಮರಿ । ಅಗ್ನಿಜಲ । ಸಂಗ್ರಾಮ । ಗೋಗ್ರಹಣಾದಿಗಳಲ್ಲಿ ಪರಾಕ್ರಮದಿಂದಳಿದವೀರರಂ । ದೇವಕನ್ಯೆಯರು ಅನಂತಸಂಭ್ರಮದಿಂ ಮಣಿಖಚಿತ ವಿಮಾನದಿಂದೊಯ್ವರದೇ ವೀರಸ್ವರ್ಗಮಕ್ಕುಂ.

ಸಿದ್ಧವಿದ್ಯಾಧರಾದಿ ಲೋಕಂಗಳು.

ಬಳಿಕಲ್ಲಿಂದಮೇಲೆ ದ್ವೈತಕವೆಂಬೈದನೆಯ ಪವನಾಧಾರದ ಮೇಘಾಶ್ರ,

ಯ ಪಟ್ಟಣದಲ್ಲಿ ಮಹಾಸಿದ್ಧರಿಹರಲ್ಲಿಗೀಧರೆಯ ಕೆಲವು ಸಿದ್ಧಿಪದಮಂತ್ರಸಾಧಕರ್ಸೈದುತ್ತಿಹರು । ಬಳಿಕಲ್ಲಿಂದಮೇಲೆ ಸಂವರ್ತಕವೆಂಬಾರನೆಯ ಪವನಾಧಾರ ಮೇಘಾಶ್ರಯಪಟ್ಟಣದಲ್ಲ ಮೂರುಕೋಟಿ ವಿದ್ಯಾಧರರು ಮಹದೈಶ್ವರ್ಯಸಂಪನ್ನರಾಗಿಹರು। ಬಳಿಕಲ್ಲಿಂದಮೇಲೆ ವಿಸಂವರ್ತಕವೆಂಬೇಳನೆಯ ಪವನಾಧಾರದ ಮೇಘಾಶ್ರಯಪಟ್ಟಣದಲ್ಲಿ ವೀಣಾದಿವಾದನತಂತ್ರಕುಶಲರಾದ ಪಕ್ಷಿತುಲ್ಯ ದೇವತೆಳಿರ್ಪವಿಂತೇಳು ಪವನಾಧಾರಂಗಳಲ್ಲಿಯುಂ ಮೇಘಾಶ್ರಯ ಸ್ಥಿತಿಭೇದಮುಕ್ಕುಂ.

ದಶಮೇಘ ಸ್ಥಾನಂಗಳು.

ಮತ್ತಮಲ್ಲಿಂದಮೇಲೆ ನೂರುಯೋಜನದಲ್ಲಿ ಹತ್ತು ಮಾರುತಾಧಾರದಿಂ ಮೆರೆವಬ್ರಹ್ಮಸೃಷ್ಟಿಯ ದಶಮೇಘಸ್ಥಾನಂಗಳುತ್ತರೋತ್ತರವಾಗಿರ್ಪಲ್ಲಿ ಮೊದಲು ಮಾರುತಾಧಾರಮೇಘಸ್ಥಾನದ ಕಶ್ಯಪಬ್ರಹ್ಮನಿಂದುದ್ಭವಿಸಿದ ಮಳೆಮಿಂಚುಸಿಡಿಲುಗಳ್ಗೆ ಕಾರಣವಾದ ಸುರಪನಾಣತಿಯ ಹತ್ತುಕೋಟಿವಾರಿದಮೇಘಂಗಳಾಮೊಡೆ ಬಿಂಗದಪ್ರೇರೆಗಳಂ ತೊಡಗೂಡಿರ್ಪವಾ ವಾರಿಧರ ಮೇಘಂಗಳು ಸ್ವತಂತ್ರಗಮನವಿಲ್ಲಾಗಿ ವಾಯುಗಳೇಸಾಗಿಸಿತಂದು ಪೂರ್ವೋಕ್ತಪ್ರಕಾರದಿಂ ಭೂಲೋಕಕ್ಕೆ ಮಳೆಗರಸಿ ಘಾಳಿಪಟದಂತೆ ತೇಲಿಸಿಕೊಂಡು ಪೋಗಿ ಮೊದಲಸ್ಥಾನದಲ್ಲಿರಿಸುತಿರ್ಪನಾ ವಾರಿಧರಮೇಘಂಗಳಿರ್ಪ ಪ್ರಥಮಸ್ಥಾನವೀಭೂಮಿಗೆ ಹತ್ತುಸಾವಿರಯೋಜನಾಂತರಮುಕ್ಕುಂ.

ಗಂಧರ್ವ ಗೃಹಗಳು.

ಮತ್ತಮಲ್ಲಿಂದಮೇಲೆ ಹತ್ತುಸಾವಿರಯೋಜನಾಂತರದದ್ವಿತೀಯಮಾರುತಾಧಾರದ ಮೇಘಸ್ಥಾನದಲ್ಲಿ ಸ್ಥೂಲಕಾಯರ ಜೀಮೂತರೆನಿಪ ವಿದ್ಯಾಧರರುಂ ವಿಚಿತ್ರಗೃಹಂಗಳೆನಿಪ ಗಂಧರ್ವರುಮಿರ್ಪರವರೇ ದೇವಗಂಧರ್ವರು ಮರ್ತ್ಯಗಂಧರ್ವರು ಮೆಂದು ದ್ವಿಪ್ರಕಾರವಾಗಿಹರವರೊಳಗೆ ಪೂರ್ವಯುಗದಲ್ಲಿ ಪುಣ್ಯಪರಿಪಾಕದಿಂದೀ ಸೃಷ್ಟಿಪ್ರಾರಂಭದಲ್ಲಿಯೇ ತತ್ಪದಸ್ಥರಾದವರುಗಳೇ ದೇವಗಂಧರ್ವರುಗಳು । ಬಳಿಕ ಸೃಷ್ಟಿಕಾಲದಲ್ಲಿ ಮನುಷ್ಯರಾಗಿ ಜನಿಸಿದಮೇಲೆ ಪುಣ್ಯಾಧಿಕ್ಯದಿಂದುತ್ತಮ ಪದವಿಯನೈದುವರೇ ಮರ್ತ್ಯಗಂಧರ್ವರುಮುಕ್ಕುಂ.

ಮಾತೃಕಾ ಯೋಗಿನೀ ಶಕ್ತಿಗಳು.

ಮತ್ತಮಲ್ಲಿಂದ ಮೇಲೆ ಹತ್ತುಸಾವಿರ ಯೋಜನಾಂತರವಾದ ಮೂರ

ನೇ ಮಾರುತಾಧಾರದ ಮೇಘಸ್ಥಾನದಲ್ಲಿ ಬೇರೆಬೇರೆ ಆಕಾರಾಯುಧಾದಿಗಳುಳ್ಳ ಅಗ್ನಿಕನ್ಯೆಯರಾದ ಬ್ರಾಹ್ಮಿ। ಮಾಹೇಶ್ವರಿ। ಕೌಮಾರಿ। ವೈಷ್ಣವಿ। ವಾರಾಹಿ। ಇಂದ್ರಾಣಿ। ಚಾಮುಂಡಿಯರೆಂಬ ಸಪ್ತಮಾತೃಕೆಯರುಂ ಕೆಲರು ರುದ್ರಕನ್ಯೆಯರುಂ ಸಾಮರ್ಥ್ಯಸಿದ್ಧರುಂ। ದೇವಿ। ದಿವ್ಯಯೋಗಿನಿ। ಧೂರ್ಜಟಿ। ಧೂಮ್ರಾಕ್ಷಿ। ಧ್ವಂಸಿನಿ। ಕುಷ್ಮಾಂಗಿ। ಸುಂದರಿ। ಸರ್ವೇಶಿ। ಪ್ರಕಾಶಿನಿ। ಪ್ರೇತಭೂಷಣಿ। ಪ್ರಸಾದಿನಿ। ಪರಮೇಶ್ವರಿ। ಕ್ರೋಧಿನಿ। ಕಂಕಾಳಿ। ಕಾಳರಾತ್ರಿ। ಕಲಹಪ್ರಿಯೆ। ಶಾಕಿದೃಷ್ಟಿ। ಕಾಮರೂಪಿ। ಕಾಳಿ। ಕಿಂಕಿಣಿ। ಕಪಾಲಿ। ವೀರಕೌಮಾರಿ। ವಿರೂಪಾಕ್ಷಿ। ವೀರಭದ್ರೆ। ವಿಶ್ವರೂಪಿ। ವಿಶಾಲಾಕ್ಷಿ। ವಾರಾಹಿ। ವಿಷಲಂಘಿನಿ। ವ್ಯಾಘ್ರಿ। ಉಗ್ರೆ। ಉಗ್ರಧನುರ್ಧರೆ। ಊರ್ಧ್ವಕೇಶಿ। ತಾಟಕಿ। ತುಷ್ಟೆ। ತ್ರಿಪುರಾಂತಕೆ। ತ್ರಿಖಂಡಧಾರಿಣಿ। ರೌದ್ರಿ। ರುದ್ರವೇತಾಳಿ। ರಾಕ್ಷಸಿ। ರಕ್ತಾಕ್ಷಿ। ಧೂತಶಂಕೆ। ಭಯಂಕರಿ। ಭೈರವಿ। ಭೇರುಂಡೆ। ಭೀಷಣಿ। ಅಷ್ಟ್ರೆ। ಲಂಬೋಷ್ಠಿ। ನಿರಾಚಾರೆ। ನಾಭೋಜಿನಿ। ಗಣೇಶಿ। ಘೋರೆ। ಈಶೆ। ಯಕ್ಷಿಣಿ। ಅಧೋಮುಖಿ। ಢಾಕಿನಿ। ಚಂಡಿಹುಂಕಾರಿ। ನಿತ್ಯಕ್ಲಿನ್ನೆ। ಕರ್ಣಬೋಧಿನಿ। ದೂತಿ। ಇಷ್ಟಕಾರಿಣಿ। ಸರ್ವಜ್ಞೆ। ಅದೃಶ್ಯರೂಪಿಣಿ। ಆಕಾಶಚಾರಿಣಿಯೆಂಬ ಚತುಷ್ಷಷ್ಟಿ ಯೋಗಿನಿಯರುಂ ತಮ್ಮತಮ್ಮ ನಾಮೋಚ್ಚಾರಣಮಾತ್ರದಿಂ ಗ್ರಹಾದಿಸಮಸ್ತ ವಿಘ್ನಂಗಳಂ ಪರಿಹರಿಸುತಿರ್ಪ್ಪುಂ ॥

ಆಯುಧಭೇದ ವಿಶೇಷಗಳು.

ಬಳಿಕಲ್ಲಿಂದಮೇಲೆ ಹತ್ತುಸಾವಿರ ಯೋಜನಾಂತರದ। ನಾಲ್ಕನೇ ಮಾರುತಾಧಾರದ। ಮೇಘಸ್ಥಾನದಲ್ಲಿ। ಖಡ್ಗ। ಕಠಾಚೂರಿ। ಕಕ್ಕಡ। ಕಡುಗತ್ತಿ। ಸಣೆಗತ್ತಿ। ಸಬ್ಬಳ। ಈಟಿ। ಇದುರುಗತ್ತಿ। ಉಬ್ಬಣ। ಕಬ್ಬಿಣಕೋಲು। ಚಕ್ರ। ಚಂಡು। ಪ್ರೋತಿ। ಚಲ್ಲಿಹ। ಬಲ್ಲಿಹ। ಬಂಕು। ಬಾಣ। ಗದೆ। ನರಾಚಿಶೂಲ। ಕಿರುದಿ। ಚೂರಿ। ಚಿಕ್ಕಠಾರಿ। ಕಿರಸೆ। ಪಂಶು। ಪಾಶ। ಪಟ್ಟೆಯ। ಪುಟ್ಟಅಂಕುಶ। ಪಂಕಿ। ಲೌಡಿ। ಜಪದಾಡೆಗಳೆಂಬ ಬತ್ತೀಸಾಯುಧಗಳಂ। ಬಿಲ್ಲುತೀರು। ಹೆದೆ। ಬತ್ತಳಿಗೆ। ಸೀಸಕ। ವಜ್ರಕವಚ। ವಜ್ರಮುಷ್ಟಿ। ಕರತ್ರಾಣ। ಶಿರಸ್ತ್ರಾಣ। ಮಧ್ಯತ್ರಾಣ। ಪದತ್ರಾಣ। ವರ್ಮ್ಮವರ। ಗಚ್ಛಕ್ಷುರಿಕೆ, ಕರಪತ್ರ, ಕುಠಾರ, ಮುಸಲ, ಲಾವನ, ದಾಹನ ಶಲಾಕೆ, ಭಲ್ಲ, ನಾರಾಚ, ಚಂದ್ರಾರ್ಧ, ಶೂಲ, ಉಲ್ಕಾಮುಖ, ಅಗ್ನಿಸ್ಫೋಟ, ಮಹೋಲ್ಕ, ಅಂಗಾರಸ್ಫೋಟ, ಸ್ಫುಲಿಂಗಪ್ರಕರ, ಘಟಿ

ಕಾಯಪ್ರವೇಶಿಕ। ಗಂಧೇಂಗಾಲಿಕ। ನಾಳೀಕದಾಹ ದೊರೋಹೀದಹನಾಕತೀಕ್ಷ್ಣ। ಸಹಸ್ರಾಕ್ಷ । ಅಂತರ್ದರ್ಶನಿ । ಬಹಿರ್ದರ್ಶಿನಿ। ಆಕಾಶಗಾಮಿನಿ । ಸೊರಬಾಣ। ಸೊಪ್ಪುರಿ। ಪಾತ್ರಾಳಭಾಣ । ಪಡಿಕುಬಾಣ । ಪಾಯುಮರಿ । ಖೇಟಕ । ಮುಂತಾದ ಶಸ್ತ್ರಜಯಾಸ್ತ್ರ ರಕ್ಷಾಧಿಸಾಧನ ವಿಶೇಷಂಗಳಿಂದಲುಂ । ಮಾಂತ್ರಿಕ। ದೈವಿಕ। ನೈಸರ್ಗಿಕ । ಯಾಂತ್ರಿಕ । ವಾಸ್ತವಿಕಗಳೆಂಬ ಪಂಚಭೇದ ಸಾಧನಂಗಳಿಂದಲುಂ। ಪರಭಯಂಕರ । ವೇಷಭಾಷಾಕಾರಂಗಳುಳ್ಳ ಘನದೇವರ್ಕಳಿರ್ಕ್ಕುಂ.

## ಗರುತ್ಮಂತ ಗಂಗೆ ಮೊದಲಾದುದು.

ಮತ್ತಮಲ್ಲಿಂಮೇಲೆ ಹತ್ತುಸಾವಿರ ಯೋಜನಾಂತರದ ಪಂಚಮಪವನಾರುತಾಧಾರದ ಮೇಘಸ್ಥಾನದಲ್ಲಿ ಇಂದ್ರನೈರಾವತ ಮುಂತಾದ ಗಜಶಿಲಾಸ್ಥಾನಂಗಳುಂ॥ಮತ್ತಮಲ್ಲಿಂದಮೇಲೆ ಆರನೇ ಮಾರುತಾಧಾರದ ಮೇಘಸ್ಥಾನದಲ್ಲಿ ಖಗನಿಕರಾಧಿಪತಿಯೆನಿಪ ಕಾಸ್ಯಪಿಯಾದ ವೈನತೇಯನು ಶಿವಪೂಜಾಪ್ರಭಾವದಿಂ ವೇದಾತ್ಮಕತ್ವ ಸುವರ್ಣಪಕ್ಷತ್ವಗಳಿಂ ವಿಶ್ರುತನಾಗಿ ವಿಷ್ಣುವಾಹನಾಧಿಕಾರದೊಳು ನಿಯಮಿಸಲ್ಪಟ್ಟು ಸ್ವಜಾತೀಯ ದೇವತೆಗಳೊಡನೆ ಗರುತ್ಮದ್ರಾಜನಾಗಿರ್ಕ್ಕುಂ ಮತ್ತಲ್ಲಿಂದ ಮೇಲೆ ಹತ್ತುಸಾವಿರಯೋಜನದೊಳು ಸಪ್ತಮ ಮಾರುತಾಧಾರದ ಮೇಘಸ್ಥಾನದಲ್ಲಿ ದೇವಗಂಗೆ ದಶಲಕ್ಷ ಯೋಜನ ವಿಸ್ತಾರದಿಂ ವಿಚಿತ್ರವರ್ಣದ ಕಮಲ ಕುಮುದ ಹಂಸಾದಿಗಳಿಂ ದಲಂಕೃತವಾಗಿ ದೇವ ಮನುಮುನಿ ಸಿದ್ಧಗಂಧರ್ವಾದಿಗಳಿಗೆತನ್ನ ದರ್ಶನಸ್ಪರ್ಶನ ಪಾನಾದಿಗಳಿಂ ಪರಮಪಾವನತೆಯ ನೀವುತ ಜಗತ್ಪ್ರಸಿದ್ಧವಾಗಿರ್ಕ್ಕುಂ.

## ಗಗನ ನಂದಿಕೇಶ್ವರ.

ಮತ್ತಮಲ್ಲಿಂದ ಹತ್ತುಸಾವಿರ ಯೋಜನದಮೇಲೆ ಎಂಟನೆಯ ಮೇಘಸ್ಥಾನದಲ್ಲಿ ಮಹಾ ತಪೋಬಲ ಯುಕ್ತವಾಗಿ ಪೃಥುವಿಮಾನ ವಾಟಿಯಿಂ ಮೆರೆವ ದಿವ್ಯತೇಜಃಪುಂಜವಾದ ಜ್ಞಾನಮಹಿಮಾಸ್ಥಾನದೊಳು ನಿರ್ಧೂತ ರಜಸ್ತಮಸ್ಕಸಿದ್ಧಗಣಂಗಳಿಂ ಕೂಡಿ ಸಕಲ ಸುರಸಮುಪಾಸ್ಯನಾಗಿ ಶಿವಾಂಗ, ಶಿವಸ್ಥಳ, ಶಿವಲಿಂಗ, ಶಿವಧರ್ಮ, ಶಿವಭಕ್ತಿ, ಶಿವಪೂಜೆ, ಶಿವಧ್ಯಾನ, ಶಿವಜ್ಞಾನ, ಶಿವಯೋಗ, ಶಿವಮಹಿಮ, ಶಿವಾನಂದವಿಭವಂಗಳಿಂ, ಲೋಕೋತ್ತರನೆನಿಸಿ, ಶಿವಧರ್ಮವೇರೂಪ, ಸತ್ಯವೇ ಪ್ರಾಣ, ಜ್ಞಾನ ರ್ಮಂಗಳೇ ಶೃಂಗಂಗಳು, ತತ್ವಸಿದ್ಧಿಗಳೇ ಅಂಗಂಗಳು, ಸುಗುಣಂಗಳೇ

ಧಾತುಗಳು, ಉಪನಿಷತ್ತೇ ಬಾಲವೆನಿಪ ದಿವ್ಯರೂಪದಿಂ ಚಿದಂಬರ ಮುಮುಕ್ಷು ಪ್ರಾಣಜ್ಯೋತಿರ್ಧರ್ಮನೆಂಬ ನಂದಿಕೇಶ್ವರನ ಲೀಲಾಸ್ಥಾನವಿರ್ಕ್ಕುಂ.

### ದಕ್ಷಬ್ರಹ್ಮನು.

ಬಳಿಕಲ್ಲಿಂದಮೇಲೆ ಹತ್ತುಸಾವಿರಯೋಜನವಾದಮಾರುತಾಧಾರದಮೇಘಸ್ಥಾನದಲ್ಲಿ ದಾಕ್ಷಾಯಣಿ ಯೆನಿಪ ಶಾಂಭವಿ ಲೀಲೆಗೆ ತಂದೆಯಾದರುಂ ಶಿವಾಪರಾಧದಿಂ ವೀರಶಿಕ್ಷಾರ್ಹನಾಗಿ ಬಸ್ತಶಿರನಾದ ದಕ್ಷಪ್ರಜಾಪತಿಯುಂ ಪರಿತ್ಯಕ್ತ ವೈಷ್ಣವವ್ರತನಾಗಿ ಶಿವದೀಕ್ಷೆಯಂ ಪಡೆದು, ವೀರಮಹೇಶ್ವರರೆನಿಪ ಸಿದ್ಧರ್ಷಿಗಳಿಂ ದೊಡಗೂಡಿ, ಶಿವಧ್ಯಾನ ಸರತನಾಗಿ ಶುದ್ಧನೆನಿಸಿರ್ಕ್ಕುಮಿಂತೀ ಸ್ಥಾನಂಗಳೆಲ್ಲರ್ಪ ಸಮಸ್ತ ಮೇಘಾಶ್ರಯಂಗಳಲ್ಲಿಯುಂ, ತತ್ತದ್ವಾಸಿಗಳ ಪುಣ್ಯದಿಂ ಲಬ್ಧವಾದ ದಿವ್ಯ ರತ್ನಾಭರಣ ದ್ಯುತಿಗಳಲ್ಲಿ ವಿಷಯಂಗಳು ತೋರ್ಪವಲ್ಲದೆ ತತ್ಪ್ರಕಾಶಕ್ಕಾಗಿಸೂರ್ಯಾದಿ ದೀಪ್ತಿಗಳಪೇಕ್ಷೆಯಿಲ್ಲೆಂದರಿಯಲ್ವೇಳ್ಕುಂ.

### ಏಕಾದಶ ರುದ್ರಗಣಾದಿ ಸ್ಥಾನಂಗಳು.

ಬಳಿಕಲ್ಲಿಂದ ಹತ್ತುಸಾವಿರ ಯೋಜನದಮೇಲೆ ಹತ್ತನೇಮಾರುತಾಧಾರವಿಮಾನಸ್ಥಾನವೆನಿಸುವ ಸೂರ್ಯನ ಭುವರ್ಲೋಕವಿಹುದಲ್ಲಿಮಹೇಶ್ವರನ ಮಾನಸೋದ್ಭವರಾದ ವೀರಭದ್ರ, ಶಂಭು, ಗಿರೀಶ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿಸ್ಥಾಣು, ಪಶುಪತಿ, ಭವ, ಉಗ್ರ, ತ್ರಿವೃತ್ಪತಿಗಳೆಂಬೇಕಾದಶ ರುದ್ರರು ಪೂಜ್ಯರಾಗಿರ್ಪರಲ್ಲಿಯೇ ಧಾತ್ರಾದಿ ಪ್ರಭಾವಾಂತವಾದಷ್ಟವಸುಗಳುಂ ದ್ವಾದಶಾದಿತ್ಯರೊಮ್ಮೆ ದಲಾದಪರೆಲ್ಲಂ ಶೋಭಿಸುತಿರ್ಕ್ಕುಂ.

### ಸೂರ್ಯರಥ ಪರಿಮಾಣಗತಿ ಸ್ಥಿತ್ಯಾದಿಗಳು.

ಬಳಿಕಾಸ್ಥಾನವೀಭೂಲೋಕಕ್ಕೆ ಒಂದುಲಕ್ಷ ಯೋಜನಪರಿಮಾಣಮಹುದಲ್ಲಿ ಭುವರ್ಲೋಕಾಧೀಶ್ವರನಾದ ಸೂರ್ಯನು ರಥಾರೂಢನಾಗಿ ಮಹಾಮೇರುಪರ್ವತಮಂ ಪ್ರದಕ್ಷಿಣವಾಗಿ ಭೂಲೋಕದ ದಿವಾರಾತ್ರಿಗಳಂ ನಡಿಸುತಿರ್ಪ ನಾತನರಥಕ್ಕೆ ಗಾಲಿಯೊಂದೆ ೩೦೦೦೧ ಯೋಜನಪಗಲ ಪದರನೇಮಿಯೊಂದೇಸಾವಿರ ಯೋಜನ ವಿಶಾಲವದಕ್ಕೈದು ಮೊಳೆಗಳಿರ್ಪವದು ಸಾವಿರ ಯೋಜನದ ಮಂದವದು ತಿರುಗುವ ಮಧ್ಯದಲ್ಲಿ ಹತ್ತುಸಾವಿರ ಯೋಜನದಳತೆಯ ವಜ್ರವೇದಿಕೆ ಯುಂಟಾಗಲಿ ಪೂರ್ವೋಕ್ತಭೂಮಿಯ ಲೋಕಾಲೋಕ ಪರ್ವತದ ಮೇಲಾಳುವೇರಿ ತಿರುಗುವಂತ ಚರಿಸಿ ಬರುತ್ತಿಹುದದರ ನಾಭಿಯೊಳ್ ಪ್ರವೇಶಿಸಿದ ವಜ್ರಮಯವಾದಚ್ಚು ಹದಿನಾಲ್ಕು

ಕೋಟಿಯೋಜನನೀಳವಾಗಿಹುದದರ ಚತುರಶ್ರಮುಂಟೆಂಟು ಸಾವಿರ ಯೋಜನ ಪರಿಮಾಣವಹುದು ಗುಣಗತ್ತರಿಯಾಕಾರದಿಂ ಮೇರುವಿನತಿ ರುಗುಣಿಯುಶಂಖಕ್ಕೆ ಸೇರಿಸಿಹುದಾ ಅಚ್ಚಿನಮೇಲೆ ವಿಶಾಲವಾದೆರಡುಸಾವಿರಯೋಜನದಷ್ಟುದಹ ಅಗೆಯ ಮೇಲೆ ಅಚ್ಚಿನಮಧ್ಯದಲ್ಲಿ ವಿಶ್ವಕರ್ಮನಿರ್ಮಿತವಪ್ಪ ಮಹಾವಿಶಾಲೋನ್ನತವಾದ ವಿಮಾನವು ರತ್ನಮಯಸ್ತಂಭಂಗಳಿಂ ಪತಾಕಾದಿ ವಿಚಿತ್ರರಚನೆಗಳಿಂ ಸಿಂಗರಂಬೆತ್ತು ಕಣ್ಗೊಪ್ಪುಗಿಸುತ್ತಿಹುದದರಮಧ್ಯದಲ್ಲಿಕನಕರತ್ನಮಯಮಹದಿವ್ಯಸಿಂಹಾಸನಾಗ್ರದೊಳಾಸೂರ್ಯನು.

ರವಿಕಲಾಕಿರಣಾದಿಗಳು.

ತಪನಿ। ತಾಪನಿ। ಧೂಮ್ರೀ। ಮರೀಚಿ। ಜ್ವಾಲಿನಿ। ರುಚಿ। ಸುಷುಮ್ನ। ಭೋಗದೆ। ವಿಶ್ವಬೋಧಿನಿ। ಧರಣಿ। ಕ್ಷಮೆ। ಪ್ರಭೆಯೆಂಬ । ದ್ವಾದಶಕಲಾವೃತನಾಗಿ। ಹಿಮಕಿರಣಮುನ್ನೂರಮೂವತ್ತುಮೂರು। ಉಷ್ಣಕಿರಣಮು ನ್ನೂರಮೂವತ್ತುಮೂರು। ವರ್ಷಕಿರಣಮುನ್ನೂರಮೂವತ್ತುಮೂರು ಬೀಜಭೂತವೊಂದಂತು। ಸಹಸ್ರಕರನೆನಿಸಿ। ಲೋಕಪ್ರಕಾಶಕನಾಗಿ। ಹಿರಣ್ಮಯಕೇಶಮುಖಲೋಚನಂಗಳಿಂ। ಕಪಿಲಾದಿಕೇಶಿ ದಿವ್ಯ ಜಟಾರಚ್ಛಗಳಿಂ ಕಿರೀಟ। ಕೇಯೂರಕಂಕಣಕುಂಡಲಾದ್ಯಾಭರಣವಸ್ತ್ರ। ಗಂಧಮಾಲ್ಯಾದಿಗಳಿಂ। ದಲಂಕೃತವಾದ। ಸಿಂದೂರವರ್ಣದೊಂಭತ್ತುಸಾವಿರ। ಯೋಜನದೀರ್ಘ ಶರೀರದಿಂ। ದಿಪ್ಪತ್ತೇಳುಸಾವಿರ। ಯೋಜನಪರಿಮಾಣದಿಂದೆಸೆದಿರ್ಪಂ। ಮತ್ತಮಾಸೂರ್ಯನರಥದ ಡಂಗುರದಿಯೋಗಾದ। ಮಧ್ಯದಲೊಂದುಕುದುರೆ ಆನೊಗದೆಡಬಲದಕಡೆಯಲ್ಲಿ ಮೂರುಮೂರು। ಕುದುರೆಯಂತೇಳುಮಾರು ಮಕುದುರೆಗಳು। ಸಪ್ತಸರ್ಪರಜ್ಜುಗಳಂ।ಬಿಗಿದುಕಾಲಾಲಿಕಪ್ರಭ್ರಮಣದಂತೆ। ಪ್ರದಕ್ಷಿಣವಾಗಿತಿರುಗಿ। ಬರುತಿರ್ಪಾರಥವು। ಕ್ಷಣವೊಂದಕ್ಕೆ। ಇಪ್ಪತ್ತೊಂದುಸಾವಿರ। ದಾರುನೂರುಯೋಜನಂ। ನಡೆವುದು।ಘಳಿಗೆಯೊಂದಕ್ಕೆ। ಇಪ್ಪತ್ತೇಳುಲಕ್ಷದಮೇಲೆ ಇಪ್ಪತ್ತುಸಾವಿರ। ಯೋಜನಂನಡೆವುದು।ನಿಮೇಷಾರ್ಧಕ್ಕೆ। ಯೆರಡುಸಾವಿರ। ದಿನ್ನೂರ-ಯೋಜನಂ। ನಡೆವುದಿಂತು। ಪಗಲೊಂದರಲ್ಲಿ ನಿರಾಲಂಬಗಗನದೊಳು.

ಅಹೋರಾತ್ರಕಲ್ಪನೆ.

ಪೂರ್ವಾದ್ರಿಯಿಂ ಪಶ್ಚಿಮಾದ್ರಿಗೈದಲಾಮೇರು ಪರ್ವತಂಗಳ ಪಶ್ಚಿಮ ತೊಡಗಿ ಪೂರ್ವಾಂತದಿಗ್ಭಾಗವೆಲ್ಲ ಕತ್ತಲೆ ಗವಿದು ರಾತ್ರಿಯಾಗಿರಲು ಬಳಿಕ ಮೇರುವಿನುತ್ತರಭಾಗವೆಲ್ಲಂ ಬೆಳಗಾಗಿ ಹಗಲಹುದಿಂತು ನಡೆಪಲ್ಲ ಪೂರ್ವಾ

ದ್ರಿಗ್ವೃದಲಾ ಮೇರುಪರ್ವತೆಯಾಗಿಪೂರ್ವಾದಿ ಪಶ್ಚಿಮಗಡೆ ಯಾದುತ್ತರಭಾಗವೆಲ್ಲಂ ಕತ್ತಲೆಸುಸುಂಕೆ ರಾತ್ರಿಯಹುದೀದಕ್ಷಿಣ ಭಾಗವೆಲ್ಲಂ ಬೆಳಗಾಗಿ ಮೊದಲಂತೆ ದಗಲಕ್ಕು.

ಅಹೋರಾತ್ರಿಸಂಧ್ಯಾಸ್ವರೂಪ.

ಬಳಿಕಿಲ್ಲಿ ಪಗಲಿರುಳನ ಸ್ವರೂಪವಾವುದೆನೆ ಪ್ರಥಮ ಸೃಷ್ಟಿಯಿಲ್ಲಿಪಿತಾಮಹನು ತಮೋಮಯವಾದ ದೇಹವಂಧರಿಸಿ ರಾಕ್ಷಸರಂ ನಿರ್ಮಿಸಿ ದೇಹವುಂ ಬಿಡದೇ ಮರ್ತ್ಯಗೆ ರಾತ್ರಿಯಾಯಿತು ಬಳಿಕಾಬ್ರಹ್ಮನು ಸತ್ವಮಯಶರೀರವುಂ ತಿಳಿದು ದೇವತೆಗಳಂ ಸೃಜಿಸಿ ಈ ಶರೀರವುಂ ಬಿಡಲದೇಮರ್ತ್ಯಗೆ ದಿನಾಸ್ವರೂಪವಾಯಿತು ಮತ್ತಮಾ ಚತುರ್ಮುಖನು ಸಾತ್ವಿಕತಾಮಸ ತನುವಂ ಸ್ವೀಕರಿಸಿ ಪಿತೃಗಳಂ ಪಡದಾತನುವಂ ಬಿಡಲದೇಮಾನುಜರ್ಗೆ ಪಗಲಸಂಧ್ಯಾಸ್ವರೂಪವಾಯಿತು ಮತ್ತಮಾಕಮಲಜನು ರಾಜಸ ತಾಮಸತನುಮಂ ಕೈಕೊಂಡು ನರರಂ ಕಲ್ಪಿಸಿ ತನುವಂ ಬಿಡಲದೇನರರ್ಗೆ ರಾತ್ರಿಯಸಂಧ್ಯಾಸ್ವರೂಪವಾಯಿತು ಮತ್ತಮಾಕಮಲಜನು ಸಾತ್ವೀಕರಾಜಸ ತನುವಂ ಕೈಕೊಂಡು ಗೋವುಗಳಂ ಸೃಜಿಸಿ ಯಾದೇಹವುಂ ತ್ಯಜಿಸಲದೇ ಮಧ್ಯಾಹ್ನ ಸಂಧ್ಯೆಯಾಯಿತು ಬಳಿಕಾ ಬ್ರಹ್ಮನು ತ್ರಿಗುಣತನುವಂ ಕೈಕೊಂಡು ಸಸ್ಯಾದಿ ಬೀಜಗಳಂ ಸೃಜಿಸಿ ಯಾವಲಂಬಿಡಲದೇ ಮಧ್ಯನಿಶಿ ಯಾಯಿತೀಪ್ರಕಾರವಾದ ದಿವಾರಾತ್ರಗಳಂ ನಡಿಸುತ್ತಿಹನಾಸೂರ್ಯನು.

ರವಿಗತಿ ವಿಘ್ನನಿವೃತ್ತಿ.

ಬಳಿಕಾಸೂರ್ಯನ ಚಕ್ರಗತಿ ಗಿಡ್ಡವಾಗಿ ಜಪ್ಪ ಮಾಡೆ ಹರೆಂಬ ರಾಕ್ಷಸನಿಕರವುಂ ಪರಿಹರಿಸುತ್ತ ಸಂಚರಿಸಲಾಗುವ ಘಳಿಗೆ ದಿನಪಕ್ಷಮಾಸಂವತ್ಸರ ಯುಗಂಗಳಲಕ್ಷಣವುಂ ಮುಂದೆಪೇಳ್ವೆನಾ ಸೂರ್ಯನು ತಿರುಗುವಲ್ಲಿ ಚೈತ್ರಾದಿ ಮಾಸಂಗಳೊಳಗೆ ಕ್ರಮದಿಂ ದೊಬ್ಬೊಬ್ಬ ರಧಿಪತಿಗಳಾಗಿ ಯಾರಥಸಿಂಹಾಸನವನೇರಿ ಚರಿಸುವದ್ವಾದಶಾದಿತ್ಯರ ನವರಸಹಚರ ನಾಮಧೇಯ ಕ್ರಮವರ್ಣನವಂ ತಿಳಿಯಲೆಂತ್ರನೆ.

ದ್ವಾದಶಾದಿತ್ಯರು ಅವರ ಪರಿವಾರ.

ಧಾತಾ-ಅರ್ಯಮಾ-ಮಿತ್ರ--ವರುಣ-ಇಂದ್ರ-ವಿವಸ್ವಾನ್-ಪರ್ಜನ್ಯ-ಪೂಷ-ಅಂಶುಮಾನ್-ಗಭಸ್ತಿಮಾನ್-ತ್ವಷ್ಟ್ರ-ವಿಷ್ಣುಗಳೆಂಬವರೇ-ಕ್ರಮದಿಂ ದ್ವಾದಶಾದಿತ್ಯರು ಪುಲಸ್ತ್ಯ-ಪುಲಹ-ವಸಿಷ್ಟ-ಅಂಗೀರಸ-ಭೃಗು-ಭರದ್ವಾ

ಜ-ಗೌತಮ-ಕಶ್ಯಪ-ದಕ್ಷ-ಕ್ರತು-ಜಮದಗ್ನಿ-ಕೌಶಿಕರೆಂಬೀದ್ವಾದಶಋಷಿಗಳ್-ಕ್ರಮದಿಂದವರವರಂ ಕೀರ್ತಿಸುವರು, ವಾಸುಕಿ-ಕಂಕನೀರ-ತಕ್ಷಕ-ನಾಗ-ಇಳಾಪುತ್ರ-ಶಂಖಪಾಲ-ಐರಾವತ-ಧನಂಜಯ-ಮಹಾಪದ್ಮ-ಕರ್ಕೋಟಕ-ಕಂಬಳ-ಅಶ್ವತರರೆಂಬ-ದ್ವಾದಶ ಸರ್ಪಂಗಳ್ ಪರಿಪಿಡಿಪಾಪಾಬಿ ಬಂಧನಾಧಿಕಾರಿಗಳು, ತುಂಬುರ--ನಾರದ-ಹಾಹಾ-ಹೂಹೂ-ವಿಶ್ವಾವಸು-ಉಗ್ರಸೇನ-ವಸುರುಚಿ--ಸರ್ವಾವಸು-ಚಿತ್ರಸೇನ-ಊರ್ಣಾಹ-ಧೃತರಾಷ್ಟ್ರ-ಸೂರ್ಯವರ್ಚರೆಂಬ ದ್ವಾದಶಗಂಧರ್ವರ್ ಪರಿವಾಟಿಯಿಂ ಪಾಡುವರು, ಕೃತಸ್ಥಲಿ-ಪುಂಜಕಸ್ಥಲಿ--ಮೇನಕೆ--ಸಹಜನ್ಯೆ-ಪ್ರಮೋಚಂತಿ-ವಿಶ್ವಾಚಿ-ಘೃತಾಚಿ-ಊರ್ವಶಿ-ಪೂರ್ವಚಿತ್ತಿ-ತಿಲೋತ್ತಮೆ-ರಂಭೆ-ಭದ್ರೆಯರೆಂಬ ದ್ವಾದಶಾಪ್ಸರಸ್ತ್ರೀಯರು ಕ್ರಮದಿಂ ನರ್ತನವಂ ಮಾಳ್ಪರು, ರಥಭೃತ್-ರಥಜ-ರಥಚಿತ್ರ-ರಥಾಶ್ವ-ಅರುಣ-ಸುಷೇಣ-ಸೇನಜಿತ್, ತಾರ್ಕ್ಷ್ಯ-ವೃತ್ತ-ಅರಿಷ್ಟನೇಮಿ-ರುತಜಿತ್-ಸತ್ಯಜಿತ್ತುಗಳೆಂಬ-ದ್ವಾದಶಗ್ರಾಮಿಗಳ್-ಪರಿಕ್ರಮದಿಂ-ಸಾರಥಿಗಳು-ಪ್ರಹೇತಿ-ಪೌರುಷೇಯ-ವಧ--ದರ್ಪ-ವ್ಯಾಘ್ರ-ಕ್ರೂರ-ಆಪಸ್ಸ-ವಾತ-ವಿದ್ಯುತ್-ದಿವಾಕರ-ಬ್ರಹ್ಮೋಪೇತ-ಯಜ್ಞೋಪೇತರೆಂಬ-ದ್ವಾದಶ-ರಾಕ್ಷಸರ್ ಕ್ರಮದಿಂದವರ-ವ್ಯೃಗಾವಳವರ್-ಅಂಗುಷ್ಠಮಾತ್ರ-ಸೂರ್ಯ-ಕರಣಂಗಳಂ-ಸೇವಿಸುವ-ಗೋಪಿನಪಾದಾಂಕಿತಸ್ಥಳದ-ಪರಮ-ಪವಿತ್ರೋದಕದಿಂ-ಸ್ನಾನ ಪಾನಾದಿಗಳುಳ್ಳ-ಮಹಾಋಷೀಶ್ವರರಾದ-ಅರವತ್ತುಸಾವಿರವಾಲಖಿಲ್ಯರು-ಕ್ರಮದಿಂ ದ್ವಾದಶಾದಿತ್ಯರ-ಸಭಾಸದರು-ಮೇಲಿದ್ರನು-ಪ್ರಹವೆಂಬ-ವಾಯುರಜ್ಜುವಿನಿಂ, ಹಿಡಿದಾರಥವುಂ-ನಡಸುತಿರ್ಪನೆಂಬುದೆ-ಸೂರ್ಯಸಿದ್ಧಾಂತವಾಕ್ಯಂ.

## ಸಪರಿವಾರ ಚಂದ್ರಮಂಡಲ ಕಲಾದಿಗಳು.

ಬಳಿಕ ಸೂರ್ಯನಿಂಮೇಲೊಂದು ಲಕ್ಷಯೋಜನಾಂತರದಲ್ಲಿ ಪಿತೃಲೋಕವಾಸಿಗಳಾದ ಕ್ರತು, ದಕ್ಷ, ವಯಸ್ಸು, ಸತ್ಯ, ಕಾಮ, ದ್ಯುಮತ್, ಕಾಲಧುನಿ, ರುಚಿಕ, ಪುರೂರವ, ಆದ್ರ್ರವ, ವಸು, ವಿಲೋಚನವೆಂಬ ವಿಶ್ವೇದೇವರ್ಕಳೊಡನೆಯುಂ ಅಗ್ನಿಷ್ವಾತ್ತ ಪಿತೃವರ್ಗ ಮೊದಲಾದ ಪಿತೃದೇವತೆಗಳೊಡನೆಯುಂ ಕೂಡಿರ್ಪಚಂದ್ರನಾದೊಡೆ ಅಮೃತ ಮಾನದ ಪೂಷ-ತುಷ್ಟಿ-ಪುಷ್ಟಿ-ರತಿ-ಧೃತಿ-ಶಶಿನಿ-ಚಂದ್ರಿಕೆ-ಕಾಂತಿ-ಜ್ಯೋತ್ಸ್ನೆ-ಶ್ರೀ-ಅಂಗದೆ-ಪೂರ್ಣೆ-ಅಮೃತೆ-ಕಾಮದಾಯಿನಿಯೆಂ-ಷೋಡಶಕಲೆಗಳಿಂ-ಭರಿತನ,ಗಿ-ಧವಳವರ್ಣಮಯಶರೀರದಿಂ ಸಕಲೋಷಧೀಶ್ವರನಾಗಿ ರಂಜಿಸುತ್ತಿರ್ಪ

ನಾಥನ ರಥಕ್ಕೆ । ರಜತದ ಮೂರು ಘಾಲಿ । ಮೂವತ್ತು ಮೊಳ । ಹತ್ತು ಬಿಳೀ ಕುದುರೆ । ಸ್ಫಟಿಕ ರಜತಮಯವಾಗಿರ್ಪ ರಥಮಾದೊಡೆ ಸೂರ್ಯನ ವಿಮಾನಕ್ಕೆ ದ್ವಿಗುಣ ವಹುದಾ ಪುಷ್ಪಕಾರೂಢನಾದ ಚಂದ್ರಕಿರಣಂಗಳ ಅಮೃತಮಂ ಕೃಷ್ಣಪಕ್ಷದ ಪಾಡ್ಯಮೊದಲಮಾವಾಸ್ಯೆಪರ್ಯಂತಮಾಗಿ ಅಗ್ನಿಮುಖ್ಯ ಸಕಲದೇವತೆಗಳುಂ ಪಿತೃಗಣಂಗಳುಂ ಪಾನವಂ ಮಾಡೆ ಕ್ಷಯಮಾದ ಕಲೆಗಳಂ ಸೂರ್ಯನು ತನ್ನ ಸುಷುಮ್ನೆಯೆಂಬ ಕಿರಣಸೂತ್ರದಿಂ ಚಂದ್ರಮನಂ ಶುಕ್ಲಪಕ್ಷದ ಪಾಡ್ಯಂ ಮೊದಲು ಹುಣ್ಣಿಮೆಪರ್ಯಂತರಂದಿನದಿನಕ್ಕೆವರ್ಧಿಸ ತ್ತಿಹನು ।ಮೇಲಾಚಂದ್ರನಪಥಮಂಧ್ರುವನು ಸಂವಹನೆಂಬ ವಾಯುರಜ್ಜುವಿನಿಂ ಪಿಡಿದು ನಡೆಸುತ್ತಿರ್ಪಂ ॥ *

—* ನಕ್ಷತ್ರಮಂಡಲ.*—

ಬಳಿಕಾ ಚಂದ್ರನಿಂ ಮೊದಲೊಂದು ಲಕ್ಷಯೋಜನಾಂತರದಲ್ಲಿ ಮೊಲ್ಲೆಯ ಹುವ್ವಿನಂತೆ ಬಿಳಿದಾದ । ಚಂದ್ರನಂತೆ ಕಾಂತಿಮಯಮಾದ । ಮುತ್ತಿನಂತುರುಟಾಗಿ ತೋರ್ಪ ನವನೀತದಂತೆ ಲಲಿತಮಾದ ಹೇಮಘಟಿಕೆಯಂತೆ ಖನೀಭವಿಸಿರ್ಪ ಪುಷ್ಪಕಾರೂಢ ಜ್ಯೋತಿರ್ಮಯ ನಕ್ಷತ್ರಮಂಡಲಮಂ ಮೇಲೆ ಧ್ರುವನು । ನಿವಹನೆಂಬ ವಾಯುಸೂತ್ರದಿಂ ಬಿಡದೆ ನಡಿಸುತಿರ್ಪಂ ॥ *

—* ಕುಜಾದಿ ಪಂಚ ಗ್ರಹಂಗಳು. *—

ಬಳಿಕಾ ನಕ್ಷತ್ರ ಮಂಡಲದಿಂ ಮೇಲೆರಡು ಲಕ್ಷಯೋಜನಾಂತರದಲ್ಲಿ ಪದ್ಮರಾಗರುಚಿರನಿವಹಕಾಂತಿಯುಳ್ಳತೀಕ್ಷ್ಣಪ್ರಭಾವನಾದ। ಭೂಪುತ್ರ । ವಕ್ರ । ರುಧಿರ । ಕ್ರೂರನೃಕ್ಕುಗಳೆಂಬ ನಾಮಂಗಳಿಂ ಮಂಗಳಗ್ರಹನಿರ್ಪನಾತಂಗೆ ಪವಳದ ವಿಮಾನಮದಕ್ಕೆ ಪವಳದ ಘಾಲಿ ನಾಲ್ಕು ಯೆಂಟು ಕುದುರೆಗಳಕ್ಕುಂ ॥ ಬಳಿಕಾಮಂಗಳನಿಂ ಮೇಲೆರಡು ಲಕ್ಷ ಯೋಜನಾಂತರದಲ್ಲಿ ಕುಂಕುಮಾದ ಮುಖದಿಂ ಶುಕಪಿಂಛಛವಿಯಿಂ ಬೆಳಗುವ ಬುಧನಿಹನಾತಂಗೆ ರತ್ನದ ವಿಮಾನಮದಕ್ಕೆ ಪಚ್ಚೆಯಘಾಲಿ ನಾಲ್ಕು ಪಿಂಗಳವರ್ಣದ ಪತ್ತು ಕುದುರೆಗಳಕ್ಕುಂ ॥ಬಳಿಕ ಬುಧನಿಂ ಮೇಲೆರಡು ಲಕ್ಷಯೋಜನಾಂತರದಲ್ಲಿ ತಪ್ತಕಾಂಚನವರ್ಣನ ಬೃಹಸ್ಪತಿಯಿಹ ನಾತಂಗೆ ಸುವರ್ಣದ ರಥಕ್ಕೆ ಮಾಣಿಕ್ಯದ ಘಾಲಿ ನಾಲ್ಕು ಕುಂಕುಮವರ್ಣದ ಕುದುರೆಗಳೆಂಟಕ್ಕುಂ ॥ ಬಳಿಕಾ ಬೃಹಸ್ಪತಿಯಿಂ ಮೇಲೆರಡು ಲಕ್ಷಯೋಜನಾಂತರದಲ್ಲಿ ಕುಂದವರ್ಣದ ಶುಕ್ರನಿಹನಾತಂಗೆ ರಜತದ ವಿಮಾನಕ್ಕೆವೈಡೂರ್ಯ

ಘಾಲಿನಾಲ್ಕು ಚಿತ್ರವರ್ಣದ ಹತ್ತು ಕುದುರೆಗಳಕ್ಕುಂ ॥ ಬಳಿಕಾ ಶುಕ್ರ ನಿಂ ಮೇಲೆರಡು ಲಕ್ಷಯೋಜನಾಂತರದಲ್ಲಿ ಭಿನ್ನಾಂಜನವರ್ಣ. ಕ್ರೋಧ ದೃಷ್ಟಿ ಭಯಂಕರಮೂರ್ತಿಯಾದ ಶನೈಶ್ಚರನಿಹತನ ಕಾರ್ಬೊಣದ ವಿ ಮಾನಕ್ಕೆ ನೀಲದ ಘಾಲಿ ನಾಲ್ಕು ಕೃಷ್ಣವರ್ಣದ ಎಂಟು ಕುದುರೆ ಗಳಕ್ಕುಂ ॥

—* ರಾಹುಕೇತುಗಳು. *—

ಬಳಿಕೀ ಮಂಗಳಾದಿ ಪಂಚಗ್ರಹಂಗಳಂ ಮೇಲೆ ಧ್ರುವನು ಪರಾಹ ವೆಂಬ ವಾಯುರಜ್ಜುವಂ ಪಿಡಿದು ರುಜುವಕ್ರಗತಿಗಳಾಗಿ ನಡಿಸುತಿರ್ಪಂ। ಬಳಿಕ ಶನೈಶ್ಚರ ಮಂಡಲದಲ್ಲಿಯೇ ಕ್ರಮದಿಂದಂಜನವರ್ಣದ ರಾಹುಕೇ ತುಗಳಿಹವದಕ್ಕೆ ಉಕ್ಕಿನ ರಥ ವದಕ್ಕೆ ವಜ್ರದ ಗಾಲಿಗಳೆಂಟು ಕುದುರೆಗ ಳೆಂಟಾರಾಹುಕೇತುಗಳೆರಡನು ಮೇಲೆ ಧ್ರುವನು ಪರಿವಹವೆಂಬ ವಾಯು ಸೂತ್ರದಿಂ ಪಿಡಿದು ನಡಿಸುತಿರ್ಪಂ ॥

—* ಗ್ರಹಮಂಡಲಪರಿಮಾಣ. *—

ಬಳಿಕಾ ದಿವ್ಯದೇಹಾನ್ವಿತರಾದ ಸಮಸ್ತ ಗ್ರಹಂಗಳೊಳಗೆ ಮೊದಲು ಪೇಳ್ದ ಸೂರ್ಯಮಂಡಲಕಿಂಮುಡಿ ಚಂದ್ರಮಂಡಲ ಮವರೀರ್ವರ ಸಮಾನ ವೇ ರಾಹುಮಂಡಲವಾ ಚಂದ್ರನ ಷೋಡಶಾಂಶವೇ । ಶುಕ್ರಮಂಡಲಂ ಶು ಕ್ರನ ನಾಲ್ಕು ಭಾಗದಲೊಂದು ಭಾಗಹೀನವಾದುದೇ । ಬೃಹಸ್ಪತಿಮಂ ಡಲವಾ ಬೃಹಸ್ಪತಿನಾಲ್ಕಂಶದೊಳೊಂದಂಶ ಹೀನವಾದುದೇ ಶನಿಮಂಡಲ ವದರ ಸಮಾನವೇ।ಮಂಗಳಮಂಡಲವದರನಾಲ್ಕುಭಾಗದೊಳೊಂದುಭಾಗ ಹೀನವಾದುದೇ । ಬುಧನಮಂಡಲವಾಬುಧನಿಗೆಸಮಾನವಾದುಳಿದನಕ್ಷ ತ್ರಂಗಳೊಳಗೆ ನೂರುಯೋಜನ ಪಂಬತ್ತು ಯೋಜನ ಪೈವತ್ತು ಯೋಜನವಗಲದ ಮಂಡಲವಂಗಳುಳ್ಳ ವದಕೆ ಕಡಮೆಯಾದ ನಕ್ಷತ್ರಂಗ ಳಿಲ್ಲವೆಂದು ಕಾಣಲ್ಪೇಳ್ಕುಂ ॥ *

—* ಸೂರ್ಯಚಂದ್ರ ಗ್ರಹಣಂಗಳು. *—

ಬಳಿಕಾ ಗ್ರಹಂಗಳ ಮಧ್ಯದಲ್ಲಿ ಚಂದ್ರಸೂರ್ಯ ಗ್ರಹಣಗಳಹುದದೆಂ ತೆನೆ । ಆವ ಸಂವತ್ಸರದಲ್ಲಾದರೂ ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಮೇ ಷಾದಿ ಹನ್ನೆರಡು ರಾಶಿಗಳೊಳಗಂ ಚಂದ್ರಸೂರ್ಯರಿದ್ದ ರಾಶಿಗೆ ರಾಹು ಕೇತುಗಳ ಯೋಗವಾದೊಡೆ । ಆಯಾಯ ಗ್ರಹಣಂಗಳಪ್ಪುವಾರಾಶಿಗ ಳಲ್ಲಿ ವರ್ತಿಸುತ್ತಿರ್ದ ಅಶ್ವಿನಿ ಮೊದಲಾದ ನಕ್ಷತ್ರಂಗಳ । ಒಂದು ಪಾದ ।

ವೆರಡು ಪಾದ । ಮೂರು ಪಾದ । ನಾಲ್ಕು ಪಾದ । ಕ್ರಮದಿಂ ದೊಂದೊಂದಂಶಗ್ರಹಣ । ಮೆರಡಂಶಗ್ರಹಣ । ಮೂರಂಶಗ್ರಹಣ । ನಾಲ್ಕಂಶಗ್ರಹಣಮಹುದೆಂದು ನಿಶ್ಚಿತಮಕ್ಕುಂ ॥

—* ಜ್ಯೋತಿಶ್ಚಕ್ರರಹಸ್ಯ. *—

ಇಳಿಕೆಂತು ಪೂರ್ವೋಕ್ತಮಾದ ಜ್ಯೋತಿರ್ವಿಷಯಮೆಲ್ಲವುಂ ಪುರಾಣಪ್ರಸಿದ್ಧಮಾಗಿರ್ಪುದರಿಂದಂ ಕಲ್ಪಾಂತರವಿಷಯಮಾಗಿಯುಂ । ಭಾವನಾಂತರಗೋಚರಮಾಗಿಯುಂ । ಅಧಿಕಾರ್ಯಂತರನಿರ್ದಿಷ್ಟಮಾಗಿಯುಂ ತತ್ತದ್ಗ್ರಾಹಕಸಾಮಗ್ರೀನಿದರ್ಶನವಿಲ್ಲದಿರಲ್ಕೆ ತದ್ವಿಚಾರಕರಾದ ಮಹರ್ಷಿಗಳೊಳಗುಂ । ತರ್ವಾಣಿ ಭೇದಂಗಳನ್ನೇಕಮುಂಟಾಗಿಬೇರೆಬೇರೆ ತರಗಳಿಂದದನಭಿವರ್ಣಿಸೆ ಭಾವಜ್ಞರಿಗದು ಸಮರಸಮಾದರುಂ । ಜಿಜ್ಞಾಸುಗಳಾದ ಪ್ರಥಮಾಧಿಕಾರಿಗಳಿಗೆ ಸಂಶಯಂ ನಿವೃತ್ತಿಯಾಗದಿರಲು ವ್ಯಾವಹಾರಿಕದೊಳಗುಂ । ಪ್ರತ್ಯಕ್ಷಾನುಭವದಿಂದೂಹಿಸಲಕ್ಕುಮದರೊಳು ।

—* ಜ್ಯೋತಿಷ್ಕವಿಕಲ್ಪಗಳು. *—

ಜ್ಯೋತಿಷ್ಕರಾದ ಕೆಲವರಾ ಸೂರ್ಯನೊಂದೇಕಡೆ ಸ್ತಂಭದ ದೀವಿಗೆಯಂತೆ ಮೇರುವಂ ಬಿಡದಿರಲಾತನ ಕಿರಣಂಗಳಲ್ಲಿ ಸೂಜಿಗಲ್ಲು ಕಬ್ಬಿಣವಂ ಸೆಳೆದಂತೆ ಧರಣಿಯಂ ಸೆಳೆಯಲುಳ್ಳ ಸಾಮರ್ಥ್ಯವು ಸಹಜಮಾಗಿರಲು ಗಗನಾಂಕಣ ಸಮುಪರಿವರ್ತಿಯಾದ ಮಾರುತನಿಂ ಸಮವೃತ್ತಗೋಳರೂಪಮಾದೀಧರಣಿಯಾಸೂರ್ಯಂಗೆ ಪ್ರದಕ್ಷಿಣಾಕಾರಮಾಗಿ ನೌಕಾದೃಷ್ಟಾಂತದಿಂ ಕಡಲಿನೊಳ್ ನಡೆಯಲದು ರಥಯಾಯಿಂಗೆ ತೀರತರುಗಳು ಗಮಿಸುವ ಬಗೆ ತೋರಿದಂತೆ ಸೂರ್ಯನೊಳಧ್ಯಸ್ತಮಾಗಿ ರವಿಸಂಚಾರಕಲ್ಪ್ಯಮಾದಾರವಿಯು ಚಂದ್ರಾದಿ ಗ್ರಹಗಳಂ ಪ್ರದಕ್ಷಿಣನಿವೃತ್ತಿಗಳುಳ್ಳ ಸೇವೆಗೈಸೆ ರವಿಚಂದ್ರರ ಮಧ್ಯದೊಳ್ಬಗುವ ಭೂಮಿಗೋಳದ ನೆರಳು ತಮೋನಾಮದಿಂ ರವಿಚಂದ್ರರಿಗಡ್ಡಮಾಲದೇ ಗ್ರಹಣಮೆನ್ನಲ್ಪಡುವದಲ್ಲದೆ ಕಾರಣಾಂತರ ಮಿಲ್ಲೆಂದವರವರುಂ ತಿಳಿಯಲ್ । ಗಂಧಕ । ತಾಳಕ । ಲವಣಾಕ್ಷಾರ । ರಸಗಳ ಸಂಯೋಗವೈಚಿತ್ರ್ಯದಿಂ ಕಲ್ಪಿತಂಗಳಾದ ದ್ರಾವಕಾದಿ ಸಾಧನಂಗಳಂ ಕೊಂಡು । ನಳಿಕಾಬಂಧ । ಧೂಮಬಂಧ । ಶಕಟಬಂಧ । ಜಲಬಂಧಗಳಂ ಕಲ್ಪಿಸಿ । ದರ್ಪಣಾದಿ ಸಾಮಗ್ರಿಗಳಂ । ಪರ್ವತಪರಿಮಾಣ । ಸಮುದ್ರಪರಿಮಾಣ । ಶಿಲಾಸೇತುಸೋಪಾನಂಗಳಂ ದೃಷ್ಟಾಂತಗೊಳಿಸಿ ದರ್ಪಣವಿಕಾರದಿಂ ಕಾಣಲ್ಪಡುವ ಉಪಗ್ರಹಂಗಳ ಸನ್ನಿವೇಶದೊಳಿರ್ಪಂತೆ ಬೆಳಗುವ ನ

ಷತ್ರಬಿಂಬಂಗಳಂ ನಂಬಿ ಗತಿಮಾನ ಸಂಖ್ಯಾರೂಪಕ್ರಮಭ್ರಾಂತಿಯುಂ ಪಡದರುಂ ಗಣನೆಯೊಳು ಮೂರಾರರಿಂದಾರು ನೂರಾರರಿಂದೆರಡೊಂಭತ್ತರಿಂದೊಂಭತ್ತೆರಡರಿಂದೆಂತು ಪಹತಮಾದರುಂ ಹದಿನೆಂಟಿಂಬಂತೆ ಗ್ರಹಣಾದಿ ನಿದರ್ಶನಮಾದರುಂ ಕೇವಲಲೌಕಿಕರಂತೆ ಸಾಧನಂಗಳಿಲ್ಲದೆ ಶಾಸ್ತ್ರೈಕಶರಣರಾದ ಸ್ವಾಸ್ತಿಕರು ನಂಬಲ್ತಕ್ಕುದಲ್ಲಮಾಗಿ ಪ್ರಕೃತನಿದರ್ಶನಮಪ್ಪ ಸಿದ್ಧಾಂತಕ್ರಮವೇ ಸರಿಯಾಗಿರ್ಕುಂ ॥ *

—* ಗ್ರಹಗಣಿತ ಸಂಗ್ರಹ. *—

ಮತ್ತಮಾ ಖಗೋಳದೊಳು ಬುಗುರಿಯಂತೆ ಮೇಲಗಲವಾದ ಪರಿವರ್ತನಮಾರ್ಗದೊಳುಮೇರುಪ್ರದಕ್ಷಿಣಂಗೈಲಾಗ್ರಹಂಗಳು ಲಂಬಮಾನ ರಾಶಿಗಳ ರಾಟವಾಳೆಮನೆಗಳಂ ಪೊಕ್ಕುಳಿಯೆ ಕುಲಾಲಚಕ್ರಭ್ರಮಣದೊಳು ವ್ಯುತ್ಕ್ರಮವಾಗಿ ನಡೆವುತಿರ್ಪ ಹುಳದಂತೆ ಚರಿಸಲು। ಮೇಘಮಂಡಲ ಮೇಲೆ ಚಂದ್ರ । ನಾತನಮೇಲೆ ಬುಧ । ನಾತನಮೇಲೆ ಶುಕ್ರ । ನಾತನಮೇಲೆ ಸೂರ್ಯ । ನಾತನಮೇಲೆ ಮಂಗಳ । ನಾತನ ಮೇಲೆ ಗುರು । ನಾತನಮೇಲೆ ಶನಿ । ಆತನಮೇಲೆ ದಸ್ರಾದಿ ತಾರಕಂಗಳವುಗಳ ಮೇಲೆ ಧ್ರುವ । ನೀತೆರದಿಂದಿರಲು ರವಿಗೈವತ್ತೊಂಭತ್ತು ಲಿಪ್ತಿಗಳು ಮಧ್ಯಗತಿಯಾಗೆ ಚಂದ್ರಗೇಳ್ನೂರತೊಂಭತ್ತಂಗಾರಕಂಗೆಮೂವತ್ತೊಂದು।ಬುಧಂಗಿನ್ನೂರ ನಲವತ್ತೈದು । ಗುರುವಿಂಗೈದು । ಶುಕ್ರಂಗೆ ತೊಂಭತ್ತಾರು । ಶನೈಶ್ಚರಂಗೆರಡೀಮೇರೆ ಗಮನಲಿಪ್ತಿಗಳೆಂಟು । ನೂರಲಿಪ್ತಿಗಳ ಮಧ್ಯಮಾನದ ನಕ್ಷತ್ರವೇಳು । ನೂರಿಪ್ಪತ್ತು । ಮಧ್ಯಮಾನದ ತಿಥಿಯೊಳು ಛಾಯನಜೀವಾದಿ ಸಂಸ್ಕಾರಸ್ಫುಟದಿಂ ಜ್ಯಾಚಾಪವ್ಯಕ್ತಮಾಗೆ ಗ್ರಹಸ್ಥಿತಿನಿಶ್ಚಿತಮಾದ ಬಳಿಕ ಪರಬಿಂಬಮಾನಮಾಸ್ಯೈಕ್ಯಾರ್ಧಕ್ರಾಂತಿ ವಿಕ್ಷೇಪಾದಿಗಳು ವ್ಯರ್ಕೇಂದುವೇ ತಿಥಿ ಕರಣಂಗಳಾಗಿ ಸಾರ್ಕೇಂದುವೇ ಯೋಗಮೆನಿಸಿ ಶುದ್ಧೇಂದುವೇ ನಕ್ಷತ್ರಮೆನಿಸಿ ಪತ್ತು ವಿಕಲೆಗಳಂದೊಡಗೂಡಿದರವತ್ತು ನಾಡಿಗಳೇ ವಾರಮಾಗಲೀ ಪಂಚಾಂಗಕ್ರಮದಿ ಕ್ಷಯವೃದ್ಧಿಗಳು ತೋರಲಾಸರಣಿಯೊಳು ಪರ್ವಪ್ರತಿಪತ್ಸಂಧಿಗೆ ಮುನ್ನ ಮುಹೂರ್ತಮಾತ್ರದಿಂ ... ಮುಹೂರ್ತ ಕಾಲಾಂತರದೊಳು ತಮೋಮಯ ಛಾಯಾಗ್ರಹಂಗಳ ಸಾಯನಸ್ಫುಟಂಗಳಿಗುಂ ರವೀಂದುಸ್ಫುಟಲಿಪ್ತಿಗಳಿಗುಂ ನಿರಂತರವತಗೆ ಪೂರ್ಣಾಧಿಕಗ್ರಾಸ ಸಾಂತರಮಾಗೆ ನ್ಯೂನಗ್ರಾಸಮಪರೆಳು ಗ್ರಾಸಾಂಗುಳಗತಿ ಲಂಬನಾವತಿಕ್ರಮದಿಂ ದೃಶ್ಯಾದೃಶ್ಯಭೇದಮರಿಯೆ ಸೂರ್ಯ

ಚಂದ್ರ ಗ್ರಹಣಧೂಪವಾದಿ ಪಂಚಗ್ರಹಕುಜಾದಿಪಂಚಗ್ರಹಂಗಳಯೋಗ
ಯುದ್ಧ ವಾತ ವರುಷಾ ತಪಮೇಘಸಸ್ಯಂಗಳನಿದರ್ಶನವಾಗಲುಬಳಿಕಾ
ಬಂಧ ಘಟಿಕಾಯಂತ್ರಪರಿಲೇಖನಾದಿ ಚಾಕ್ಷುಷಂಗಳುಂಜನನಪ್ರಶ್ನಾದಿ
ಫಲಂಗಳುಂ ನಿಜಾನುಭವ ಸೂಚಕಂಗಳಾಗಿನಂಬಲ್ತಕ್ಕ ರೀತಿಯಿಂ
ಸಾಂಪ್ರದಾಯಿಕೋಪದೇಶದಿಂ ಶಾಸ್ತ್ರಾನುಭವವ್ಯವಸಾಯದಿಂ ಪರಿಶು
ದ್ಧರಾದ ಮಹಾಜನರೆನಿಪ ಜೋತಿಷ್ಕರುಪೇಳುತಿರಲವರಂ ದೈವಜ್ಞರೆಂ
ತಲುಂ ಕಾಲಜ್ಞರೆಂತಲುಂ ಮಾನಿಸಲಕ್ಕುಂ. *

—* ಜ್ಯೋತಿಷ್ಕರಿಗೆ ಶಾಪ. *—

ಮತ್ತಮಾ ಸಕಲತತ್ವವಂ ತಿಳಿವ ನಿಗಮಾಗಮಾದಿ ಶಾಸ್ತ್ರಂಗಳಿಗೆ
ಪ್ರಾಮಾಣಿಕತ್ವವಂ ವ್ಯವಸ್ಥೆಗೊಳಿಪ ದೃಷ್ಟಾಂತಶಾಸ್ತ್ರಂಗಳೊಳಗೊಂದೆ
ನಿಪ ಜ್ಯೋತಿಶಾಸ್ತ್ರವು ಭವಿಷ್ಯತ್ಕಾಲಿಧರ್ಮಪ್ರತಿಬಂಧಕವಾಗಿರ್ಪುದೆಂತೆ
ನೆ. ತಿಳಿಯಲೀ ಧರೆಯೊಳರ್ಘಾದಿ ನಿರ್ಣಯವನದರಿಂದೆಲ್ಲರು ಧನಿಕರಾ
ಗಿ ನಿಜಾಯುಷ್ಯಾದಿ ಭವಿಷ್ಯತ್ಫಲಗಳಂ ತಿಳಿದುನಿರ್ವೇದಿದಂತ್ಯಾಗಿಗಳಾಗಿ
ಸದ್ಧರ್ಮಾಚರಣವಂಮಾಡಿ ಪರಸ್ಪರಸಹಾಯದಿಂಪ್ರಾಯಿಕವಾಗಿ ಸರ್ವ
ರುಂ ನರಕವುಂ ತಪ್ಪಿಸಿ ಮುಕ್ತಿಸೋಪಾನಕ್ಕೈದುವರೆಂದೀ ಜ್ಯೋತಿರ್ವಿ
ದ್ಯೆಯು ನಂಬಲ್ತಕ್ಕ ನಿದರ್ಶನಂಗಳು ದುರ್ಲಭವಾಗಿ ಜ್ಯೋತಿಷ್ಕರು ನಿ
ತ್ಯದಾರಿದ್ರರಾಗಿ ತಪೋಬಲವಿಲ್ಲದೆ ಜ್ಞಾನಪ್ರದೋಷದಿಂ ಭ್ರಾಂತರಾಗಲೆಂ
ದು ಕಲಿಸಹಕಾರಿಯಾಗಿ ಬೌದ್ಧತಂತ್ರವಂ ರಚಿಸಿದ ವಿಷ್ಣು ಬೃಹಸ್ಪತಿ
ಗಳು ಶಾಪವಂ ಕೊಡಲದರಿಂ ಜ್ಯೋತಿರ್ಜ್ಞಾನೋಪಾಯವು ಸರ್ವಗೋಚರ
ವಲ್ಲದೆ ಶಿವಯೋಗಿಗೆ ಮಾತ್ರ ತಿಳಿಯಲಕ್ಕುಂ. *

—* ಗ್ರಹಾಧಿಕಾರ. *—

ಮತ್ತಮಾ ಸೂರ್ಯಾದಿ ಗ್ರಹಗಳೇ ಸಕಲ ಪ್ರಾಣಿಗಳ ಸುಖದುಃಖಹೇ
ತುಗಳೆನಿಸಿ ತತ್ತತ್ಫಲಸೂಚಕತ್ವದಿಂದಾರಾರುರಾಶಿಗಳಗರಸುಗಳಾದಸೋ
ಮ ಸೂರ್ಯರು ಕಟಕಸಿಂಹಂಗಳನುಳಿದ ಪತ್ತು ರಾಶಿಗಳ್ಗಂ ಕುಜಾದಿಗ್ರ
ಹಂಗಳಿಗೀಯೆ ರಾಶೀಶರೆಲ್ಲರುಂ ಪ್ರಪಂಚದ ಭೂತ। ಭೌತಿಕ, ಪ್ರಾ
ಕೃತ, ವೈಕೃತಕಾಲಿಕ, ದೇಶಿಕ, ವಾಸ್ತವಿಕ, ಕಲ್ಪಿತ, ಕೃತ್ರಿಮ, ವ್ಯಾ
ವಹಾರಿಕ, ಪ್ರಾತಿಭಾಷಿಕಂಗಳೆನಿಪ, ಸದಸದುತ್ತಮಮಧ್ಯಮಾದಮಂಗ
ಳಾದ ತ್ರೈಗುಣ್ಯದಿಂದೊಗೆದ ನಾನಾವಿಧಂಗಳಿಗುಂ ಪಾಲಕರಾಗಿ ಪ್ರಾಣಿ
ಮಾತ್ರಮುಂ ಬಿಡದೇ ವ್ಯಾಪಿಸಿ ಪರಮೇಶ್ವರಾಂಶದಿಂದಾತನ ಪಂಚಕೃತ್ಯ

ಗಳೊಳು ಸೇವಕರಾಗಿ ಸರ್ವಜೀವಸಮುದಾಸ್ಯರೆನಿಸಿ ಸ್ವಯಮಕಳಂಕ ದಿಂ ನಿರಂಜನರಾಗಿ ಬೆಳಗುತ ತಮ್ಮಧಿಕಾರದ ಪಥಿಜಗತ್ಸಾಕ್ಷಿಗಳಾಗಿರ್ಪ್ಪಂ.

ಸಪ್ತರ್ಷಿಮಂಡಲ.

ಮತ್ತಮಾ ಶನೈಶ್ಚರನಿಂ ಮೇಲೆ ಲಕ್ಷಯೋಜನಾಂತರದಲ್ಲಿ ।ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠರೆಂಬ ಸಪ್ತ ಋಷಿಗಳ ಮಂಡಲವಿರ್ಪುದಲ್ಲದೆ ಮಖಾಪಂಚಕದುತ್ತರ ಬಳಿಯೊಳು, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ, ಕಶ್ಯಪಸಂಜ್ಞಿಕಂಗಳಾದೇಳು ತಾರೆಗಳು ಧ್ರುವದಿಂನಡೆವುತಿರೆ ಕಲಿಪೂರ್ತ್ತಿಗವರು ಜಲ ತಾರೆಗೈದಲು ಧರ್ಮಕರ್ಮವರ್ಣಾಶ್ರಮ ನಾಶವಾಗುತಿರ್ಕ್ಕು ಮಿಂತು ಪೇಳ್ದ ಭೂಲೋಕದಿಂ ಮೇಲೆಭುವರ್ಲೋಕದ ಸಪ್ತರ್ಷಿ ಮಂಡಲವರಿಯಂತರಂ ಚಿತ್ರಮಾಗಿರ್ದ ಸ್ಥಾನಂಗಳೆಲ್ಲಂ ಮರುತಾಧಾರದ ಮೇಘಾಶ್ರಯಂಗಳಾಗಿ । ಬಳಿಕ ಸಪ್ತರ್ಷಿಮಂಡಲದಿಂ ಮುಂದೆ ಪೇಳ್ವ ರುದ್ರಲೋಕಪರ್ಯಂತಮುಂ । ಮಧ್ಯದೊಳು ತೋರ್ಪ ಸ್ಥಾನಂಗಳೆಲ್ಲಂ ಪವನಾಧಾರದ ವಿಮಾನಗಳೆಂದು ವಿವರಿಸಲ್ಪೇಳ್ಕುಂ.

ಭುವರ್ಲೋಕ ವೃಷಭೇಶ್ವರ.

ಮತ್ತಮಾ ಸಪ್ತರ್ಷಿಮಂಡಲದಿಂ ಮೇಲೊಂದು ಸಾಳಿಯುದಾಕಾರದ ಧರ್ಮಸ್ವರೂಪನಪ್ಪುದರಿಂ ಮಹಾವೃಷಭೇಶ್ವರನೆನಿಸಿಕೊಂಬುವದದರ ಶಿರವೇ ಈಶ್ವರನು । ಧರ್ಮವೇ ಮೂರ್ಧ. ಬ್ರಹ್ಮನೇ ಉತ್ತರಹನು। ಯಜ್ಞವೇ ಅಧರ । ವಿಷ್ಣುವೇ ಹೃದಯ । ಸಂವತ್ಸರವೇ ಗರ್ಭ । ಅಶ್ವಿನೀದೇವತೆಗಳೇ ಪೂರ್ವಪಾದದ್ವಯ । ಅತ್ರಿಯೇ ಮಧ್ಯಮ । ಮಿತ್ರಾವರುಣರೇ ಅಪರಪಾದದ್ವಯ । ಅಗ್ನಿಯೇ ಬಾಲದಮೊದಲು ಇಂದ್ರನೇ ಬಾಲದ ಮಧ್ಯ । ಪ್ರಜಾಪತಿಯೇ ಬಾಲದ ಅಗ್ರ । ಅಬಯುವಾಬಾಲದ ತುದಿಯಾಗಿರ್ಪಾಬಾಲದ ಕೊನೆಯಲ್ಲಿ ಸ್ತಂಭಕತ್ವದ ಸೂತ್ರಮವಿಶ್ವಕರ್ಮನಿರ್ಮಿಸಲಾಧ್ರುವನಲ್ಲಿರ್ದು ಮೊದಲು ಪೇಳ್ದ ಯೇಳು ವಾಯುಸೂತ್ರಗಳಂ ಪಿಡಿದಾಗ್ರಹತಾರೆಗಳಿರ್ಕುಂ.

ಸ್ವರ್ಲೋಕ ದೇವೇಂದ್ರ.

ಮತ್ತೆ ಮಿಶಾಪ್ರಕಾರವಾದ ಭುವರ್ಲೋಕದಿಂ ಮೇಲೆಂಭತ್ತೆರಡುಲಕ್ಷ ಯೋಜನಾಂತರದಲ್ಲಿ ಸುವರ್ಲೋಕವಿಹುದಕ್ಕೆ ಕರ್ತುವಾದಿಂದ್ರನಾದೊಡೆ ಹಿರಣ್ಮಯಶರೀರದಿಂ ಏಕಮುಖ ಚತುರ್ಭುಜ ಸಹಸ್ರಲೋಚನಂಗಳಿಂ

ಜಲೀಕೃತನಾಗಿ ದಧೀಚಿ ಋಷಿಯು ಬೆನ್ನೆಲುವಿನಿಂದ ವಜ್ರಾಯುಧಮಂ ಪಿಡಿದು ಪತಿಯಾದ ಶಚೀದೇವಿಯೊಡಗೂಡಿ ನಿರಂತರ ಕ್ರಿಯಮಾಣ ಶಿವಪೂಜಾಪ್ರಭಾವದಿಂ ಪರಮೈಶ್ವರ್ಯಸಂಪನ್ನನೆನಿಸಿ ಸಮಸ್ತ ಮನುಮುನಿ ದೇವಲೋಕಪಾಲಕರಿಂ ದೋಲೈಸಿಕೊಳ್ಳುತಿರ್ಕುಂ.

## ಆಜಾನಜಾನದೇವತೆಗಳು.

ಮತ್ತಮಾ ದೇವತೆಗಳಾದೊಡೆ ಆಜಾನಜಾನದೇವತೆಗಳೆಂದು ಕರ್ಮದೇವತೆಗಳೆಂದೆರಡುತರನಾಗಿರ್ಪ ರವರಲ್ಲಿ ಸೃಷ್ಟಿಪ್ರಾರಂಭದೊಳಾ ಪದಪನ್ನೈದಿದವರುಗಳೇ ಅಜಾನಜಾನದೇವತೆಗಳೆನಿಸಲವರೆಲ್ಲರುಂ ಮಹೇಶ್ವರನ ಪ್ರಭುಶಕ್ತಿಲೇಶದಿಂದೊಡಗೂಡಿ ಮಾಹೇಶ್ವರರೆನಿಸಿ ಶಾಂಭವವ್ರತಬಲದಿಂ ಸಿದ್ಧಿಗಳಂ ಪಡೆದು ತಮ್ಮಂ ಯಜ್ಞಾದಿಗಳಿಂ ಯಜಿಸಿ ತೃಪ್ತಿಗೊಳಿಪಧರಣೀಜನರ್ಗೆ ಕಾಮಿತಂಗಳನಿತ್ತು ಪೊರೆಯಲುಳ್ಳ ಸಾಮರ್ಥ್ಯಮಂ ಪಡೆದಾಧಿಕಾರಿಕರೆನಿಸಿದ ಮೂವತ್ತುಮೂರು ಕೋಟಿ ದೇವರ್ಕಳುಂ ವೇದಮಂತ್ರದೇವತೆಗಳಾಗಿರ್ಪ ರುದ್ರೇಂದ್ರಾಗ್ನಿ ಯಮ ಬೃಹಸ್ಪತಿ ಮೊದಲಾದೆಲ್ಲರುಂ ಆಜಾನಜಾನರೆಂದು ತಿಳಿಯಲ್ಪಡುವರು.

## ಕರ್ಮದಿಂ ದೇವತ್ವಪಡೆದವರು.

ಮತ್ತಮೀ ಭೂಲೋಕದೊಳು ಮನುಷ್ಯರಾಗಿ ಜನಿಸಿ ಬಳಿಕ ಶ್ರೌತಸ್ಮಾರ್ತ ಕರ್ಮನಿಷ್ಠೆಯಿಂ ಕೃಚ್ಛ್ರಚಾಂದ್ರಾಯಣಾದಿ ವ್ರತಾಚರಣಧುರೀಣರಾಗಿ ಸದಾಚಾರಸಂಪತ್ತಿಯುಂ ಮರೆದು ಪಾಪಕ್ಕೆಳೆಸದೆ ಪರಿಶುದ್ಧರಾಗಿ ಸ್ನಾನ, ದಾನ, ಜಪ, ಹೋಮ, ಸಂಧ್ಯಾ, ತರ್ಪಣ, ಸಪರ್ಯೆ, ದೇವತಾರ್ಚನ, ಬಲಿ ಅಧ್ಯಯನ, ಧರ್ಮಾಚರಣ, ಧ್ಯಾನ, ಯೋಗಯುಕ್ತರಾಗಿ, ಅಗ್ನಿಷ್ಟೋಮ, ಅಪ್ತೋರ್ಯಾಮ, ಅತಿರಾತ್ರ, ಉಕ್ಥ್ಯ, ಷೋಡಶಿ, ವಾಜಪೇಯ, ಪೌಂಡರೀಕ, ಸರ್ವಪೃಷ್ಠ, ಅಶ್ವಮೇಧಾದಿ ಕ್ರತುಗಳಿಂ ಪುನೀತರಾಗಿ ಇಷ್ಟಾಪೂರ್ತಾದಿ ಕಾರ್ಯಗಳಂ ಪಡೆವರೇ ಕರ್ಮದೇವತೆಗಳೆನಿಸಿ ವಿಮಾನದಿಂ ಸ್ವರ್ಗವನ್ನೈದಿ ನಿಜಪುಣ್ಯಾವಸಾನಪರ್ಯಂತಮುಂ ಆಜಾನಜಾನರೊಡನೆ ಸಮಾನಸುಖಭಾಗಿಗಳಾಗಿ ಸುಕೃತಾನುರೂಪಭೋಗವಂ ಪಡೆದಿರ್ಪರು.

## ದೇವತೆಗಳ ಸ್ವರೂಪ.

ಸ್ವರ್ಗಲೋಕದೊಳಗಿರ್ಪ ದೇವತೆಗಳೆಲ್ಲರುಂ ಪರಮೇಶ್ವರಪ್ರಸಾದಪರಿಲಬ್ಧ ಮಹಾಮಹಿಮರಾಗಿ ತೇಜೋಮಯದೇಹದಿಂ ಶ್ರುತ್ಯುಕ್ತ ನಿಜ

ರೂಪವುಲ್ಲದೆ ಯಥೇಚ್ಛ ವಿಹಾರಯೋಗ್ಯವಾದ ಕಾಮರೂಪದಿಂ ದಿವ್ಯ ಕಮಯಸತ್ವದಿಂ ಕಂದರ್ಪಸಮಾನಲಾವಣ್ಯದಿಂ ನಿಮೇಷಸ್ವೇದವಿಲ್ಲದ ಲೋಚನಂಗಳಿಂ ಸ್ವಪ್ನಾವಸ್ಥೆಯಿಲ್ಲದೆ ಪರರುಜೆಗಳಂ ತೊರೆದು ಮಹ ದೈಶ್ವರ್ಯವಿಭವದಿಂದೊಪ್ಪಿ ನಿತ್ಯಯೌವನಶಾಲಿಗಳಾಗಿ ರಂಭಾದಿ ಮಾಸರಂ ಭೋಗರೂ ಸಂಭೋಗಸುಖಸಂತುಷ್ಟರಾಗಿ ಚಂದ್ರಕಲಾಮೃತ ಹವಿರ್ದ್ರ ವ್ಯಾಮೃತಗಳಂ ಪಡದುಂಡು ಕಾಮಧೇನು । ಕಲ್ಪವೃಕ್ಷ, ಚಿಂತಾಮಣಿ, ದಿವ್ಯಾಯುಧ ವಿಮಾನಾದಿಗಳಂ ಮಹಿತರೆನಿಸಿ ಶಿವಾಜ್ಞೆಯಂ ಕಟ್ಟು ನಡೆದು ಸಪರಿವಾರ ಮಂತ್ರಾಧೀನರಾಗಿರ್ಪರಾದೇವತೆಗಳುಂಡ ಸುಧೆ ಮೊದ ಲಾದಾಹಾರವೆಲ್ಲಂ ಮದನಾಂಬುವಾಗಿ ಪೋಪುದಲ್ಲದೆ ಮಲಮೂತ್ರವಾಗಿ ಪರಿಣಮಿಸದೆಂದಲರಿಯಲ್ವೇಳ್ಕುಂ.

ಮಹರ್ಲೋಕ ಮಾರ್ಕಂಡೇಯಮುನಿ.

ಮತ್ತಮಾ ಸುವರ್ಲೋಕದಿಂ ಮೇಲೆರಡು ಕೋಟಿಯೋಜನಾಂತರದಲ್ಲಿ ಮಹಲನ । ವೃಕ್ಷೋತ್ಪಾಟನ । ಪ್ರಾಣಕಲ್ಪನ । ಅಗ್ನಿಕಲ್ಪನವೆಂಬೆಂಟು ವಾಯುವಿನ ಸಿದ್ಧಿಗಳಿವು ಯೋಗಿನೀಗುಣಗಳೆಂದು ತಿಳಿಯಲಕ್ಕುಂ.

ಅಂಬರಸಿದ್ಧಿಗಳೆಂಟು.

ಬಳಿಕ ಛಾಯಾವಿಹೀನತೆ । ಇಂದ್ರಿಯಾದೃಶ್ಯತೆ । ಖೇಚರತೆ । ಯಥೇ ಷ್ಟವಿಷಯಸಂಗತಿ । ಶೈಲಲಂಘನ । ಶೈಲಗರ್ಭೀಕರಣ । ಆಕಾಶಪಿಂಡೀ ಕರಣ । ಅಶರೀರರತ್ವವೆಂಬೆಂಟುಂ । ೮ । ಅಂಬರಸಿದ್ಧಿಗಳಿವುಗಳೊಡನೆ । ಮೊದಲಿನ ಮೂವತ್ತೆರಡು ಗುಣಂಗಳುಂ ಕೂಡಿ ನಾಲ್ವತ್ತು ಇಂದ್ರನ ಗುಣಂಗಳಕ್ಕುಂ ॥ ಮತ್ತಮಿವು ಸಾಧನಾಂತರದೊಳು । ನಾದಾನುಭೂ ತಿ । ನಾದಲಯ । ನಿರವಕಾಶಪೂರ್ಣತೆ । ಅವಕಾಶಕಲ್ಪನೆ । ಬಯಲಾಗಿರು ವಿಕೆ । ನಿರೂಪದರ್ಶನ । ವಾಯುಪರಿರಿಕಲ್ಪನ । ಸ್ವರೂಪತೆಯೆಂಬಿವುವೆಂ ಟುಂ। ೮ ।ಗಗನಸಿದ್ಧಿಗಳಾಗಿ ಲಂಭಿಕಾಯೋಗಿ ಗುಣಂಗಳಕ್ಕುಂ.

ಮಾನಸಸಿದ್ಧಿಗಳೆಂಟು.

ಬಳಿಕಯಥಾಕಾಮೋಪಲಬ್ಧಿ ।ಯಥಾಕಾಮವಿನಿರ್ಗಮನ।ಸರ್ವಕಾಮತಿ ರಸ್ಕರಣ।ಸಕಲಗುಹ್ಯಾರ್ಥದರ್ಶನ।ಕರ್ಮಾನುಗುಣನಿರ್ಮಾಣ । ವಶಿತ್ವ । ಪ್ರಿಯದರ್ಶನ । ಸಂಸಾರದರ್ಶನವೆಂಬೆಂಟು । ೮ । ಮಾನಸಸಿದ್ಧಿಗಳಿವುಗ ಳೊಡನೆ ಮೊದಲನಾಲ್ವತ್ತು ಗುಣಂಕೂಡಿ ನಾಲ್ವತ್ತೆಂಟು ಸಾಮ್ಯಸಿದ್ಧಿ ಗಳಕ್ಕುಂ ॥ ಮತ್ತಮಭ್ಯಾಸಾಂತರದೊಳು । ಶಮ । ದಮೆ । ಉಪರತಿ ।

ತಿತಿಕ್ಷೆ । ಸಮಾಧಾನ । ಇಚ್ಛಾಪ್ರಾಪ್ತಿ । ಅನಿಚ್ಛೆ । ಸರ್ವಜ್ಞತೆಗಳೆಂಬೆಂ
ಟುಂ ಮಾನಸಸಿದ್ಧಿಗಳವು ಯೋಗಿಗುಣಗಳೆಂತಲುಂ ತಿಳಿಯಲಕ್ಕುಂ॥
ಅಹಂಕಾರಸಿದ್ಧಿಗಳೆಂಟು.

ಬಳಿಕ ಛೇದನ । ತಾಡನ । ಬಂಧನ । ಮೋಹನ । ಗ್ರಹಣ । ಸಂಸಾ ರಪರಿವರ್ತನ । ಪ್ರಸಾದ । ಮೃತ್ಯುಕಾಲಜಯವೆಂಬೆಂಟುಂ । ೮ । ಅಹಂ ಕಾರಸಿದ್ಧಿಗಳವುಗಳೊಡನೆ ಮೊದಲನೆಯ ನಾಲ್ವತ್ತೆಂಟು ಗುಣಂ ಕೂಡಿ ಪೈವತ್ತಾರು ಸಿದ್ಧಿಗಳುಂ ಪ್ರಜಾಪತಿಯಗುಣಂಗಳಕ್ಕುಂ । ಮತ್ತು ಪ್ರಾ ಕಾರಾಂತರದೊಳು । ಸ್ವತಂತ್ರಸ್ಥಿತಿ । ಇತರನಿಯಾಮಕತೆ । ಯಥೇಚ್ಛಾಪ್ರವ ರ್ತನ । ಸ್ವೇಚ್ಛಾಂದ್ರವ್ರತ । ಅಗ್ರಭಾಗಹಾರಿತ್ವ । ಅನಿತರ ಸೇವೆ । ಅ ಹಂಭಾವ । ಧರ್ಮವೀರತ್ವಗಳೆಂಬೆಂಟುಂ ಅಹಂಕಾರಸಿದ್ಧಿಗಳವು ದ್ವೈತಿ ಗುಣಂಗಳಕ್ಕುಂ॥

ಬುದ್ಧಿಸಿದ್ಧಿಗಳೆಂಟು.

ಬಳಿಕ ಜಗಜ್ಜನನ । ಜಗದ್ರಕ್ಷಣ । ಜಗತ್ಸಂಹರಣ । ಇಷ್ಟಕರಣ । ಅಭಿಮತಲೋಕಪ್ರವರ್ತನ । ಅಸದೃಶಲೋಕನಿರ್ಮಾಣ । ಅಶುಭಕರಣ । ಶುಭಕರಣವೆಂಬೆಂಟುಂ ಬುದ್ಧಿಸಿದ್ಧಿಗಳವುಗಳೊಡನೆ ಮೊದಲಿನೈವತ್ತಾರು ಗುಣಂಗಳುಂ ಕೂಡಿವರುವತ್ತುನಾಲ್ಕು ಸಿದ್ಧಿಗಳು ಬ್ರಹ್ಮ,ವಿಷ್ಣು,ರುದ್ರ ಶಿವಯೋಗಿಗಳ ಗುಣಂಗಳಕ್ಕುಂ ॥ ಮತ್ತಮಭ್ಯಾಸಾಂತರದೊಳು ।ನಿತ್ಯಾ ನಿತ್ಯವಿವೇಕ । ಸಕಲಭೋಗವಿರಕ್ತಿ । ಪರಮಶಾಂತಿ । ಅವ್ಯಭಿಚರಿತಭಕ್ತಿ । ದೃಢತರಶ್ರದ್ಧೆ । ವೈದಿಕಾಸ್ತಿಕ್ಯ । ಬ್ರಹ್ಮಜ್ಞಾನ । ಬ್ರಹ್ಮಾನಂದಂಗಳೆಂ ಟುಂ ಬುದ್ಧಿಗಳವು ವೇದಾಂತಿಗಳ ಗುಣಂಗಳಕ್ಕುಂ ॥

ಚತುರ್ಮುಖಸಿದ್ಧಿಗಳ ಪರ್ಯವಸಾನ.

ಬಳಿಕಿಂತರವತ್ನಾಲ್ಕು ಸಿದ್ಧಿಗಳಿಂ ಸಂಪನ್ನನಾಗಿ । ನಾರದಾದಿ ನಿಜಪು ತ್ರರಿಂದುಪಾಸ್ಯನೆನಿಸಿ ( ೩೦೧೧೦೪೦೦೦೦೦೦೦೦೦ ) ಮೂರು ಪದ್ಮಗ ಳೂ ಒಂದು ಮಹಾಖರ್ವವೂ ಒಂದು ಖರ್ವವೂ ನಾಲ್ಕು ಅಬ್ಜದ ಸಾ ಧನತ್ಸರಂಗಳೆನಿಸ ಪರಾರ್ಧದ್ವಯಜೀವಿಯಾಗಿಚತುರ್ಯುಗಸಹಸ್ರಕ್ಕೊಂ ದು ಹಗಲಾಗಲಷ್ಟರೊಳು ಹದಿನಾಲ್ಕಿಂದ್ರರಿಂ ಪರಿಚರ್ಯೆಯಂ ಕೊಂಡು ನಿಜತಪೋವೀರ್ಯದಿಂ ಪಿಪೀಲಿಕಾದಿ ತನ್ನಪರ್ಯಂತಮಾದ ಪ್ರಾಣಿಜಾತಂಗ ಳಂ ನಿಯಮಿಸಲುಳ್ಳ ಸರ್ವಾಧಿಕಾರದಿಂದೊಡಗೂಡಿ ಸರ್ವೇಶ್ವರನೆನಿಸಿ । ಆತ್ಮಭೂ । ಪಿತಾಮಹ । ಹಿರಣ್ಯಗರ್ಭ । ಸುರಜ್ಯೇಷ್ಠನೆಂಬುದುಮೊದ

ಲಾದ ಶತದಿವ್ಯಾಭಿಧಾನಂಗಳಿಂ ಪ್ರತಿಪಾದ್ಯನಾಗಿ । ನವಬ್ರಹ್ಮರಿಗಂ ಮೂಲಬ್ರಹ್ಮನಾಗಿ । ರಜೋಗುಣಶಕ್ತಿಯಿಂ ವಿಷ್ಣುವಿನೊಳಾವಿರ್ಭವಿಸಿ। ರುದ್ರಾವತಾರಂಗಳಿಗೆ ನೆಲೆಯಾಗಿ ಮಹೇಶ್ವರವೀರ್ಯಸಂಭವನಪ್ಪುದರಿಂ ಮೊದಲು ಪಂಚಮುಖನಾಗಿರ್ದು । ಮಹೇಶ್ವರಶಾಪದಿಂ ಛಿನ್ನೈಕಶಿರಸ್ಕನಾಗಿ ಚತುರ್ಮುಖನೆನಿಸಿ ಶಿವಯೋಗಬಲದಿಂ ಶತಾನಂದೋತ್ಕೃಷ್ಟನಾಗಿರ್ಪ ಬ್ರಹ್ಮನು ಸತ್ಯಪತಿಯೆನಿಸಿರ್ಪಂ । ಇಂತು ಪೃಥ್ವಿಮೊದಲಾಗಿ ಬುದ್ಧಿಕಡೆಯಾದೆಂಟುತತ್ವಜಯದಿಂದಾದಸಿದ್ಧಿಗಳುಳ್ಳ ಪಿಶಾಚಾದಿ ಬ್ರಹ್ಮಾಂತಮಾದ ದೇವತೆಗಳ ಪದವೀ ಪ್ರಕಾರವಾಗಿ ಮುಂದೆ ಪ್ರಕೃತಿತತ್ವಾದಿಜಯದಿಂದಾದ ಸಿದ್ಧಿಗಳುಳ್ಳ ವಿಷ್ಣ್ವಾದಿಗಳ ಮಹಾಪದಂಗಳು ನೋಡಲಿಕ್ಕೆ ಸಲ್ಲವೆಂದು ತಿಳಿಯೆ । ಮತ್ತಮಾಸಿದ್ಧಿಗಳೊಳು ಪೂರ್ವೋಕ್ತ ತತ್ವಸಂಖ್ಯಾನುರೂಪವಾಗಿ ತತ್ತದ್ಯೋಗ ಭೇದಾನುಗುಣಸಿದ್ಧಿಗಳು ಭಿನ್ನಭಿನ್ನಗಳಾದರುಂ ಸರ್ವಶಾಸ್ತ್ರಲೋಕವಿಖ್ಯಾತವಪ್ಪುದಕ್ಕೆ ಮೃಕಂಡುಪಿನಾತ್ಮಜನಾದ ಮಾರ್ಕಂಡೇಯಮುನೀಶ್ವರನಧಿಪತಿಯಾಗಿ ಮರೀಚಿಮುಂತಾದ ಮುನಿಗಳೊಡಗೂಡಿ ಪರಮೇಶ್ವರಾರಾಧನದಿಂದಭ್ಯಾಸ ಬಲಾಭಿವೃದ್ಧಿ ಶಿವಯೋಗ ಸಿದ್ಧಿಯನೈದಿ ನಿತ್ಯತ್ವಮಂ ಪಡದು ಚಿರಂಜೀವಿಯೆನಿಸಿ ಮೃತ್ಯುಮಂ ಜೈಸಿ ವಿರೂಪಾಕ್ಷರೂಪನಿಂ ಸಕಲವಂದ್ಯನಾಗಿರ್ಪಂ ॥

ಜನೋಲೋಕ ತಪೋಲೋಕ.

ಮತ್ತಂ ಮಹಲೋಕದಿಂ ಮೇಲೊಂದುಕೋಟಿ ಯೋಜನಾಂತರದಲ್ಲಿ ಜನೋಲೋಕವಿಹುದದಕ್ಕೆ ವಸಿಷ್ಠಾದಿಋಷಿಗಳಧಿಪತಿಗಳಾಗಿ ಪಿತೃಜನಂಗಳಂಬೊಡಗೂಡಿ ತಪೋರಾಜ್ಯಂಗೈವುತ್ತಿರ್ಪರಲ್ಲಿಯ ಋಷಿಗಳು ಪಿತೃಪಿತಾಮಹರೇ ಭೂಲೋಕದ ಬ್ರಾಹ್ಮಣರ ಗೋತ್ರಮೂಲಮಪ್ಪುದರಿಂದಲೇ ಪಿತೃಲೋಕಮೆನಿಸಿರ್ಕುಂ ॥ ಮತ್ತಮಾಲೋಕದಿಂ ಮೇಲೆ ಹನ್ನೆರಡು ಕೋಟಿಯೋಜನಾಂತರದಲ್ಲಿ ತಪೋಲೋಕವಿಹುದದಕ್ಕೆ ಬ್ರಹ್ಮನ ಮಾನಸಪುತ್ರರಾದ, ಸನಕ । ಸನಂದನ । ಸನಾತನ । ಸನತ್ಸುಜಾತ । ಸನತ್ಕುಮಾರರೆಂಬೈವರು ಋಷೀಶ್ವರರಧಿಪತಿಗಳಾಗಿ ಯೋಗನಿಷ್ಠೆಯಿಂ ಮಾನಂದ ಸಹಿತರಾಗಿರ್ಕುಂ ॥

ಸತ್ಯಲೋಕ ಚತುರ್ಮುಖಬ್ರಹ್ಮ.

ಮತ್ತಮಲ್ಲಿಂದ ಮೇಲೆ ಹದಿನಾರುಕೋಟಿಯೋಜನಾಂತರದಲ್ಲಿ ಸತ್ಯಲೋಕವಿಹುದದಕ್ಕೆ ರಜೋಗುಣದಿಂ ಜಗದುತ್ಪತ್ತಿಕರ್ತೃವಪ್ಪ ಪಿತಾಮ

ಹಸೇ ಪ್ರಭುವಾಗಿರ್ದನಾತನು ಸುವರ್ಣಕಾಂತಿಯ ಶರೀರದಿಂ ಚತುರ್ಮುಖ ಲೋಚನಾಷ್ಟಕಯುಜ್ಞ । ಸೂತ್ರಗಳಂ ಅಕ್ಷಮಾಲೆ । ಪಾಶ। ದಂಡಕಮಂಡಲುಗಳುಳ್ಳ ವಾಮದಕ್ಷಿಣಕರಚತುಷ್ಟಯದಿಂ ದಿವ್ಯವಸ್ತ್ರಾಭರಣ ಗಂಧಪುಷ್ಪಾದಿಗಳಿಂದಲಂಕೃತನಾಗಿ ಸರಸ್ವತಿಯೊಡಗೂಡಿ ಪ್ರತೀತಿರ್ವೆತ್ತ ವೇದಪುರುಷರಿಂ ಮರೀಚ್ಯಾದಿ ನವಬ್ರಹ್ಮರಿಂ ಸಕಲಮುನಿಜನಂಗಳಿಂ ನಾರದಾದಿ ಸಕಲಸುರಸಂತತಿಗಳಿಂದೊಡಗೂಡಿ ಪೊಗಳ್ವಿಸಿಕೊಳ್ಳುತಿರ್ಕುಂ ॥

೬೪ ಸಿದ್ಧಿಗಳಲ್ಲಿ ಪಾರ್ಥಿವಂಗಳೆಂತು.

ಮತ್ತಮಾ ಬ್ರಹ್ಮಂಗರವತ್ತುನಾಲ್ಕು ಸಿದ್ಧಿಗಳುಂಟವಂ ಪೇಳ್ವೆನದಿಂ ಪಿಶಾಚಾದಿ ದೇವತಾಂತರಂಗಳವರ್ಗಳ ತಾರತಮ್ಯವನುಂ ತೋರ್ಪೆನವೆಂತೆಂದೊಡೆ । ಸ್ಥೂಲನಾಗುವ । ಸೂಕ್ಷ್ಮನಾಗುವ । ಬಾಲಕನಾಗುವ ಯೌವನನಾಗುವ । ವೃದ್ಧನಾಗುವ । ನಾನಾಜಾತಿರೂಪವೈದುವ । ಪೃಥಿವಿ ಪೊರತಾಗಿ ಮಿಕ್ಕಭೂತಚತುಷ್ಟಯದಿಂದಲೇ ಕಾಯಮಂ ಧರಿಸುವ । ನಿತ್ಯಸುಗಂಧಮಂ ಸೇವಿಸುವ । ನೆಂಬೆಂಟು ॥ ೮ ॥ ಪಾರ್ಥಿವಸಿದ್ಧಿಗಳ್ ಪಿಶಾಚಾದಿಗಳ ಗುಣಂಗಳಕ್ಕುಂ ॥

ಅಪ್ತತ್ವಸಿದ್ಧಿಗಳೆಂತು.

ಬಳಿಕ ಜಲದೊಳುಂ ನೀರಸತೆಯುಂ ಮಾಡುವ । ಭೂಸದೃಶಜಲಗಮನಮಂ ಮಾಡುವ । ಅನಾತುರಸಮುದ್ರಮಂಪಾನಮಾಡುವ । ನಿರ್ಜನಸ್ಥಾನದಲ್ಲಿ ಜಲದರ್ಶನಂಗೊಳಿಸುವ । ಶಿಲಾದಿತಾಡನದಿಂ ವ್ರಣವಿಲ್ಲದಿರುವ । ಕರಪುಟದಲ್ಲಿ ಸಮುದ್ರಮಂ ಧರಿಸುವ । ನೀರಸವಸ್ತುವಂ ರಸವತ್ತಾಗಿ ಮಾಳ್ಪ । ಅಪ್ಪು ಹೊರತಾಗಿ ಮೇಲಣಭೂತಗಳಿಂದಲೇ ದೇಹಮಂ ಧರಿಸುವನೆಂಬೆಂಟು । ೮ । ಅಪ್ಸಿದ್ಧಿಗಳಿವುಗಳೊಡನೆ ಪೂರ್ವೋಕ್ತಪಾರ್ಥಿವಸಿದ್ಧಿಗಳೆಂಟು ಕೂಡಿ । ೧೬ । ಸಿದ್ಧಿಗಳುಂ ರಾಕ್ಷಸರಿಗೆ ಗುಣಗಳಾಗಿರ್ಕುಂ.

ತೈಜಸಸಿದ್ಧಿಗಳೆಂತು.

ಬಳಿಕ । ಶರೀರದೊಳಗಗ್ನಿನಿರ್ಮಾಣ । ಅಗ್ನಿಭಯವರ್ಜನ । ಜಲದಲ್ಲಿ ಅಗ್ನಿಸ್ಥಾಪನ । ಪಾಣಿಯಲ್ಲಿ ಪಾವಕಧಾರಣ । ಅನ್ನಾದಿಪಚನದೊಳಪ್ರಯತ್ನ । ಜಗದ್ದಹನ । ಅಗ್ನಿಹೊರತಾಗಿ ಮೇಲಣಭೂತದ್ವಯದಿಂದಲೇ ದೇಹಧಾರಣವೆಂಬೆಂಟುಂ ॥ ೮॥ ಇವಲ್ಲದೆ ಬೇರೆ ಅತಿಸೂಕ್ಷ್ಮವಾಗಿರ್ದ ಅತೀತಾನಾಗತವಸ್ತುವಿವರಮಂ ಯಥಾರ್ಥವಾಗರಿಪತನವೇ ಪ್ರತಿಭೆ । ಪ್ರಜು

ತ್ನವಿಲ್ಲದೇದೂರತರಶಬ್ದಗ್ರಹಣಶ್ರವಣ । ಸಕಲಜನಸ್ವೃತ್ತಾಂತವಿಷಯಜ್ಞಾನವೇ ವಾರ್ತೆ । ಪ್ರಯತ್ನವಿಲ್ಲದೇ ದಿವ್ಯದರ್ಶನ । ದಿವ್ಯರಸಾಸ್ವಾದನ । ಸರ್ವಲೋಕದಿವ್ಯಗಂಧಾಘ್ರಾಣವೆಂಬಿವೇ ಷಡ್ವಿಧಸರ್ಗಂಗಳೆನಿಸಿಕೊಂಬ ಇವುಗಳೊಳಗೊಂದು ಕೂಡಿದೆಂಟು । ೮ । ತೈಜಸಸಿದ್ಧಿಗಳಿವುಗಳೊಡನೆಮೊದಲಹದಿನಾರುಗುಣಂಗಳಂ ಕೂಡಿದಿಪ್ಪತ್ನಾಲ್ಕು ಸಿದ್ಧಿಗಳಂ ಯಕ್ಷಗುಣಂಗಳಕ್ಕುಂ ॥

## ವಾಯುಸಿದ್ಧಿಗಳೆಂಟು.

ಬಳಿಕ ಮನೋಜವತ್ವ । ಭೂತಾಂಶಪ್ರವೇಶನ । ಪರ್ವತಾದಿಭಾರಧರಣ । ಗುರುತ್ವ । ಲಘುತ್ವ । ಹಸ್ತಾನಿಲಧಾರಣ । ಅಗ್ರಾಂಗುಳಭೂಕಂಪನ । ವಾಯುಹೊರತಾಗಿ ಗಗನಮಾತ್ರದಿಂದೇಹಧಾರಣವೆಂಬೆಂಟು । ೮ । ಮಾರುತಸಿದ್ಧಿಗಳಿವುಗಳೊಡನೆ ಮೊದಲಿನಿಪ್ಪತ್ನಾಲ್ಕು ಗುಣಂಗಳಂಕೂಡಿ ಮೂವತ್ತೆರಡು ಸಿದ್ಧಿಗಳಂ ಗಂಧರ್ವರಗುಣಂಗಳಕ್ಕುಂ ॥ ಮತ್ತಮಿವು ಪ್ರಕಾರಾಂತರದೊಳು । ಆಕಾಶಗಮನವಾಯುಸ್ತಂಭನ । ಖಗಸ್ತಂಭನ । ಗತಿಸ್ತಂಭನ । ಗಿರಿಸಂಚಾರಸಾಧಾರಣವಾದುದೇ ನಿರೂಪಣೀಯವಾಗಿ ಪಕ್ಷ್ಯಪ್ರಮಾಣಮೆಲ್ಲಂವಿರೋಧರಹಿತವಾಗಿರ್ಕುಂ ॥

## ನವಬ್ರಹ್ಮಗಳ ಉತ್ಪತ್ತಿ.

ಮತ್ತಮಾಚತುರ್ಮುಖಬ್ರಹ್ಮನಿಂದಖಿಲದೇವ ದಾನವಾದಿಗಳುತ್ಪತ್ತಿಯೆನುವಾವುವೆಂದೊಡೆ । ಪ್ರಥಮಸೃಷ್ಟಿಯೊಳಾಬ್ರಹ್ಮನನೇತ್ರದಲ್ಲಿಮರೀಚಿಪುಟ್ಟಿದನು ಉದಾನವಾಯುವಿನಲ್ಲಿಪುಲಸ್ತ್ಯಪುಟ್ಟಿದನು । ವ್ಯಾನವಾಯುವಿನಲ್ಲಿಪುಲಹಪುಟ್ಟಿದನು । ಅಪಾನವಾಯುವಿನಲ್ಲಿಕ್ರತುಪುಟ್ಟಿದನು । ಪ್ರಾಣವಾಯುವಿನಲ್ಲಿದಕ್ಷಪುಟ್ಟಿದನು । ಶ್ರೋತ್ರದಲ್ಲಿಅತ್ರಿಪುಟ್ಟಿದನು । ಸಮಾನವಾಯುವಿನಲ್ಲಿವೃದ್ಧವಸಿಷ್ಠಪುಟ್ಟಿದನು । ಇಂತೀನವಋಷಿಗಳು ಚತುರ್ಮುಖಕುಮಾರರ ಹತನದಿಂ ಪಿತೃಕರ್ತೃವಾದಸೃಷ್ಟಿಯೊಳು ನಿಯಮಿಸಲ್ಪಟ್ಟ ಪ್ರಪಂಚಜನಕರಾಗಿ ಪ್ರವೃತ್ತಿಧರ್ಮದಿಂ ಶಿವಾರಾಧನಸ್ಥೈ ಪ್ರವೃತ್ತಿರ್ಕುಂ.

## ಚತುರ್ಮುಖಬ್ರಹ್ಮನವಂಶಾವಳಿ.

ಮತ್ತಮಾಚತುರ್ಮುಖಬ್ರಹ್ಮನ ಸಂಕಲ್ಪದಿಂ ಧರ್ಮದೇವತೆಪುಟ್ಟಿದಳು। ಫಾಲದಿಂತಾಮುಸರುದ್ರನವತರಿಸಿದನು । ಅಂಗುಷ್ಠದಿಂನಾರದಪುಟ್ಟ

ದನು । ಅಂಗದಿಂ ಭಾರಳೆಯುದಿಸಿದಳು । ಇಂತಾತನ ಕುಮಾರರೊಳು ದಕ್ಷಿಣಾಮೂರ್ತಿಯುಂ ಭಜಿಸಿ ನಿವೃತ್ತಿಧರ್ಮಪರರಾದ ನಾರದಾದಿಗಳಾಳಯಿಮಿಕ್ಕವರೆಲ್ಲರುಂ ಬ್ರಹ್ಮರ್ಷಿಗಳೆನಿಸಿ ಗೃಹಮೇಧಿಗಳಾಗಿ ತಪಂಗೈದು ಶಿವಪ್ರಸಾದದಿಂ ವಂಶೋತ್ಪಾದನಂಗೈಯ್ಯಲದು ಪ್ರಾಣಿವರ್ಗಮಾಯಿತೆಂತೆನೆ,

ಮರೀಚಿಬ್ರಹ್ಮಂ ಕಶ್ಯಪಸಂತತಿ.

ಮತ್ತಮಾ ಮರೀಚಿಬ್ರಹ್ಮಂಗ ಕಶ್ಯಪಬ್ರಹ್ಮನುದಿಸಿದನಾತನು ನಿಜಪಿತೃಪಿತಾಮಹರಂತೆ ಪರಮೇಶ್ವರನಂ ಭಜಿಸಿ ತತ್ಪ್ರಯೋಗದಿಂ ಶಾಂಭವಿಯನಾರಾಧಿಸಿ ಶಾಕೆಯುಪದೆಯಿಂ ಪದಿಮೂರು ಪತ್ನಿಯರಂ ರಮಿಸಿ ಯವರೊಳು ವಂಶಸಂಪದಸುನಿಶ್ಚಿತನಾದನೆಂತೆ: ದಕ್ಷಬ್ರಹ್ಮನ ಪುತ್ರಿಯರಾದ । ದಿತಿ, ಅದಿತಿ, ದನು ಕಾಲಿ । ಅನಾಯು, ಸಿಂಹಿಕೆ, ಮುನಿ- ಪ್ರಾಧೆ, ಅರಿಷ್ಟೆ, ವಿನತ, ಕಪಿಲೆ, ಕದ್ರು, ಕ್ರೋಧವಶೆಂಬ ತ್ರಯೋದಶಸ್ತ್ರೀಯರು ಪತ್ನಿಯರಾದವರೊಳಗೆ ॥

ದೈತ್ಯಸಂತತಿ.

ದಿತಿಯೆಂಬ ಪ್ರಥಮಪತ್ನಿಯೊಳು ಕಶ್ಯಪನಿಂ ದೈತ್ಯರರವತ್ತಾರುಕೋಟಿ ಜನಿಸಿದರು । ಮತ್ತಂ ಸಪ್ತಮರುತ್ತುಗಳುಂ ಪುಟ್ಟಿದರು । ಅವರೆಲ್ಲ ತಾಮಸಭಾವದಿಂದುಗ್ರತಪಮಂಗೈದು ರುದ್ರಪ್ರಸಾದದಿಂ ಲೋಕಂಗಳಂ ಜಯಿಸಿ ಮಹಾಬಲೈಶ್ವರ್ಯವೈಭವದೊಡನೆ ಪ್ರಸಿದ್ಧರಾಗಿ ಕ್ರೂರಕೃತ್ಯಗಳಂ ಮಾಡಿಖಳರೆನಿಸಿ ದವರೊಳಗೆ ಹಿರಣ್ಯಕಶಿಪುವಿಗೆ ಪ್ರಹ್ಲಾದ, ಸಂಹ್ಲಾದ, ಅನುಹ್ಲಾದ ಶಿಬಿ, ಬಾಷ್ಕಳರೆಂಬೈವರು ಪುತ್ರರಾದವರೊಳಗೆ, ಪ್ರಹ್ಲಾದಂಗೆ, ವಿರೋಚನ, ಕುಂಭಿ, ನಿಕುಂಭರೆಂಬ ಮೂವರು ಮಕ್ಕಳಾದವರವರಲ್ಲಿ ವಿರೋಚನಂಗೆ ಬಲೀಂದ್ರನಾತಂಗೆ ಬಾಣಾಸುರನೊದಲಾದ ಶತಕುಮಾರರುದಿಸಿದರೆಂಬುವರಿಂ ದೈತ್ಯವಂಶವೃಕ್ಷ ಬೆಲಗೊಂಡಿರ್ಕುಂ.

( ಅದಿತೇಯರಾದ ದೇವರ್ಕಳ ಸಂತತಿ. )

ಬಳಿಕ । ಅದಿತಿಯೆಂಬ ದ್ವಿತೀಯ ಪತ್ನಿಗೆ ಧಾತೃಮೊದಲಾಗಿ ವಿಷ್ಣು ಕಡೆಯಾದ ದ್ವಾದಶಾದಿತ್ಯರುಂ । ಮಹೇಂದ್ರಮೊದಲಾದ ಮೂವತ್ತುಮೂರು ಕೋಟಿ ದೇವರ್ಕಳಂ । ಉಪೇಂದ್ರನೆನಿಪ ವಾಮನನಾದ ವಿಷ್ಣುವುಂ । ಸೂರ್ಯನಾರಾಯಣನುಂ ಜನಿಸಿದರವರೊಳಗೆ। ಸೂರ್ಯಂಗೆ ವೈವಸ್ವತಮನು ಜನಿಸಿದವಸಿಗೆ ಇಕ್ಷ್ವಾಕುಮೊದಲಾದ ಸಂತಾನಪರಂಪರೆಯೊಳು ಸಗರಾದಿಪ್ರಸಿದ್ಧಮಹಾರಾಜರನೇಕರುದಿಸಿದರವರೊಳಗೆ ಹರಿಹರಾಂಶನಾಗಿ ದಶರಥಗೆ

ರ್ಭದೊಳುದಿಸಿದರಾಮಚಂದ್ರನು ಸೀತಾಲಕ್ಷ್ಮಣಾದಿಗಳಂಬೊಡಗೂಡಿ ರುದ್ರಬೀಜ ಸಂಭೂತನಾಗಿ ಮಾರುತಿಯೆನಿಪಾಂಜನೇಯನ ಸಹಾಯ ದಿಂ ಅಗಸ್ತ್ಯನಿಂದುಪದಿಷ್ಟಮಾದವಿರಜಾದೀಕ್ಷೆಯಬಲದಿಂ ಶಿವಪ್ರಸಾದ ಲಬ್ಧದಿವ್ಯಾಸ್ತ್ರಂಗಳಿಂರಾವಣಾದಿರಾಕ್ಷಸರಂಕೊಂದು ಭೂಭಾರವನಾಳು ಅಶ್ವಮೇಧಂಗಳಿಂ ಪರಮೇಶ್ವರನಂ ಜಯಿಸಿರಾಜರ್ಷಿಯಾಗಿ ಶಿವನಾಮಂ ಗಳೊಳು ತಾರಕಮಂತ್ರವೆನಿಪ ರಾಮನಾಮಮಂ ಪಡೆದವರೊಳಗೆ ಪ್ರಸಿದ್ಧ ನಾಗಿ ತನ್ನೊಡನೆಬಂದವರೆಲ್ಲರಂ ಧರ್ಮದಿಂಸಶರೀರರಾಗಿ ಸ್ವರ್ಗಕ್ಕೈದಿಸಿ ದನಾತಗೆ ಕುಶಲವಮುಂತಾಗಿ ಸೂರ್ಯವಂಶದವರುಗಳುಮಹಾಪುರುಷರಾ ಗಿರ್ಪರ್ ॥ ಮತ್ತಮಾವೈವಸ್ವತಮನುವಿನಪುತ್ರಿಯಾದ ಯಿಳೆಯೆಂಬಾ ಕೆಗೆ ಚಂದ್ರಸುತನಾದ ಬುಧನಿಂ ಪುರೂರವರಾಯಜನಿಸಿದನಾತಂಗೆ ಆ ಯುವೆಂಬಾತಂಮೊದಲಾಗಿ ಚಂದ್ರವಂಶಂಬೆಳೆದು ದಿವರೊಳಗೆಪಂಚರು ದ್ರಾಂಶಕರೆನಿಪ ಯಮಪವನಶಕ್ರದಸ್ರರಿಂ ಕುಂತಿಯೆಂಬ ಪಾಂಡುಪತ್ನಿ ಯೊಳುಧರ್ಮಭೀಮಾರ್ಜುನರುಂಮಾದ್ರಿಯೆಂಬಪಾಂಡುಪತ್ನಿಯೊಳು ನ ಕುಲಸಹದೇವರುಂಜನಿಸಿ ಪಂಚಪಾಂಡವರೆಂದು ಪ್ರಖ್ಯಾತರಾಗಿ ಧರ್ಮ ಸ್ಥಾಪನವಂ ಮಾಡಿದವರೊಳಗೆ ರುದ್ರಬೀಜದಿಂ ಮಾರುತಿಯೆನಿಪಕೌಂ ತೇಯನಾದ ಭೀಮನಾಮಕಪಾಂಡವನು ರುದ್ರಲಿಂಗಾರ್ಚನಬಲದಿಂ ಕೀ ಚಕ ಬಕಜರಾಸಂಧಾದಿ ಖಳರಂಕೊಂದು ಶಿವಭಕ್ತ್ಯಂಶದಿಂದಗ್ನಿಯೊಳೆ ಗುದಿಸಿದಪಾಂಚಾಲಿಯೆಂಪೊರೆದಂ । ಮತ್ತಮರ್ಜ್ಜುನನಾದೊಡೆಯದು ವಂಶದೊಳುವಸುದೇವನಿಂದೇವಕಿಯಲ್ಲಿ ವೈರಾಜಪುರುಷನೆನಿಪ ವಿಷ್ಣುವಿ ನಂಶೆಯಿಂ ದವತರಿಸಿದ ಕೃಷ್ಣನಸಹಾಯದಿಂ ಭೂಭಾರವನಿಳುಹಿ ನಾಸೀ ಕೃಷ್ಣಾರ್ಜುನರೀರ್ವರುಂ ಮುನ್ನ ನರನಾರಾಯಣಋಷಿಗಳಾಗಿ ಹಿಮಾ ಲಯದೊಳು ಶಿವಲಿಂಗಾರ್ಚನವಂಗೈದು ಪರಮೇಶ್ವರಪ್ರಸಾದದಿಂ ವಿಶ್ರು ತರಾಗಿ ಜನಿಸಿದವರೊಳಗೆ ಕೃಷ್ಣನು ಶಿವಯೋಗಬಲದಿಂ ವಿಷಯಂಭೋ ಗೋತ್ಕಟಮಾದರುಂ ಜ್ಞಾನಸಂಪತನೆನಿಸಿ ಯೋಗೀಶ್ವರತ್ವಮಂಪಡೆದು ವಿಶ್ವರೂಪಮಂತೋರಿ ಅಘಟನಾಘಟನಸಮರ್ಥನಾಗಿ ತನ್ನಂಭಜಿಪಶಿಷ್ಯ ನಾದಜರ್ಜುನಂಗೆಹದಿನೆಂಟಧ್ಯಾಯದ ಗೀತೋಪದೇಶ ಪರ್ಯವಸಾನದೊಳು (ಈಶ್ವರಸ್ಸರ್ವಭೂತಾನಾಂಹೃದ್ದೇಶೇಽರ್ಜುನತಿಷ್ಠತಿ । ಭ್ರಾಮಯನ್ಸ ರ್ವಭೂತಾನಿಯಂತ್ರಾರೂಢಾನಿಮಾಯಯಾ) ಎಂಬಶ್ಲೋಕದಿಂ ತನ್ನಿಂ ದುತ್ಕೃಷ್ಟಮಾದಶಿವತತ್ವಮಂಪರೋಕ್ಷನಿರ್ದೇಶದೊಳರುಹಿ । ಅಪರೋ

ಜ್ಞಾನಿರ್ದೇಶವೊಳಸಂಶಬ್ದದಿಂ ಸರ್ವನಾಮವಾದ ಸ್ವಚ್ಛಬ್ದೇಷ್ಟ್ಯರ್ಥ ಮಂಬಿಳಿಗಿ ಲೋಕೋಪಕಾರಿಯುಪ್ಪುದರಿಂಸರ್ವವಂದ್ಯನಾದಜುರ್ನಂಗ ಭಿಮನ್ಯುವೊದಲಾಗಿಚಂದ್ರವಂಶಂಬೆಳದುಪೇದುಂತಿಳಿಯುಲಕ್ಕುಂ.

ದನುಕಾಲೆಯರಿ ರಾಕ್ಷಸಸಂತತಿ.

ಬಳಿಕ ಮೂರನೆಯುವನುವೆಂಬಾಕೆಗೆಕಶ್ಯಪನಿಂ ನಾಲ್ವತ್ತುಮಂದಿಕೂರ ರದಾನವರು ಜನಿಸಿದವಳಗೊಬ್ಬೊಬ್ಬನಿಂ ದನೇಕಮಂದಿಜನಿಸಲೀಪರಿ ಯಿಂದಾನವಕುಲಮಧಿಕವಾಗೆ ನಾಲ್ಕಯಣಿಯೆನಿಪಶಾಂಭವಿಯು ನಾನಾ ವತಾರಗಳಿಂದವರೊಳು ಮಹಾಖಿಳರಂಕೊಂದಳು। ಬಳಿಕಕಾಲೆಯೆಂಬಾ ಕೆಗೆಕಾಲಕೇಯರೆನಿಪನಿವಾತಕವಚರುದಿಸಿಸುರವೈರಿಗಳಾಗಿ ಸ್ವರ್ಗದೊ ಳಿರಲವರಂ ಸುರಪತಿಸುತನಾದಜುರ್ನನು ಶಿವವರಲಬ್ಧರೌದ್ರಾಸ್ತ್ರದಿಂ ಕೊಂದನು

ಅಸುರಸಂತತಿ.

ಬಳಿಕ್ಕೈದನೆಯ ಅನಾಯುವೆಂಬಾಕೆಗೆ ಕಶ್ಯಪನಘೋರತಪದಿಂ ವೃತ್ರಾ ಸುರಂಮೊದಲಾದನಾಲ್ವತ್ತುಮಂದಿಮಕ್ಕಳುಪುಟ್ಟಿ ಪ್ರಸಿದ್ಧರಾದವರೊ ಳಗೆ ವಿಶ್ರುತನಾಗಿ ದುರ್ಜಯನೆನಿಪ ವೃತ್ರಾಸುರನಂಮಹೇಂದ್ರನೇಸದ ಬಡಿಸಿದಂ। ಬಳಿಕಾರನೆಯುಸಿಂಹಿಕೆಯೆಂಬಾಕೆಗೆ ರಾಹುಮೊದಲಾದ ನಾ ಲ್ವತ್ತು ಮಕ್ಕಳಾದವರೊಳು ರಾಹುವೇ ಶಾಂಭವಿಯ ಮಹಾಶಕ್ತಿಯಿಂ ಮೋಹಿನೀರೂಪಸಂ ತಳೆವೆ ವಿಷ್ಣುವಿನಿಂ ಛಿನ್ನಮಸ್ತಕನಾದಗುಂ ಸುಧಾ ಪ್ರಾಶನಬಲದಿ ರಾಹುಕೇತುಗಳೆನಿಪಾಕಾರದ್ವಯದಿಂ ಧೂಮವೇಹರಾಗಿ ತಮೋಮಯತ್ವದಿಂ ಛಾಯಾಯೆಯೊಳಡಗಿರ್ಪರು.

ರತ್ನಗಂಧರ್ವಾಪ್ಸರೋಗಣಾದಿಗಳಉತ್ಪತ್ತಿ.

ಬಳಿಕೇಳನೇ ಮುನಿಯೆಂಬಾಕೆಗೆ ನವರತ್ನಗಳುಂ ದೇವಗಂಧರ್ವರುಂ ಪುಟ್ಟಿದರು। ಬಳಿಕೆಂಟನೇ ಪ್ರವಾಹೆಯೆಂಬಾಕೆಗೆ। ಚಿಂತಾಮಣಿ, ಸ್ಪ ರ್ಶಮಣಿ, ಸಕಲಲೋಹಂಗಳುಂ। ಯೇಳುಹೆಂಣುಮಕ್ಕಳು। ಹತ್ತುಗಂ ಡುಮಕ್ಕಳುಂ ಪುಟ್ಟಿದರು। ಬಳಿಕೊಂಭತ್ತನೆಯ ಅರಿಷ್ಟೆಯೆಂಬಾಕೆಗೆ ಹತ್ತುಅಪ್ಸರಸ್ತ್ರೀಯರುಂ ತುಂಬುರುಮೊದಲಾದನಾಲ್ವರುಗಂಡುಮಕ್ಕ ಳುಂ ಪುಟ್ಟನರಿವಲ್ಲವುಂ ಪಿತೃವರ ತಪೋಬಲವೈಚಿತ್ರ್ಯಾನಂರೂಪವುಂ ಮತಿಳಿಯಲ್ಪೀಳ್ಕುಂ. ವಿನತೆಯಿಂಪಕ್ಷಿಸಂತತಿಮುಂತಾಗಿ.

ಬಳಿಕ ಹತ್ತನೆಯುವಿನತೆಯುಂಬಾಕೆಗೆ। ಗರುಡ, ಅರುಣ, ಗೃಧ್ರಾದಿಕ್ಷಿಪ

ಶೂಲ | ವಜ್ರ | ಸಿಡಿಲು | ವರುಣಾದಿಜಲದೇವತೆಗಳಿಂ ಪುಟ್ಟಿದರಲ್ಲಿಸಿಡಿಲು ಗರುಡನಪಕ್ಷಹುಟ್ಟಿದುದರಿಂ ಸರ್ಪವೈರಿಯಾಯಿತು | ಜಲದೇವತೆಗಳೊಳಹುಟ್ಟಿದುದರಿಂ ಮಳೆಯಾಗುವಲ್ಲಿಬಿದ್ದು ಗರ್ಜಿಸಿ ವ್ಯವಹರಿಸುತಿರ್ಪವಿನರೊಳುಗರುಡನೇತಪವಂಚರಿಸಿ ಹರನಂಮೆಚ್ಚಿಸಲಾತನನುಜ್ಞೆಯಿಂ ನಾರಯಣಂಗೆ ವಾಹನನಾದಂ ಅರುಣನೇ ಹೇಳವನಾದುದರಿಂ ರವಿಗೆಸಾರಥಿಯಾದಂ ವರುಣನೇ ದಿಕ್ಪತಿಯಾಗಿ ಬ್ರಹ್ಮನಿನಿಸಿದಂ | ವಜ್ರವೇ ಧೀಚಿಯಿಂ ಭಕ್ಷಿಸಲ್ಪಟ್ಟ ಬೆನ್ನೆಲುವಾಗಿ ಬಳಿಕಿಂದ್ರನಿಗಾಯುಧವಾಯಿತೀಪರಿಯೆಲ್ಲವುಂ ಸವೀರ್ಯಗಳಕ್ಕುಂ.

## ಕಪಿಲೆಯಿಂ ಅಮೃತಗೋಬ್ರಾಹ್ಮಣಸಂತತಿ.

ಬಳಿಕ ಹನ್ನೊಂದನೆಯ ಕಪಿಲೆಯೆಂಬಾಕೆಗೆ ಕಶ್ಯಪನ ಸಾತ್ವಿಕ ತಪೋವೀರ್ಯದಿಂ | ಅಮೃತವು ಸುರಭಿಗಳೆನಿಪ ಕಪಿಲಗೋವುಗಳುಂ ಅವತ್ಸಾರಾದಿಬ್ರಾಹ್ಮಣಶ್ರೇಷ್ಠರುಂ ಪುಟ್ಟಿದರು|ಅವರೊಳಗಮೃತವು ಗರುಡನಿಂಪೈಯಲ್ಪಡುವಲ್ಲಿ ಅಂಶಪಾತ್ರವು ಕ್ಷೀರಸಮುದ್ರದೊಳು ನೆಲಸಿತು | ಮಿಕ್ಕಂಶವು ಸುರರಿಗಾಗೆ ಚಂದ್ರನಿಗಂ ಗೋವುಗಳಗುಂಸೇರಿ ಕರಣಕ್ಷೀರಾದಿರೂಪದಿಂ ಹವ್ಯವಾಗಿ ದೇವರ್ಕಳಂ ಪೋಷಿಸುತಿರ್ಪುದು | ಗೋವುಗಳೇ ಧರ್ಮಸತ್ಯಕ್ಷಮಾರೂಪದಿಂ ಪವಿತ್ರಗಳಾಗಿ | ನಿರ್ದರ್ಶನ, ಸ್ಪರ್ಶನ, ಸೇವನ, ಕ್ಷೀರ, ಮೂತ್ರ, ಕರೀಷ ಪಾದರೇಣುಗಳಿಂ ಸಕಲಪ್ರಾಣಿಗಳಂ ಪಾವನಗೊಳಿಸಿ ಯಜ್ಞಸಾಧನಗಳಾಗಿರ್ಪುವು | ಬ್ರಾಹ್ಮಣಶ್ರೇಷ್ಠನೆನಿಪ ಅವತ್ಸಾರಮಹರ್ಷಿಯಿಂ ಸ್ಥಿರಧ್ರುವ | ಅತನಿಂ ರೇಭ | ಅತನಿಂ ರೈಭ | ಅತನಂ ಶಾಂಡಿಲ್ಯನೀತೆರದಿಬ್ರಹ್ಮರ್ಷಿಕುಲವಭಿವೃದ್ಧಿಗೊಂಡು ಭೂಲೋಕದಪಾವನರೊಳುಪೂಜ್ಯಮೆನಿಸಿರ್ಪ ಮಿಂತೀಕಪಿಲೆಯ ಸಂತತಿಯೆಲ್ಲವುಂ ಪೂಜಾರ್ಹವಾಗಿಯುಂ ಸೇವ್ಯವಾಗಿಯುಂ ಪ್ರಾಪ್ಯವಾಗಿಯುಂ ಇಹಪರ ಸದ್ಗತಿಸಾಧಕವಾಗಿಯುಂ ಪ್ರಸಿದ್ಧಿಗೊಂಡು ವೇದಪ್ರತಿಪಾದ್ಯವಾಗಲಿದರಿಂ ಕಶ್ಯಪನು ಧನ್ಯನಾಗಿರ್ಕುಂ.

## ಕದ್ರುವಿನಿಂ ಹಾವುಗಳ ಸಂತತಿ.

ಬಳಿಕ ಹನ್ನೆರಡನೆಯ ಕದ್ರುವೆಂಬಾಕೆಗೆ ಅನಂತ | ತಕ್ಷಕ | ವಾಸುಕಿ ಮೊದಲಾದಸಾವಿರಮಹಾನಾಗರುದಿಸಿ | ಕಶ್ಯಪನುಪದೇಶಬಲದಿಂ ತಪವನಾಚರಿಸಿದಿಂ ಕಾದ್ರವೇಯರೇರತ್ನ ಲಿಂಗಧಾರಣಪಾಶುಪತವ್ರತದಿಂ ಪಾತಾಳ ದೊಳಗಿರ್ಪವಿವರೊಳಗನಂತನು ಸಹಸ್ರಫಣಾಮಂಡಲ ಮಂಡಿ

ತನಾಗಿ ಶೇಷನೆನಿಸಿ ಶಿವಭೂಷಣನಾಗಿರ್ಪನೀತನೇ ಶಿವಾಜ್ಞೆಯಿಂ ವಿಷ್ಣು ವಿಗೆ ಹಾಸಿಗೆಯಾದರುಂ ತನ್ನ ಯೋಗಬಲದಿಂ ಬಹುದೇಹಮಂ ಧರಿಸಿ ಪಾತಾಳಲೋಕದೊಳಗುಂ ಧರಣಿಯಂ ಪೊತ್ತಿರ್ಪಂ ತಕ್ಷಕನಿಂದ್ರಂಗೆ ಮಿ ತ್ರನಾಗಿ ನಿಜದೌಹಿತ್ರವಂಶಜನಾದ ಆಸ್ತಿಕ ಮಹರ್ಷಿಯ ಸಹಾಯದಿಂ ಜನಮೇಜಯನ ಸರ್ಪಯಾಗದೊಳು ಕಾದ್ರವೇಯಕುಲಮಂ ಪೊರೆದನಾವಾ ಸುಕಿಯು ಶರ್ವಂಗೆ ಕಂಕಣವಾಗಿ ತ್ರಿಪುರಸಂಹಾರದೊಳು ಮೇರುವೆಂಬ ಬಿಲ್ಲಿಗೆ ಹೆದೆಯಾಗಿಯುಂ ಸಮುದ್ರಮಥನದೊಳು ಮಂದರವೆಂಬ ಕಡಗೋ ಲಿಗೆ ನೇಣಾಗಿಯುಂ ಪ್ರಸಿದ್ಧಿಗೊಂಡಿರ್ಪಂ.

ಮೃಗಪಶುಪರ್ವತಾದಿಗಳ ಉತ್ಪತ್ತಿ.

ಬಳಿಕ ಜಪಿಮುರಸೆ ಕ್ರೋಧೆಯೆಂಬಾಕೆಗೆ ಸಮಸ್ತಪರ್ವತಂಗಳುಂ ಲೋಕಬಾಧಕರಾದ ಕೆಲವರು ಕ್ರೂರಾತ್ಮಕರುಂ ದ್ವಾದಶಪುತ್ರಿಯರುಂ ಪುಟ್ಟಿದರವರೊಳಗೆ ಭದ್ರಾಮದ್ರೆಯೆಂಬವಳಲ್ಲಿ ಉಳಿದ ದಿಗ್ಗಜಂಗಳುದಿ ಸಿದವು । ಮಾತಂಗಿಯಲ್ಲಿ ಮಿಕ್ಕಗಜಂಗಳುದಿಸಿದವು । ಗಂಧರ್ವೆಯಲ್ಲಿ ಕುದುರೆಗಳುದಿಸಿದವು । ಶಾರ್ದೂಲೆಯಲ್ಲಿ ಸಿಂಗಹುಲಿನಾಯಿಮುಂತಾದವು ಹುಟ್ಟಿದವು । ಹರಿಯೆಂಬಾಕೆಯಲ್ಲಿ ಮೃಗಂಗಳುದಿಸಿದವು । ಮೃಗಮದೆ ಯೆಂಬವಳಲ್ಲಿ ಕಸ್ತೂರಿಕಾಮೃಗಂಗಳುಂ ಚಮರೀಮೃಗಂಗಳುಂ ಕರಡಿಗ ಳುಂ ಪುಟ್ಟಿದವು । ಸುರಸೆಯೆಂಬವಳಲ್ಲಿ ಸರ್ಪಜಾತಿಗಳುದಿಸಿದವು ನೆಳೆಯೆಂ ಬವಳಲ್ಲಿ ಸೂರ್ಯಾಶ್ವಸ್ಕನ್ನ ಫೇನದಿಂದೊಡಗೂಡಿದ ಭೂಗರ್ಭದೊಳಡಗಿ ರ್ಪ ವಹ್ನಿಯು ಶಮಿಯಾಗಲದನುಂಡು ತಪಮಂಗೈದಕಾರಣದಿಂ ಪುಷ್ಪ ಪ್ರಕಾಶವಿಲ್ಲದೆ ಫಲಿಸಿ ನಿಜಸ್ಪರ್ಶನ ಸಮಿದಾಹರಣ ಪ್ರದಕ್ಷಿಣಾದಿಗಳಿಂ ಪಾಪಮಂ ಪರಿಹರಿಸಲುಳ್ಳ ಛಂದೋಮಯವಾದ ಅಶ್ವತ್ಥವೆಂಬ ವೃಕ್ಷರಾ ಜಮುಂ ವೃಕ್ಷಜಾತಿಗಳುಂ ಜನಿಸಿದವು । ಕುಹೂಯೆಂಬಾಕೆಯಲ್ಲಿ ಪು ಷ್ಪಫಲಂಗಳುಳ್ಳ ಮರಂಗಳು ಪುಟ್ಟಿದವು । ವಿರೋಧೆಯೆಂಬಾಕೆಯಲ್ಲಿ ಗುಲ್ಮಲತಾದಿ ನಾನಾತೃಣಜಾತಿಗಳು ಜನಿಸಿದ ವಿಂತುಜಗವೆಲ್ಲಬಹುಳಮಾ ಗಿ ಮರೀಚಿಬ್ರಹ್ಮಸೃಷ್ಟಿಯೆನಿಸಿರ್ಕುಂ.

ಭೃಗುಬ್ರಹ್ಮಸೃಷ್ಟಿ.

ಅನಂತರದೊಳಾಭೃಗುಬ್ರಹ್ಮಂಗೆ ಕವಿಯೆಂಬ ಮಗನಾದನಾತಂಗೆ ಶು ಕ್ರನುದಿಸಿ ದೈತ್ಯರ್ಗೆ ಗುರುವಾಗಿರ್ಪನೀಭೃಗುವೇ ಮಹೇಶ್ವರಮಹಿಮೆ ಯನರಿಯದೆ ತನ್ನ ಜಾಮಾತೃವಾದ ವಿಷ್ಣುವಿನೊಳು ಪಕ್ಷಪಾತಿ

ವೋಹನಿಮೂಢನಾಗಿ ನಿಜಪಿತೃವಂ ಲೆಕ್ಕಿಸದೆ ತನಿಗನುಜನಾಗಿ ಬ್ರಹ್ಮಲಲಾಟದಿಂದಾವಿರ್ಭವಿಸಿದ ತಾಮಸರುದ್ರನ ಸಚ್ಛಂದಾವತಾರವಂದರಿತು ಭೂಕೈಲಾಸಕ್ಕೈದಿ ಸಭಾರುದ್ರನಂನೋಡಿಲ್ಲತನೀ ರುದ್ರನೆಂದರಿತು ಸತ್ಕಾರಗೊಳ್ಳದವಮಾನಿತನಾಗಿ ವೈಕುಂಠದೊಳುವಿಷ್ಣುವನೋದಿದಲ್ಲಿ ಕಪಟಸಾತ್ವಿಕದಿಂ ಚರಣವೊಳರ್ದ ಲೋಚನವಂ ನೀಗಿ ತನ್ನವಿಜ್ಞನೆಂದರಿಸಿತಾಂತ್ರಿಕರಿಂಗೆ ವಿಷ್ಣುಪಾರಮ್ಯವಂ ಸೂಚಿಸಿ ದಕ್ಷಬ್ರಹ್ಮನೊಡಗೂಡಿ ಅಹಂಕಾರಮತ್ತನಾಗಿ ಕಡೆಗೆ ವೀರಭದ್ರನಿಂ ಶಿಕ್ಷಿಸಲ್ಪಟ್ಟು ದುಃಖಭಾಜನನಾಗಿ ಬಳಿಕ ದಧೀಚಿಮಹರ್ಷಿಯ ಕರುಣದಿಂ ಮಹೇಶ್ವರ ಪಾರಮ್ಯಮಹಿಮೆಗಳನರಿತು ಶಾಂಭವದೀಕ್ಷೆಯಿಂ ಕೃತಾರ್ಥನಾಗಿರ್ದಂ ||

## ಅಂಗಿರೋಬ್ರಹ್ಮಸೃಷ್ಟಿ.

ಅನಂತರದೊಳಂಗಿರೋಬ್ರಹ್ಮಂಗೆ ಅಂಗೀರಸನೆಂಬ ಬೃಹಸ್ಪತಿಯುದಿಸಿ ಸುರಾಚಾರ್ಯನಾಗಿರ್ಪ್ಪನಿವಾ ಅಂಗಿರಸ್ಸೀ ಅಥರ್ವಣ ಸಿದ್ಧನಾಗಿತನ್ನಂ ಪ್ರತಿಭಟಿಪವಗ್ನಿಯಂ ಧಿಕ್ಕರಿಸಲು ತಪಂಗೊಂಡು ನಿಜಯೋಗಬಲದಿಂ ಪ್ರತ್ಯಗ್ನಿ ತೇಜವಂಕಲ್ಪಿಸಿ ವಹ್ನಿಯು ತನ್ನಂ ನಿಗ್ರಹಿಸಲೋಸುಗ ನಿರ್ಮಿಸಿದ ಕೃತ್ಯೆಯುಂ ಭಂಜಿಸಲಿಂತು ಮಂತ್ರಕ್ರಿಯಾ ಕದನದೊಳಾಭಿಚಾರಿಕ ಕ್ರಿಯಾದಕ್ಷವಾದ ಕುಂಭಿಳೆಯಂ ಯಜಿಸಿ | ಅಂಗಿರಸ್ಸು | ಪ್ರತ್ಯಂಗಿರಸ್ಸು ಉಪಾಂಗಿರಸ್ಸು | ಅನ್ವಂಗಿರಸ್ಸುಗಳಂಮಾಡಿ ನಾನಾಕ್ರೂರಶಕ್ತಿಗಳಂದಚ್ಛುವಚಘೋರಸೃಷ್ಟಿಗಳಂಸೃಜಿಸಿ ಕಡೆಗೆ ಚತುರ್ಮುಖಿನಸಾತ್ವನದಿಂ ಶಾಂತಹೃದಯನಾದಂ ||

## ಪುಲಸ್ತ್ಯಬ್ರಹ್ಮಸಂತತಿ.

ಅನಂತರದೊಳಾಪುಲಸ್ತ್ಯಂಗೆ ವಿಶ್ರವಸ್ಸುಪ್ರಟ್ಟದನಾತಂಗೆ ಕುಬೇರನುಂ ಕಿಂನರರುಂ ಜನಿಸಿದರು | ಮತ್ತಮಾ ವಿಶ್ರವಸುಗೆ ರಾಕ್ಷಸಪುತ್ರಿಯರಾದ ಕೈಕಸಿ ಪುಷ್ಪೋತ್ಕಟಯೆಂಬೀರ್ವರು ಸ್ತ್ರೀಯರವರೊಳಗೀ ಕೈಕಸಿಯೆಂಬಾಕೆಗೆ ರಾವಣ ಕುಂಭಕರ್ಣ ವಿಭೀಷಣರೆಂಬಪುತ್ರರಾದರು | ಪುಷ್ಪೋತ್ಕಟಯೆಂಬಾಕೆಗೆ ಖರದೂಷಣತ್ರಿಶಿರರೆಂಬ ಮೂವರುಮಕ್ಕಳುಂ ಶೂರ್ಪನಖಿಯೆಂಬೊರ್ವಳು ಮಗಳುಂಪ್ರಟ್ಟದರೀ ರಾಕ್ಷಸರು ತಮೋಭಾವದಿಂ ತಪವಂಗೈದರಾಗಿ ಲೋಕಕಂಟಕತ್ವದಿಂ ಪಾಪಿಗಳೆನಿಸಿ ರಘುರಾಮನಿಂ ಹತರಾದವರೊಳಗೆ ವಿಭೀಷಣನು ಸಾತ್ವಿಕತಪಸ್ಕನಾದುದರಿಂದ ಚಿರಜೀವಿಯಾಗಿರ್ಪನಿವರೆಲ್ಲರುಂ ಶಿವಪೂಜಕರಾದುದುರಿಂ ಮಹದೈಶ್ವರ್ಯಭೋ

ಗನುಹಿತರಾದ ರಾವಣನೇ ಪೇಚಾಧ್ಯಯನಸಿದ್ಧಿಯುಂಪಡೆದು ಪಿಳಿಸಿದನಾತ ನಸುತರೊಳು ಶಕ್ರಜಿತುವೆ ದೇವರ್ಕಳಂ ಗೆಲ್ದನಿಂತು ಪುಲಸ್ತ್ಯಬ್ರಹ್ಮ ಸಂತತಿಯುಂ ತಿಳಿಯಲ್ಪೇಳ್ಗುಂ ॥

ಪುಲಹಕ್ರತುಬ್ರಹ್ಮಸಂತತಿ.

ಅನಂತರದೊಳಾ ಪುಲಹಂಗೆ ಕಿಂಪುರುಷಜಾತಿಯೊಳ ವ್ಯಾಘ್ರಾದಿ ಮೃಗಂಗಳುಂ ಪುಟ್ಟಿದವು ಕ್ರತುವಿನಿಂ ಯಜ್ಞಸಾಮಗ್ರಿಗಳುಂ ಋತ್ವಿತ್ವಿಜರುಂ ಸೂರ್ಯಚಂದ್ರಾಗ್ನಿ ತೇಜಸಾದ ಋಷಿಪ್ರವರರುಂ ಪುಟ್ಟಿದರು ॥

ದಕ್ಷಬ್ರಹ್ಮಸಂತತಿ.

ಅನಂತರದೊಳಾದಕ್ಷನಿಗೈವತ್ತುಮಂದಿಪುತ್ರಿಯರುಜನಿಸಿದರವರೊಳಗೆ । ಕೀರ್ತಿ, ಲಕ್ಷ್ಮಿ, ಧೃತಿ, ಮೇಧೆ, ಪುಷ್ಟಿ, ಶ್ರದ್ಧೆ, ಕ್ರಿಯೆ, ಬುದ್ಧಿ, ಲಜ್ಜೆ, ಮತಿಯೆಂಬ ದಶಪುತ್ರಿಯರಿಂ ದಕ್ಷನು । ಚತುರ್ಮುಖಸಂಕಲ್ಪ ಜನಿತನಾದ ಧರ್ಮದೇವತೆಯೆಂಬಾತನಿಗೆ ಕೊಟ್ಟನು ।ಅದಿತಿಮೊದಲಾದ ಹದಿಮೂರು ಪುತ್ರಿಯರಂ ಪೂರ್ವೋಕ್ತಕ್ರಮದಿಂ ಕಶ್ಯಪಬ್ರಹ್ಮಂಗಿತ್ತನು । ಅಶ್ವಿನಿಮೊದಲಾದಿಪ್ಪತ್ತೇಳುಪುತ್ರಿಯರಂ ಚಂದ್ರನಿಗೆ ಮದುವೆ ಮಾಡಿದನು । ಬಳಿಕಾಧರ್ಮದೇವತೆಗೆ । ಶಮ । ಕಾಮಹರ್ಷರೆಂಬಮೂವರುಪುತ್ರರುದಿಸಿದರವರೊಳಗೆ । ಶಮಂಗೆ ಪ್ರೀತಿ । ಕಾಮಂಗೆ ರತಿ । ಹರ್ಷಂಗೆ ಆನಂದಿಯೆಂಬವರೇ ಸ್ತ್ರೀಯರಾದರವರೇ ಜಗತ್ತಿನ ಧರ್ಮ ಕರ್ಮಗಳಿಗೆ ಸಹಾಯರಾಗಿರ್ಪ್ಪಂ ॥ ಮತ್ತಮಾ ದಕ್ಷಬ್ರಹ್ಮನು ತಪಃಸ್ತ್ರೈರ್ಯ ತನ್ನಗರ್ಭದೊಳು ದಾಕ್ಷಾಯಣಿಯೆಂಬಪೆಸರಿನಿಂಪತಿವ್ರತಾರತ್ನವೆಸಸತಿಯೆಂದು ಪ್ರಸಿದ್ಧವಾಗಿ ಶಾಂಭವೀಕಲೆಯುದಿಸಿದಳಾಕೆಯುಂ ಚಿರತರತಪವಂಮಾಡಿ ಈಶಾನರುದ್ರನಂ ಮದುವೆಯಾದಳಾಕೆಯ ಜನನದಿಂ ದಕ್ಷಂಗೆ ಸಾಮರ್ಥ್ಯಭೋಗ ಪ್ರಾಭವಮಹಿಮಾದಿಗಳಧಿಕವಾಗೆ ಮೊದಲಹಂಕರಿಸಿ ಬಳಿಕ ಭೃಗ್ವಾದಿದುರ್ಮಂತ್ರಿಸಹವಾಸದಿಂ ಮತ್ತನಾಗಿ ದಧೀಚಿಶಾಪದಿಂ ವಿವೇಕವಿಹೀನನಗಿ ರುದ್ರದ್ವೇಷದಿಂ ಅರುದ್ರಭಾಗಮಿಲ್ಲದೆ ಯಜ್ಞವಂ ಮಾಡಲಂತಾಪುಪಿಯುಶರೀರದಿಂ ದುದಿಸಿದೊಡಲ ನಿರಿಸಬಾರದೆಂದಾ ದಾಕ್ಷಾಯಣಿದೇವಿ ರುದ್ರಾಗ್ನಿಮೂರ್ತಿಯೊಳು ತನ್ನ ತಪೋಜ್ವಾಲೆಯಿಂ ದೇಹನನುರಿಸಿ ಬಳಿಕ ತಪದಿಂ ಪ್ರಾರ್ಥಿಸುತಿರ್ಪ ಹಿಮಪರ್ವತದೊಳುದಿಸಿ ಪಾರ್ವತೀನಾಮದಿಂದೀಶಾನಸುಂದರಿಯಾದಳಾದಕ್ಷನುಂ ಭೃಗ್ವಾದಿಗಳುಂ ಸಂಹಾರಕ್ಕಾಗಿಬಂದಿಪ್ಪದೇವರ್ಕಳುಂರುದ್ರಕೋಪದ್ರಕೀರ್ಣಜ

ಟಾಜನಿತವೀರಭದ್ರವೀರಬಾಹುಪ್ರಮುಖರಿಂ ಭಗ್ನಾಂಗರಾದರವರೊಳುದಕ್ಷನೇಮೃತನಾದನಾತಂಗೆಮರಳಿರುದ್ರಪ್ರಸಾದದಿಂಬಸ್ತಶಿರಮಾಯ್ತುದೇವರ್ಕಳಿಗುಂ ಪ್ರಕಾರಾಂತರದಿಂದಂಗಪುಷ್ಟಿಯಾಯಿತ್ತೀದಕ್ಷನಿಂದಲೇ ಛಾಯೆಯುದಿಸಿದಳಾಕೆಯುಂಸೂರ್ಯನಿಗೆಕೊಡಲುದಸ್ರರೂಪಿಣಿಯಾದಾಕೆಯೊಳು ದೇವವೈದ್ಯರೆನಿಪದಸ್ರರುದಿಸಿದರಾದಕ್ಷಕಲ್ಪಿತಗಳಾದ ಸಂಜ್ಞೆಯೊಳಂ ಛಾಯಾಪತಿಭಾವದಿಂರವಿಸಂಪರ್ಕವಾಗೆಶನೈಶ್ಚರನುಂಯಮುನಾಕಾಳಿಂದಿನದಿಯುಂಪುಟ್ಟಿದರಾಯಮುಂಗೆಗುಳಿಕನುದಿಸಿದನಾತನೇಶನೈಶ್ಚರಂಗೆದತ್ತಪುತ್ರನಾದನಿಂತುದಕ್ಷಪ್ರಜಾಪತಿಯಸಂತತಿಯಂ ತಿಳಿಯಲ್ಪೇಳ್ಕುಂ ||

### ಅತ್ರಿಬ್ರಹ್ಮಸಂತತಿ.

ಅದಂತರದೊಳಾ ಅತ್ರಿಬ್ರಹ್ಮನಿಗೆ ಪತಿವ್ರತಾರತ್ನಮೆನಿಪ ನಸೂಯೆಯೆಂಬಾಕೆಯೊಳು ಶಕ್ತಿತ್ರಯಪ್ರೇರಿತಮಾದಕಾರಣಮೂರ್ತಿತ್ರಯಮುದಿಸೆ ಚತುರ್ಮುಖನ ನೇತ್ರದಿಂ ಚಂದ್ರನಾಗಿ ಪುಟ್ಟಿದನು ವಿಷ್ಣುವೇದತ್ತಾತ್ರೇಯನಾಗಿ ಜನಿಸಿ ಗೋರಕ್ಷಾದಿಗಳಿಂದ ವಧೂತಚರ್ಯೆಯಂಸ್ಥಾಪಿಸಿ ಯೋಗಿಯಾದ ಮಹೇಶ್ವರನೇ ದೂರ್ವಾಸನಾಗಿಪುಟ್ಟಿ ಶಿವಯೋಗಸಿದ್ಧಿಯಂಪಡದು ಜಗದೊಳಪ್ರತಿಹತಶಾಪನಾದಚಂದ್ರನಿಂ ಗುರುತರೆಯಾದ ತಾರೆಯೊಳು ಬುಧನುದಿಸಿದನಿಂತತ್ರಿಬ್ರಹ್ಮಸಂತತಿಯಕ್ಕುಂ ||

### ವಸಿಷ್ಠಸಂತತಿ.

ಅನಂತರದೊಳಾವಸಿಷ್ಠಬ್ರಹ್ಮಂಗೆ ಶಕ್ತಿಮುಂತಾದ ನೂರುಮಂದಿಮಹರ್ಷಿಗಳು ವಿಶ್ವಾಮಿತ್ರಶಾಪೋದ್ಯಪಹತಿಗಳಿಂದೆಲ್ಲರೂ ಭಗ್ನರಾಗೆ ವಸಿಷ್ಠತಪೋಬಲದಿಂ ಶಕ್ತಿಯೊರ್ವನುಳಿದನಾಶಕ್ತಿಯಿಂಪರಾಶರನುದಿಸಿದ ನಾತನಿಂವ್ಯಾಸನುಪುಟ್ಟಿದುನಾತನಿಂಶುಕನುದಿಸಿದನಾತನೇ ಜಿತೇಂದ್ರಿಯನಾಗಿ ವೀರವಿರಕ್ತಿಯುಂ ಪಡೆಯಲಲ್ಲಿಂ ಗೌಡಪಾದನೇ ಶಿಷ್ಯನಾದ ನಾತಂಗೆ ವಿಷ್ಣುವೇ ಶಿಷ್ಯನಾಗಿ ಜನಿಸಿದನಾತಂಗೆ ರುದ್ರನೇ ಅವತರಿಸಿ ಶಿಷ್ಯನಾದನೀಪರಿಯೊಳು ವಸಿಷ್ಠಸಂತತಿಯೆಲ್ಲಮುಂ ಬ್ರಹ್ಮವಿದ್ಯಾಸಂಪ್ರದಾಯಪ್ರವರ್ತಕಮಾಯಿತೀ ನವಬ್ರಹ್ಮರೊಳಗಭಿವ್ಯಕ್ತಮಾದ ಪರಮೇಶ್ವರಸೃಷ್ಟಿಶಕ್ತಿಯೇ ಪ್ರಪಂಚಕಲ್ಪನೆಗೆ ಕಾರಣ ಮಾದುದೆಂದು ತಿಳಿಯಲ್ಪೇಳ್ಕುಂ.

### ಚತುರ್ಮುಖನಿಂ ಪ್ರಜಾಪತಿಸಂತತಿ.

ಅನಂತರದೊಳಾಬ್ರಹ್ಮನಿಂ ಪ್ರಜಾಪತಿಪುಟ್ಟಿದನಾತಂಗೆ ।ಧರ,ಧ್ರುವ,

ಸೋಮ, ಆಪ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸರೆಂಬೆಂಟು ವಸುಗಳು ಜನಿಸಿದರವರೊಳಗೆ ಧರಂಗೆ ದ್ರವಿಣನೆಂಬಮಗನು । ಧ್ರುವಂಗೆ ಕಾಲನೆಂಬಮಗನು । ಸೋಮಂಗೆ ಸುವರ್ಚನೆಂಬಮಗನು । ಆಪಂಗೆ ಶಾಂತನೆಂಬಮಗನು । ಅನಿಲಂಗೆ ಪುರೋಚನೆಂಬಾತ್ಮಜನು। ಅನಲಂಗೆ ಜ್ಯೋತಿಯೆಂಬ ತನಯನು । ಪ್ರತ್ಯೂಷಂಗೆ ದೇವಮಹಾಮುನಿಯೆಂಬ ಪುತ್ರನು । ಪ್ರಭಾಸಂಗೆ ಬೃಹಸ್ಪತಿವಡಹುಟ್ಟಿದವಳಾಯೋಗಸಿದ್ಧಿಯೆಂಬ ಸ್ತ್ರೀಯಲ್ಲಿ ವಿಶ್ವಕರ್ಮನು ಜನಿಸಿ ದೇವತೆಗಳಿಗೆ ಬಡಗಿಯಾದನು । ಮತ್ತಮಾ ವಿಶ್ವಕರ್ಮನಮಗಳು ಬಡಬೆಯೆಂಬವಳಲ್ಲಿಅಶ್ವಿನಿದೇವತೆಗಳವತರಿಸಿ ನಾಸತ್ಯರೆನಿಸಿದವರಿಂ ಗುಹ್ಯರೆಂಬದೇವಜಾತಿಗಳುಂ ಸಕಲೌಷಧಿಗಳೆಲ್ಲಂಜನಿಸಿದವಿಂತು ಪ್ರಜಾಪತಿಯ ಸಂತಾನಮಂ ತಿಳಿಯಲ್ವೇಳ್ಕುಂ.

### ಧಾತೃವಿಧಾತೃಸಂತತಿ.

ಅನಂತರತೊಳಾಬ್ರಹ್ಮಂಗೆ ಧಾತೃವೆಂದು ವಿಧಾತೃವೆಂದೀರ್ವರು ಮಕ್ಕಳವರು ಲೋಕಪುಣ್ಯಪಾಪಂಗಳಂ ನಡಸುತಿರ್ಪರವರಿಗೆ ಲಕ್ಷ್ಮಿಯೆಂದು ಜ್ಯೇಷ್ಠಾದೇವಿಯೆಂದೀರ್ವರುವಡಹುಟ್ಟಿದವರೊಳಗೆ ಲಕ್ಷ್ಮಿಗೆಜಾತ್ಯಶ್ವಂಗಳು ಪುಟ್ಟಿದವು। ಜ್ಯೇಷ್ಠಾದೇವಿಗೆ ಶಕ್ರದೇವಿಯೆಂಬುಪ ಮಗಳಾದಳಳಗೆ ವೈಷ್ಟಿ । ಮಾಧ್ವಿ, ಗೌಡಿಯೆಂಬ ತ್ರಿವಿಧ ಸುರೆ ಪುಟ್ಟಿತು । ಸುರೆಯಿಂದ ಧರ್ಮನು ಜನಿಸಿದನಾತಂಗೆ ಭಯನೆಂದು ಮಹಾಭಯನೆಂದಂತಕನೆಂದು ಮೂರುಪುತ್ರರುಗಳುಂ ಮತ್ತೆ ಕೆಲರು ಸುತೆಯರುಂಪುಟ್ಟಿದರವರಿಂದಲೇ । ಕ್ರೌಂಚ, ವಾಯಸ, ಗಿಡಗ, ಹದ್ದು, ಹಂಸೆ, ಗಿಳಿ, ಕೋಗಿಲೆ, ಚಕ್ರವಾಕಬಕಾದಿ ನಾನಾಪಕ್ಷಿಜಾತಿಗಳುಂ ಪುಟ್ಟಿದವೆಂದು ನಿಶ್ಚಿತಮುಕ್ತಂ.

### ಸೃಷ್ಟಿವಿರೋಧಪರಿಹಾರ.

ಬಳಿಕಿಂತುಪೇಳಿದಪ್ರಕಾರದಿಂ ಸೃಜಿಸಲ್ಪಟ್ಟವರೊಳು ಕೆಲವರು ದ್ವಿತ್ರಿಸ್ಥಳಂಗಳಲ್ಲಿ ಜನಕಾದಿಭೇದದಿಂ ಪುದಿಸಿದಂತೆ ತಿಳಿಯಲ್ಪಟ್ಟಿರುವವರು ನಿಜಯೋಗಬಲದಿಂ ಕಾರಣಾಂತರಕ್ಕಾಗಿ ಬೇರೊಂದುಕಡೆಯೊಳು ಜನಿಸಿದರವರಲ್ಲದೆ ಪ್ರಾಣಿಭೇದವಿಲ್ಲಾಗಿ ಶಿವನನಾದಿಮಾಯೆಯಿಂ ವಿರೋಧವಿಲ್ಲದಿರ್ಕವಾ ಜಗಜ್ಜನಕನಾದ ಬ್ರಹ್ಮನಸುಖಾತಿಶಯಮೆಂತೆಂದೊಡೆ.

### ಸುಖತಾರತಮ್ಯ.

ಬಳಿಕ ಕ್ರಿಮಿಕೀಟಪತಂಗಪಶ್ವಾದಿಜೀವಜಾತಿಗಳಿಗೆ ಮಿಗಿಲೆನಿಪುದೇ ನರ

ಜನ್ಮವದರೊಳಗೆ। ಆಯುರಾರೋಗ್ಯಕುಲಬಲಪರಾಕ್ರಮರೂಪಯೌವನ ವಿದ್ಯಾಕೀರ್ತಿಸಂಪದದಾದಿಸಕಲಸೌಭಾಗ್ಯಭೋಗಂಗಳೊಳಗೊಂದುಕೊರತೆಯಿಲ್ಲದೆ ಸಪ್ತಸಮುದ್ರಾಧೀಶ್ವರನಾಗಿರ್ಪ ಸಾರ್ವಭೌಮಂಗೆಸರ್ವರಿಂ ನೂರುಮಡಿಸುಖವವರಿಂದೇವತಾಮಧ್ಯಮರಸುಖವವರಿಂದೇವತಾವರಿಷ್ಠಂ ಸುಖವವರಿಂ ನೂರುಮಡಿ ಇಂದ್ರನಸುಖವಾತನಿಂ ನೂರುಮಡಿ ಬೃಹಸ್ಪತಿಯ ಸುಖವಾತನಿಂ ನೂರುಮಡಿಬ್ರಹ್ಮನ ಸುಖಮಿಂತು ಮಹಾಸುಖಸ್ವರೂಪನಾಗಿ ಬ್ರಹ್ಮನೇ ಸತ್ಯಲೋಕವನಾಳುತ್ತಿರ್ಪಂ.

## ವೈಕುಂಠಲೋಕ.

ಬಳಿಕಾಸತ್ಯಲೋಕದಿಂ ಮೇಲೆ ನಾಲ್ಕುಕೋಟಿಯೋಜನಾಂತರದಲ್ಲಿ ವೈಕುಂಠಲೋಕವಿರ್ಪುದದು ವಿಕುಂಠಸಂಜಾತನತಪೋಮಹಿಮೆಯಿಂನಿರ್ಮಿಸಲ್ಪಟ್ಟುಜ್ಞಾನಸುಖಪ್ರಚುರಮಪ್ಪ ಸರ್ವೋತ್ತಮ ನಗರಸೌಧಾರಾಮಹರ್ಮ್ಯದಾದಿ ಪರಿಶೋಭಿತವಾಗಿಹುದಲ್ಲಿ। ಅಂತರ್ಯೋಗಿಗುಣ। ಬಹಿಸ್ಸತ್ವಗುಣದಿಂ ಶಿವಪ್ರಸಾದಲಬ್ಧ ಸರ್ವಶಕ್ತಿಸಮಹಿತನಾಗಿ ಜಗತ್ಸೃಷ್ಟಿಸ್ಥಿತಿಲಯಸಾಮರ್ಥ್ಯಮುಳ್ಳವ ನೆನಿಸಿ ಶಾಂಭವೀಲೀಲಾವತಾರವಾದ ವೈಕುಂಠ ನಾರಾಯಣನು ನೀಲಮೇಘಶ್ಯಾಮಲಕೋಮಲಾಂಗದಿಂ ರಾಜರಾಜದೇವಮುಖದಿಂ ಕಮಲಸುಂದರದ್ವಿಲೋಚನಂಗಳಿಂದಲುಂ ಶಂಖಚಕ್ರಗದಾಶಾರ್ಙನಂದಕಂಗಳೆಂಬ ಪಂಚಾಯುಧಂಗಳನಾಂತ ವಾಮದಕ್ಷಿಣಕರಚತುಷ್ಟಯದಿಂ ವನಮಾಲೋಪವೀತ ಪೀತಾಂಬರ ಕಿರೀಟಕೌಸ್ತುಭಾದ್ಯಲಂಕಾರಗಳಿಂ ದಿವ್ಯಗಂಧಮಾಲ್ಯಾದಿಗಳಿಂ ಸಿಂಗರಂಪಡೆದು ಲಕ್ಷ್ಮಿಯೊಡಗೂಡಿ ಜ್ಞಾನಶಕ್ತಿಬಲೈಶ್ವರ್ಯ ತೇಜೋವೀರ್ಯಗಳೆಂಬ ಷಡ್ಗುಣಾಂಶಗಳಿಂ ಭಗವಂತನನಿಸಿ ಜೀವರೊಳ್ದಿವ್ಯಾಜಕರುಣಾಶಾಲಿಯಾಗಿಪ್ರಭವದೊಳಗಸಮನೆನಿಸಿ ಶಿವಯೋಗದಿಂ ಸರ್ವೇಶನಾಗಿ ನಿಜನಾಭೀಕಮಲವೆಂಬ ಯೋನಿಯೊಳ್ ಶಿವಚಿನ್ಮುಖರಲಿಂಗದಿಂ ಗರ್ಭಧಾರಣವಂಗೊಂಡು ಚತುರ್ಮುಖನಂಪೆತ್ತು ಪುರಾಣಮೂರ್ತಿಯಾದ ಮಹಾಮಾಯಾಸ್ವರೂಪನಾದುದು। ಪುರುಷತತ್ವವಾದ ಮಹೇಶಲಿಂಗೈಕ್ಯದಿಂ ಪುರುಷೋತ್ತಮನೆನಿಸಿ ಶ್ರೀಭೂನೀಳಾತುಲಸ್ಯಾದಿಸ್ತ್ರೀಸಮೇತನಾಗಿ ವಿಷ್ವಕ್ಸೇನಾದಿಪಾರಿಷದರಿಂದುಂ ಗರುಡಾದಿವಾಹನಾದಿಗಳಿಂದಲುಂ ವಿಶ್ರುತನಾಗಿ ಶೇಷಶಯನದೊಳು ಯೋಗನಿದ್ರೆಯಂಗೈವುತ್ತ ಪರಮೇಶ್ವರಾಖ್ಯನಾಗಿ ತನಿಗಂತರ್ಯಾಮಿಯಪ್ಪ ಚಿದಾನಂದಲಿಂಗದಪ್ರೇರಣೆಯಿಂ ತಾನೇಜಗದಂತರ್ಯಾಮಿಯೆನಿಸಿ ಶಿವೋಹ

ಮೆಂಬುವ ಶಿವಾದ್ವೈತಭಾವಸಿದ್ಧಿಯಿಂ ಶಿವಗೌರವಪ್ರಾಭವಂಗಳೆಂಪಡದು ಶಾಂಭವಿಯು ಅನ್ಯೂತ್ಕೃಷ್ಟರೀಕಲಾಪ್ರಸಾದದಿಂ ತಾನೇ ಸರ್ವೋತ್ತಮನೆಂದು ಶ್ರುತಿತಂತ್ರಾದಿಗಳಿಂ ಕೊಂಡಾಡಲ್ಪಟ್ಟು ಮಾಯಾಮಯಶಕ್ತಿಪ್ರಾಚುರ್ಯದಿಂ ಜಗತ್ಕಾರ್ಯನಿರ್ವಹಣಧುರೀಣನಾದ ಘಟಕಘಟಪ್ರವೃತ್ತಿಯಂ ತಾಳ್ದು ಧರ್ಮಸಂಸ್ಥಾಪನಾದಿಕಾರ್ಯಗಳಂ ಮಾಡಲೋಸುಗ ಕಾರಣಾಂತರಂಗಳಿಂದಾಗುವಂತೆ ನಿಯತವಾದ ದೇವತಾಂತರಶಕ್ತಿಸಹಿತಾವತಾರಗಳೊಳು ತನ್ನಂಶವಂ ಬೆರಸಿ ಪ್ರಾಧಾನ್ಯದಿಂ ತಾನೇ ಕರ್ತೃವೆನಿಸಿ । ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವರಾಮ, ರಾಘವರಾಮ, ಯಾದವರಾಮ, ಬೌದ್ಧ, ಕಲ್ಕಿಗಳೆಂಬ ದಶಾವತಾರಂಗಳಂ, ಕಪಿಲ, ಉಪೇಂದ್ರ, ವ್ಯಾಸಾದಿ ನಾನಾವತಾರಂಗಳಂ ತಾಳ್ದು । ಮಹಾಮೋಹಿನಿ ರೂಪದಿಂ ಶಿವಲೀಲಾವತಾರಕ್ಕೆ ಪತ್ನಿಯಾಗಿ ಪತಿಯಂ ವಶಗೊಳಿಸಿ ಪರವೈಕುಂಠನೆಂಬ ಪರರೂಪದಿಂ । ಸಂಕರ್ಷಣ ॥ ವಾಸುದೇವ । ಪ್ರದ್ಯುಮ್ನ । ಅನಿರುದ್ಧರೆಂಬ ವ್ಯೂಹಚತುಷ್ಟಯದಿಂ । ಮತ್ಸ್ಯಾದಿವಿಭವಗಳಿಂ । ಬಾದರನಾರಾಯಣ । ರಂಗಧಾಮಾದ್ಯರ್ಚಾವತಾರರೂಪತಿಂ ಜೀವಗರ್ಭಾತ್ಮರೂಪದಿಂ । ಪಂಚಪ್ರಕಾರನಾಗಿರ್ದು ಯಜ್ಞೇಶಾದಿನಾಮಕಂಗಳಿಂದದು ವೈಷ್ಣವರ್ಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ಮುಕ್ತಿಚತುಷ್ಟಯಮಂ ಕೊಡುತ ನಿಜಭಕ್ತಿಯುಳ್ಳ ಗಜೇಂದ್ರ ಪ್ರಹ್ಲಾದ ರುಕ್ಮಾಂಗದಾಂಬರೀಷ ಭೀಷ್ಮಾದಿಭಾಗವತರಿಂ ದುಪಾಸಿತನಾಗಿ ತನ್ನಲೋಕದಿಂ ಕೆಳಗಿರ್ಪ ಸಮಸ್ತಜೀವರಿಂ ಬ್ರಹ್ಮರುದ್ರ ಶಕ್ರಲೋಕಪಾಲಕಾದಿ ದೇವಭೇದಂಗಳಿಂ ಮಹರ್ಷಿಗಳಿಂದಲುಂ ನಿರಂತರಮೋಲೈಸಿಕೊಳ್ಳುತ ಬ್ರಹ್ಮಾಂಡಕ್ಕರಸಾಗಿರ್ಪಂ.

### ಸುಬ್ರಹ್ಮಣ್ಯಲೋಕ.

ಬಳಿಕಾವೈಕುಂಠಲೋಕದಿಂ ಮೇಲೊಂದು ಕೋಟಿಯೋಜನಾಂತರದಲ್ಲಿ ಷಣ್ಮುಖನಾದ ಕುಮಾರಸ್ವಾಮಿಯಿಂ ಪರಿಪಾಲಿತವಾದ ಸುಬ್ರಹ್ಮಣ್ಯಲೋಕವಿಹ । ದದುಶುದ್ಧವೈದಿಕಜ್ಞಾನಮಯಮಾಗಿ ಸ್ವರ್ಗಾದಿವೈಕುಂಠಾಂತವಾದ ಲೋಕಂಗಳೊಳು ತಪವಂ ಚರಿಸಿ ಸಿದ್ಧರಾದ ಬ್ರಹ್ಮವೇತ್ತರಿಂದುಪಾಶ್ರಿತವಾಗಿ ಹಾಊಹಾಊಹಾಯೆಂದು ಸಾಮಧ್ವನಿಯಿಂ ಮುಖರಗೊಂಡು ವಿಷ್ಣ್ವಾದಿಸಕಲಸುರಕಾವ್ಯಮಾತ್ರಪ್ರರ್ದಲ್ಲಿ ಸುಬ್ರಹ್ಮಣ್ಯನಾಮದಿಂ ಕುಮಾರಸ್ವಾಮಿಯು ಷಡಧ್ವರೂಪವಾದ ಮುಖಷಟ್ಕದಿಂ ದಳ

ನಟ್ಟ ತಪೋಯೋಗಜ್ಞಾನಬಲಸ್ವರೂಪದಿಂ ದೇವಗುಣಪತಿಯಾಗಿ ಹರಿಬ್ರಹ್ಮಾದಿಗಳಿಂದೋಲೈಸಿಕೊಳ್ಳುತಿರ್ಕುಂ॥

ಉಮಾಲೋಕ,

ಮತ್ತಮಲ್ಲಿಂದ ಮೇಲೊಂದುಕೋಟಿ ಯೋಜನಾಂತರದಲ್ಲಿ ಶಾಂಭವಿಯಾದುಮಾದೇವಿಯ ದಿವ್ಯಲೋಕವಿಹುದಲ್ಲಿ ಪಾತಿವ್ರತ್ಯದಿಂ ಸದ್ಧರ್ಮದಿಂ ಯೋಗಜ್ಞಾನಂಗಳಿಂ ಸರ್ವಪಾಪವಿಮುಕ್ತರಾಗಿ ಮುಕ್ತಿಯಂ ಪಡದಸ್ತ್ರೀಯರಿಂದುಪಾಶ್ರಿತವಾಗಿ । ಸೌಮಂಗಲ್ಯ । ಸೌಭಾಗ್ಯ । ಸೌಶೀಲ್ಯ । ಸದಾನಂದ । ಸತ್ಯ ಸರ್ವಶಕ್ತಿ । ಸರ್ವಜ್ಞತೆಗಳೆಂಬ ಸಪ್ತಮೂರ್ತಿಗಳಿಂ ಶೋಭಿತವಾಗಿ । ಲಕ್ಷ್ಮಿ । ವಾಣಿ । ಶಚಿಮುಂತಾದ ಸ್ತ್ರೀಯರ್ಗೆಲ್ಲರಿಗುಂ ಶಕ್ತಿತತ್ವೋಪಾಸಕರಿಗುಂ ನಿತ್ಯಸೇವ್ಯವಾಗಿರ್ಪುದಲ್ಲಿ ತುಷ್ಷಷ್ಟಿಕೋಟಿಮಹಾಯೋಗಿನಿಗಣಗಳಿಂ । ಲಕ್ಷ್ಮೀನಾರಾಯಣ । ವಾಣೀಹಿರಣ್ಯಗರ್ಭ । ಗೌರೀಶಂಕರ । ಶಚೀಪುರಂದರಾದಿಕೋಟಿಗಳಿಂ । ಡಾಕಿನೀ । ವಾರಾಹೀ । ಮಾತೃಕಾ । ಶೂಲಿನೀ । ಬಗಳಾ । ಅಂಗಿರಾ । ಬಾಲಾ । ದುರ್ಗಾದಿಸರ್ವಶಕ್ತಿಗಳುಂ । ಸರ್ವಮಂಗಳಂಗಳಿಂ ನಿತ್ಯಪೂಜ್ಯಳಾದುಮಾದೇವಿಯು ಶ್ರೀಚಕ್ರನಗರದೊಳು ಕಾಮೇಶ್ವರನೊಡಗೂಡಿ ಅನೇಕಕೋಟಿಬ್ರಹ್ಮಾಂಡನಾಯಕಿಯೆನಿಸಿರ್ಕುಂ.

ಶಿವಧೇನುಲೋಕ.

ಮತ್ತದಕೆ ಸನಿಹದೊಳು ಕೋಟಿಯೋಜನಾಯತವಾಗಿಶಿವಧೇನುಲೋಕವಿರ್ಪುದಲ್ಲಿ ಸರ್ವೋಪನಿಷತ್ತುಗಳುಂ । ಸಕಲದೇವತೆಗಳುಂ । ಸಪ್ತಕೋಟಿಮಹಾಮಂತ್ರಂಗಳುಂ । ಚತುಷ್ಷಷ್ಟಿಮಹಾಸಿದ್ಧಿಗಳುಂ ಮೂರ್ತಿತ್ರಯದ ಸರ್ವಶಕ್ತಿಗಳುಂ ಅನಂದವಲ್ಲೀಸರ್ವಸುಖಗಳುಂ । ಸರ್ವಜ್ಞಾನಯೋಗಮಹಿಮೆಗಳುಂ । ಮೂರ್ತಿಭವಿಸಿ ಗೋರೂಪಂಗಳಾಗಿರ್ಕುಮವರೊಳು ಪರಶಿವನೇ ಬಸವರಾಜನಾಗಿಯುಂ । ಶಿವಶಕ್ತಿಯಾದ ಸರ್ವಮಂಗಳಾದೇವಿಯೇ ಕಾಮಧೇನುವಾಗಿಯುಂ ! ಸ್ವಾತಂತ್ರ್ಯಸುಖದಿಂ ಶುದ್ಧಸತ್ವಮಯರಾಗಿ ಸರ್ವೋಪಾಸ್ಯ ಮಾನರಾಗಿರ್ಪುದರಿಂದಾಲೋಕವೇ ಅಮೃತಸ್ಥಾನವೆಂದು ತಿಳಿಯಲ್ಪೇಳ್ಕುಂ.

ಶ್ರೀರುದ್ರಲೋಕ.

ಬಳಿಕಲ್ಲಿಂದಮೇಲೆ ಮೂರುಗೋಟಿಯೋಜನಾಂತರದಲ್ಲಿ ಜ್ಯೋತಿರ್ಮಯಮಾದ ಮುಕ್ತಿಸ್ಥಾನಮಪ್ಪಶ್ರೀರುದ್ರಲೋಕವಿಹುದದಾದೊಡೆ । ಕೈಲಾ

ಸವೆಂದು ॥ ಪ್ರಥಮಲೋಕವೆಂದು । ನಿರ್ಮಲಸ್ಥಾನವೆಂದು । ಪರಂಧಾ
ಮವೆಂದು । ಶ್ರೀರುದ್ರದಿವ್ಯಸನ್ನಿಧಿಯೆಂದು । ಕೈವಲ್ಯಲೋಕವೆಂದು । ಅ
ಪ್ರತಿಮವೆಂದು ಪೆಸರ್ವಡೆದತಿಶೋಭನವಿಚಿತ್ರತರಪರಮಾಶ್ಚರ್ಯವೆನಿಸುವಮಂಗ
ಳಪರಮೋತ್ತಮಪರಮಾಧಿಕಾನಂದಪರಮನಿರ್ಮಲಪರಮಾಧಾರಮಮೋಘ ಸಚ್ಚಿ
ದಾನಂದಮಹಿಮೋದಯಮಾಗಿ ಕಣ್ಗೊಳಿಸುತ್ತಿರ್ಪುದಲ್ಲಿಯ ಭೋಗಭಾ
ಗ್ಯಂಗಳು ಸತ್ಯಲೋಕ ವೈಕುಂಠಾದಿಗಳಿಗಿಂತಲುಂ ಹನ್ನೊಂದುಕೋಟಿ
ಗುಣವಧಿಕವಾಗಿ ಶಿವಯೋಗಿಗಳಿಗಂ । ಶಿವಜ್ಞಾನಿಗಳಿಗಂ । ವೀರಮಾಹೇ
ಶ್ವರರಿಗಂ । ಗಮ್ಯವಾಗಿ ತದಿತರಜೀವರ್ಗೆ ದುರ್ಲಭವಾಗಿರ್ಪುದದರೊ
ಳಗೆ ಅಂತಃಶುದ್ಧಸತ್ವವಾಗಿ ಬಹಿಸ್ತಮೋನಟನದಿಂ ಜಗತ್ತಿನ ಸೃಷ್ಟಿ
ಸ್ಥಿತಿಸಂಹಾರಕೃತ್ಯಕರ್ತೃವಪ್ಪಶ್ರೀರುದ್ರನಾದೊಡೆ । ಅಚ್ಛಸ್ಫಟಿಕಸಚ್ಛಾ
ಯಮಾಗಿ । ಶಾರದಪೂರ್ಣೇಂದುಪಾರದಹೀರಗೌರವಾಗಿ । ಗೋಕ್ಷೀರನ
ವನೀತಧವಳವಾಗಿ । ವಿದ್ಯುತ್ಕೋಟಿಥಾಳಥಳ್ಯದಿಂ ಮೆರವ ಸಚ್ಚಿದಾನಂ
ದಜ್ಯೋತಿರ್ಮಯದಿವ್ಯಮೂರ್ತಿಯಿಂ । ಕಮನೀಯಜಟಾಮಕುಟಮಂ
ಡಿತಚಂದ್ರಕಳೆಯಿಂ । ಏಕಮುಖ । ತ್ರಿಣೇತ್ರ । ನೀಲಗ್ರೀವ । ನಾಗಾಭ
ರಣಂಗಳಿಂ । ಪರಶುಮೃಗವರದಾಭಯಂಗಳುಳ್ಳ ವಾಮದಕ್ಷಿಣಕರಚತು
ಷ್ಟಯದಿಂ ಪೆಸದು ಸ್ವಾತ್ಮಾರಾಮನಪ್ಪುದರಿಂಬಾಹ್ಯವಿಷಯವ್ಯಾಮೋ
ಹವಿಲ್ಲಾಗಿ ದುಷ್ಟನಿಗ್ರಹತ್ವಮಂ ಸೂಚಿಸಲೊಸುಗಮಾಗಿಯುಂ ಪೊದೆ
ಗೆದುಟ್ಟಗಜವ್ಯಾಘ್ರಪರಿಧಾನವೇಷನಟನದಿಂಭಸಿತೋದ್ಧೂಳನತ್ರಿಪುಂಡ್ರ
ಸಹಿತನಾಗಿ ರುದ್ರಾಕ್ಷರುಂಡ ಮಾಲಾದಿಗಳಿಂ ವಹಿಸಿ ಶ್ರೀಭವಾನೀಸಮೇತ
ನಾಗಿ ಸರ್ವದೇವತಾಸಾರ್ವಭೌಮನೆನಿಸಿ ನಾರಾಯಣನಿಂ ದೇಕಲಕ್ಷಗು
ಣಾಧಿಕಜ್ಞಾನಸುಖೈಶ್ವರ್ಯಮಾಹಾತ್ಮ್ಯಶಕ್ತಿಪ್ರಭವಮಹಿತನಾಗಿ ಅಪರಿ
ಚ್ಛಿನ್ನಮಾದ ಸ್ವಭಾವವೀರ್ಯದಿಂ ಅನಿತರಸಾಧಾರಣಮೆನಿಪ ಸ್ವಾತಂತ್ರ್ಯ
ದಿಂ ಜಗತ್ಪತಿಯಾಗಿ ಪಶುಪತಿಯೆನಿಪ ಶ್ರೀರುದ್ರನು । ಧೃತಿ । ಅದ್ರುಷ್ಟ
ತೆ । ಆತ್ಮಬೋಧ । ಸೃಷ್ಟಿ । ವಿರಾಗ । ತಪಸ್ಸು । ಮತಿ । ಈಶ್ವರತ್ವಮೆಂ
ಬ ದಶಕಲ್ಯಾಣಗುಣಯುಕ್ತನಾಗಿ । ಸರ್ವಜ್ಞತ್ವಾದಿ ಷಡಂಗಜ್ಞಾನಾದಿ
ಷಡ್ಗುಣಗಳಿಂ ಅಣಿಮಾದಿಮಹದೈಶ್ವರ್ಯಾದಿಗಳಿಂ ಸಂಪನ್ನನಾಗಿ । ಗಂ
ಗಾವಾಲುಕಗಳಂತಸಂಖ್ಯಾತವಾಗಿರ್ಪಶತಕೋಟ್ಯಧಿಕರುದ್ರರಿಂಬ್ರಹ್ಮೋ
ಪೇಂದ್ರಮುನಿಪನುಮೊದಲಾದ ಸಕಲದೇವವರಿಷ್ಟರಿಂ ಪ್ರೋಲೈಸಿಕೊ
ಳ್ಳುತಿರ್ಪಂ ॥

ಅಣಿಮಾದಿಗಳಲಕ್ಷಣ.

ಮತ್ತಮಾ ಅಣಿಮಾದಿಗಳ ಲಕ್ಷಣಮೆಂತೆನೆ । ಅತ್ಯಂತಸೂಕ್ಷ್ಮವಾದ ಪ್ರಾಣಿಗಳಾತ್ಮತ್ವದಿಂ ಪ್ರವೇಶಿಸುವಹತನವೇ ಅಣಿಮೆ । ಬ್ರಹ್ಮಾಂಡಾದಿಶಿವಾಂತಮಾದ ಮೂವತ್ತಾರು ತತ್ವಂಗಳಂಹೊರಗೆವ್ಯಾಪಿಸಿ ವರ್ತಿಸುವದೇ ಮಹಿಮೆ । ಮಹಾಮೇರುಪರ್ವತಕ್ಕೆ ಸಮಾನವಾದ ಶರೀರಮುಳ್ಳಾತನಂ ಮೇಲಕ್ಕೆ ನೆಗಹುವ ಕೃತ್ಯದಲ್ಲಿ ಪರಮಾಣುವಿಗೆ ಸದೃಶವಹುದೇ ಲಘಿಮೆ । ಪರಮಾಣುವಿಗೆ ಸದೃಶವಾದ ದೇಹವನುದ್ಧರಿಕ್ಕೆ ನಿಗಹುವಕೃತ್ಯದಲ್ಲಿ ಸುಮೇರುವಿನಭಾರವಂ ತೋರ್ಪುದೇ ಗರಿಮೆ । ಸ್ವಸ್ಥಾನದೊಳಿರ್ದು ಸಮಸ್ತಲೋಕಸಾಕ್ಷಾತ್ಕಾರಮಂ ಪಡೆವುದೇ ಪ್ರಾಪ್ತಿ । ಸ್ವೇಚ್ಛೆಯಿಂ ಪಾಕಾಶಗಮನಾದಿ ಸರ್ವಸಿದ್ಧಿಯೇ ಪ್ರಾಕಾಮ್ಯನಿಸುವದು । ಸ್ವಶರೀರಪ್ರಕಾಶದಿಂ ಸರ್ವಾರ್ಥಂಗಳಂ ಬೆಳಗುವತನಮಾದೊಡಂ ಪ್ರಾಕಾಮ್ಯಮಕ್ಕುಂ । ಸ್ವೇಚ್ಛಾಮಾತ್ರದಿಂ ಜಗದುತ್ಪತ್ತ್ಯಾದಿಕೃತ್ಯಕರಣಮುಂ ಸೂರ್ಯಾಗಳ ಪ್ರೇರಿಸುವತನಮುಂ ಈಶ್ವರತ್ವವೆನಿಸುವದು । ದಿಕ್ಪಾಲಕರೊಡಗೂಡಿದ ಜಗವುಂ ತನ್ನಧೀನವಾಗಿ ನಡಸುವತನವೇ ವಶಿತ್ವವೆಂದು ನಿಶ್ಚಿತಮಕ್ಕುಂ ॥ ಮತ್ತಮಾರುದ್ರಲೋಕದಿಂ ಶಿವಲೋಕಾಂತಮಾಗೊಂದುಕೋಟಿಯೋಜನದಳತೆಯುಕ್ಕು ವೀರರುದ್ರಲೋಕವೇ ಸದ್ವೈದಿಕಧರ್ಮದಿಂ ರುದ್ರಾಗ್ನಿಯಾಜಗಳ್ಗೆದಲ್ತಕ್ಕುದೆಂದು ತಿಳಿಯಲ್ವೇಳ್ಕುಂ ॥

ಶಿವಲೋಕವಿಸ್ತಾರ.

ಅನಂತರದೊಳು ಬ್ರಹ್ಮಾಂಡದ ಪೊರವಳಯದಗ್ರಪ್ರದೇಶದಲ್ಲಿ ಹದಿನಾರುಕೋಟಿಯೋಜನವಿಶಾಲೋನ್ನತವಾಗಿ ಶಿವಲೋಕವಿಹುದದಕ್ಕೆ ಜ್ಯೋತಿರ್ಮಯವಾದಕೋಟೆ ಹದಿನಾರಕೋಟಿ ವಿಶಾಲೋನ್ನತವಾಗಿ ಶಿವಲೋಕವಿಹುದದಕ್ಕೆ ವಿಚಿತ್ರರಚನೆಯುಳ್ಳ ವೆಂಟುಬಾಗಿಲುಗಳ ನತ್ಯಂತಪರಾಕ್ರಮಿಗಳಾಗಿ ಕಾದಿರ್ಪ ಭೈರವರಲಕ್ಷಣಮೆಂತೆನೆ॥

ಅಷ್ಟಭೈರವರು.

ಮೊದಲು ರಕ್ತವರ್ಣಮಯದೀರ್ಘಶರೀರದಿಂ ತ್ರಿಣೇತ್ರದಿಂ ದಂಡಕಮಂಡಲುಪಾಶಜಪಮಾಲೆಪಿಡಿದ ಕರಚತುಷ್ಟಯದಿಂ ಬ್ರಾಹ್ಮಿಯೆಂಬ ಶಕ್ತಿಸಮೇಳನದಿಂ ಹಂಸವಾಹನದಿಂ ತನ್ನ ಸಮಾನರಾದ ಯೆಳ್ಳೆಕೋಟಿಭಟರಿಂ ನೊಪ್ಪಿ ಮೂಡಣಬಾಗಿಲಲ್ಲಿ ಸಿತಾಂಗಭೈರವನಿರ್ಪಂ ॥ ಬಳಿಕಹಿರಣ್ಮಯಸ್ಫಟಿಕಕಾಂತಿಯುಡಿಂ । ಶೂಲಡಮರುಗಖಡ್ಗ ಖಟ್ವಾಂಗವಿಡಿದ ಕ

ರಚತುಷ್ಟಯದಿಂ ಮಾಹೇಶ್ವರಿಯೆಂಬ ಶಕ್ತಿಸಂಮೇಳನದಿಂ ಅಜವಾಹನದಿಂ ತನಗೆ ಸಮಾನರಾದ ಹದಿನಾರುಕೋಟಿಭಟರಿಂದೆಸೆದು ಅಗ್ನಿಯ ದೆಸೆಯ ಬಾಗಿಲಲ್ಲಿರುದ್ರಭೈರವನಿರ್ದಂ ॥

ಬಳಿಕ ಶೋಣವರ್ಣಮಯ ಮಹಾಮೂರ್ತಿಯಿಂ ಲೋಚನತ್ರಯದಿಂ ಗಿಳಿವಜ್ರಶಕ್ತಿಶೂಲವಿಡಿದ ಕರಚತುಷ್ಟಯದಿಂ ಕೌಮಾರಿಯೆಂಬ ಶಕ್ತಿಸಂಮೇಳನದಿಂ ಮಯೂರವಾಹನದಿಂ ತನಗೆ ಸಮಾನರಾದೈವತ್ತುಕೋಟಿಭಟರಿಂದೆಸದು ತೆಂಕಣಬಾಗಿಲಲ್ಲಿ ಚಂಡಭೈರವನಿರ್ದಂ ॥ ಬಳಿಕ ಸುವರ್ಣಕಾಂತಿಮಯಚಾರುಶರೀರದಿಂ ನಯನತ್ರಯದಿಂ ಶಂಖಚಕ್ರಗದಾಶಾರ್ಙವಿಡಿದ ಪಾಣಿಚತುಷ್ಟಯದಿಂ ವೈಷ್ಣವಿಯೆಂಬ ಶಕ್ತಿಸಂಮೇಳನದಿಂ ಗರುಡವಾಹನದಿಂ ತನಗೆ ಸಮಾನರಾದೈದುಕೋಟಿಭಟರಿಂ ಮೆರೆದು ನೈಋತಿಯದಿಕ್ಕಿನಲ್ಲಿ ಕ್ರೋಧಭೈರವನಿರ್ದಂ ॥ ಬಳಿಕ ಮಯೂರವರ್ಣಮಾದುಸ್ನತಗ್ಮತ್ರದಿಂ ದಕ್ಷಿಣತ್ರಯದಿಂ ಶಂಖಫಲಕಖೇಟಕಮುಸಲವಿಡಿದ ಹಸ್ತಚತುಷ್ಟಯದಿಂ ವಾರಾಹಿಯೆಂಬ ಶಕ್ತಿಸಂಮೇಳನದಿಂ ಮಹಿಷವಾಹನದಿಂ ತನಗೆ ಸಮಾನರಾದ ಭಟರಾರುಕೋಟಿಗಳಿಂ ಪರಿಶೋಭಿಸಿ ಪಡುವಣ ಬಾಗಿಲಲ್ಲಿ ಉನ್ಮತ್ತಭೈರವನಿರ್ದಂ ॥ ಬಳಿಕ ಮಾಣಿಕ್ಯವರ್ಣಮಯಭೀಕರಾಕಾರದಿಂ ದೃಷ್ಟಿತ್ರಯದಿಂ ವಜ್ರಶಕ್ತಿಧನುಶ್ಶರವಿಡಿದಕರಚತುಷ್ಟಯದಿಂ ಮಾಹೇಂದ್ರಿಯೆಂಬ ಶಕ್ತಿಸಂಮೇಳನದಿಂ ಗಜವಾಹನದಿಂತನಗೆ ಸಮಾನರಾದ ಮೂರುಕೋಟಿಭಟರಿಂವಿರಾಜಿಸಿ ವಾಯುವ್ಯದ್ವಾರದಲ್ಲಿ ಕಪಾಲಭೈರವನಿರ್ದಂ ॥ ಬಳಿಕ ಧೂಮ್ರವರ್ಣಮಯಭಯಂಕರತನುವಿನಿಂ ಚಕ್ಷುಸ್ತ್ರಯದಿಂ ಶೂಲಡಮರುಗಘಂಟಿಕಪಾಲವಿಡಿದ ಕರಚತುಷ್ಟಯದಿಂ ಚಾಮುಂಡಿಯೆಂಬ ಶಕ್ತಿಸಂಮೇಳನದಿಂ ಸಿಂಹವಾಹನದಿಂ ತನಗೆ ಸಮಾನರಾದ ದ್ವಾದಶಕೋಟಿಭಟರೊಡಗೂಡಿ ಬಡಗಣಬಾಗಿಲಲ್ಲಿಭೀಷಣಭೈರವನಿರ್ದಂ ॥ ಬಳಿಕ ಹೇಮವರ್ಣಮಯಪ್ರಚಂಡವಿಗ್ರಹದಿಂದೀಕ್ಷಣತ್ರಯದಿಂ ಖಡ್ಗಗದಾಖೇಟ ಫಲಕವಿಡಿದ ಕರಚತುಷ್ಟಯದಿಂ ಮಹಾಕಾಳಿಯೆಂಬ ಶಕ್ತಿಸಂಮೇಳನದಿಂ ತನಗೆ ಸಮಾನರಾದ ಭಟರೆಂಟುಕೋಟಿ ಯಿಂತೋರ್ಕೆವೆತ್ತು ಈಶಾನ್ಯಬಾಗಿಲಲ್ಲಿ ಸಂಹಾರಭೈರವನಿರ್ದಂ ॥

ಶ್ರೀಶಿವನಗರ.

ಮತ್ತಮಿಂತು ತಮ್ಮ ಸ್ಮರಣಮಾತ್ರದಿಂ ಸಕಲವಿಘ್ನಂಗಳಂ ನಿವಾರಿಸುವಷ್ಟಭೈರವರ ಕಾವಿಲುಳ್ಳ ಬಾಗಿಲುಗಳಂ ಕಳೆದೊಳಪೊಕ್ಕು ನೋಡೆ ।

ಕಣ್ಗೆ ಮಂಗಳವಾಗಿ । ಮನಕ್ಕೆ ಮನೋಹರವೆನಿಸಿ । ನುಡಿಗೆ ನವೀನವಾಗಿ । ಮಯಮಾಂಡವ್ಯವಿಶ್ವಕರ್ಮಾದಿಶಿಲ್ಪಿಗಳಕಲ್ಪನೆಗಳಂ ಕೀಳ್ಪಡಿಸಿ ಮಂಜುಳಮಯರಂಜನೆವೆತ್ತು ।ತರತರಂಗೊಂಡು ಮೆರೆವ ಚಿಂತಾಮಣಿಗಲಸದಕರುಮಾಡ ಕೋಟ್ಯನುಕೋಟಿಗಳಳವಟ್ಟ ಸುವರ್ಣಕಳಶಂಗಳಂ । ದೆಸೆನಸಂಖ್ಯಾತ ಮಹಾಗಣಂಗಳಮಂದಿರಂಗಳಿಂ।ಸಾಲ್ಗೊಂಡು ಸೋಮಸೂರ್ಯ ವೀಧಿಸಹಸ್ರಂಗಳಂದಪರಿಮಿತಮಾದುಪವೀಧಿಗಳಂ ।ಪನ್ನೀರಛಳಯಂಗಳಂ । ಕಸ್ತೂರಿಯ ಸಾರಣೆಗಳಂ । ಕುಂಕುಮದ ಕಾರಣೆಗಳಂ । ಮುತ್ತಿನ ರಂಗವಲ್ಲಿಗಳಂ । ತಳಿರತೋರಣಮಕರತೋರಣಗುಡಿತೋರಣಾದಿ ರಚನೆಗಳಂ ವೃಷಭಧ್ವಜಪತಾಕೆಗಳಂ । ಕುಸುಮವೃಷ್ಟಿಗಳಂ ।ಧೂಪಧೂಮಂಗಳಂ ವೇದಾಗಮಶಾಸ್ತ್ರಪುರಾಣಘೋಷಣಗಳಿಂ । ನಾನಾವಾದ್ಯಧ್ವನಿಗಳಂ । ಸಂಚರಿಪ ಸಕಲಗಣೇಶ್ವರರ ಸಂದಣಿಗಳಂ ಶೃಂಗಾರಲಾವಣ್ಯಸುಕುಮಾರತೆಗಳೇ ಶರೀರಂಬಡೆದೆಡೆಯಾಡುವಂ ತಿರ್ದ ರುದ್ರಗಣಿಕೆಯರಿಂ । ಸಕಲಸುಖಭೋಗಪರಿಕರಂಗಳಂ । ಸಂಪನ್ನೆ ಮಾಗಿರ್ಪುದರಿಂ ಸಚ್ಚಿದಾನಂದಮಯದಿಂ ದತ್ಯಾಶ್ಚರ್ಯವತ್ಯದ್ಭುತವತಿಕೌತುಕವತಿವಿಚಿತ್ರವತಿಶೋಭನವತಿರಮ್ಯವತಿನೂತನವತಿವಿಲಾಸವಮಾಗಿರ್ಪುದಾಪುರಮಧ್ಯಪ್ರದೇಶದಲ್ಲಿ ಸ್ವಪ್ರಭಾಧವಳಿತದಿವ್ಯಸಂತಾನವೆನಾಗಿ ॥

## ಮಹಾದೇವನರಮನೆ.

ಬಳಿಕ ಮಹಾದೇವನರಮನೆಯು ಪಂಚಕೋಟಿಯೋಜನವಿಶಾಲವದಕ್ಕೆ ಚತುರ್ದ್ವಾರಂಗಳವ್ರುಗಳಲ್ಲಿ ಪೂರ್ವದಿಕ್ಕಿನದ್ವಾರಗೋಪುರವೇ ಋಗ್ವೇದಮಯವಾಗಿಲಕ್ಷಯೋಜನವಿಶಾಲೋನ್ನತದಿಂ ಧವಳಾರವಾಗಿರ್ಪದಾಬಾಗಿಲಂ ನಾಲ್ಕರ್ಬುದ ಕೂಶ್ಮಾಂಡಗಣೇಶ್ವರರೊಡಗೂಡಿ ವೇತ್ರಹಸ್ತನಾದ ನಂದೀಶ್ವರಂ ಕಾಯ್ದಿರ್ಪಂ । ಮತ್ತಮಾ ದಕ್ಷಿಣದಿಕ್ಕಿನ ದ್ವಾರದ ಗೋಪುರವೇಯಜುರ್ವೇದಮಯವೆನಿಸಿ ಲಕ್ಷಯೋಜನವಿಶಾಲೋನ್ನತಮಾಗಿ ನೀಲವರ್ಣದಾಕಾರವಾಗಿರ್ಪುದಾಬಾಗಿಲನಸಂಖ್ಯಾತರೋಮಜಗಣೇಶ್ವರರು ಸಹಿತವಾಗಿ ವೀರೇಶ್ವರಂ ಕಾಯ್ದಿರ್ಪಂ ॥ ಮತ್ತಮಾಪಶ್ಚಿಮದಿಕ್ಕಿನದ್ವಾರದಲ್ಲಿಗೋಪುರವೇಸಾಮವೇದಮಯವಾಗಿಲಕ್ಷಯೋಜನವಿಶಾಲೋನ್ನತವೆನಿಸಿ ಶುಭ್ರಾಕಾರವಾಗಿಹುದಾಬಾಗಿಲನಗಣಿತರುದ್ರಗಣಂಗಳೊಡಗೂಡಿ ನೀಲಲೋಹಿತನು ಕಾಯ್ದಿರ್ಪಂ॥ ಮತ್ತಮಾ ಉತ್ತರದಿಕ್ಕಿನದ್ವಾರದ ಗೋಪುರವೇ ಅಥರ್ವಣವೇದಮಯವಾಗಿ ಲಕ್ಷಯೋಜನವಿಶಾ

ಲೋನ್ನತವೆನಿಸಿ ಕುಂಕುಮವರ್ಣದಾಕಾರವಾಗಿರ್ಪುದಾ ಬಾಗಿಲನಪರಮಿತ ಪ್ರಮಥಗಣಸಮೇತನಾಗಿ ಮಹಾಕಾಳಂ ಕಾಯ್ದಿರ್ಪಂ ॥

## ಶಿವಸಭಾಸ್ಥನ.

ಬಳಿಕ ನಾಲ್ಕುದಿಕ್ಕಿನ ಬಾಗಿಲನೊಳಪೊಕ್ಕು ನಿರೀಕ್ಷಿಸೆ ದೃಷ್ಟಿಗಚ್ಚರಿದೋರಿ ವರ್ಣಿಸಲಶಕ್ಯವಾಗಿ । ಸುಖದಿಂ ಸರ್ವೇಂದ್ರಿಯಸ್ತಂಭಕವಾದ ಸರ್ವೇಶ್ವರನಾದ ತಾಂಡವೇಶ್ವರನ ಸಭಾಮಂಟಪಂ ಪರಿಶೋಭಿಸುತ್ತಿಹುದದರ ನಟ್ಟನಡುವೆ ಕೋಟಿಸೂರ್ಯಪ್ರಕಾಶಮಂ ಕೀಳ್ಪಡಿಸುವ ದಿವ್ಯಸಿಂಹಾಸನನೊಂದು ಲಕ್ಷಯೋಜನವಿಶಾಲೋನ್ನತವಾಗಿರಂಜಿಸುತ್ತಿಹುದಾ ಸಿಂಹಾಸನಾಗ್ರದಲ್ಲಿ ಗುಣತ್ರಯಾತೀತವಾಗಿ ಪ್ರಣವದರ್ಥವಾದಬ್ರಹ್ಮಾದಿ ತ್ರಿಮೂರ್ತಿಗಳಿಂ ಧ್ಯೇಯಮಾನವಾದ ತನಗೊಂದು ವಸ್ತ್ವಂತರಧ್ಯಾನವಿಲ್ಲದ ತ್ರಿಮೂರ್ತಿಗಳ ಮಧ್ಯದಲ್ಲಿ ತುರ್ಯವಾಗಿರ್ಪ ಶಿವಚೈತನ್ಯವೇ ಘೃತಕಾಠಿನ್ಯದಂತೆ ಸಚ್ಚಿದಾನಂದೈಕರಸಸ್ಫುರಣಬ್ರಹ್ಮಸಾಕ್ಷಾತ್ಕಾರವಾದ, ಶಿವ । ರುದ್ರ । ಮಹಾದೇವ । ಮಹಾಲಿಂಗ। ಮಹಾಭಸ್ಮ। ಮಹೇಶ್ವರ। ಪರಮೇಶ್ವರ। ಪರಬ್ರಹ್ಮಾದಿ ಪರ್ಯಾಯಸಂಜ್ಞಿತನಾದ । ಸೃಷ್ಟ್ಯಾದಿಪಂಚಕೃತ್ಯಕರ್ತೃವಾದ । ಸತ್ಯಕಾಮ । ಸತ್ಯಸಂಕಲ್ಪಾದಿ ಕಲ್ಯಾಣಗುಣಗಣಸಂಪನ್ನನಾದ ॥ ಸಕಲದೇವತಾವಶೀಕರಂಗಳಿಗೆ ಸಮುದ್ರಸ್ಥಾನಿಯಾದ । ಸ್ವಸ್ವರೂಪಾನುಸಂಧಾನಪ್ರಮೋದದಿಂ ನರ್ತನಶೀಲನಾದ ಸರ್ವಾಂತರ್ಯಾಮಿಯಾದ । ಸರ್ವಕಾರಣನಾದ । ಮಾಯಾವಿಯಾದ । ಸ್ಮರಣಮಾತ್ರದಿಂ ನಿಖಿಲಪಾಪಕ್ಷಯಂಮಾಡಿ ಭೋಗಮೋಕ್ಷಪ್ರದನಾದ। ಸಾಂಬಸದಾಶಿವನಾದೊಡೆ । ಸ್ಫಟಿಕವರ್ಣಮಯ ಶರೀರದಿಂ ಚಂದ್ರಾರ್ಧಮಂಡಿತಮಸ್ತಕದಿಂ । ಪ್ರಸನ್ನವದನದಿಂ । ಅನಂತಕೋಟಿಕಂದರ್ಪಲಾವಣ್ಯದಿಂ। ತ್ರಿಣೇತ್ರಂಗಳಿಂ । ನೀಲಗ್ರೀವದಿಂ । ವರಾಭಯಕರದ್ವಯದಿಂ । ಧವಳಯಜ್ಞಸೂತ್ರದಿಂ । ಉಮಾಸಮೇತವಾದ ವಾಮಾಂಗದಿಂ । ಪೊಂದದುಟ್ಟ ವ್ಯಾಘ್ರಗಜಚರ್ಮಾಂಬರದಿಂ। ಮೃದುಪಾದಪದ್ಮದಿಂ । ಕಟಕಮಕುಟಕೇಯೂರಕುಂಡಲಾದಿ ಸರ್ವಾಭರಣಗಂಧಮಾಲ್ಯಾದಿಗಳಿಂದಲಂಕೃತನಾಗಿ। ಮಹೇಶ್ವರನೊಪ್ಪುತ್ತಿರಲಾ ಸಿಂಹಾಸನದ ಕೆಳಗಡೆ ಬಲದಲ್ಲಿ ಕುಳ್ಳಿರ್ದ ಗುಹಗಣಪತಿಗಳಿಂದುಪಾಸಿತನಾಗಿ । ನಾಲ್ಕರಿದಿಕ್ಕೆಲದೊಳಕ್ಕಿನ ಚಾಮರಸೀ ಗುರಿಕಾರರಿಂ ಕೊಂಡಾಡುವ ಚಂಡಕೀರ್ತಿಗಳಿಂ ।ನುತಿಸುವಸಕಲವೇದಶಾಸ್ತ್ರಂಗಳಿಂ। ಶ್ರೀಗಳುಪಮುಹಾಸಿದ್ಧಮುನಿಶ್ರೇಷ್ಠರಿಂ

ಕೈವಾರಿಸುವ ಮನುಗಳಿಂ | ಪೊಡಮಡುವ ಹರಿಬ್ರಹ್ಮೇಂದ್ರಾದಿದೇವಶ್ರೇಷ್ಠರಿಂ | ಹಗಸುವ ವಿಜ್ಞಾನಸಿದ್ಧರಿಂ | ಸರ್ವೋತ್ತಮೋತ್ತಮರಿಂ ಸೇವಿಸಲ್ಪಟ್ಟ ಸರ್ವೇಶ್ವರೇಶ್ವರನಾಗಿ,

## ಪೂರ್ವಸಭಾಸ್ಥಾನ.

ಬಳಿಕ ಪ್ರಸೂತಿ-ಆಕೂತಿ- ಖ್ಯಾತಿ-ಧೃತಿ-ಸಂಭೂತಿ- ಪ್ರೀತಿಕ್ಷಮೆಸನ್ನತಿ-ಅನಸೂಯೆ-ದೇವಮಾತೆ-ಅರುಂಧತಿಯೆಂಬ ಏಕಾದಶಪತಿವ್ರತೆಯರಿಂ ಮುಕ್ತಿಯನೀವ-ಶಿವಭಕ್ತಿಕಾಂತೆಯರಿಂ, ಕರೆಕರೆದು ಸಂಭ್ರಮಿಸುವ ಗಾಯತ್ರೀಸಾವಿತ್ರ್ಯಾದಿಮಂತ್ರಶಕ್ತಿಯರಿಂ -ಪರಿಯರಿತು ಪರಿಚರ್ಯಂಗಳಂ ಮಾಳ್ಪ ಸಿರಿಸರಸ್ವತೀಶಚೀದೇವಿಯರಿಂ - ಪಾಡುವ ತುಂಬುರುನಾರದಾದಿಗಳಿಂ ನರ್ತಿಸುವ ರಂಭಾದಿದೇವಗಣಿಕೆಯರಿಂ ಪರಿವೇಷ್ಟಿಸಿರ್ದ ರುದ್ರಗಣ- ಪ್ರಮಥಗಣ- ದೇವಗಣ- ಭಕ್ತಮಾಹಾಗಣಂಗಳಿಂ ಕಿಕ್ಕಿರಿದು ಕೋಲಾಹಲವೆರಸಿ ಮತಿಗೆ ಮಂಗಳಕರಮಾಗಿರ್ಪುದಲ್ಲಿ ನಂದೀಶ್ವರ-ಭೃಂಗೀಶ್ವರ-ಮಹಾಕಾಳ-ಕಿರೀಟ-ಘಂಟಾಕರ್ಣ, ಸುಘೋಷ-ದಂಡಿ-ಈಶಾನರೆಂಬ ಅಷ್ಟಮುಖ್ಯಗಣೇಶ್ವರು ಪರಿವಿಡಿದರವರೊಡನನಂತಗಣಸಂಭ್ರಮದಿಂ ಮೂಡಣದೆಸೆಯೋಲಗಮೊಪ್ಪುತಿರ್ಕುಂ.

## ದಕ್ಷಿಣಸಭಾಸ್ಥಾನ.

ಬಳಿಕ ಬ್ರಹ್ಮನು - ಮುನಿಗಳು - ಕಾಲಾಗ್ನಿರುದ್ರ - ವೀರಭದ್ರ - ಪಿನಾಕಿ - ಕಾಲಕಂಠ - ಮಹಾವೀರ - ಅಂಘ್ರಿಕರಾಳ - ಕೇಶಕರಾಳ - ನೇತ್ರಕರಾಳ - ಶ್ರೋತ್ರಕರಾಳ - ಮುಂಡಮಾಲಾಧರ - ತ್ರಿಶೂಲ - ವಿಶ್ವಮಾಲಾಧರ - ಅಂಡಾದಿನಾಥ - ಕಾಲಾಂತಕ - ಅಕಾಲಿಶ - ಮಯೂರಾನನರೆಂಬ ಹದಿನೆಂಟು ಮುಖ್ಯಗಣರವರ ಪರಿವಿಡಿದವರೊಡನಸಂಖ್ಯಾತಗಣ-ಸಂಕುಲದಿಂ ಟೆಂಕಲದೆಸೆಯೋಲಗಮೊಪ್ಪುತಿರ್ಕುಂ.

## ಪಶ್ಚಿಮಸಭಾಸ್ಥಾನ.

ಬಳಿಕ ದಂಡಧರ - ದಂಡಪಾದ - ದಂಡಬಾಹು - ಪ್ರಚಂಡ - ಪ್ರಚಂಡಕರ-ಪ್ರವೀರ - ಪ್ರಚಂಡಾರ್ಚಿತ - ಪರಬಲಪ್ರಮಥ - ಪರಬಲವಿಕರಣ-ಸುಮಾಲ್ಯ - ಸರ್ವಭೂತದಮನ - ಮನೋನ್ಮನರೆಂಬ ದ್ವಾದಶಮುಖ್ಯಗಣಾಗ್ರಗಣ್ಯರಪರಿವಿಡಿದವರೊಡನೆಗಣಿತಗುಣಮಣಿಗಣಾಭರಣಗಣವಿಸರದಿಂ ಪಡವಣದೆಸೆಯೋಲಗಮೊಪ್ಪುತಿರ್ಕುಂ.

ಉತ್ತರಸಭಾಸ್ಥಾನ.

ಬಳಿಕ ನಾರಾಯಣನುಂ, ಕಪಾಲಕರುಂ - ಏಕಾದಶರುದ್ರರುಂ-ದ್ವಾದಶಾದಿತ್ಯರುಂ - ಅಷ್ಟವಸುಗಳುಂ - ಪ್ರಭಾವ - ಪುಷ್ಕರ - ದುಂಡಿ - ಆಷಾಢಿ - ಅಮರೇಶ - ನೈಮಿಷ - ಅನಾಕುಲರೆಂಬ - ದ್ವಾದಶಮುಖ್ಯದೇವತೆಗಳು ಪರಿವಿಡಿದವರಪರೇಂಡ ಸಪರಿಮಿತವಾದ ಮುನಿಸಮೂಹದಿಂ ಬಹುಯೋಗಸಮಾಭ್ಯಾಸಿತ ನಿಶ್ಚಿತಶುದ್ಧ ಶಿವಯೋಗ ಪ್ರಭಾವಸಮಧಿಗತ ಶಿವಲೋಕಸೌಖ್ಯಾತಿರೇಕರಾದ ಶಿವಯೋಗಿಪ್ರಕರಂಗಳಿಂ ಒಡಗಣ ದೆಸೆಯೋಲಗವೊಪ್ಪುತಿಹುದಿಂತುಪೇಳ್ದ ಶಿವಲೋಕದ ಸಭಾಮಧ್ಯದಲ್ಲಿ ಸಕಲಪರಪ್ರದನಾಗಿ ಸರ್ವಸಾಕ್ಷಿಯಾದ ಸಾಂಬಶಿವನೊಪ್ಪುತಿರ್ಕುಂ॥

ಶಿವಲೋಕಮಹಾಸನ್ನಿಧಿಗಳು.

ಬಳಿಕ ಶಿವಸಭಾಸ್ಥಾನದಂತರಂಗದ ರಹಸ್ಯಭೂಮಿಯಲ್ಲಿ। ದಿವ್ಯವಟವೃಕ್ಷಮೂಲಗಳು ಚಿನ್ಮೂಪನಪ್ಪ ದಕ್ಷಿಣಾಮೂರ್ತಿಯುಂ ಅಮೃತಸರೋವರಂಗಳುಂ।ಅಕ್ಷಯಪುಣ್ಯಭೋಗನಿಧಿಗಳುಂ । ಆನಂದವನಂಗಳುಂ। ಹನ್ನೊಂದುಕೋಟಿ ಮಹಾಲಿಂಗಮೂರ್ತಿಗಳುಂ । ಸಚ್ಚಿದಾನಂದತ್ರಿವೇಣಿಯುಂ । ಮಹಿಮಾಕಲ್ಪವೃಕ್ಷಂಗಳುಂ । ಯೋಗವಾಟಗಳುಂ । ಧರ್ಮಸತ್ರಂಗಳುಂ – ಪ್ರಣವಕುಂಡಮುಂ ಮಹಾನಾದಯಂತ್ರಮುಂ ।ಉಪನಿಷದ್ಗೇಹಂಗಳುಂ । ಸತ್ಸಂಸ್ಕಾರಧೂಪಕುಂಡಂಗಳುಂ । ಸುಗುಣಮಣಿನಿಧಿಗಳುಂ - ಸೌಭಾಗ್ಯಜೀವಲತೆಗಳುಂ । ಶ್ರೀಯೋಗಗುಚ್ಛಂಗಳುಂ ।ಸಾಂತಿಮಂಚಂಗಳುಂ । ಕುಶಲವೀಥಿಗಳುಂ । ಆರೋಗ್ಯದೋಳಿಕೆಗಳುಂ । ಶಮಾಧಿಗಜಂಗಳುಂ । ಧ್ಯಾನಚಿತ್ರಂಗಳುಂ । ತತ್ವಗೇಹಂಗಳುಂ । ಸತ್ಯಗುರುಗಳುಂ ಸರ್ವೈಶ್ವರ್ಯಪ್ರಸಾದಂಗಳುಂ ಸುಲಭಂಗಳಾಗಿರ್ಕುಂ.

ದಿವ್ಯಕೈಲಾಸ.

ಮತ್ತಮಾ ರಹಸ್ಯವಾಟಿಕಾಪ್ರಾಂತ್ರದೊಳು ದಿವ್ಯಕೈಲಾಸವೆಂಬುದು ಸುಷುಮ್ನೋತ್ಥಾಪನಮಂ ಮಾಡಿ ಸಹಸ್ರಾರದೊಳು ಪ್ರಾಣಲಿಂಗೈಕ್ಯಮಂ ಪಡೆದ ಶಿವಯೋಗಿಗೆ ಗಮ್ಯವಾಗಿ । ಆಸ್ತಿಕ್ಯವೆಂಬ ರಜತಾದ್ರಿಯಲ್ಲಿ ನಿಗಮಾಗಮವೆಂಬ ನಗರದೊಳಗೆ ಶಿವಧರ್ಮವೆಂಬ ವೃಷಭವಾಹನವನೇರಿ ಶ್ರದ್ಧೆಯೆಂಬ ಶೈಲಪುತ್ರಿಯೊಡನೆ ಗುಣತ್ರಯವೆಂಬ ತ್ರಿಶೂಲವಿಡಿದು ಶಿವಧ್ಯಾನವೆಂಬ ಚಂದ್ರಕಲೆಯಿಂ ಭಕ್ತಿಯೆಂಬ ಗಂಗೆಯಿಂ ತಪವೆಂಬ ಫಾಲಲೋಚನದಿಂ ಯೋಗಮೂರ್ಛೆಯೆಂಬ ಗರಳದಿಂ ಯೋಗಕಷ್ಟಂಗಳೆಂಬ

ರುಗಾಭರಣಗಳಿಂ ಆಶ್ಚರ್ಯವೆಂಬ ವ್ಯಾಘ್ರಚರ್ಮದಿಂ ವಿರಕ್ತಿಯೆಂಬ ಭ
ಸಿತದಿಂ ಶಮಾದಿಗಳೆಂಬ ರುದ್ರಾಕ್ಷಿಗಳಿಂ ಚಿದ್ರೂಪವೆಂಬ ಮೂರ್ತಿಯಿಂ
ಸುಖರೂಪವೆಂಬಹೃದಯದಿಂ ಸತ್ಯರೂಪವೆಂಬಾತ್ಮನಿಂಸರ್ವಶಕ್ತಿಯಿಂ
ಬಸ್ವಭಾವದಿಂ ಸರ್ವಜ್ಞತ್ವಾದಿಲಕ್ಷಣಂಗಳಿಂಸರ್ವೇಶ್ವರತ್ವಾದ್ಯಧಿಕಾರ
ದಿಂ ಶುದ್ಧಸತ್ವವೆಂಬ ವೃತ್ತಿಯಿಂ ಸಚ್ಛೈವದೀಕ್ಷಿತರೆನಿಪ ಸೇವಕರಿಂ ಶಿವ
ಜ್ಞಾನಸಿದ್ಧರೆನಿಪ ಪಾರಿಷದರಿಂ ಮಹಾವಾಕ್ಯಂಗಳೆನಿಪ ಸ್ಥಾನಂಗಳಿಂದ
ಸೆದು ರಹಸ್ಯಾತಿರಹಸ್ಯವಾಗಿ ಪ್ರಾಪ್ಯನೆನಿಸಿರ್ಕುಂ.

### ದೇವತೆಗಳ ತಾರತಮ್ಯ.

ಬಳಿಕೀ ಪೂರ್ವೋಕ್ತದೇವತೆಗಳತಾರತಮ್ಯಕ್ರಮವೆಂತೆಂದೊಡೆ ಭೂ
ವ್ಯಾದ್ಯಚೇತನಗಳಿಂ ಚೇತನಪ್ರಾಣಿಗಳುವಿಶೇಷವಿವರಿಂದಾಜಾನದೇವ
ಗಳುವಿಶೇಷವವರಿಂಸುರಪತಿವಿಶೇಷವವನಿಂ ರುದ್ರರುವಿಶೇಷವವರಿಂ ಬ್ರಹ್ಮ
ನುವಿಶೇಷವವನಿಂ ವಿಷ್ಣುವುವಿಶೇಷವವನಿಂ ದೀಶ್ವರಿಯೇ ವಿಶೇಷವಾ
ಯಿಂ ಪರಮೇಶ್ವರನೇ ವಿಶೇಷವಾತನೇ ಸತ್ವಗರ್ಭನಾದ ಶ್ರೀರುದ್ರನಾತ
ನಿಂ ಸಾಂಬಶಿವನೆನಿಪ ಮಹೇಶ್ವರನೇ ವಿಶೇಷವಾತನಿಂ ಪರಾಪರನೆನಿಪ
ಬಳಬ್ರಹ್ಮಪೆಣಕಾರಶಿವನೇ ವಿಶೇಷವಾತನಿಂ ನಿರ್ಗುಣನಿರಂಜನನಿತ್ಯ
ಚ್ಚಿತ್ಸುಖಾದ್ವಯಪರಬ್ರಹ್ಮಶಿವಚೈತನ್ಯವೇ ವಿಶೇಷವಾಶಿವನೇ ವೇದಾಂ
ಸಿದ್ಧಾಂತೋಭಯಸಂಪ್ರತಿಪನ್ನನಾದರುಂತದಭಿನ್ನನಾಗಿ ನಿಜಸ್ವತಂತ್ರ
ಸ್ವಭಾವಸರ್ವಜ್ಞಶಕ್ತಿಯೆನಿಪ ನಿಜಮಾಯೆಯಿಂ ಕೂಡಿ ಶಬಳನೆಸಿಪಾಕಾ
ರಣಶಿವನೇ ಸರ್ವೋತ್ತಮೋತ್ತಮನಾತನೇ ಶಿವಲೋಕಾಧಿಪತಿಯಾತನೇ
ರ್ವಶಕ್ತನಾತನೇ ಸರ್ವೇಶ್ವರೇಶ್ವರನಾತನೇ ವಿಷ್ಣ್ವಾದಿಸರ್ವಸಮು
ಸ್ಯನಾತನೇ ಮುಕ್ತಿಗೊಡೆಯನಾತನೇ ಪಶುಪತಿಯಾತನೇ ಮುಂದೆ
ಳ್ವ ಭುವನಾದ್ಯತೀತ - ತತ್ವಾತೀತ - ಮಾಯಾತೀತಶಿವತತ್ವವೆಂದು
ಲನಿಗಮಾಗಮ ಸ್ಮೃತಿ ಪುರಾಣತಂತ್ರೋಪತಂತ್ರಸಂಹಿತೇತಿಹಾಸಾಂ
ಶಾಸ್ತ್ರೋಪಶಾಸ್ತ್ರವಿವರಣಾದಿ ಸರ್ವವಿದ್ಯಾರಾಜಸಂಪ್ರತಿಪನ್ನಸಾರಸಾ
ತರೋತ್ತಮಾ ಬಾಧಿತ ಸಿದ್ಧಾಂಜಲೀಭೂತ ತಾತ್ಪರ್ಯವಿಷಯನೆಂದು
ದ್ವನ್ಮಹಾಜನಸದನುಭೂತಿಸಿದ್ಧಮಕ್ಕುಂ.

### ಪೂಜಾತಾರತಮ್ಯ.

ಬಳಿಕ ಶಿವಪ್ರಕೃತಿ ವಿಕೃತಿಪ್ರಪಂಚಿತ ಪ್ರತ್ಯಾಭಾಸಮಾತ್ರಮಪ್ಪ ಜ
ದೊಳು ದೇಹಧಾರಣೆಯುಳ್ಳ ಪಾಶಬದ್ಧರಾದ ಪಿಪೀಲಿಕಾದಿ ಬ್ರಹ್ಮಾಂ

ಪಡೆದ ಪಶುಗಳೆಲ್ಲರುಂ ವಿಶ್ವಮೂರ್ತಿಯಹ ಶಿವನಂ ಪೂಜಿಸಿ ಕೃತಾರ್ಥರಾಗಲೊಲ್ಲುಗ ಪರ್ವದಯಾಳುತ್ವದಿಂ ಬಹುಮೂರ್ತಿಯಾಗಿರ್ಪ ಮಹೇಶ್ವರನ ಲಿಂಗಾರ್ಚನೆಯೊಳು ಗುಣಾಭಿಮಾನದಿಂ ಮಾಯಾವಿಯೆನಿಪ ದೇವಮಹೇಶ್ವರನಿಗುಂ ನಿರ್ಲಿಪ್ತ ಸ್ವಪ್ರಕಾಶ ಯುನಿತ್ಯಸುಖಬೋಧರೂಪದಿಂ ಮಾಯಾತೀತನಾದ ಮಹೇಶ್ವರನಿಗುಂ ಪೂಜ್ಯತೆಯೊಳು ಶ್ರುತ್ಯಾದಿ ತಾರತಮ್ಯವಿಲ್ಲವಿರಲ್ಕೆ ಆವರೀರ್ವರಿಗುಂ ಲಿಂಗಸ್ಥಾನಮಾದೇಕಾಧಿಕರಣದಲ್ಲಿ ಪೂಜಿಸಲ್ಪುವರಿಂ ಪ್ರಣವಪಂಚಾಕ್ಷರಾದಿಮಂತ್ರಂಗಳಿಂ ಉಭಯ ಪೂಜೆಯುಲ್ಲಿಯುಂ ಸಮಾನಮಹುದಾ ಪೂಜೆಯೇ ಪಂಚವಿಧವಾಗಿರ್ಪುದದರೊಳಗೆ ಕೇವಲನಾಮಪೂಜೆಯೇ ಕನಿಷ್ಠವೆನಿಸುವದು । ಅವರೀರ್ವರೊಳಗೆ ರುದ್ರಪ್ರಧಾನವಾದ ಪೂಜೆಯೇ ಮಧ್ಯಮೋತ್ತಮವೆನಿಸುವದು । ಆಮಹೇಶ್ವರನ ನಿರುಪಾಧಿಕವಾದ ಸಚ್ಚಿದಾನಂದಪೂಜೆಯೇ ಉತ್ತಮೋತ್ತಮವೆನಿಸುವದಾಚಿದಾನಂದಪೂಜೆಯೊಳು ಪೂಜಕನ ನಿಜಾತ್ಮಸ್ವರೂಪವೇ ಲಿಂಗಮಪ್ಪುದರಿಂದವಕೆಚೇತನ ಕಮಲವಂ ಸಮರ್ಪಿಸಿ ಸರ್ವದೋಷವಿಮುಕ್ತನಾಗಲದುವೇ ಶಿವಪ್ರೀತಿಕರಮಕ್ಕುಂ ॥ ಬಳಿಕವಹ್ನಿ ಸೂರ್ಯೇಂದ್ರ ಬೃಹಸ್ಪತೀಶಾನ ಬ್ರಹ್ಮ ವಿಷ್ಣು ಶಕ್ತಿ ಮೊದಲಾದ ದೇವತೆಗಳಿಗೆ ಸರ್ವಾಧಿಕಶಿವನೊಡನೈಕಾಧಿಕರಣ್ಯ ಪೂಜೆಸಲ್ಲದಾದಿ ಭಿನ್ನಾಧಿಕರಣ ಭಿನ್ನಮಂತ್ರ ಭಿನ್ನಭಾವಪೂಜೆಗಳೇ ಕಾಮ್ಯವಾಗಲದು ನಿಕೃಷ್ಟಮಕ್ಕು ಮಾಕಾಮ್ಯ ಪೂಜೆಯೊಳಗುಂ ಸರ್ವಾಂತರ್ಯಾಮಿಯಪ್ಪ ಶಿವಭಾವದಿಂ ಪೂಜಿಸೆ ಶಿವನೇ ತತ್ತದ್ದೇವತಾರೂಪದಿಂ ಫಲಪ್ರದನಪ್ಪುದರಿಂದಾ ಪೂಜೆಯೇ ಕಾಮ್ಯೋತ್ತಮಮಕ್ಕುಮಾ ಪೂಜೆಗಳೊಳು ಮಹೇಶ್ವರಕಾರಣ ಶಿವಶ್ರೀರುದ್ರೇಶಾನರುದ್ರಗಣರ್ಗಾದ್ರಮೂರ್ತಿಗಳಿಗೆ ಲಿಂಗಭೇದವಾದರುಂ ಸ್ಥಳಭೇದವಾದರುಂ ಅಂಶತಾರತಮ್ಯವಿದ್ದರುಂ ಸಾನ್ನಿಧ್ಯ ಸಮಾನವಾಗಲೇಕಾಧಿಕರಣ ಪೂಜೆಯೇಸಲ್ಲುವದೆಂದು ಪುರಾಣೋಕ್ತಿಸಿದ್ಧವಾಗಿರ್ಕುಂ ॥

### ಶಿವಪೂಜೆಲಭಿಸುವದಕ್ಕೆ ಕಾರಣ.

ಬಳಿಕ ಅಗ್ನಿ ಸೂರ್ಯೇಂದ್ರಾದಿ ದೇವತಾಭಜನೆಗಳೆಲ್ಲದರಿಂ ವಿಷ್ಣುವಿನರ್ಚನೆದೊರಕೊಂಬುವದು । ವಿಷ್ಣುವಿನರ್ಚನೆಯಿಂ ರುದ್ರಾರಾಧನೆದೊರಕೊಂಬುವದು । ರುದ್ರಾರಾಧನೆಯಿಂ ಶಿವಭಕ್ತಿದೊರಕೊಂಬುವದು । ಶಿವಭಕ್ತಿಯಿಂ ಶಿವಪೂಜೆದೊರಕೊಂಬುವದು । ಶಿವಪೂಜೆಯಿಂ ಶಿವಪ್ರಸಾದಮುದಿಸುವದು । ಶಿವಪ್ರಸಾದದಿಂ ನಿರ್ಭರಭೋಗಂಗಳುಂ ದರ್ಶನಗಮ್ಯ

ಕ್ತಿಗಳುಂ ಸಿದ್ಧಿಸುತ್ತಿಹವಾಗಿ ಶಿವಪೂಜೆಗೆಕಾರಣವಾದ ಶಿವಭಕ್ತಿಯೇನಿಗಮಾಗಮಾವಲಂಬಿಗಳಾದ ವೇದಾಂತಸಿದ್ಧಾಂತಿಗಳೆಲ್ಲರಿಗುಂ ಮುಖ್ಯಸಾಧನಮಪ್ಪುದರಿಂ ಸರ್ವೋತ್ಕರ್ಷಮಪ್ಪುದೆಂದುನಿರ್ಧರಿಸಲ್ಪೇಳ್ಕುಂ॥

ಶಿವಭಕ್ತಿಪ್ರಶಸ್ತಿ.

ಮತ್ತಮಾ ಶಿವಭಕ್ತಿಯೇ ಶಿವಪಾರಮ್ಯಜ್ಞಾನ ಸಾಧಕವಾಗಿಪ್ಪುದಾ ಶಿವಪಾರಮ್ಯಜ್ಞಾನವೇ ಯಥಾರ್ಥನಿದರ್ಶವಹುದದರಿಂ ಶಿವಪೂಜೆದೊರಕೊಂಬುದೀ ಶಿವಭಕ್ತಿಯೇ ಸರ್ವಪಾಪನಿವರ್ತಕವಾಗಿ ಹೃದಯ ಪ್ರಸಾದನ ವೆನಿಸುವದು ಶಿವಭಕ್ತಂಗೆ ಕರ್ಮಮಲಮಾಯಾಬಂಧನಂಗಳು ನಿವೃತ್ತಿಯಹವು । ಶಿವಭಕ್ತಂಗೆ ಮೃತ್ಯುಪಾಪಶತ್ರುಭಯಂಗಳಿಲ್ಲದಿರ್ಕುಂ ॥ ಶಿವಭಕ್ತನೇ ಶ್ರೇಷ್ಠನೆನಿಸುವಂ । ಶಿವಭಕ್ತಂಗೆ ಸರ್ವಸಿದ್ಧಿಗಳುಂ ಸುಲಭವಾಗಿಪ್ಪುದಾಶಿವಭಕ್ತಿಯಿಂದಲೇ ವಿಷ್ಣುಬ್ರಹ್ಮಮಹೇಂದ್ರಾದಿದೇವತೆಗಳುಂ ವಸಿಷ್ಠಾದಿಮಹರ್ಷಿಗಳುಂ ಸನಕಾದಿಯೋಗಿಗಳುಂ ರಾಮಾದಿರಾಜರುಂ ಕಳಚಂಗ ಮುಂತಾದ ಕಲಿಜನರುಂ ಅಮ್ಮವ್ವೆ ಮೊದಲಾದ ಶಿವಮರರುಂ ವೃಷಭಾದಿ ಪ್ರಮಥರುಂ ಉಮೇಲಕ್ಷ್ಮೀಮುಂತಾದ ಶಕ್ತಿಯರುಂ ಪ್ರಸಿದ್ಧ ಭೋಗಾಭ್ಯುದಯರಾಗಿ ಶಿವಸುಖವನುಂಡಿರೀ ಶಿವಭಕ್ತಿಗಿಂತಲುಂ ಬೇರೊಂದು ಸುಲಭಸಾಧನನಿಲ್ಲದಿರಲ್ಕೆ ಮೂರು ಜನ್ಮಗಳೊಳು ತನ್ನಂ ಬಿಡದಾರಾಧಿಸಿದವರ್ಗೆನಾರಾಯಣನು ಶಿವಭಕ್ತಿಯನುಪದೇಶಂಗೈದುವನೀಶಿವಭಕ್ತಿಯೇ ಭುಕ್ತಿಮುಕ್ತಿಸಾಧಕವಾದ ಸುಲಭೋಪಾಯವೆಂದು ನಿಗಮಾಗಮ ಪುರಾಣಂಗಳುಂ ತತ್ವಜ್ಞರಾದ ಮಹಾತ್ಮರುಂ ಪ್ರಾಮಾಣಿಕರಾದ ಪಂಡಿತರುಂ ಬಿಡದೆ ಬಣ್ಣಿಸಿ ನುತಿಸಿಕೈಕೊಂಡನುಷ್ಠಿಪರೆಂದು ಮಹದನುಗ್ರಹಲಬ್ಧಮಾದೀರಹಸ್ಯವಂ ಲೋಕಾನುಗ್ರಹಾರ್ಥವಾಗಿ ತಿಳಿಯಲ್ಪೇಳ್ಕುಂ ॥

ಊರ್ಧ್ವಾಂಡಕಟಾಹದಲೋಕಪರಿಮಿತಿ.

ಬಳಿಕಿಂತು ಪೇಳ್ದಪ್ರಕಾರದಿಂದೆಣಿಸಿನೋಡೆ ಭೂಲೋಕದಿಂ ತೊಡಗಿ ಧ್ರುವಮಂಡಲಪರ್ಯಂತವಾಗಿ ಭುವರ್ಲೋಕವೇ ಹದಿನೈದುಲಕ್ಷಯೋಜನದಗಲದಮೇಲೆಸ್ವರ್ಲೋಕವೆಂಭತ್ತೈದುಲಕ್ಷಯೋಜನ ಮುಭಯಂಗೂಡಲೊಂದುಕೋಟಿಯೋಜನ । ಪಾಮಹರ್ಲೋಕವೆಂಟುಕೋಟಿಯೋಜನ। ಸತ್ಯಲೋಕಹದಿನಾರುಕೋಟಿಯೋಜನ । ವಿಷ್ಣುಲೋಕವು ನಾಲ್ಕುಕೋಟಿಯೋಜನ ।ಕುಮಾರಲೋಕವೊಂದುಕೋಟಿಯೋಜನ। ಮುಮಾ

ಲೋಕವೊಂದುಕೋಟಿಯೋಜನ । ಗೋಲೋಕವೊಂದುಕೋಟಿಯೋಜನ । ಚಿದಂಬರ ಮೂರುಕೋಟಿಯೋಜನಮುಂ ಗೂಡಿ ಕುಮಾರಲೋಕಾಂತ್ರವಾದಿಯಾಗಿ ಶ್ರೀರುದ್ರಲೋಕ ಮೂರುಕೋಟಿಯೋಜನ । ಮಹಾಶ್ರೀರುದ್ರಲೋಕ ವೊಂದುಕೋಟಿಯೋಜನ । ಶಿವಲೋಕ ಹದಿನಾರುಕೋಟಿಯೋಜನ । ಏವ್ಯಕೈಲಾಸವೊಂದುಕೋಟಿಯೋಜನ ಮಿಂತು ಭೂಲೋಕಾಂತ್ರಮೊದಗಿ ಬ್ರಹ್ಮಾಂಡದೂರ್ಧ್ವಕಟಾಹಾಂತವಾಗೆಂವತ್ತು ಕೋಟಿಯೋಜನದಳತೆಯಕ್ಕುಂ ॥ ಬಳಿಕಧಃಕಟಾಹಮೊದಲುಗೊಂಡ ಭೂಪೃಷ್ಠದವರ್ಯಂತಮಾಗೈವತ್ತು ಕೋಟಿಯೋಜನದಳತೆಯುಹುದೆಂತು ನೂರು ಕೋಟಿಯೋಜನ ಪರಿಮಾಣೋನ್ನತವೆಂದು ವಿವೇಕಿಸಲ್ಪೇಳ್ಕುಂ ॥ ಬಳಿಕೀಪ್ರಕಾರದಿಂ ವಿಚಿತ್ರರಚನೆಯುಳ್ಳ ಬ್ರಹ್ಮಾಂಡದೊಳ ವಲಯಿಸುವ ಪೂರ್ವಾದಿ ದಿಕ್ಕೆಂಟರಲ್ಲಿಂ ದ್ರಾದಿಲೋಕಪಾಲಾಷ್ಟಕ ಮಿರ್ದದಂ ರಕ್ಷಿಸುತಿರ್ಪುದೀ ಬ್ರಹ್ಮಾಂಡರಕ್ಷಕರೊಳಗೆ ತ್ರಿಮೂರ್ತಿಗಳೇ ಮುಖ್ಯರೆಂದು ತಿಳಿಯಲ್ಪೇಳ್ಕುಂ ॥

### ಅನೇಕಕೋಟಿ ಬ್ರಹ್ಮಾಂಡಗಳು,

ಬಳಿಕಿಂತಪ್ಪ ಬ್ರಹ್ಮಾಂಡಗಳನಂತಕೋಟಿಗಳುಂಟೆಂದು ನಿಶ್ಚೈಸಲ್ಪಕ್ಕುದದಕೆ ದೃಷ್ಟಾಂತಮೆಂತೆನೆ ಔದುಂಬರವೃಕ್ಷದೊಳೊಂದೇ ಸಮಯದಲ್ಲಿ ಜನಿಸುತ್ತಿರ್ದ ಜನಿಸಿದ । ಜನಿಸಿಹೋಗುತ । ಜನಿಸಿ ಕೆಟ್ಟಫಲಗಳನೇಕಂಗಳಲ್ಲಿ । ಪ್ರತ್ಯೇಕೊಂದುಫಲದೊಳಿಪ್ಪ ಮಶಕಂಗಳು ಫಲಾಂತ್ರರದೊಳಗಿಪ್ಪ ಮಶಕಂಗಳಂ ಫಲಾಂತರಂಗಳಂ ವೃಕ್ಷಮಂ ವನಮಂ ಲೋಕಮಂ ಬ್ರಹ್ಮಾಂಡಮನು ಮರಿಯದೆ ತಮ್ಮೊಳಗುಂ ಪರಸ್ಪರವಾಗಿ ಸರ್ವವಿಷಯಕಜ್ಞಾನವಿಲ್ಲದೆ ಸ್ವಲ್ಪಕಾಲದೊಳು ಶಿವಾಜ್ಞೆಯಿಂದ ಸಂಖ್ಯಾತಂಗಳಾಗಿ ಪುಟ್ಟಿ ಸಾವುತ್ತಿರ್ಪ ಮಶಕಂಗಳಂತೆ ಅಸಂಖ್ಯಾತರಾದ ಪ್ರಾಣಿಗಳೊಂದೊಂದು ಬ್ರಹ್ಮಾಂಡದೊಳು ಪಾಶಬದ್ಧರಾಗಿ ಬೇರೊಂದು ಬ್ರಹ್ಮಾಂಡಮನು ಮರಿಯದೆ ಸಂಸಾರಿಗಳಾಗಿರ್ಪರಿಂತೀ ಬ್ರಹ್ಮಾಂಡಂಗಳನೇಕಕೋಟಿಕೋಟಿಯಿಂ ಗುತ್ತರೋತ್ತರವಾದ ಸಂಖ್ಯಾತಂಗಳು ಮೂರ್ತಿತ್ರಯಾತೀತನಾದ ತುರೀಯನೆನಿಪ ಮಹೇಶ್ವರನ ವ್ಯೋಮರೂಪವಾದ ಕೇಶಕೇಶಂಗಳೊಳಗುಂ ಕೀಲಿಸಿರ್ಕು ಮಿಂತಸಂಖ್ಯಾತ ಬ್ರಹ್ಮಾಂಡಪತಿಗಳಾದ ಮಹೇಶ್ವರರೇ ಔದುಂಬರವೃಕ್ಷಂಗಳಂತಸಂಖ್ಯಾತವಾಗಿರಲಂತಾವನವಾಟಿಯಿಂ ದೊಡಗೂಡಿದ ಕಾಡುಗಳಂತಿರ್ಪ ಮಾಯಾಶಕ್ತಿಗಳುಂ ಬೆರಸ

ಗೂಡಿದ । ಪ್ರಪಂಚವೆಂಬ ವಿಕೃತಿಯುಳ್ಳಪ್ರಕೃತಿಗತಿಗತೀತನಾಗಿನಿರಂಜನ ಸಂವಿತ್ಸುಖಸತ್ತಾಮಾತ್ರಾದ್ವಯಪರಿಪೂರ್ಣಪರಬ್ರಹ್ಮನೆನಿಪ ಶಂಭುಶಿವನೇ ಸರ್ವನೇ ಸರ್ವಸಾಕ್ಷಿಯಾಗಿಯುಂ ಸರ್ವಪದಾರ್ಥಾಧಿಷ್ಠಾನವಾಗಿಯುಂ ಸರ್ವಕಾರಣನಾಗಿಯುಂ ತಿಳಿಯಲಕ್ಕುಂ ॥

## ಬ್ರಹ್ಮಾಂಡಪತಿಗಳು.

ಮತ್ತಮಾ ಪ್ರತಿಬ್ರಹ್ಮಾಂಡದೊಳಗಂ ಮುನ್ನ ಪೇಳ್ದ ತ್ರಿಮೂರ್ತಿಗಳುಂ ತುರೀಯಕಾರಣನಾದ ಮಹೇಶ್ವರನುಂ ನಿಕ್ಕ ಸಮಸ್ತಕಲ್ಪನೆಗಳುಂ ಪ್ರತಿನಿಯತಗಳಾಗಿರ್ಪುವಿಂತಿರಲು ವೀರಮಾಹೇಶ್ವರಯೋಗಬಲಮುಳ್ಳ ಪರನೇಕಚೇತನರು ತಪಸ್ಸಂತೋಷಿತಶಿವಪ್ರಸಾದದಿಂದೇಕಾನೇಕಬ್ರಹ್ಮಾಸಂಖ್ಯಾತಬ್ರಹ್ಮಾಂಡಂಗಳಗಧಿಪತಿಗಳಾಗಿ ಪ್ರಸಿದ್ಧರಾಗಿದ್ದರವರೊಳಗೆ ಶೂರಪದ್ಮಾಸುರ ತಾರಕಾಸುರ ಸಿಂಹವಕ್ತ್ರ ಮುಂತಾದನೇಕರಾಕ್ಷಸರು ಪರವರಪ್ರಸಾದದಿಂ ಸಾವಿರದನೂರೆಂಟುಬ್ರಹ್ಮಾಂಡಂಗಳನಾಳ್ವರುಗಳೊಳಗಿರ್ದ ಬ್ರಹ್ಮವಿಷ್ಣುರುದ್ರೇಂದ್ರಾದ್ಯಧಿಕಾರಿಗಳನೆಲ್ಲರುಂ ಪಿಡಿದೊಂದುಬ್ರಹ್ಮಾಂಡದೊಳುಸೆರೆಗೊಳಿಸಿ ಪ್ರಬಲಮಾತ್ರರಾಗಿರಲವರಂಜಯಿಸಿ ದೇವರ್ಕಳಸೆರೆಬಿಡಿಸಲೋಸುಗಮಾಜಗದೀಶನಾದ ಪರಶಿವನೇ ನಿಜವಾಮಾಂಗಿಯಾದುಮಾದೇವಿಯೊಳು ಕುಮಾರರೂಪದಿಂದವತರಿಸಿ ತನ್ನಂಶದಿಂದಾರಾಕ್ಷಸಂ ಕೊಂದನದರಿಂ ವಿಷ್ಣ್ವಾದಿಗಳ ಸೆರೆತಪ್ಪಲವರೆಲ್ಲರುಂ ಸೇನಾನಿಯಾದ ಕುಮಾರಸ್ವಾಮಿಯುಂ ಪಾಲಿಸಲ್ಪಡುತ್ತಲಿರ್ಪರಂ ॥

## ಶಿವನೇ ಭಕ್ತಪರಾಧೀನ.

ಬಳಿಕಿಂತುಪೇಳ್ದ ಬ್ರಹ್ಮಾಂಡಂಗಳೆಲ್ಲರೊಳಗುಂ ಪರಶಿವನು ತನ್ನ ಭಕ್ತರಾದ ಹರಿಬ್ರಹ್ಮರುದ್ರೇಂದ್ರಾದಿಗಳಂ ಪೊರೆಯಲೋಸುಗವಾಗಿ ತಾನವರ್ಗೆ ಗುರುವಾಗಿಯುಂ ಪ್ರಭುವಾಗಿಯುಂ ಸಹಾಯಕನಾಗಿಯುಂ ಮಿತ್ರನಾಗಿಯುಂ ಪುತ್ರನಾಗಿಯುಂ ಶಿಷ್ಯನಾಗಿಯುಂ ಸೇವಕನಾಗಿಯುಂ ಯಾಚಕನಾಗಿಯುಂ ಭಕ್ತರ್ಗೆ ಕಾಂಕ್ಷಿತಭೋಗಗೌರವಪ್ರಭವ ಮಾಹಾತ್ಮ್ಯಂಗಳನಿತ್ತು ತನ್ನಿಂದವರವರಧಿಕರೆನಿಸಿದನವರೆಲ್ಲರುಂ ಸ್ವಸ್ವಕರ್ಮಾನುರೂಪವಾಗಿ ಶಿವನಿಂ ಫಲಭಾಗಿಗಳಾದವರೊಳಗೆ ನಾರಾಯಣ ಬ್ರಹ್ಮ ದಕ್ಷ ಬಾಣ ರಾವಣ ಚಂಡಿನಂದಿಪ್ರಭೃತಿಗಳೇ ಸುಖದುಃಖಫಲಭಾಗಿತ್ವಕ್ಕೆ ದೃಷ್ಟಾಂತಗಳಾಗಿರ್ಪರೆಂದು ತಿಳಿಯಲ್ವೇಳ್ಕುಂ ॥

# ೬ನೇ ಪ್ರಕರಣ.

## ಯೋಜನಮಾತ್ರ್ಯಾದಿ ಪರಿಮಾಣಶಿಲ್ಪವಿನಿಯೋಗ

ಅವಂತರಿಯೊಳಗೆ ಯೋಜನಪರಿಮಾಣ ಸಂಖ್ಯೆಯಿಂದಲೇ ಸಮಸ್ತ ತ
ತ್ತ್ವವ್ಯಾಪ್ಯವ್ಯಾಪಕಸೃಷ್ಟಿಪ್ರಮೋದಲಾದವನರಿಬಯಸಿದೊಡಂ ಯೋಜನಲಕ್ಷಣ
ನೆಂತೆನೆ ಎಂಟು ಪರಮಾಣುಗಳ್ ಕೂಡಲೊಂದು ತ್ರಸರೇಣುವೆನಿಸುವದು ।
ಅದೇ ಗವಾಕ್ಷಮಧ್ಯ ಸೂರ್ಯರಶ್ಮಿಯುಳ್ಳ ತೋರ್ಪ ರಜಸ್ಸೆನಿಸುವದು । ಆ
ತ್ರಸರೇಣುವೆಂಟಾಗಲೊಂದು ವಾಲಾಗ್ರವೆನಿಸುವದು । ಆ ವಾಲಾಗ್ರವೆಂಟಾ
ಗಲೊಂದು ಲಿಕ್ಷವೆನಿಸುವದು । ಆ ಲಿಕ್ಷವೆಂಟಾಗಲೊಂದು ಯೂಕವೆನಿಸುವದು ।
ಆ ಯೂಕವೆಂಟಾಗಲೊಂದು ಯವವೆನಿಸುವದು । ಆ ಯವವೆಂಟಾಗಲೊಂದು
ತ್ತಮಮಾನಾಂಗುಳವೆನಿಸುವದು । ಮೇಣೇಳರಿಂ ಮಧ್ಯಮಾನಾಂಗುಳವೆನಿ
ಸುವದು । ಮತ್ತಮಾರರಿಂದಧಮಮಾನಾಂಗುಳವೆನಿಸುವದಿಂದೀಮಾನಾಂ
ಗುಳವಿವರಮಕ್ಕುಂ । ಬಳಿಕ ಮಾತ್ರಾಂಗುಳಮೆಂತೆನೆ । ಕರ್ತೃವಿನ ಮಧ್ಯಮಾಂ
ಗುಳಿಯ ನಡುವಿನ ಪರ್ವತ್ರಯದೈರ್ಘ್ಯವೇ ಮಾತ್ರಾಂಗುಳವೆನಿಸುವದು । ಅದಕ್ಕೊಂ
ದು ಕಾಲುಭಾಗಕ್ಕೆ ಮಿಗೆ ಮಧ್ಯಮಾತ್ರಾಂಗುಳವೆನಿಸುವದು । ಅಪ್ಪೊ
ರ್ಧವೇ ಅಧಮಮಾತ್ರಾಂಗುಳವೆನಿಸುವದು । ಇನ್ನು ದೇಹಲಬ್ಧಾಂಗುಳವೆಂ
ತೆನೆ ತನ್ನಿಂ ನಿಗ್ರಹಿಸಲ್ಪಟ್ಟ ಪ್ರತಿಮೆಯ ದೈರ್ಘ್ಯವನೇ ಆಯಾಯಂಗುಳದ
ಸಂಖ್ಯೆಯಿಂದೊಂದೊಂದು ಪದವಯವಶದಿಂ ಭಾಗವೆಂದು ವಿಭಾಗಿಸುವದೇ
ದೇಹಲಬ್ಧಾಂಗುಳಮಕ್ಕುಂ । ಬಳಿಕಿಲ್ಲಿ ಉಪ್ಪರಿಗೆ ಮೊದಲಾದವನೇ ಮಾನಾಂ
ಗುಳದಿಂ ಮಾಡುವದು । ಮಂಚ ಮೊದಲಾದವನುಂ ಗೃಹೋಪಕರಣಾದಿಗ
ಳನುಂ ಮಾತ್ರಾಂಗುಳದಿಂ ಮಾಳ್ಪುದು । ಪ್ರತಿಮೆಯ ಅವಯವಂಗಳನೇ
ದೇಹಲಬ್ಧಾಂಗುಳಯುಂ ಮಾಡುವದು ಈ ಪ್ರಕಾರದಿಂದಂಗುಳಯ ಭೇದವ
ನರಿವುದಿನ್ನು ಹಸ್ತಭೇದಮೆಂತೆನೆ ಪೂರ್ವೋಕ್ತ ಮಾನಾಂಗುಳಯಿಪ್ಪತ್ನಾ
ಲ್ಕಾದರೊಂದು ಕಿಷ್ಕುವೆನಿಸುವದಿಪ್ಪತ್ತೈದಾದೊಡೆ ಪ್ರಾಜಾಪತ್ಯವೆ
ನಿಸುವದು ಮತ್ತಿಪ್ಪತ್ತಾರಾದೊಡೆ ಧನುರ್ಮುಷ್ಟಿಹಸ್ತವೆನಿಸುವದು ।
ಮತ್ತಿಪ್ಪತ್ತೇಳಾದೊಡೆ ಧನುರ್ಗ್ರಹಹಸ್ತವೆನಿಸುವದು । ಬಳಿಕಿಲ್ಲಿ ಮಂ
ಚಾದಿಕವನೇ ಕಿಷ್ಕುಹಸ್ತದಿಂ ಮಾಡುವದು । ಗೃಹದೇವಾಲಯಲಿಂಗಾದಿ
ಗಳನೇ ಪ್ರಾಜಾಪತ್ಯಹಸ್ತದಿಂ ಮಾಡುವದು । ಪಟ್ಟಣಾದಿಕವನೇ ಧನು
ರ್ಮುಷ್ಟಿಹಸ್ತದಿಂ ಮಾಡುವದು । ಕ್ಷೇತ್ರಪರಿಮಾಣವನು ಯೋಜನವ
ನುಂ ಧನುರ್ಹಸ್ತದಿಂ ಮಾಡುವದು । ಮತ್ತಮಾ ಧನುರ್ಗ್ರಹಹಸ್ತವು
ನಾಲ್ಕಾಗಲೊಂದು ಧನುವೆನಿಸುವದು । ಆ ಧನುವೆರಡಾಗಲೊಂದು ದಂಡವೆ

ವಿಸುವದು । ಆದಂಡವೆರಡುಸಾವಿರವಾಗಲೊಂದು ಕ್ರೋಶವೆನಿಸುವದು ಆಕ್ರೋಶವೆರಡಾಗಲೊಂದು ಗವ್ಯೂತಿಯೆನಿಸುವದು । ಆಗವ್ಯೂತಿಯೆರಡಾಗಲೊಂದು ಯೋಜನವೆನಿಸುವದೀಯೋಜನವರಿಮಿತಿಯೇ ದೇಶಾದಿಪರಿಮಾಣಂಗಳಿಗಂ ಲೋಕಪರಿಮಾಣಂಗಳಿಗಂ ಬ್ರಹ್ಮಾಂಡಪರಿಮಾಣಂಗಳಿಗಂ ಉಪಯುಕ್ತವಾಗಿರ್ಪುದಂ ತಿಳಿಯಲ್ವೇಳ್ಕುಂ ॥

ಇಂತುಬಲ್ಲಿಗೆ ನಿಜಗುಣ ಶಿವಯೋಗೀಂದ್ರವಿರಚಿತವಾದ ವಿವೇಕ ಚಿಂತಾಮಣಿ ಯೆಂಬ ಗ್ರಂಥದೊಳು ದೇವಲೋಕಸ್ಥಿತಿವರ್ಣನವೆಂಬ ಆರನೇಪ್ರಕರಣಪರಿಸಮಾಪ್ತಿಗೆ

ಮಂಗಳಮಸ್ತು.

---

ಜಯನಿರಂಜನಸಚ್ಚಿದಾನಂದಲಿಂಗವೆ

ಸಪ್ತಮಪ್ರಕರಣಪ್ರಾರಂಭಃ.



ಕಂ॥ವಿದಿತವನೇಕಮಲಜನ್ಮಾಂಡದೊಳಂಖಿಲಪ್ರಪಂಚಮುಂಪೇಳದಿ ನಿನ್ನುದರಬಹಿರ್ಭಾಗದಸಂ।ಪದಮುಂಸಾಲ್ಗೊಂಡುಸರ್ವರರಿವಂತುಸುರ್ವಂ॥ ಅದೆಂತೆಂದೊಡೆ ॥ ಗದ್ಯ॥ ಆಪಾತನಿಂದಾಪಾತನಧಿಕವಾದಜ್ಞಾನತೇಜೋಬಲೈಶ್ವರ್ಯಾದಿಗುಣವಿಶಿಷ್ಟನಪ್ಪ ನಾಪಾತನಿಂದಾಪಾತನೂರ್ಧ್ವಲೋಕದಾಪಿಯೆಂಬಾಗಮಪ್ರಮಾಣದಿಂದಿಲ್ಲಿಂದಮೇಲೆಪೇಳ್ವ ಭುವನಪತಿಗಳನುತ್ತರೋತ್ತರಸುಖಭೋಗಿಗಳೆಂದರಿಯಲ್ತಕ್ಕುದಾಗಿಪೂರ್ವೋಕ್ತಪಾಂಚಭೌತಿಕಬ್ರಹ್ಮಾಂಡಮದುಳದರಬಹಿರ್ಭಾಗದಕೇಪಲಪೃಥ್ವೀತತ್ವದ ಇಂದ್ರಾದಿದಶದಿಕ್ಕಿನೊಳಿರ್ದ । ಇಂದ್ರಾದಿಗಳಿಗೆನಿಯಂತೃಗಳಾಗಿಪರಮೈಶ್ವರ್ಯಸಂಪನ್ನತೆಯಿಂಮೆರದು । ತಮ್ಮೊಡನೆವಿಚಿತ್ರವೇಷಧಾರಿಗಳಾದಮಹಾಪರಾಕ್ರಮಿಗಳಪ್ಪ । ನಾನಾಶಸ್ತ್ರಪಾಣಿಗಳಾದ । ಗಂಗಾವಾಲುಕಾಸಮಾನರೆನಿಪ । ರುದ್ರರಿಂದೊಡಗೂಡಿತದ್ಬ್ರಹ್ಮಾಂಡರಕ್ಷಕರಾಗಿರುಪಶತರುದ್ರರ ನಾಮಧೇಯಂಗಳಾವಾವವೆಂದೊಡೆ ॥

ಶತರುದ್ರರು.

ಕಪಾಲೀಶ । ಅಜ । ಬುದ್ಧ । ವಜ್ರದೇಹ । ಪ್ರಮರ್ಧನ । ವಿಭೂತಿ । ಅವ್ಯಯ । ಶಾಸ್ತ್ರ । ಪಿನಾಕಿ । ತ್ರಿದಶಾರ್ಚಿತರೆಂಬದಶರುದ್ರರೇ।ಇಂದ್ರದಿಕ್ಕಿನ

ಲ್ಲಿಹರು ‖ ಅಗ್ನಿರುದ್ರ । ಹುತಾಶ । ಪಿಂಗಳ । ಖಾದಕ । ಹರ । ಜ್ವಲನ । ದಹನ । ಬಭ್ರು । ಭಸ್ಮಾಂತಕ । ಕ್ಷಯಾಂತಕರೆಂಬ ದಶರುದ್ರರೇ ಅಗ್ನಿದಿಕ್ಕಿನಲ್ಲಿಹರು । ಯಾಮ್ಯ । ಮೃತ್ಯುಹರ । ಧಾತೃ । ವಿಧಾತೃ । ಕರ್ತೃ । ಕಾಲ । ಧರ್ಮ । ಅಧರ್ಮ ಸಂಯುಕ್ತ । ವಿಮುಕ್ತಕರೆಂಬ ದಶರುದ್ರರೇ ಯಮದಿಕ್ಕಿನಲ್ಲಿಹರು ‖ ನೈರುತ । ಮಾರಣ । ಹಂತೃ । ಕ್ರೂರದೃಷ್ಟಿ । ಭಯಾನಕ । ಊರ್ಧ್ವಕೇಶ । ವಿರೂಪಾಕ್ಷ । ಧೂಮ್ರ । ಲೋಹಿತ । ದಂಷ್ಟ್ರರೆಂಬ ದಶರುದ್ರರೇ ನಿರರುತಿದಿಕ್ಕಿನಲ್ಲಿಹರು ‖ ಬಲ । ಅತಿಬಲ । ಪಾಶಹಸ್ತ । ಮಹಾಬಲ । ಶ್ವೇತ । ಜಯಭದ್ರ । ದೀರ್ಘಬಾಹು । ಜಲಾಂತಕ । ಬಡಬಾಮುಖ । ಭೀಮರೆಂಬ ದಶರುದ್ರರೇ ವರುಣದಿಕ್ಕಿನಲ್ಲಿಹರು ‖ ಶೀಘ್ರ । ಲಘು । ವಾಯುವೇಗ । ಸೂಕ್ಷ್ಮ । ತೀಕ್ಷ್ಣ । ಕ್ಷಯಾಂತಕ । ಪಂಚಾಂತಕ । ಪಂಚಶಿಖಿ । ಕಪರ್ದಿ । ಮೇಘವಾಹನರೆಂಬ ದಶರುದ್ರರೇ ವಾಯುದಿಕ್ಕಿನಲ್ಲಿಹರು ‖ ಜಟಾಮಕುಟಧಾರಿ । ನಾನಾರತ್ನಧರ । ನಿಧೀಶ । ರೂಪವಂತ । ಧನ್ಯ । ಸೌಮ್ಯದೇಹ । ಪ್ರಸಾದಕೃತ್ । ಪ್ರಕಾಶ । ಲಕ್ಷ್ಮೀವಾನ್ । ಕಾಮರೂಪರೆಂಬ ದಶರುದ್ರರೇ ಕುಬೇರದಿಕ್ಕಿನಲ್ಲಿಹರು ‖ ವಿದ್ಯಾಧರ । ಜ್ಞಾನಧರ । ಸರ್ವಜ್ಞ । ವೇದಪಾರಗ । ಮಾತೃವೃತ್ತ । ಪಿಂಗಾಕ್ಷ । ಭೂತಪಾಲ । ಬಲಿಪ್ರಿಯ । ಸರ್ವವಿದ್ಯಾವಿಧಾತೃ । ಸುಖದುಃಖರೆಂಬ ದಶರುದ್ರರೇ ಈಶಾನ್ಯದಿಕ್ಕಿನಲ್ಲಿಹರು । ಅನಂತಪಾಲಕ । ಧೀರ । ಪಾತಾಳೇಶ । ವೃಷಭಧ್ವಜ । ವೃಷಧರ । ಸುವೀರ್ಯ । ಗ್ರಸನ । ಶುಭ । ಲೋಹಿತರೆಂಬ ದಶರುದ್ರರೇ ಬ್ರಹ್ಮಾಂಡದಧೋಭಾಗದಲ್ಲಿಹರು ‖ ಶಂಭು । ವಿಭು । ಗಣಾಧ್ಯಕ್ಷ । ತ್ರ್ಯಕ್ಷ । ತ್ರಿದಶವಂದಿತ । ಸಂವಾಹ । ವಿವಹ । ನಭ । ವೀಕ್ಷಕ । ಪ್ರಭುಗಳೆಂಬ ದಶರುದ್ರರು ಬ್ರಹ್ಮಾಂಡದೂರ್ಧ್ವದೇಶದಲ್ಲಿಹರು ‖ ಬಳಿಕೀಪ್ರಕಾರವಾದ ಶತರುದ್ರರುವಿಾದ್ಯಾದಿಲೋಕಪಾಲಾಷ್ಟಕದಿಂ । ಬ್ರಹ್ಮಾಚ್ಯುತರಿಂದಶದಿಕ್ಕುಗಳಂಪರಿವಿಡಿದು । ಪೂಜ್ಯರಾದ ತಮ್ಮನಾಮೋಚ್ಚಾರಣಾರಾಧನಂಗಳಿಂದಿಷ್ಟಾರ್ಥಪ್ರದರಾಗಿ ಸರ್ವಜ್ಞರೆನಿಸಿರ್ಪರಾಶತರುದ್ರರಿಗೆ ಕರ್ತೃವಾ ವೀರಭದ್ರನಾದೊಡೆ‖

ಶತರುದ್ರಪತಿ ವೀರಭದ್ರ,

ಕಾಲಾಂಜನನೀಲವರ್ಣಶರೀರದಿಂ । ಜಟಾಮಕುಟದಿಂ । ಏಕಮುಖತ್ರಿನೇತ್ರದೀಪ್ತದಂಷ್ಟ್ರಗಳಿಂ । ಖಡ್ಗ । ಫಲಕ । ಚಾಪಬಾಣಂಗಳನಾಂತವಾಮದಕ್ಷಿಣಕರಚತುಷ್ಟಯದಿಂ । ವಸ್ತ್ರಮಾಲ್ಯಾಭರಣಾದಿಗಳಿಂದಲಂಕೃತನಾಗಿ । ಭದ್ರಕಾಳೀಸಹಚರ್ಯದಿಂ ದುಷ್ಟನಿಗ್ರಹಶಿಷ್ಟಪರಿಪಾಲನಪ್ರಭು

ದೆನಿಸಿ ಪೃಥಿವ್ಯಾದಿ ಸೂಕ್ಷ್ಮಭೂತವರ್ಗದಲಿರ್ದು ವೀರಮಾಹೇಶ್ವರಪ್ರವರನಾಗಿ । ಮಾನ್ಯನೆನಿಸಿರ್ಕುಂ ॥

### ತತ್ವಗಳಗಭಿಮಾನಿರುದ್ರರು.

ಅನಂತರದೊಳ್ ಸ್ಥೂಲರೂಪದ ಪೃಥಿವಿತತ್ವದತ್ತಣಿಂ ದಶಗುಣಾಧಿಕಮಾಗಿ ಪರಿಸಿರ್ದ ಅಪ್ತತ್ವದಲ್ಲಿ ಅಮರೇಶ, ಪ್ರಭಾಸ, ನೈಮಿಷ, ಪುಷ್ಕರ, ಆಷಾಢಿ, ಢುಂಢಿ, ಭಾರಭೂತಿ, ನಾಕುಲರೆಂಬಷ್ಟಗುಹ್ಯರಿಹರು ॥ ಮತ್ತಮಾ ಅಪ್ತತ್ವದತ್ತಣಿಂ ದಶಗುಣಾಧಿಕಮಾಗಿ ಪರಿಸಿರ್ದ ತೇಜಸ್ತತ್ವದಲ್ಲಿ - ಹರಿಶ್ಚಂದ್ರ । ಶ್ರೀಶೈಲ – ಕಲ್ಪನಾತ।ಮಾತ್ರಕೇಶ್ವರಮಹಾಕಾಳ। ಮಧ್ಯಮ, ಕೇದಾರ, ಭೈರವರೆಂಬಾದಿ ಗುಹ್ಯಾಷ್ಟಮಿಹರು। ಮತ್ತಮಾ ತೇಜಸ್ತತ್ವದತ್ತಣಿಂ ದಶಗುಣಾಧಿಕಮಾಗಿ ಪರಿಸಿರ್ದ । ವಾಯುತತ್ವದಲ್ಲಿ। ಗಯಾ। ಕುರುಕ್ಷೇತ್ರ । ನಾಗಖಂಡ । ಬಲ । ವಿಮಲ ।ಅಟ್ಟಹಾಸಮಹೇಂದ್ರ ।ಭೀಮರೆಂಬ ಗುಹ್ಯಾದ್ಯಷ್ಟಕರಿಹರು ॥ ಮತ್ತಮಾ ವಾಯುತತ್ವದತ್ತಣಿಂದಶಗುಣಾಧಿಕಮಾಗಿ ಪರಿಸಿರ್ದ ವ್ಯೋಮತತ್ವದಲ್ಲಿ । ವಸ್ತ್ರಾಪದ । ರುದ್ರಕೋಟಿ । ಅವಿಮುಕ್ತ । ಮಹಾಜಲ । ಭದ್ರಕರ್ಣ । ಗೋಕರ್ಣ । ಸ್ವರ್ಣಾಕ್ಷ । ಸ್ಥಾಣುಕರೆಂಬಷ್ಟಪವಿತ್ರರುದ್ರರಿಹರು ॥ ಬಳಿಕಿಂತು ಪೂರ್ವೋಕ್ತಲೋಕಪಾಲಾಷ್ಟಕದೊಡಗೂಡಿ ದೀಪಾಷ್ಟಕರಾದ ನಾಲ್ವತ್ತು ಭುವನಪತಿಗಳೇ ।-ಸರ್ವಜ್ಞತ್ವ । ಸರ್ವಕರ್ತೃತ್ವಸಹಿತರಾಗಿ ಭೂಲೋಕವೊಳಾಯಾ ನಾಮಧೇಯಂಗಳಿಂ ದವತರಿಸಿ ಸಕಲಲೋಕಾಭಿಮತಫಲಪ್ರದಾಯಕರಾಗಿರ್ಕುಂ ॥

### ಪಂಚತನ್ಮಾತ್ರರುದ್ರರು.

ಮತ್ತಮಾಪೃಥಿವ್ಯಾದಿಪಂಚ ಮಹಾಭೂತಂಗಳಿಗೆ ಕ್ರಮದಿಂ ಕಾರಣದೊದಗಂಧಾದಿ ತನ್ಮಾತ್ರಂಗಳೆಂಬೈದರಲ್ಲಿ ಪರಿವಿಡಿಯು । ಮಂತ್ರರೂಪಿ । ಸುಬಾಹು । ಭಾಸುರ । ಸರ್ವವಿತ್ । ಅಗಜೇಶ್ವರರೆಂಬ ಪಂಚಭುವನಪತಿಗಳೊಡಗೂಡಿ । ಗಂಧಾಂಗ । ಜಲೋಧರ ಭಾನುಮಾರ್ಗ । ಬಲಪತ್ರ । ಸೂಕ್ಷ್ಮನಾರದರೆಂಬ ರುದ್ರರುಗಳು ಕ್ರಮದಿಂದಿಹರು ॥

### ಕರ್ಮೇಂದ್ರಿಯಜ್ಞಾನೇಂದ್ರಿಯರುದ್ರರು.

ಮತ್ತಮಾತನ್ಮಾತ್ರಗಳಂ ಮೇಲೆ । ವಾಗಾದಿಕರ್ಮೇಂದ್ರಿಯಪಂಚಕದಲ್ಲಿ । ಕ್ರಮದಿಂ ಕಾಲದಂಷ್ಟ್ರ । ಪಿಂಗಳಾಕ್ಷ, ರೌದ್ರ, ಜಟಿಲ, ವಿಶಾಲರೆಂಬಭುವನಪತಿಗಳೊನ್ನೈದುಂದುಭಿಸಮಾನನಾದ, ತೂರ್ಣಕ, ರುದ್ರಪ್ರಾಣ,

ಘನಾನಂದರುಗಳೆಂಬ ರುದ್ರಗಳುತ್ತರುಪಾಯದಿಂದಿಹರು । ಬಳಿಕ ಕರ್ಮೇಂದ್ರಿಯದಿಂ ಮೇಲೆ ಶ್ರೋತ್ರಾದಿಜ್ಞಾನೇಂದ್ರಿಯಮನಸ್ಸುಗಳೆಂಬಾರದಲ್ಲಿ ಕ್ರಮದಿಂ, ಕಾಮರೂಪಿ, ಹುತಾಶನ ಪ್ರಜಾಪತಿ, ಘೋರಕ, ವಿಧೂರಕ, ಅನುಪಮಗುಣಯುತರೆಂಬ ಭುವನಪತಿಗಳೊಡನೆ, ವ್ಯೋಮಚಾರ, ಸರ್ವಾಂಗಪ್ರಕಾಶನ, ಮಹಾವಕ್ತ್ರ, ನಿಲಿಂಪಕ, ಸಂಕಲ್ಪರೆಂಬ ರುದ್ರರುಗಳ್ ಪರಿವಿಡಿದಿರುತ್ತಿಹರು ॥

### ಅಹಂಕಾರಭವನ ರುದ್ರರು.

ಬಳಿಕಾಗಂಧತನ್ಮಾತ್ರಾದಿಮಾನಸಾಂತಮಾದ । ಷೋಡಶವಿಕಾರಂಗಳಿಗೆಕಾರಣಮಾಗಿ । ಪೂರ್ವೋಕ್ತಮಾದಾಕಾಶದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ಅಹಂಕಾರತತ್ವದಲ್ಲಿ । ಭಲಗಂಡ । ದರಗಂಡ । ಮಾಕುಟ । ಮಂಡಲೇಶ್ವರ । ಕಾಲಾಂಜನ । ಶಂಖಕರ್ಣ । ಸ್ಥಲೇಶ್ವರ । ಸ್ಥೂಲೇಶ್ವರರೆಂಬ ಸ್ಥಾನಾಷ್ಟಕರುದ್ರರಿಹುತಿಹರು ॥

### ಭುದ್ಧಿತತ್ವಗುಣತತ್ವರುದ್ರರು.

ಬಳಿಕ ಅಹಂಕಾರತತ್ವದತ್ತಣಿಂ ದಶಗುಣಾಧಿಕಮಾಗಾವರಿಸಿರ್ದ ಬುದ್ಧಿತತ್ವದಲ್ಲಿ । ಪಿಶಾಚಪತಿ । ರಾಕ್ಷಸಗತಿ । ಯಕ್ಷಪತಿ । ಗಂಧರ್ವಪತಿ । ಇಂದ್ರಪತಿ । ಸೌಮ್ಯಪತಿ । ಪ್ರಜೇಶ । ಬ್ರಹ್ಮಪಾಲರೆಂಬ ದೇವಾಷ್ಟಕರುದ್ರರು । ಬಳಿಕಾ ಬುದ್ಧಿತತ್ವ ದತ್ತಣಿಂದಶಗುಣಾಧಿಕಮಾಗಾವರಿಸಿರ್ದ ಗುಣತತ್ವದಲ್ಲಿ । ಅಕೃತ । ಕೃತ । ಭೈರವ । ಬ್ರಹ್ಮ । ವಿಷ್ಣು ॥ ಕುಮಾರ । ಉಮಾ । ಶ್ರೀಕಂಠರೆಂಬ ಯೋಗಾಷ್ಟಕರುದ್ರರಿಹರು ॥

### ಪ್ರಕೃತಿತತ್ವರುದ್ರರು.

ಬಳಿಕಾಗುಣತತ್ವದತ್ತಣಿಂ ದಶಗುಣಾಧಿಕ ಮಾಗಾವರಿಸಿರ್ದ ಪ್ರಕೃತಿತತ್ವದಲ್ಲಿ । ಕ್ರೋಧೇಶ । ಚಂಡ । ಸಂವರ್ತ । ಜ್ಯೋತಿ । ಪಿಂಗಳ । ಸೂರ್ಯಗ । ಗಂಚಾಂತಕ । ಏಕವೀರ । ಶಶಿಧರರೆಂಬ ಮಹಾದೇವಾಷ್ಟಕರುದ್ರರಿಹರು॥ ಬಳಿಕಿಂತು ಬ್ರಹ್ಮಾಂಡಾದಿ ಪ್ರಕೃತಿಕಡೆಯಾದ ತತ್ವಂಗಳೇ ದಶಗುಣೋತ್ತರೋತ್ತರಮಾಗಿರ್ಪವವುಗಳಿಗಭಿಮಾನ ದೇವತೆಗಳಾದ ರುದ್ರರುಂ ದಶಗುಣೋತ್ತರೋತ್ತರ ತೇಜೋವೀರ್ಯ ಪ್ರಭಾವಂಗಳುಳ್ಳವರೆಂದು ತಿಳಿಯಲ್ವೇಳ್ಕುಂ ॥

### ಪುರುಷತತ್ವರುದ್ರರು.

ಮತ್ತಮಾ ಪ್ರಕೃತಿತತ್ವದತ್ತಣಿಂ ನೂರುಮಡಿಯಾಗಾವರಿಸಿರ್ದ ಪು

ರುಷತತ್ವದಲ್ಲಿ । ಸರ್ವೇಂದ್ರಿಯನು । ಸರ್ವಾದಿಹನು । ಸರ್ವಾಂತಕರ
ಣಾಶ್ರಯರೆಂಬ ರುದ್ರರಿರ್ಪರಲ್ಲಿ ಪುರುಷನಾದೊಡೆ । ನಿತ್ಯವ್ಯಾಪಕಚೈತ
ನ್ಯಮಯನಾಗಿ ಕಾರ್ಯರೂಪನಲ್ಲಂದೊಡಂ । ಮುಂಪೇಳ್ವರಾಗಾದಿಕಾ
ಲಾಂತವಾದ ಪಂಚಕಂಚುಕಯುಕ್ತನಪ್ಪುದರಿಂದುಪಚಾರದಿಂ ತತ್ವ
ಗಳೊಳಗೆ ಗಣನೆಗೆಬಹನಾಗಿ ಭುವನಾಶ್ರಯನಲ್ಲುತ್ತಿಪ್ಪೆನೆ । ಗಂಗೆಯ
ಲ್ಲಿ ಹಳ್ಳಿಯಿರ್ದಿತ್ತೆಂಬುದರಂತೆ ಲಕ್ಷಣಾವೃತ್ತಿಯಿಂ ತತ್ಸನ್ನಿಹಿತ ಪ್ರಕೃತಿ
ಮಸ್ತಕದೊಳು ಭುವನಂಗಳಿಹವೆಂದು ವಿಭಾಗಿಸಲ್ಪಟ್ಟಂ ॥

ರಾಗವಿದ್ಯಾನಿಯತಿತತ್ವರುದ್ರರು.

ಬಳಿಕಾಪುರುಷತತ್ವದತ್ತಣಿಂ ಮೂರುಮಡಿಯಾಗಿ ಪರಿಸಿರ್ದ ರಾಗತ
ತ್ವದಲ್ಲಿ, ವಾಮದೇವ, ಭೀಮ, ಉಗ್ರ, ಭವ, ಸರ್ವೇಶಾನ, ಏಕವೀರ
ಪ್ರಚಂಡ, ಈಶ್ವರ, ಉಮಾಪತಿ, ಜಯ, ಅನಂತ, ಏಕಶಿವರೆಂಬ ದ್ವಾದಶ
ರುದ್ರರಿಹರು ॥ ಬಳಿಕಾರಾಗ ತತ್ವದತ್ತಣಿಂ ನಾಲ್ಕುಮಡಿಯಾಗಾವರಿಸಿ
ರ್ದ ವಿದ್ಯಾತತ್ವದಲ್ಲಿ, ಮಹಾತೇಜ, ಮಹಾದೇವ, ಭವ, ಉದ್ಭವ, ಜ್ಯೋ
ತಿ, ಪಿಂಗೇಕ್ಷಣ, ಈಶಾನ, ಭುವನೇಶ್ವರ, ಅಂಗುಷ್ಠಮಾತ್ರರೆಂಬ ರುದ
ರುಂ, ಸಂಹೃಷ್ಟ, ಸುಹೃಷ್ಟ, ಸ್ವರೂಪ, ರಾಪವರ್ಧನ, ಮನೋನ್ಮ
ನರೆಂಬ ಶಿಷ್ಯಪಂಚಕಂಗೂಡಿ, ಮಹಾವೀರ್ಯ, ಕಲ್ಯಾಣ ಪಿಂಗಳ, ಬ
ಭ್ರುವೀರ, ಪ್ರಭವ, ಮೇಧಾತಿಥಿ, ಮಂದಕ, ದಾಹಕ,ಶಾಸ್ತ್ರಕಾರಕರೆಂಬಾ
ಚತುರ್ದಶಕರುದ್ರರಿರ್ಕುಂ॥ಮತ್ತಮಾವಿದ್ಯಾತತ್ವದತ್ತಣಿಂ ಲಕ್ಷಮಡಿಯಾ
ಗಾವರಿಸಿರ್ದ ನಿಯತಿತತ್ವದಲ್ಲಿ. ಶೂಲಧರ, ಏಕರುದ್ರ, ಬಲಿಭುಕ್, ನೀಲ
ಲೋಹಿತ, ಮಹಾಜ್ಯೋತಿ, ಪರಮೇಶ್ವರ, ಪರಮ, ಪಿಂಗೇಕ್ಷಣ, ವ್ಯೋ
ಮಕೇಶ, ಶರ್ವ, ಭವ, ಉದ್ಭವ, ವಜ್ರದೇಹ, ಪ್ರಭುಕ್ರಮ, ವಿಕ್ರಮ
ಸುಪ್ರಭರೆಂಬ ರುದ್ರರು, ಸ್ಥಾಪಕ, ವಾಳುಕಾಕ್ಷ, ಯಮ, ತ್ರಿಶಿರ, ಚಿ
ಪುಷ್ಟಗಳೆಂಬ ಶಿಷ್ಯರುದ್ರರೈವರುಂ, ಪ್ರಪಂಚ ಆಸಿ, ಮಸಿ, ಕೃಷಿ, ವಾ
ಣಿಜ್ಯದೇವನಿರ್ಮಾಣವೆಂಬಪಂಚಕೃತ್ಯಗಳಗುಂಪಿಯೊಮುಕರಮಕ್ಕುಂ

ಕಾಲತತ್ವ–ಕಲಾತತ್ವ-ಮಾಯಾತತ್ವರುದ್ರರು।

ಮತ್ತಮಾನಿಯತಿತತ್ವದತ್ತಣಿಂ ಲಕ್ಷಮಡಿಯಾಗಾವರಿಸಿರ್ದ ಕಾಲ
ತ್ವದಲ್ಲಿ- ಮಾಯಾಮಯ - ಹಾಲಾಹಲಪ್ರಿಯ - ಕ್ರೋಧನ - ಬಡಬಾಮು
ಖ- ಉಚ್ಛಿಷ್ಟಪತಿ- ಶಾಬರ– ಚಂಡಮಾತಂಗ- ಘೋರರೂಪ - ಶುದ್ಧ -
ಬುದ್ಧ- ಪ್ರಬುದ್ಧ- ಪ್ರಶಾಂತಾತ್ಮ- ಶಿವ - ಸುಚಿವ - ಬಭ್ರು - ಅಕ್ಷರ

ಶಂಭುಗಳೆಂಬ ರುದ್ರರಿಹರು ॥ ಮತ್ತಮಾಕಾಲತತ್ವದತ್ತಣಿಂ-ದಶಗುಣಾಧಿಕವಾಗಾವರಿಸಿರ್ದ ಕಾಲತತ್ವದಲ್ಲಿ - ಗಹನೇಶ - ವಿಷ್ಣುಹರ - ದಕ್ಷೇಶಾನ - ಮಹಾವೀರ್ಯ - ತ್ರಿಕಾಲ - ಗೋಪತಿಗಳೆಂಬ ರುದ್ರರಿಹರು ॥ ಮತ್ತಮಾಕಲಾತತ್ವದತ್ತಣಿಂ- ಕೋಟಿಗುಣಾಧಿಕವಾಗಾವರಿಸಿರ್ದ ಮಾಯಾತತ್ವದಲ್ಲಿ- ಅನಂತ - ತ್ರಿಕಾಲ - ಗೋಪ್ತ್ರ - ಕ್ಷೇಮಶ - ಬ್ರಹ್ಮೇಶ -ವಿರಾಟ್ಪತಿ - ಧ್ರುವ - ತೇಜೋದೀಪ - ಗಹನೇಶರೆಂಬ ರುದ್ರರಿರ್ಪರ್ ॥

### ರುದ್ರಪ್ರಪಂಚ ರುದ್ರಮಯಮಾಗಿ.

ಮತ್ತಮೀಪ್ರಕಾರವಾದ ಪೃಥಿವ್ಯಾದಿ ಮಾಯಾಂತಮೆನಿಪ ಪ್ರಕೃತಿವಿಕೃತ್ಯಾತ್ಮಕಸರ್ವತತ್ವಗಳಿಗಂ ಅಭಿಮಾನದೇವತೆಗಳಾದ ರುದ್ರರ ಸಾಮಧೇಯಂಗಳಿಂದಲೇ ಅಲ್ಲಿಯಣ ಭುವನಂಗಳಿರ್ಪವವುಗಳ ಸಂಖ್ಯಾತಂಗಳಲ್ಲಿಕೆಲವುಮುಖ್ಯಭುವನಂಗಳೇಹವಣಿಸಿ ಪೇಳಲ್ಪಟ್ಟವಾಸಮಸ್ತಭುವನಂಗಳೊಳಗಂ ವಿಚಿತ್ರನದೀನಂದನಸರಃ ಪುರಪ್ರಾಕಾರತೋರಣಗೋಪುರಾದಿ ದಿವ್ಯರಚನೆಗಳಿಂ ನೃತ್ತಗೀತವಾದ್ಯವನಿತಾದಿ ಸಕಲಸುಖಭೋಗಸಾಧನಂಗಳಿಂ ಸಂಪನ್ನಳಾಗಿ । ಯಜ್ಞದಾನತಪೋವ್ರತ ಸತ್ಕ್ರಿಯಾನಿಪರಿಂದ್ಯೈದಲ್ತಕ್ಕವಾಗಿರ್ಪವಾಸರ್ವ ಭುವನಂಗಳುಂ ರುದ್ರರಿಂ ಪಾಲಿತವಾಗಿ । ರುದ್ರಾಧಿಷ್ಠಿತವಾಗಿ । ರುದ್ರಾತ್ಮಕತ್ವದಿಂ ರುದ್ರಸುಖಪ್ರಚುರವಾಗಿ ರುದ್ರಶಕ್ತ್ಯುತ್ತರದಿಂರುದ್ರಪ್ರಪಂಚವಾಗಿರುದ್ರಮಯವೆನಿಸಿರ್ಕುಂ॥

ಇಂತೆಂಬಲ್ಲಿಗೆ ನಿಜಗುಣ ಶಿವಯೋಗೀಂದ್ರ ವಿರಚಿತವಾದ
ವಿವೇಕಚಿಂತಾಮಣಿ ಯೆಂಬ ಗ್ರಂಥದಲ್ಲಿ ಪೃಥಿವ್ಯಾದಿ
ತತ್ವವರ್ಣನವೆಂಬ ಸಪ್ತಮಪ್ರಕರಣ ಪರಿಸ
ಮಾಪ್ತಿಗೆ ಮಂಗಳಮಸ್ತು.



ಜಯ ಶ್ರೀ ರುದ್ರ.

## ಅಷ್ಟಮಪ್ರಕರಣಪ್ರಾರಂಭಃ.



ಕಂ॥ಈತೆರದಿಂ ಪಲಿಮಾಯಾ।ಜಾತಪದಾರ್ಥಗಳನೆಲ್ಲತಿಳಪಿದೆನುಂದಜಿಂ।ಮತ್ತೂರ್ಧ್ವಭಾಗಸಂಭೃತ।ತತ್ವಾದಿಕವೆಲ್ಲಪೇಳ್ವೆನರಿವಂತಿಳಿಯೋಳ್॥ಅದೆಂತೆಂದೊಡೆ॥ಗದ್ಯ॥ಪೂರ್ವೋಕ್ತವಾದಮಾಯಾತತ್ವದತ್ತಣಿಂ।ದಶಕೋಟಿನಿಗಿಲಾಗಾವರಿಸಿರ್ಪಶುದ್ಧವಿದ್ಯಾತತ್ವದಲ್ಲಿರ್ಪರುದ್ರಭುವನಾದಿಗಳೆಂತೆನೆ ॥

ವಿದ್ಯಾತತ್ವರುದ್ರರು

ವಾಮದೇವ, ಜ್ಯೇಷ್ಠ, ಶ್ರೇಷ್ಠ, ರುದ್ರ, ಕಾಲ, ಕಲವಿಕರಣ, ಬಲವಿ
ಕರಣ, ಬಲ, ಬಲಪ್ರಮಥನ, ಸರ್ವಭೂತದಮನ, ಮನೋನ್ಮನ, ಅಘೋ
ರ, ಘೋರ, ಘೋರತರ, ಸರ್ವ, ಶರ್ವ, ತ್ರಿಗುಣೇಶ, ಬ್ರಹ್ಮಪೂರ್ತಿ
ಭೀತಾಳ, ಭೂತಪತಿ, ಸ್ಥಾಣುಪತಿ, ಅಂಬಿಕಾಪತಿ, ರೂಪಿಣಿ, ನಂದಿನಿ,
ಜ್ವಾಲಿ, ವಿಧ್ಯಾಧಿಪತಿ, ನಿಯಾಮಕ, ನಿರಂಜನವೆಂಬ ಭುವನಂಗಳಿರ್ಪ
ವವುಗಳಲ್ಲಿ, ಕಾಮಿಕಾದಿವಾತುಲಾಂತವಾದಿಪ್ಪತ್ತೆಂಟಾಗಮನಾಮಂಗ
ಳೆಂ। ಮನನತ್ರಾಣಮುಳ್ಳಜ್ಞಾನ ಶಕ್ತ್ಯಧಿಕವಾದಕ್ರಿಯಾ ಶಕ್ತಿನ್ಯೂನ
ವಾದಸಪ್ತಕೋಟಿ ಮಹಾಮಂತ್ರಂಗಳಿರ್ಪ ವಪುಗಳೊಳಗೆ ಮೂರುವರೆ
ಕೋಟಿಮಂತ್ರಂಗಳೇ ಪರಮೇಶ್ವರನ ನಿರಧಿಕರಣದೀಕ್ಷೆಗೆ ಸಾಧನಂಗಳಾ
ಗಿಹವು, ಮಿಕ್ಕ ಮೂರುವರೆಕೋಟಿ ಮಂತ್ರಂಗಳೆಗುರುಸ್ವರೂಪವಾದೀ
ಶ್ವರನ ಸಾಧಿಕರಣದೀಕ್ಷೆಗೆ ಸಾಧನಂಗಳಾಗಿರ್ಪವಾ ವಿದ್ಯಾ ತತ್ವದಲ್ಲಿ
ಶ್ರೀಕಂಠ, ಅನಂತ, ಸೂಕ್ಷ್ಮ, ತ್ರಿಮೂರ್ತಿ, ಅಮರೇಶ, ಅಪ್ಪಿಶ, ಭಾರ
ಭೂತಿ, ಧೀಶ, ಸ್ಥಾಣು, ಕುಹರ' ಘಂಟೀಶ, ಭೌತಿಕ, ಸದ್ಯೋಜಾತ, ಅ
ಮೃತೇಶ, ಅಕ್ರೂರ, ಮಹಾಸೇನ, ಕ್ರೋಧೇಶ, ಚಂಡೇಶ, ಪಂಚಾಂತಕ,
ಶಿಲೋತ್ತಮ, ಏಕರುದ್ರ, ಕೂರ್ಮ, ಏಕನೇತ್ರ, ಚತುರಾನನ, ಅಜೇಶ,
ಸರ್ವ, ಸೋಮೇಶ್ವರ, ಲಾಂಗುಲಿ, ದಾರುಕ, ಅರ್ಧನಾರೀಶ್ವರ, ಉಮಾ
ಕಾಂತ, ಆಷಾಢಿ, ದುಂಡಿ, ಅತ್ರಿ, ಮೀನ, ಮೇಷ, ಲೋಹಿತ, ಸ್ಥಲಶಿಖಿ, ಗಂಡ,
ದ್ವಿಗಂಡ, ಮಹಾಕಾಳ, ವಾಲ, ಭುಜಂಗೇಶ, ನಾಕೇಶ, ಖಡ್ಗೀಶ, ಬಕಶ್ವೇ
ತ, ಭೃಗು, ಲಕುಳೇಶ, ಶಿವ, ಸಂವರ್ತಕರೆಂಬ ಅಕಾರಾದಿಕಕಾರಾಂತವಾ
ದ ಪಂಚಾಶದಕ್ಷರ ಮಾತೃಕಾಮೂರ್ತಿಗಳಪ್ಪ ರುದ್ರರುಗಳಾದೊಡೆ ಪೂ
ರ್ಣೋದರಿ, ವಿರಜೆ, ಶಾಲ್ಮಲಿ, ಲೋಲಾಕ್ಷಿ, ವರ್ತುಲಾಕ್ಷಿ, ದೀರ್ಘನಾಸಿಕೆ,
ದೀರ್ಘಮುಖಿ, ಗೋಮುಖಿ, ದೀರ್ಘಜಿಹ್ವೆ, ಕುಂಡೋದರಿ, ಅರ್ಧಕೇಶಿ,
ವಿಕೃತಮುಖಿ, ಜ್ವಾಲಾಮುಖಿ, ಉಲ್ಕಾಮುಖಿ, ಶ್ರೀಮುಖಿ, ವಿದ್ಯಾಮುಖಿ,
ಮಹಾಕಾಳಿ, ಸರ್ವಸಿದ್ಧಿಸಮನ್ವಿತೆ, ಗೌರಿ, ತ್ರೈಲೋಕ್ಯವಿದ್ಯೆ, ಮಂತ್ರ
ಶಕ್ತಿ, ಆತ್ಮಶಕ್ತಿ, ಭೂತಮಾತೆ, ಲಂಬೋದರಿ, ದ್ರಾವಿಣಿ, ನಗರಿ, ಖೇಚರಿ, ಮಂ
ಜರಿ, ಸುರೂಪಿ, ವಿರಜೆ, ಕಾಲೋದರಿ, ಪೂತಿನಿ, ಭದ್ರಕಾಳಿ, ಯೋಗಿನಿ,
ಶಂಖಿನಿ, ಗರ್ಜಿನಿ, ಕಾಳರಾತ್ರಿ, ಸಿದ್ಧಾಸ್ಯೆ, ಕಪರ್ದಿನಿ, ವಾಙ್ಮಯಿ, ಜಯೆ,
ಮುಖ್ಯೆ, ಮಹದೈಶ್ವರ್ಯೆ, ರೇವತಿ, ಮಾಧವಿ, ವಾರುಣಿ, ರಕ್ಷೋಘ್ನಸ

ಟಿಣಿ, ಸಹಜೆ ಲಕ್ಷ್ಮಿ, ವ್ಯಾಪಿನಿ, ಮಾಯಾನ್ವಿತೆಯರೆಂಬಪಂಚಾಸ್ಯಾತ್ಮಕಾಶಕ್ತಿಗಳಂಕೂಡಿರಕ್ತಾಂಗಚ್ಛವಿಯಿಂಶೂಲಕಪಾಲಪಾಣಿಗಳಾಗಿನಿಜಮೂರ್ತಿಧ್ಯಾನನಾಮೋಚ್ಚಾರಣಮಾತ್ರದಿಂಸರ್ವಸಿದ್ಧಿಪ್ರದಾಯಕರಾಗಿರ್ಪ್ಪಂ ॥

ಈಶ್ವರತತ್ವ ಅಷ್ಟವಿದ್ಯೇಶ್ವರರು.

ಮತ್ತಮಾವಿದ್ಯಾತತ್ವದತ್ತಣಿಂ । ನೂರುಕೋಟಿಮಿಗಿಲಾಗಾವರಿಸಿರ್ದ ಈಶ್ವರತತ್ವದಲ್ಲಿ, ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಗಳೆಂಬಭುವನಂಗಳಿರ್ಪ್ಪವವರಲ್ಲಿ, ಕ್ರಮದಿಂ ದಾಯಾನಾಮಧೇಯಂಗಳುಳ್ಳ ಜ್ಞಾನಕ್ರಿಯಾಶಕ್ತಿಬಾಹುಳ್ಯ ಮಾದಷ್ಟವಿದ್ಯೇಶ್ವರರಿರ್ಪ್ಪರವರೊಳಗೆ ಮೊದಲನಂತನೆಂಬಾತನೇ ಅಧೋಮಾಯಕ್ಷೋಭಕನಾಗಿ। ಸಕಲಾತ್ಮರ್ಗೆ ಭೋಗಮೋಕ್ಷಪ್ರದನಾಗಿರ್ಪ್ಪಂ। ಮತ್ತಮಾ ಈಶ್ವರತತ್ವಮೆಂಬಾಬಿಂದುವಿನಧಿಕಾರೋಪಾಧಿಯಿಂ ಪರಶಿವನು ತಾನೇಜಗದ್ಧಿತಾರ್ಥಮಾಗಿ, ಜ್ಯೋತಿರ್ಮಂತ್ರಶರೀರದಿಂ, ಜಟಾಮಕುಟ, ಏಕಮುಖ, ತ್ರಿಣೇತ್ರಂಗಳಿಂ, ವರದಾಭಯಹಸ್ತಗಳಿಂ, ದಿವ್ಯವಸ್ತ್ರಾಭರಣ ಗಂಧಮಾಲ್ಯಾದಿಗಳಿಂದಲಂಕೃತನಾಗಿ, ಅಂಬಿಕೆಯೆಂಬಶಕ್ತಿಸಹಿತನಾಗಿಹನು ॥

ಮಹೇಶ್ವರತತ್ವ.

ಬಳಿಕಚೀರೆತೋರ್ಪ್ಪ, ಸೋಮಧಾರಿತ್ವ, ಉಮಾಸಮೇತತ್ವ, ವೃಷಭಾರೂಢತ್ವ, ನಿತ್ಯವಿವಾಹತ್ವ ವಿವಾಹೋತ್ಸಾಹಿತ್ವ, ಭಿಕ್ಷಾಟನತ್ವ, ಕಾಮಾರಿತ್ವ, ಕಾಲಾರಿತ್ವ, ತ್ರಿಪುರಾರಿತ್ವ, ಜಲಂಧರಾರಿತ್ವ, ಅಜಾರಿತ್ವ, ವೀರಭದ್ರಾವತಾರತ್ವ, ಹರಿಧ್ವಂಸಿತ್ವ ಅರ್ಧನಾರೀಶ್ವರತ್ವ, ಕಿರಾತರೂಪತ್ವ, ಕಂಕಾಳಧಾರಿತ್ವ, ಚಂಡೇಶಾನುಗ್ರಹಿತ್ವ, ವಿಷಾಪಹಾರಿತ್ವ, ಚಕ್ರಪ್ರದಾನದಕ್ಷತ್ವ, ವಿಘ್ನೇಶಪ್ರಧಾನಾಭಿಮುಖ್ಯತ್ವ, ಉಮಾಕುಮಾರಸಹಿತತ್ವ, ಏಕಪಾದತ್ವ, ಸುಖಪ್ರದತ್ವ, ದಕ್ಷಿಣಾಮೂರ್ತಿಸ್ವರೂಪತ್ವ, ಮಹಾಲಿಂಗಸ್ವರೂಪತ್ವಗಳೆಂಬ ಪಂಚವಿಂಶನ್ಮೂರ್ತಿಲೀಲಾಧರನೆನಿಸಿ, ಸಕಲನು, ಅಧಿಕಾರಿ, ಅಧೀಶ್ವರನು, ಪ್ರವೃತ್ತನು, ಪ್ರಭುವೆಂದೆನಿಸಿಕೊಂಡು, ಜಗತ್ತಿನಸೃಷ್ಟಿಸ್ಥಿತಿಸಂಹಾರಂಗಳಂ ಮಾಡುತ್ತ ತನ್ನ ಧ್ಯಾನಪೂಜಾನ್ವಿತರ್ಗೆ ಭೋಗಮೋಕ್ಷಪ್ರದನಾಗಿ ಮಹೇಶ್ವರತತ್ವಮೆನಿಸಿಕೊಳ್ಳುತಿರ್ಪ್ಪಂ ॥

ಸದಾಶಿವತತ್ವಸ್ವರೂಪವು.

ಮತ್ತಮಾ ಈಶ್ವರತತ್ವದತ್ತಣಿಂ ಸಹಸ್ರಕೋಟಿಗುಣಮಿಗಿಲಾಗಾವರಿಸಿರ್ಪ ಸದಾಶಿವತತ್ವದಲ್ಲಿ ನಿವೃತ್ತಿ ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತ್ಯತೀತ, ಪವಿ

ತ್ಯಾಂಗಸದಾಖ್ಯ,ಧ್ವನಿಪತಿಗಳೆಂಬ ಭುವನಂಗಳರ್ಪುವಪ್ರಗಳಲ್ಲಿ । ಜ್ಞಾನಕ್ರಿಯಾಶಕ್ತಿ ಸಮಾನರಾದ । ನಿತ್ಯಸುಖಮುಳ್ಳ ಅಣುಸದಾಶಿವರಿರ್ಪ ರಾಸದಾಶಿವತತ್ವವೆಂಬಬಿಂದುವಿನಭೋಗಾವಸ್ಥೋಪಾಧಿಯಿಂ ।ಪರಶಿವನುತಾನೇಯೋಗಿಗಳಧ್ಯಾನಪೂಜಾರ್ಥವಾಗಿಸ್ಫಟಿಕವರ್ಣಮಯಶರೀರದಿಂ । ಪಂಚಜಟಾಮಕುಟಂಗಳಿಂ। ಚಂದ್ರಕಲೆಯಿಂ।।ಪಂಚಮುಖಪಂಚದಶಲೋಚನಂಗಳಿಂ,ಶೂಲ,ಪರಶು ಖಡ್ಗ,ವಜ್ರ,ಅಭಯಂಗಳುಳ್ಳದಕ್ಷಿಣಹಸ್ತಂಗಳಿಂ, ಸರ್ಪ, ಪಾಶ, ಅಂಕುಶ, ಘಂಟೆ,ಅಗ್ನಿಗಳುಳ್ಳವಾಮಪಂಚಕರಂಗಳಿಂಸರ್ವಲಕ್ಷಣಸಂಪನ್ನನಾಗಿ ದಿವ್ಯವಸ್ತ್ರಾಭರಣ ಗಂಧಮಾಲ್ಯಾದ್ಯಲಂಕೃತನಾಗಿ । ಮನೋನ್ಮನಿಯೆಂಬಶಕ್ತಿಸಾಹಚರ್ಯದಿಂ । ಸದ್ಯೋಜಾತಾದಿಮೂವತ್ತೆಂಟುಕಲಾನ್ವಿತನೆನಿಸಿ,ಕರ್ತೃಸಾದಾಖ್ಯ. ಕರ್ಮಸಾದಾಖ್ಯ, ಮೂರ್ತಸಾದಾಖ್ಯ,ಅಮೂರ್ತಸಾದಾಖ್ಯ ಶಿವಸಾದಾಖ್ಯವೆಂಬ ಪಂಚಮೂರ್ತಿ ಭೇದಂಗಳಂ ಧರಿಸಿ ಸಕಲ ನಿಷ್ಕಲ ಭೋಗಿ ಉದ್ಯುಕ್ತ ಮೂರ್ತಿಯೆನಿಸಿಕೊಂಡು ತನ್ನ ಧ್ಯಾನಪೂಜಾನ್ವಿತರ್ಗೆ ಧರ್ಮಾರ್ಥಕಾಮಮೋಕ್ಷಂಗಳೆಂಬಚತುರ್ವಿಧಪುರುಷಾರ್ಥಂಗಳಂಕೊಡುತ ಸದಾಶಿವತತ್ವವೆನಿಸಿಕೊಳ್ಳುತಿರ್ಕುಂ ॥

## ಶಕ್ತಿತತ್ವ.

ಮತ್ತಮಾಸದಾಶಿವತತ್ವದತ್ತಣಿಂದೊಂದರ್ಬುದ ಮಿಗಿಲಾಗಾವರಿಸಿರ್ದ ಶಕ್ತಿತತ್ವದಲ್ಲಿ ಇಂಧಿಕೆ ದೀಪಿಕೆ ಮೋಚಿಕೆ ರೋಚಿಕೆ ಊರ್ಧ್ವಗಾಮಿವ್ಯೋಮರೂಪಿ ಅನಾಥೆ ಅನಾಶ್ರಿತೆಯೆಂಬ ಭುವನಂಗಳರ್ಪವಪ್ರಗಳಲ್ಲಿ ಮಹಾಸುಖಭೋಗಿಗಳಾದ ಪರಮುಕ್ತ ಅಪರಮುಕ್ತ ಪರಾಪರಮುಕ್ತ ಪಾಶಮುಕ್ತ ಪ್ರಪಂಚಮುಕ್ತ ಸ್ವಯಂಮುಕ್ತರೆನಿಸಿರ್ಪಶಿವರುಗಳುಸ್ವಭಾವಶಕ್ತಿಯಾದ ಸಚ್ಚಿದಾನಂದರಸಸ್ಫೂರ್ತಿಯಿಂ ಮಹೋನ್ನತನಾಗಿ ಪ್ರಕಾಶಿಸುತಿರ್ಕುಂ ॥ (ಶಿವತತ್ವಬಿಂದು)

ಮತ್ತಮಾಶಕ್ತಿತತ್ವದತ್ತಣಿಂ ಪಸಂಖ್ಯಾತಮಿಗಿಲಾಗಾಕ್ರಮಿಸಿರ್ದಪರಶಿವಲಿಂಗನಿತ್ಯಾಧಿಷ್ಠೆಯೆಮಾದಶಿವತತ್ವವೆಂಬಬಿಂದುವಾಬೋಡೆ । ಪರಿಪೂರ್ಣ । ಪರಜ್ಯೋತಿಃಸ್ವರೂಪವಾಗಿರ್ದಾಬಿಂದುವಂಬಲಯಾವಸ್ಥೋಪಾಧಿಯಿಂ । ಪರಶಿವನುತಾನೇಪರಾತ್ಪರಸೂಕ್ಷ್ಮನಿತ್ಯಸರ್ವಗತಾವ್ಯಯಾನುರೂಪವಾನಿಂದಿತಾಪ್ರಮಾಣಾನಾಮಯವೆಂಬದಶನಾಮಧೇಯಂಗಳಿಂ। ಪರ ಗೂಢ ಶರೀರಸ್ಥ ಲಿಂಗಕ್ಷೇತ್ರ ಅನಾದಿಯೆಂಬಪಂಚಸಂಜ್ಞೆಯುಳ್ಳಲಿಂಗಸ್ವರೂಪವೆನಿಸಿ ಈಶ ನಿಷ್ಕಳ ಲಯಶಕ್ತಿತತ್ವನಾಮಂಗಳಿಂಪ್ರಸಿದ್ಧ

ವಾಗಿ ಸರ್ವಕಾರಣಗಳಿಗೆಂ ಮೂಲಕಾರಣವುಹತನದಿಂ ಶಿವತತ್ವವೆನಿಸಿ ಕೊಳ್ಳುತಿರ್ಪಂ ॥

ಷಡಂಗತತ್ವಚಿಚ್ಛಕ್ತಿ.

ಮತ್ತಮಾಬಿಂದುವಿನೊಳಕೊಂಡು।ಸರ್ವಜ್ಞತ್ವ।ನಿತ್ಯತೃಪ್ತತ್ವ।ಅನಾದಿ ಭೋಧಸಿದ್ಧಿತ್ವ।ಸತಂತ್ರತ್ವ।ನಿತ್ಯಾಲುಪ್ತಶಕ್ತಿತ್ವ।ಅನಂತಶಕ್ತಿತ್ವವೆಂಬಷ ಡಂಗಸ್ವರೂಪಿಣಿಯಾಗಿ।ಪರಮಪ್ರಕಾಶಕಳಾದಚಿಚ್ಛಕ್ತಿಯಾದೊಡೆ। ಪ ರಾದೇವತೆಯೆನಿಸಿಕೊಂಡು।ಪರಶಿವಲಿಂಗಸಾಕ್ಷಾಚ್ಛರೀರೇಂದ್ರಿಯಾಂತಃಕ ರಣಾಶ್ರಯಾದಿಕಂತಾಸೇಯೆನಿಸಿ ।ಅಗ್ನಿಯೂಷ್ಮದಂತೆ। ಸೂರ್ಯಕಿರಣ ದಂತೆಪರಶಿವನೊಡನೆ ತಾದಾತ್ಮ್ಯಸಂಬಂಧದಿಂದೆಸೆವು।ತಾನೊಂದೆಯಾ ದೊಡುಂ।ದ್ರಷ್ಟೃತ್ವ।ಸ್ರಷ್ಟೃತ್ವ।ಕರ್ತೃತ್ವಾದಿ। ವ್ಯಾಪಾರೋಪಾಧಿಭೇದದಿಂ। ಇ ಚ್ಛಾಶಕ್ತಿ।ಕ್ರಿಯಾಶಕ್ತಿ।ವಾಮದೇವಿ।ಜ್ಯೇಷ್ಠೆ।ಶ್ರೇಷ್ಠೆ।ರೌದ್ರಿ।ಕಾಲಿ।ಬಲ ವಿಕರಣಿ।ಬಲಿ।ಬಲಪ್ರಮಥಿನಿ।ಸರ್ವಭೂತದಮನಿ। ಮನೋನ್ಮನಿಯೆಂಬಿವು ಮೊದಲಾದನೇಕನಾಮಧೇಯಂಗಳನುಳ್ಳುದೆನಿಸಿಭಕ್ತವತ್ಸಲೆಯಾಗಿರ್ಪಳ್ ॥

ಸರ್ವಾಶ್ರಯಶ್ರೀಶಂಭುಲಿಂಗ.

ಮತ್ತಮಾ ಚಿಚ್ಛಕ್ತಿಯೆಂಬದಿವ್ಯತೇಜೋಮಂಡಲಮಧ್ಯದಲ್ಲಿ। ಸತ್ಯ। ಶುದ್ಧ। ಸ್ವಯಂಪ್ರಕಾಶ। ಚಿನ್ಮಾತ್ರ।ಸುಖಸ್ವರೂಪಮಪ್ಪ।ಪೂರ್ಣಾದ್ವ ಯನಿಜಸರೂಪವೆನಿಪಶ್ರೀಗುರುಶಂಭುಲಿಂಗವಿರ್ಕ್ಕು ॥ ಮಿದುವೆಪರತತ್ವ। ಮಿದುವೆಸಿದ್ಧಾಂತ। ಮಿದುವೆನಿರಂಜನ। ಮಿದುವೆನಿರಾಭಾರಿಸ್ವೈಪತ, ಮಿದು ವೆವಾಚಾಮಗೋಚರ। ಮಿದುವೆಸ್ವೈಪತಸ್ವೈಪತ। ಮಿದುವೆವೇದಾಂತಸಿ ದ್ಧಾಂತೋಭಯಲಕ್ಷ್ಯ।ಮಿದುವೆಶಿವಯೋಗಿಗಮ್ಯ। ಮಿದುವೆರಹಸ್ಯ।ಮಿ ದುವೆ ಶರಣಪತಿ। ಮಿದುವೆ ಶಂಭುಲಿಂಗಮಿದರಸಾನ್ನಿಧ್ಯಬಲದಿಂ ಮುಂ ನವೇಳೆಲ್ಲತತ್ವಂಗಳಿಗುಂ।ತತ್ವಾಶಯಂಗಳಿಗುಂ।ತತ್ವಾಭಿಮಾನಿಗಳಿಗುಂ ಭುವನಂಗಳಿಗುಂ। ಭುವನವಾಸಿಗಳಿಗುಂ।ಅಧ್ವಂಗಳಿಗುಂ।ಅಧ್ವಯಾಯಿ ಗಳಿಗುಂಬ್ರಹ್ಮಾಂಡಪಿಂಡಾಂಡಾದಿಸಕಲವೈಚಿತ್ರ್ಯಗಳಿಗುಂ।ಸರ್ವಮೂರ್ತಿ ಗಳಿಗುಂಸರ್ವದೇವರ್ಕಳಿಗುಂವೇಳ್ಪನಶಕ್ತಿಗಳಂ ಕೊಡುತ್ತಿದೀಗುರುಶಂಭು ಲಿಂಗವನಾಶ್ರಯಿಸಿ।ಸಕಲಮುಂತೋರ್ಪುದೆಂತೆನೆ। ಪೇಳ್ದಸಕಲದೇಹಾದಿವಿ ಷಯಂಗಳುಂ। ಕಾಲಾಗ್ನಿರುದ್ರಭುವನಮೊದಲಾಗಿ ಶಿವಲೋಕಪರ್ಯಂತ ಮಾದಭುವನಂಗಳನಾಶ್ರಯಿಸಿರ್ಪ್ಪವಾಭುವನಂಗಳೆಲ್ಲ ಭೂಮ್ಯಾದಿತತ್ವಂ ಗಳನಾಶ್ರಯಿಸಿರ್ಪ್ಪವಾತತ್ವಂಗಳೆಲ್ಲ ನಿವೃತ್ತ್ಯಾದಿಕಲೆಗಳನಾಶ್ರಯಿಸಿರ್ಪವಾ ಕಲೆಗಳೆಲ್ಲ ಬಿಂದುವನಾಶ್ರಯಿಸಿರ್ಪವಾ ಬಿಂದುವೇಚಿಚ್ಛಕ್ತಿಯನಾಶ್ರಯಿಸಿ

ಹುದಾಚಿಚ್ಛಕ್ತಿಯೇಶ್ರೀಗುರುಶಂಭುಲಿಂಗವನಾಶ್ರಯಿಸಿಹುದಾ।ಶ್ರೀಗುರುಶಂಭುಲಿಂಗವೇಸರ್ವಾಶ್ರಯತಾನಾಗಿತಾನೊಂದನುಮಾಶ್ರಯಿಸದೆ ನಿರ್ವಿಕಾರಸ್ವರೂಪದಿಂಸರ್ವಾತ್ಮರಿಗೆಸುಖಕರಮಾಗಿವಿರಾಜಿಸುತಿರ್ಕುಂ ॥

ಇತೆಂಬಲ್ಲಿಗೆನಿಜಗುಣಶಿವಯೋಗೀಂದ್ರವಿರಚಿತಮಾದ
ವಿವೇಕಚಿಂತಾಮಣಿಯೆಂಬಗ್ರಂಥದಲ್ಲಿಶುದ್ಧಭುವನಸ್ಥಿತಿವರ್ಣನಮೆಂಬ,
ಅಷ್ಟಮಪ್ರಕರಣಕ್ಕೆ ಮಂಗಳಮಸ್ತು.



## ಜಯ ಚಿದಾನಂದ ಗುರುಲಿಂಗ.

## ನವಮಪ್ರಕರಣಪ್ರಾರಂಭಃ.



ಕಂದ॥ ಇಂತಖಿಳಭುವನಪದ್ಧತಿ।ಯಂತಿಳುಪಿದೆನಿನ್ನುಜೀವರಾಭುವನಪನುಂ।ಮತ್ತೈಹಿಕಕರ್ಮಂಗಳ।ಸಂತತವನುಭವಿಸುವಂದಮಂವಿವರಿಸುವೆಂ॥ ಅದೆಂತೆಂದೊಡೆ॥

### ಮೂಢತ್ವದಿಂನಾಸ್ತಿಕಬುದ್ಧಿ.

ಅನವರತಮೀಲೋಕದಲ್ಲಿ ಆತ್ಮಾನಾತ್ಮವಿವೇಕಶೂನ್ಯರಾದ ಮೂಢಜನಂಗಳಾದೊಡೆ।ಪ್ರತ್ಯಕ್ಷಮಾದುದನೇಪಡಂಬಟ್ಟು। ಅನುಮಾನಾಗಮಪ್ರಮಾಣಂಗಳನುದಾಸೀನಂಮಾಡಿ। ನಾನುಹ್ರಸ್ವನು। ನಾನುದೀರ್ಘನು। ನಾನುಕೃತನು।ನಾನುಸ್ಥೂಲನು।ನಾನುಕುಬ್ಜನೆಂಬಿವುಮೊದಲಾದತಮ್ಮನುಭವಗಳಿಂ ಬಳಿಕದೇಹಮಂಸೀಳಿ ನೋಡಿದೊಡಂ ಪೊರೆಗೊಳಗೊಬ್ಬಾತ್ಮನುಕಾಣಬಾರದೆಂಬಿವುಮೊದಲಾದ ಕುಯುಕ್ತಿಗಳಿಂ ದೇಹವೇಆತ್ಮನೆಂದು ಬಗೆದು। ಬಳಿಕಬೆಳಗುತ್ತಿರ್ದದೀಪಂಕೆಟ್ಟಮೇಲದಕ್ಕೆಮರಳಿತೋರ್ಕೆಯಿಲ್ಲದಂತೆ। ದೇಹವಳಿದೊಡೆ ಬೇರೊಬ್ಬನಾತ್ಮನಿಲ್ಲವಾಗಿಸ್ವರ್ಗನರಕಾದಿಗಳಿಂದಿಮರಳಿಜನಿಸುವತನವಿಲ್ಲದರಿಂ ದೇಹವೇಆತ್ಮನು। ಮರಣವೇಮೋಕ್ಷ। ಸುಖವೇಸ್ವರ್ಗ । ದುಃಖವೇನರಕವಿಲ್ಲದೆ ಬೇರೊಂದುಬಗೆಯಿಲ್ಲಾಗಿ ವಿಧಿನಿಷೇಧಗಳುಂ ಪುಣ್ಯಪಾಪಗಳುಮಿಲ್ಲೆಂದುನಾಸ್ತಿಕಬುದ್ಧಿಯಿಂಗಳಹುತ್ತಿರ್ಪರದಕ್ಕೆ ಪರಿಹಾರಮೆಂತೆನೆ॥

### ವಿಚಾರದಿಂದ ಆಸ್ತಿಕ್ಯಸಿದ್ಧಿ.

ಬಳಿಕ ಲೋಕದೊಳಗೊಂದರಲ್ಲೊಂದಿಲ್ಲದ। ಬಾಲ್ಯ।ಯೌವನ। ವಾರ್ಧಿಕಂಗಳೆಂಬನಾನಾವಸ್ಥೆಯನೈದಿದೇಹದೊಳಾತ್ಮನೋರ್ವನೇ ಯೆಂಬುದು

ಬಾಲ್ಯದೊಳಗನುಭವಿಸಿದರ್ಥಮಂ ವಾರ್ಧಿಕ್ಯದಲ್ಲಿಸ್ಮರಿಸುವದರಿಂದನುಭೂತಿ ಕ್ಕೆ। ಸ್ಮೃತಿರ್ಯೆಂಬ್ಬನೇಯುಕ್ಕುಮುದಾಗಿಂತು ಪ್ರತ್ಯಕ್ಷಾದಿಜ್ಞಾನಪ್ರಮಾಣ ಸಿದ್ಧವಾಗಿಪ್ಪುದೆಂತನೆ। ಪೂರ್ವದಲ್ಲಿಹೋದ। ಮುಂದೆಬರಲುಳ್ಳ। ಶರೀರಂ ಗಳಲ್ಲಿಯೂ ಆತ್ಮನೆಒಬ್ಬನೇ ಯೆಂಬುದುಮುನ್ನಲಿಂತಾಂಪ್ರಣ್ಯಾಧಿಕನು। ಮುನ್ನಲಿಂತಾಂ ಪಾಪಿಷ್ಠನಿಂದುಲೋಕಪ್ರಸಿದ್ಧವಾದಸುಖದುಃಖಿತಾರತ ಮ್ಯದಿಂದರಿಯಲ್ಪಕ್ಕದಾಗಿಯುಂ ಆಗ ಪುಟ್ಟಿದವರು ತಾಯಿಮೊಲೆಯೆಂಬ ಪೂರ್ವಸಂಸ್ಕಾರಂದೃಷ್ಟಮುಪ್ಪುದಾಗಿಯುಂ ತಮ್ಮಜನ್ಮಸ್ಮರಣಮಂಪೇ ಳ್ವಯೋಗಸಿದ್ಧರುಂಟಾಗಿಯುಂ। ಮೃತನಾಗಿ ಕೂಡಲೆ ಚೇತನಂಬಡೆದ ಪಟ್ಟರೊಳು ಯಮಲೋಕಾದಿಗಳಲ್ಲಿತಪಾಗಹಬಾಧೆಗಳಂತೋರಿದಯಮ ದೂತರಯಾತನಾದಿ ತಮ್ಮನುಭವಮಂಪೇಳ ಕುರುಹಂದೋರ್ಪರಂ ಕಾ ಣ್ಬವಾಗಿಯುಂ।ರತಿಕಾಮ। ಬಲಿಕಾಮ ।ಹಂತುಕಾಮಸಿಗ್ರಹಸಿಪ್ಪರುಂ ಮಂತ್ರವಾದಿಗಳುಂಮಂತ್ರಿಸಿನುಡಿಸೆ ಪಿಶಾಚಗ್ರಸ್ತರಾವೇಶಂಗೊಂಡುನಾ ನಾಪ್ರಕಾರದವರು। ಈಗಳಂತಾದೆನಿನ್ನುನಾ ನಾನಾಪ್ರಕಾರಪಪ್ಪೆ ವಿದ ಕಿಂತುಮಾಡಲಿಂತಪ್ಪುದೆಂದು ಕರ್ತೃವ್ಯಂಪೇಳ ದೃಷ್ಟಾಂತಗೊಳಿಸಿ ತಂಮ ಪೂರ್ವೋತ್ತರಜನ್ಮಕರ್ಮಗತಿಗಳಂ ಪೇಳ್ವ ಬ್ರಹರಾಕ್ಷಸಭೂತಭೇತಾಳ ಗ್ರಹಾದಿಗಳವಾತುಗಳಂಕೇಳ ಮನುಜರಿಗಶಕ್ಯಮಾದ ಸಾಹಸಗಳಂನೋ ಳ್ಪವಾಗಿಯುಂ। ಬಳಿಕಿ ದೇಹೋತ್ಪತ್ತಿಯೆಂಬುದು ಪೂರ್ವಜನ್ಮದಲ್ಲಿ ಕ ರ್ತೃವಾಡಿದ ಕರ್ಮಾಧೀನದಿಂದೀಗಳಾತ್ಮನ ಭೋಗಸಾಧನ ವಾಗಿಯೇ ಜನಿಸಿ ತೆಂಬುದ ನೊಡಂಬವೆ ತಾನೆಯಾಯಿತೆನೆ ಕಾರಣವಿಲ್ಲದೆ ಸಕಲ ಕಾರ್ಯವೆಂತಾಗ ಬೇಕೆಂಬ ಅಕೃತಾ ಭ್ಯಾಗಮರೂಪ ಬಾಧೆಯುಂಟಾಗಿ ಯುಂ।ಬಳಿಕ। ಮುಳ್ಳಿಗೆಮೊನೆ ।ಕೋಗಿಲೆಗೆ ಸುಸ್ವರಂನಿಯತಮಾದಂತೆ ಪುರುಷಮಾತ್ರಂಗೀದೇಹವಹುದೇಸ್ವಭಾವವೆಂದೊಡೆ ।ದಿನದಿನದಲ್ಲಿವ್ಯರ್ಥ ವಾಗಿಪೋಗುವ ವೀರ್ಯದಿಂದೇ ಘಟಿಸುದಾಗಿಯುಂ। ಬಳಿಕ ಲೋಕದಲ್ಲಿ ಪ್ರಾಯಿಕವಾಗಿ ಸರ್ವಜನರುಂ ಬಹುಪ್ರಯಾಸದಿಂಮಾಳ್ಪ ಯಜ್ಞದಾನ ವ್ರತೋಪವಾಸನಾದಿ ಪುಣ್ಯಫಲವಂ ಮೇಲನುಭವಿಸುವಾತ ನಿಲ್ಲದಿರ್ದೊ ಡೆ। ಕೃತವಿನಾಶವೆಂಬ ದೋಷಮುಂಟಾಗಿಯುಂ ಬಳಿಕ ದೇಹವೆಂಬುವದು ಕಾರ್ಯವಾಗಿಕಾರಣಜನ್ಮವಾಗಿರ್ಪುದದಕೆದೃಷ್ಟಾಂತವೇ ಘಟವೆಂತೆಂಬನು ಮಾನಮುಂಟಾಗಿಯುಂ। ಬಳಿಕ ಶಾಸ್ತ್ರೋಕ್ತವಾದ ತುಲಾಭಾರವೆಂಬ ಘಟಾಂಗಿನೀದೀಕ್ಷೆವಡೆದಾತುಮುನಿಗುಂ । ಯೋಗೋಪಾಸಕನಿಗುಂ। ಕ

ರ್ಮವಿಪಾಕಾದಿಯಥೋಕ್ತಶಾಂತಿಯಂ ತಪ್ಪದೆಮಾಳ್ಪತುಮನಿಸಂ । ದೇವತಾಕ್ಷೇತ್ರತೀರ್ಥಾದಿಪ್ರಾರ್ಥನಸೇವಾದಿಗಳಿಂ ದೈವಪ್ರಸಾದಿಯಾದಾತುಮನಿಗುಂ । ಪಾಪಕ್ಷಯದಿಂರೋಗವಿಪದ್ವಿಕಾರದುಃಖಾದಿನಿವೃತ್ತಿಯೆನಿಪ ಸನ್ಯಃಪ್ರತ್ಯಕ್ಷಾನುಭವ ಮಿಪ್ಪುದರಿಂ ಚಂದ್ರಸೂರ್ಯಗ್ರಹಣಾದಿಗಳಂಪೇಳ್ವಶಾಸ್ತ್ರಂತಪ್ಪದೆ ಸರಿಬಪ್ಪುದರಿಂ । ಬಳಿಕನಿಷ್ಪಕ್ಷಪಾತವಿಚಾರದೊಳು ತಾನಾಗಿ ಪರ್ಯಾಲೋಚಿಸಲು ದೈನಂದಿನವಾದ ಭಿನ್ನಭಿನ್ನಾ ವಸ್ಥೆಯಿಂ ತಾನೀದೇಹದಿಂ ವಿಲಕ್ಷಣನಾಗಿರ್ಪೆನೆಂಬ ಭಾವಾನುಭವದಿಂ । ದೇಹಾನ್ಯನಾತ್ಮನೆಂ ಬಾಗಮಪ್ರಮಾಣದಲ್ಲಿ ಘುಸಿತೋರದಾಗಿಯುಂ । ದೇಹವಿಲಕ್ಷಣನಾದೋರ್ವಾತ್ಮನುಂಟೆಂಬುದೇ ಸಿದ್ಧಮಕ್ಕುಂ ॥ ಮತ್ತಮಾದೇಹಾನ್ಯನಾದಾತ್ಮನು ।ಕೆಲರುಜ್ಯೋತಿರ್ಮಯನೆಂದು । ಕೆಲರುಮಣುವೆಂದು। ಕೆಲರಣುವೆಂದು। ಕೆಲರುಮಹತ್ತೆಂದು । ಕೆಲರುಸಾಕಾರನೆಂದು । ಕೆಲರು ಪರಿಚ್ಛಿನ್ನನೆಂದುಸ್ವೇಚ್ಛೆಯಿಂವಾದಿಸಲದುಸಟೆಯಪ್ಪುದೆಂತೆನೆ। ಪೊರಲಾತ್ಮಸಿದ್ಧಿಗೆಮೂಲಮಾದನಿಗಮಾಗಮಶಾಸ್ತ್ರಪ್ರಮಾಣದಲ್ಲ । ದೇಹವಿಲಕ್ಷಣನಾದಾತ್ಮನು ನಿತ್ಯವ್ಯಾಪಕಚೈತನ್ಯರೂಪನಾದೊಡಂ । ತನ್ನಅಜ್ಞಾನಬಲದಿಂ । ಕರ್ಮಾಧೀನದಿಂ ॥ ಈಶ್ವರಪ್ರೇರಣೆಯಿಂ । ಘಟಾಕಾಶದಂತೆಸೂಕ್ಷ್ಮಶರೀರವೆಡೆಯಾಟವೇ ತನ್ನೆಡೆಯಾಟವಾಗಿ ಸಕಲಲೋಕದಲ್ಲಿ ಹಣ ಸುಖದುಃಖಂಗಳಂಮುಕ್ತಿಯೆನುಂ ತಾನನುಭವಿಸುತಿರ್ಪಂತೆ ಪ್ರಾತಿಭಾಸಿಕತುಲ್ಯವಾದ ಸರ್ವಲೋಕಾನುಭವವೇ ವ್ಯಾವಹಾರಿಕಸತ್ಯವೆಂದು । ಪೇಳುತ್ತಿರಲಾ ನಿಗಮಾಗಮಂಗಳಂ ಕರ್ಮಭೋಗವೇ ಸತ್ಯವಾಗಿ ತೋರುತಿರ್ಪುವದೆಂತೆಂದೊಡೆ ॥

## ಕರ್ಮಫಲದಿಂಲೋಕಾಂತರಪ್ರಾಪ್ತಿ.

ಬಳಿಕ ಕರ್ಮಭೂಮಿಯೆನಿಸುವಲೋಕದಲ್ಲಿ ಜನ್ಯವಾತ್ರಕ್ಕೆ ಕಾಲೋಪಾಧಿಯುಪ್ಪುದಾಗಿ ।ಜನ್ಮಮಾದಂತಃಕರಣವೃತ್ತಿ ಯೆನಿಸುಪರಿಪತನವೇ ಕೂಪ। ತಟಾಕಾದಿಗಳೊಳುಪರ್ಜನ್ಯನಿಂ ಜಲಪೂರ್ತಿಯಪ್ಪಂತೆ।ಕರ್ಮಸಂತೋಷಿತದೈವಪ್ರಸಾದದಿಂಕಾಂಕ್ಷಿತವನಿತ್ತುತೃಪ್ತಿಗೊಳಿಸುವಿಷ್ಟಾಪೂರ್ತವೆಂಬಪೆಸರುಳ್ಳಪುಣ್ಯವಿಶೇಷದಲ್ಲಿತತ್ಪರರಾದಲೌಕಿಕರ್ಗೆಯುಂ । ನಿತ್ಯವಾದಸಂಧ್ಯಾಗ್ನಿಹೋತ್ರಶಿವಪೂಜಾದಿಕರ್ಮಂಗಳಂಬಿಡದನುಷ್ಠಿಸುವರ್ಗೆಯುಂ ಜ್ಯೋತಿಷ್ಟೋಮಾದಿಯಿಪ್ಟವೆಂಬಪೆಸರುಳ್ಳಕಾಮ್ಯಕರ್ಮನಿಷ್ಠರ್ಗೆಯುಂ । ತತ್ತದ್ಯೋಗ್ಯತಾನುಸಾರವಾಗಿಪರಲೋಕಸಿದ್ಧಿಯಪ್ಪುದದರೊಳು ॥

## ಪಿತೃಯಾನದಿಂ ಸ್ವರ್ಗಭೋಗ.

ಬಳಿಕವಾಮನಸಾಸಾಪುಟವಿಡೆಯೆಂಬ ನಾಡೀಮಾರ್ಗದಿಂ । ಪ್ರಾಣೋತ್ಕ್ರಾಗಮನಾಗೆ। ಮೊದಲುಧೂಮವುಪ್ರವೃದ್ಧಿ। ಯದರಿಂರಾತ್ರಿಯು।ನದರಿಂಕೃಷ್ಣಪಕ್ಷವ। ನದರಿಂದಕ್ಷಿಣಾಯನವ ।ನದರಿಂಸಂವತ್ಸರವ । ನದರಿಂಪಿತೃಲೋಕವ ನಿಘಾಕಾಶವ। ನದರಿಂಚಂದ್ರನಂಪ್ರೇಕ್ಷ್ಯಕ್ರಮದಿಂಮೇಲೆಸ್ವರ್ಗಲೋಕಪ್ರಾಪ್ತಿಯುಕ್ಕ್ಯಮರೊಳಿಂದ್ರಸಾಲೋಕ್ಯ ಸಾಮೀಪ್ಯಾದಿಪದಸ್ಥರಾಗಿ ।ಬಳಿಕಲ್ಲಿ।ಪ್ರಿಯವಿಷಯಭೋಗಕ್ಷಯದುಃಖ ಅನ್ಯರತಿಸುಖಸಹನದುಃಖ।ಪತನಭಯದುಃಖವೆಂಬದುಃಖತ್ರಯದಿಂದಡಿಗಡಿಗೆ ಮುಸುಕುತ್ತಿರ್ದಪಸಿತಾದಿಮಹಾಸುಖಭೋಗವನುಂಡವುತೀರಲು ಪುನರಾವೃತ್ತಿ ಘಟಿಸುವಸಮಯದಲ್ಲಿ ॥

## ಪುಣ್ಯಕ್ಷಯದಿಂಪುನರಾವೃತ್ತಿ-ಮಲೋತ್ಪತ್ತಿ.

ಮೊದಲುಗಗನ। ವಾಗಗನದಿಂವಾಯು। ವಾಯುವಿನಿಂಧೂಮ । ವಾಧೂಮದಿಂಮೇಘ । ವಾಮೇಘದಿಂವೃಷ್ಟಿ । ಇದರಿಂದಿವ್ಯಾನ್ನವಾ ಅನ್ನರೂಪದಿಂಕ್ರಮದಿಂದ್ಯೆದಿಬರೆ। ಬಳಿಕಾಪಂಚಭೂತಾತ್ಮಕವಾದನ್ನವೇ । ಭಕ್ಷ್ಯ। ಭೋಜ್ಯ। ಲೇಹ್ಯಚೋಷ್ಯಪಿಚ್ಛಿಲ ಪಾನೀಯವೆಂದು ಷಡ್ವಿಧಮಾಗಿರ್ಪುದದನೆಜಾಯಾಪತಿಗಳು ಭುಂಜಿಸಲಿದಾಡೊಡೆ ಉದರಾಗ್ನಿಯಿಂಪಚಿಸಿ ಕಿಟ್ಟವೆಂದುರಸವೆಂದಿತೆರನಾಗಿಹುದಾಕಿಟ್ಟವೇಮಲಮೂತ್ರ ವೆನಿಸಿ ಗುದಗುಹ್ಯದ್ವಾರದೊಳಪಾನ ವಾಯುವ್ಯಾಪಾರದಿಂ ಪೊರಮಟ್ಟುಪೋಪುದು ಮತ್ತಮಾರಸವನೇ ನಾಭಿಸ್ಥಾನದಲ್ಲಿರ್ದಸಮಾನವಾಯು ಸರ್ವಾಂಗಕ್ಕೆ ಹಂಚಿಕೊಡಲಾರಸವನಲ್ಲಿ ಪಚಿಸೆಮತ್ತೆಕಿಟ್ಟವೆಂದುರಸವೆಂದೆರಡುಪ್ರಕಾರವಹುದಾಕಿಟ್ಟವೇ ಕಫಸ್ವೇದಮಲವು । ಜಿಹ್ವಾಮಲ। ದಂತಮಲ। ನಾಸಾಮಲ। ನೇತ್ರಮಲ। ಶ್ರೋತ್ರಮಲ। ಗುದಗುಹ್ಯ॥ ನಖಮಲಂಗಳೆಂಬ ದ್ವಾದಶವಿಧಮಲರೂಪದಿಂ ದೊಸರಿಪೋಪುದುಳಿದರಸವೇ ಸ್ಥೂಲರಸ । ಸೂಕ್ಷ್ಮರಸವೆಂದುದ್ವಿವಿಧಮಹುವದರಲ್ಲಿಸೂಕ್ಷ್ಮರೂಪರಸದಿಂಪ್ರಾಣೇಂದ್ರಿಯಾಂತಃಕರಣಾದಿಗಳೆಲ್ಲಂ ಪರಿಪೋಷಿಸಲ್ಪಡುತ್ತಿಹವು ॥

## ಪಿಂಡೋತ್ಪತ್ತಿ - ಜನನ.

ಬಳಿಕ ಮಿಕ್ಕಸ್ಥೂಲರೂಪದಿಂ ।ರುಧಿರ।ಮಾಂಸ।ಮೇದಸ್ಸು।ಸ್ನಾಯು। ಅಸ್ಥಿ।ಮಜ್ಜೆ।ಶುಕ್ಲವೆಂಬಸಪ್ತಧಾತುಗಳಿಂಕ್ರಮದಿಂವರ್ಧಿಸಲಾಜೀವವಾದೊಡಾಯಸಾಧಾತುಮನಾಗಿ ಪುರುಷಸಂಭೋಗ ಸಮಯದೊಳಾಘಿಡಮೇ ಲಕರ್ಮವಶದಿಂ ಶುಕ್ಲಸಂಬಂಧದಿಂದಿಳಿದು ಸ್ತ್ರೀಯು ಋತುಮಾತಿಯಾ

ದದಿನಂತೊಡಗಿ ಹದಿನೈದುದಿನಪರ್ಯಂತರಂ ತಾರುವೆಯು ಕುಸುಮಾಗಂತೆ ವಿಕಸಿತವಾಗಿರ್ದನಿರೋಷ್ಠಿಪ್ರನಿಸ ಗರ್ಭಾಶಯವೆಂಬಕೋಶವಂ ವಾಯುವಶದಿಂ ಪ್ರವೇಶವಹುದಾ ವಾಯುವಿಕಾರದಿಂದಾ ಶುಕ್ಲಪಿಂಡಾಗಿ ಜರಾಯುವೆಂಬ ಮಾಂಸಕೂರ್ಪಸವುನಾಶ್ರಯಿಸಿ ಜವಳಪಿಂಡವುದಿಸುತ್ತಿಹುವಲ್ಲಿ ಉದರಾಗ್ನಿಯಿಂದಸ್ನೋದಕವೆಲ್ಲಂಪಚಿಸಿ ಪೋಗುತಿರಲಾ ಶುಕ್ಲಮಯಪಿಂಡಕ್ಕೆ ವಹ್ನಿಸೆಕೆಸೋಂಕದಂತ ಮೇಲೆ ನೀರಪಟ್ಟಣವಾಹುದಪಲ ವೇಳಾ ಅಗ್ನಿಯನೂರ್ಧ್ವಮುಖವಾಗಿಯೇ ವಾಯುನಿರೋಧಿಸಿ ಕೊಂಡಿಹುದದರಿಂ ಕೆಳಗಿರ್ದಶುಕ್ಲಪಿಂಡಂಬೆಂದು ಕೆಡವಂತ್ರಶುಕ್ತಿಯುಲ್ಲಿಬಿದ್ದಸ್ವಾತಿಯುವಕಂಬಳಿನು ಮುತ್ತಾಗುವಂತಾ ಪಿಂಡವುಯೆನಾದ ಪುರುಷನ ವೀರ್ಯಂ ಸ್ತ್ರೀರಕ್ತವೊಡಪೆರದೊಂದು ದಿನಕ್ಕೆಕಲಲವಹುದು । ಮತ್ತಾಕಲಲ ವೈದುದಿನಕ್ಕೆ ಬಬ್ಬುಳಿಕೆಯುಹುದು।ಹತ್ತುದಿನಕ್ಕೆರಕ್ತಾತ್ಮಕವಹುದು।ಹದಿನೈದುದಿನಕ್ಕೆ ಮಾಂಸಮಯವಾ ದಂಡಾಕಾರವಹ ದು ।ಇಪ್ಪತ್ತುದಿನಕ್ಕೆಬಲ್ಲಿಕೆಯಹುದು।ಇಪ್ಪತ್ತೈದುದಿನದಲ್ಲಿ ಪಂಚೀಕರಿಸಿಪ್ಪೈದೋರ್ಪುದು ತಿಂಗಳೊಂದಕ್ಕೆ ಶಿರಸ್ಸುಹುಟ್ಟುವದು।ತಿಂಗಳೆರಡಕ್ಕೆ ಭುಜಂಗಳುದಿಸುತ್ತಿಹವು।ಮೂರುತಿಂಗಳಿಗೆ ಪಾದಾಂಕುರಕೇಶ ಗುಹ್ಯಾದಿಗಳಹವು । ನಾಲ್ಕು ತಿಂಗಳಿಗೆ ನಾಸಾಕ್ಷಿಶ್ರೋತ್ರಾದಿರಂಧ್ರಗಳಹವು । ತಿಂಗಳೈದಕ್ಕೆ ಸ್ಕಂಧಜಠರಾದಿಗಳಹವು । ತಿಂಗಳಾರಕ್ಕೆ ಗುದಪಾದಾಂಗುಳಿಗಳಹವು । ಏಳುತಿಂಗಳಿಗೆ ಸರ್ವಾಂಗಸಂಧಿಸಂಪೂರ್ಣವಾಗಿ ಚೇತನಂಪುಟ್ಟು । ಮಾತೆಯುಂಡನ್ನರಸಮಂನಾಭೀಸೂತ್ರದಿಂದುಣುತ್ತಿಹುದು। ಎಂಟುತಿಂಗಳಿಗಾಗರ್ಭಶ್ರಯಮೆಂಬಗಾರವನರಕದಮಲಮೂತ್ರಾದಿಗಳ ಹೇಸಿಕೆಯಿಂಬಚ್ಚಲಪುಳುವಿನಂತೆಮಹಾದುಃಖವನನುಭವಿಸುತ್ತ ವಿಚಾರಿಸಿ ನೋಡಿ । ಮುನ್ನನಾನಜ್ಞಾನಬಲದಿಂ ಶಿವಜ್ಞಾನ ಹೀನನಾಗಿಂತು ! ನಾನಾಜನ್ಮಂಗಳಲ್ಲಿ ತೊಳಲಿದೆನಿನ್ನು ಗರ್ಭಾಶ್ರಯದಿಂ ಪ್ರಪಂಚಕ್ಕೆ ಪೊರಮಟ್ಟು।ಶ್ರೀಗುರುವಾದಿ।ಶಿವಭಕ್ತಿ।ಶಿವಜ್ಞಾನ। ಶಿವಧ್ಯಾನ। ಶಿವಾರ್ಚನೆ।ಶಿವವ್ರತ।ಶಿವಶಿವಮಹೇಶ್ವರರ ಸಂಸರ್ಗಾದಿಸದ್ಗುಣ ಸಂಪನ್ನನಾಗಿ ಜನ್ಮಜರಾಮರಣರೂಪದಿಂ ಸಂಸಾರಸಾಗರ ಮಂದಾಂಟುವೆನೆಂದುತನ್ನ ಪೂರ್ವಾಪರಸ್ಥಿತಿಗಳಂ। ಗರ್ಭೋಪನಿಷತ್ಸಂಮತದಿಂನೆನವುತ್ತಿಹುದು।ಬಳಿಕಮಾತೆಯುಂಡ,ಮಧುರ,ಆಮ್ಲ,ತಿಕ್ತ,ಕಟುಕಷಾಯಲವಣನೆಂಬಷಡ್ವಿಧರಸಾನ್ನಪರಿಣಾಮಭೇದದಿಂ, ಶ್ವೇತ, ಪೀತ, ಕಪಿಲ,ಹರಿತ,ಕೃಷ್ಣ,ಮಾಂಜಿಷ್ಟವೆಂಬಷಡ್ವರ್ಣವಾಂತಾಶುಕ್ಲಾಧಿಕ್ಯದಿಂ ಪು

ರುಷನು। ಶೋಣಿತಾಧಿಕ್ಯದಿ ಸ್ತ್ರೀ। ಶುಕ್ಲಶೋಣಿತಸಮಭಾಗದಿಂ ನಪುಂಸಕನೆನಿಸಿ। ಶುಭಕರ್ಮದಿಂ ಸಲ್ಲಕ್ಷಣಶರೀರಂ ಪಡೆದು । ಹೀನಕರ್ಮದಿಂ ಬಧಿರಾಂಧಪಂಗ್ವಾದಿಗಳಾಗಿ ಬಳಿಕ ತಾ ಶುಕ್ಲಶೋಣಿತಂಗಳಗೆ ಕ್ರಮದಿಂ ಮೂರು ಮೂರಾದ, ರೋಮ, ನಾಡೀ, ಅಸ್ಥಿ, ರಕ್ತ, ಮಾಂಸ, ತ್ವಕ್ಕುಗಳೆಂಬ ಷಟ್ಕೋಶಕಾಶ್ರಿತಯುಕ್ತವಾದ ಅಂಗಪ್ರತ್ಯಂಗಾದಿಕವೆಲ್ಲಂ ಸಂಪೂರ್ಣವಾಗೆ। ಆಯುಷ್ಯ, ಕರ್ಮ, ದ್ರವ್ಯ, ವಿದ್ಯೆ, ಮರಣವೆಂಬೈದುಂ ನಿಯತವಾದ ವಿಧಿಲಿಖಿತಂಬಡೆಗಲ್ಲಿ । ಪಿರಿದಾಯಾಸಂಗೊಳ್ಳುತಿರೆ ನವಮಾಸಂ ತುಂಬಿ ಪೀಲೊಂದು ಕೋಟಿಮುದ್ಗರವೆರಸಿದಂತೆ ಪಡೆದು ಕೆಡವುವ । ಸೂತಿವಾಯುವಿನ ಘಾತಿಯಿಂದಿಮ್ಮಡಿಸುಗಿ। ಡಿಗ್ಭ್ರಾಂತಿಪಟ್ಟು ಮೊದಲ ವಿವೇಕಂಗೆಟ್ಟು ಉಪಮಿಸಬಾರದ ವೇದನೆಯಿಂ ಕಾಬ್ರಾನ್ನ ಸುರಿಗೆಯಂತೆ । ಯೋನಿದ್ವಾರದಿಂ ಪೊರಪಟ್ಟು। ಮೂರ್ಛಿಸಿ ಮೆಲ್ಲಮೆಲ್ಲನೆ ಚೇತರಿಸಿ। ಕ್ರಮದಿಂ ಜಾತಿಸಂಸ್ಕಾರವಳವಟ್ಟು। ಕೆಂಬರವಿರಲು, ಗುಳ್ಳೆ, ಬಾಲಗ್ರಹಾದಿ ಕಂಟಕಂಗಳಂ ಕಳೆದು ಬಾಲಲೀಲೆಯುಂತಾದ। ವಿನೋದಂಗಳಂ ನಟಿಸಿ । ವೃದ್ಧರ ಸಂಕೇತದಿಂದಾಯಾ ಜಾತಿಭಾಷೆಗಲಿತು । ಬಳಿಕಾ ಗರ್ಭದೊಳಗೆ ಮೂರು ಪೊರಗೆ ಮೂರು ವರ್ತಿಸುವ ಜಾಯತೆ। ಅಸ್ತೀತೆ, ಪರಿಣಮತೆ, ಪ್ರವರ್ಧತೆ, ಅಪಕ್ಷೀಯತೆ । ವಿನಶ್ಯತಿ ಎಂಬ ಷಡ್ಭಾವವಿಕಾರವುಳ್ಳಾತನೆನಿಸಿ । ಪುಣ್ಯವಿಶೇಷದಿಂ ಬ್ರಾಹ್ಮಣಾದಿ ವಿಶಿಷ್ಟಜನ್ಮ। ಪಾಪವಿಶೇಷದಿಂ ಶುನಕಸೂಕರಾದಿ ಹೀನಯೋನಿಯುಮಪ್ಪುದು । ಮತ್ತಮಾ ಕರ್ಮವೈಚಿತ್ರ್ಯದಿಂ ಪುರುಷನೆ ಸ್ತ್ರೀಯಾಗಿ ಸ್ತ್ರೀಯೆ ಪುರುಷನಾಗಿ ಪುಟ್ಟಿ। ಬಳಿಕಲ್ಲಿ ಮಾಡುವ ಪುಣ್ಯದಿಂ ದೇವತ್ವಮಂ। ಪಾಪದಿಂ ಸ್ಥಾವರತ್ವಮುಮಂ। ಪುಣ್ಯಪಾಪಸಾಮ್ಯದಿಂ ಮನುಜತ್ವಮುಮಂ ಪಡೆಯಲುಳ್ಳಾತನಾಗಿ ಈತೆರದಿಂ ಸ್ವರ್ಗಲೋಕಾದಿಕವನ್ನೈದಿ ಮರಳಿ ಜನಿಪುದೇ ಪಿತೃಯಾನಮಕ್ಕುಂ॥

### ದೇವಯಾನದಿಂ ಸತ್ಯಲೋಕಪ್ರಾಪ್ತಿ.

ಬಳಿಕ ಬ್ರಹ್ಮರುದ್ರಾದಿ ದೇವತೋಪಾಸಕರಾದ। ಆಯಾ ಭಕ್ತರ್ಗೆ ದಕ್ಷಿಣನಾಸಾಪುಟವಹಿಂಗಳೆ ಮನಸ್ಸ್ವರಂಧ್ರಜ್ವಾಲೆಯಿಂ ದಿವಸ । ವಾ ದಿವಸದಿಂ ಶುಕ್ಲಪಕ್ಷ। ವಾ ಶುಕ್ಲಪಕ್ಷದಿಂದುತ್ತರಾಯಣ। ಪದರಿಂ ಸಂವತ್ಸರ। ವಾ ಸಂವತ್ಸರದಿಂ ವಾಯು । ವಾ ವಾಯುವಿನಿಂ ಸೂರ್ಯ । ವಾ ಸೂರ್ಯನಿಂ ಸುಧಾಂಶು। ವಾ ಸುಧಾಂಶುವಿನಿಂ ಮಿಂಚು। ಆ ಮಿಂಚುಗಳಿಂದಿಂದ್ರ। ವಾಯಿಂದ್ರನಿಂದ ಪರಮೇಷ್ಠಿಕ್ರಮದಿಂದಾ ಬ್ರಹ್ಮವಿಷ್ಣುರುದ್ರಾದಿ ದೇವತಾಪ್ರಾಪ್ತಿಯಪ್ಪುದಲ್ಲಿ। ಬ್ರಹ್ಮನ ಕಾಮಧೇನುವಂ ಹನಸಾಂಸಾದಿಗಳಂತೆ। ಅಯಾ ದೇವತಾ ಲೋಕದ

ಲ್ಲಿಹತನವೇಸಿ. ಲೋಕ್ಯವೆನಿಸುವದು।ಮತ್ತಮಾಬ್ರಹ್ಮಸಂಬಂಧವಾಗಸ ವಿತ್ಯಾದಿಮಂತ್ರಶಕ್ತಿಯಂತಾಯಾದೇವತೆಗಳತ್ಯಂತಸಮೀಪಸ್ಥಿತಿಯೇ ಸ ಮಿಾಪ್ಯವೆನಿಸುವದು । ಮತ್ತಮಾಶಿವಸಂಬಂಧಮಾದರುದ್ರಾದಿಗಳಂತೆ ಯಾದೇವತಾಸಮಾನಾಕಾರತ್ವವೇಸಾರೂಪ್ಯವೆನಿಸುವದು । ಮತ್ತಮಾ ಷ್ಣುಸಂಬಂಧವಾದಶಿಶುಪಾಲಾದಿಗಳಂತೆ । ಆಯಾದೇವತೆಗಳೊಡನ ದೇಹಲಕ್ಷಣವೇಸಾಯುಜ್ಯವೆನಿಸುವದು ॥ ಮತ್ತಮಾಶಿವಸಂಬಂಧವಾ ನಂದೀಶ್ವರಾದಿಗಳಂತೆ ಆಯಾದೇವತಾಸಮಾನಮಾದೈಶ್ವರ್ಯವೇ ಸಾಷ್ಟಿ ತ್ವವೆನಿಸುವದು । ಬಳಿಕೀ ಪ್ರಕಾರಮಾದೈದುಪದತಾರತಮ್ಯದಿಂ ದಾಯ ದೇವತಾಲೋಕಂಗಳಲ್ಲಿಮಹಾಸುಖದಿಂದಿರ್ದು।ಬಳಿಕಿಲ್ಲಿಯೇ ಪ್ರಳಯಕಾ ದೊಳಾಯಾದೇವತೆಯೊಡಗೂಡಿಯಾದೊಡಂ । ಮತ್ತಲ್ಲವೇವೈರಾಗ್ಯದಿ ದಾದೊಡಂಸಮ್ಯಜ್ಞಾನಬಲದಿಂನಿಜಮೋಕ್ಷಮಕ್ಕುಂ ॥

ಯೋಗಭ್ರಂಶದಿಂ ಕ್ರಮಗತಿ,

ಬಳಿಕಯೋಗಭ್ರಂಶಮಾಗಲವರು । ಪುನರಾವೃತ್ತಿಸಂಸಾರಮೋಹ ವಿಲ್ಲದೆಜಗದ್ಧಿತಾರ್ಥವೆನಿಸಿಉಭಯಕುಲಶುದ್ಧಮಾದಶ್ರೀಮಂತರುಗಳಗರ್ ದಲ್ಯಾದರೂಸಂಪ್ರದಾಯಸಿದ್ಧರಾದಾಚಾರ್ಯರಕುಲದೊಳಾದೊಡಂಜನಿ ಮೇಲೆಜ್ಞಾನಕ್ರಿಯಾಸಂಪನ್ನರಾಗಿ ಸಹಜಕೈವಲ್ಯಂಬಡೆವುದೇಮಾಯಮ ಕ್ಕುಂ ॥

ಯೋಗಸಿದ್ಧರ ಗತಿ.

ಬಳಿಕ ಮಯನಿಯಮಾದ್ಯಷ್ಟಾಂಗಯೋಗಸಿದ್ಧರಾದ ಯೋಗೀಶ್ವ ಗೆ। ರೇಚಕಾದಿಸಪ್ತಪ್ರಾಣಾಯಾಮಬಲದಿಂಸುಷುಮ್ನಾನಾಡೀಮಾಗ ದಿಂಶಿರೋರಂಧ್ರದಲ್ಲಿಪ್ರಾಣಮತ್ಕ್ರಾಂತಮಾಗೆ ಸಕಾಮದಿಂಸ್ವೇಚ್ಛಾಲೋ ಕಪ್ರಾಪ್ತಿ ನಿಷ್ಕಾಮದಿಂ ಬ್ರಹ್ಮಲೋಕಾದಿವ್ಯವಧಾನವಿಲ್ಲದೆ ತತ್ಪ್ರತೀ ಮಾದ ಶಿವತತ್ವಪ್ರಾಪ್ತಿಯಕ್ಕುಂ ॥

ವೇದಾಂತಿ ಸಿದ್ಧಾಂತಿ ಸದ್ಗತಿ.

ಬಳಿಕವಿಶಿಷ್ಟಜ್ಞಾನದೀಕ್ಷಾಸಂಪನ್ನರ್ಗೆ।ಜೀವನ್ಮುಕ್ತಿಸಿದ್ಧಿಸುತ್ತಾಗಿಯುಂ ಪೂರ್ಣರೂಪದಲ್ಲಿ ಗಗನದಂತೆಗಮನಾಗ ಮನವಿಲ್ಲಾಗಿಯುಂ।ನಾಡೀಮಾ ರ್ಗನಿಯಮವಿಲ್ಲದೆಕಾಶಿಯಲ್ಲಾಗಲಿ ಹೀನಾಶ್ರಯದಲ್ಲಾಗಲಿ।ಅರಿವುಮರ ಗಳಿಂದಾಗಲಾ ಪಪ್ರಕಾರದಿಂಪ್ರಾಣಪ್ರಯಾಣಮಾಡಲುಮೇಲೆಪೋ ಶಿವ ಹುದೆಂಬುದೇಸಿದ್ಧಮಕ್ಕುಂ ॥

ಪಾಪಿಷ್ಠರಮರ್ಗತಿ.

ಮತ್ತನಾ ಕರ್ಮಭಕ್ತಿಯೋಗಜ್ಞಾನಾದಿಪುಣ್ಯಹೀನರಾದಪಾಪಾತ್ಮರ್ಗೆ
ತೃಣಜಳೂಕನ್ಯಾಯದಿಂ ಯಾತನಾಶರೀರವಿಡಿದು ಗುದಗುಹ್ಯಂಗಳಲ್ಲಿ
ಪ್ರಾಣಂಪೊರಮಟ್ಟುಪೋಗೆ। ಮೇಲೆಸೀಲಾದಿಯಂತಕಾಣಿಸಲುಕೆಂಗಣ
ಕೋರದಾಡೆಯು,ಪಾಶದಂಡಕರದ ರಕ್ತವಸ್ತ್ರ,ರಕ್ತಾಭರಣ ರಕ್ತಚಂದನ,
ರಕ್ತಪುಷ್ಪಾದಿಗಳಿಂದಲಂಕೃತರಾಗಿ ಉಗ್ರಕಂಟಕ,ಅತ್ಯುಗ್ರ,ಸುರಕಂಟಕ,
ಉಗ್ರಚಂಡ,ಅತ್ಯುಗ್ರ,ಸಮುಗ್ರ,ಉದಂಬರಾದಿ,ಯಮದೂತರತಿಭಯಂಕರ
ಮಾನ,ಮಾರ್ಗದೊಳೆಳದೊಯ್ದು ದಂಡಧರಸನ್ನಿಧಿಯಲ್ಲಿನಿಲ್ಲಿಸಿ,ಚಿತ್ರಗುಪ್ತ
ರಾಣತಿಯಿಂ ದಾಯಾಪಾಪಾನುಸಾರವಾದ ಮಹಾಬಾಧೆಗೊಳಿಸಿ। ಪೂ
ರ್ವೋಕ್ತನರಕಾರ್ಣವದಲ್ಲಿಕೆಡಹುತ್ತಿಹರೆಂಬುದೇ ಸತ್ಯವಾಕ್ಯಂ॥

ಪಶ್ವಾದಿಗಳಗತಿ.

ಬಳಿಕ್ಕುಳಿದ ಸಾಮಾನ್ಯಜೀವಜಾಲಕ್ಕೆ ಗುದಗುಹ್ಯಂಗಳಿಂಪ್ರಾಣವೈದೆ
ಪಿಶಾಚಪದಪ್ರಾಪ್ತಿ।ಶ್ರೋತ್ರದಿಂಪ್ರಾಣತ್ಯಾಗವಾಗೆಪಿತೃಲೋಕಪ್ರಾಪ್ತಿ ಜಿ
ಹ್ವೆಯಿಂಪ್ರಾಣವಿಯೋಗವಾಗೆವೈತ್ಯಲೋಕಪ್ರಾಪ್ತಿ । ನೇತ್ರದಿಂಪ್ರಾಣ
ಪ್ರಯಾಣವಾಗೆಸ್ವರ್ಗಲೋಕಪ್ರಾಪ್ತಿ।ನಾಸಿಕೆಯಿಂಪ್ರಾಣಗಮಿಸೆಮಾರ್ತ್ಯ
ಲೋಕಪ್ರಾಪ್ತಿ।ಸ್ತನಂಗಳಿಂಪ್ರಾಣಂಪೋಗೆಕಾಮಧೇನುಲೋಕಪ್ರಾಪ್ತಿಗ
ಳಕ್ಕು೦ ॥

ನಾನಾಮತವಾದಿಗತಿಗಳು.

ಮತ್ತವಿಶಾಪ್ರಕಾರದಿಂಕಾಳಯಾಮಳಾದಿಮತಾಭಿಮಾನಿಗಳಿಗೆ ಪಿಶಾ
ಚಪದಪ್ರಾಪ್ತಿ।ಚಾರ್ವ್ಯಾಕಜ್ಯೋತಿಷ್ಕಪೂರ್ವಮೀಮಾಂಸಕರುಗಳಿಗೆಸ್ಥೂ
ಲಭೂತಾಂತರಪ್ರಾಪ್ತಿ।ಸ್ಮಾರ್ತರಿಗೆತನ್ಮಾತ್ರಪ್ರಾಪ್ತಿ।ಇಂದ್ರಿಯಚೇತನಿಕರಿ
ಗೆಇಂದ್ರಿಯಪ್ರಾಪ್ತಿ।ಮನಶ್ಚೇತನಿಕರಿಗೆಮನಃಪ್ರಾಪ್ತಿ ಅಹಂಕಾರಚೇತನಿ
ಕರಿಗೆಯೂಪ್ರಾಣಚೇತನಿಕರಿಗೆಯೂಅಹಂಕಾರತತ್ವಪ್ರಾಪ್ತಿ ।ಬೌದ್ಧನೈ
ಯಾಯಿಕವೈಶೇಷಿಕರ್ಗೆ ಬುದ್ಧಿತತ್ವಪ್ರಾಪ್ತಿ।ಅರ್ಹತರಿಗೆ ಸತ್ಯಸಂಭೋಗವಾ
ದಿಗಳಿಗೆಯೂಗುಣತತ್ವಪ್ರಾಪ್ತಿ ।ಪಾಂಚರಾತ್ರರಿಗೆಪ್ರಕೃತಿತತ್ವಪ್ರಾಪ್ತಿ ।
ಸಾಂಖ್ಯರ್ಗೆ ಪ್ರಕೃತಿಯಮಸ್ತಕದಲ್ಲಿಯಭುವನಪ್ರಾಪ್ತಿ।ಅದ್ವೈತಿಗಳಿಗೆಅ
ಖಂಡಸಚ್ಚಿದಾನಂದಾದ್ವಿತೀಯನಿರಂಜನನಿಜಸ್ವರೂಪಮೆನಿಪ ಪುರುಷತತ್ವ
ಪ್ರಾಪ್ತಿ । ಪೌರಾಣಿಕರಿಗೆರಾಗತತ್ವಪ್ರಾಪ್ತಿ ।ಕಾಪಾಲಿಕರಿಗೆಕಾಲತತ್ವಪ್ರಾ
ಪ್ತಿ । ಪಾಶುಪತರಿಗುತ್ಪತ್ತಿಸಾಮಾನ್ಯವಾದಿಗಳಿಗೆಯುಂಮಾಯಾತತ್ವ
ಪ್ರಾಪ್ತಿ।ಮಹಾವ್ರತರಿಗೆಶುದ್ಧವಿದ್ಯಾತತ್ವಪ್ರಾಪ್ತಿ। ಶಿವಪ್ರಯೋಜ್ಯಕರು

ತ್ವಾದಿನಾದಿಗಳಿಗೆ ಈಶ್ವರೌದಾಸೀನ್ಯ ಮುಕ್ತಕರ್ತೃತ್ವಾದಿ ವಾದಿಗಳ
ಯುಂ ಈಶ್ವರತತ್ವಪ್ರಾಪ್ತಿ । ಗರುಡದಕ್ಷಿಣಾಮೂರ್ತಿ ತತ್ರಾಂತ್ರಿಕರಿಗೆ
ನೃತ್ಯಾದಿಭುವನಪ್ರಾಪ್ತಿ । ಶೈವರ್ಗೆ ಪರಶಿವಸಮಾನತ್ವಪ್ರಾಪ್ತಿ । ವೇದವ
ದಾಂತಾಗಮಪುರಾಣಂಗಳಲ್ಲಿ ಸಾರತರಮೆನಿಸಿದತಿರಹಸ್ಯಾರ್ಥಪ್ರತಿಪಾದ
ಮಾದವೀರಶೈವಮಾರ್ಗದಿಂ ಲಿಂಗಾಂಗಸಂಬಂಧಿಗಳಾದ ಷಟ್‌ಸ್ಥಳಜ್ಞಾನಿಗ
ಗೆ ಸರ್ವೋತ್ಕರ್ಷವಾದ ಅವಿರಳಶಿವೈಕ್ಯಪ್ರಾಪ್ತಿಯುಹುದೆಂದು ವಿವೇಕಿ
ಲ್ಪೇಳ್ವುದು ॥

ಇಂತೆಂಬಲ್ಲಿಗೆ ನಿಜಗುಣ ಶಿವಯೋಗೀಂದ್ರ ವಿರಚಿತವಾದ
ವಿವೇಕಚಿಂತಾಮಣಿ ಯೆಂಬ ಗ್ರಂಥದಲ್ಲಿ
ಭುವನಾಂತರ ಪ್ರಾಪ್ತಿ ಪ್ರಕಾರ ವರ್ಣನವೆಂಬ
ನವಮಪ್ರಕರಣಕ್ಕೆ ಮಂಗಳಮಸ್ತು.

---

ದಶಮಪ್ರಕರಣಪ್ರಾರಂಭಃ.



ಕಂದ॥ ಮತವೆನೆ ಜೀವರ್ಗಿಹಪರ । ಗತಿಗಳನಿಂತುಸುರ್ದೆನೊಲಿದು ಬಳ
ಲವರ್ಗೆ । ಸ್ಥಿತಿಕಾಲಕ್ರಮವಂನಿ । ಶ್ಚಿತಮಿದೆನಿಪ್ಪಂದದಿಂದವೇಳ್ವೆನವ
ಘಂ ॥ ಅದೆಂತೆಂದೊಡೆ ॥

ಕಾಲಸ್ವರೂಪಭೇದಗಳು.

ಗದ್ಯ ॥ ಕಾಲವೆಂಬುದೇ ಮಾಯಾಕಾರ್ಯಮಪ್ಪುದದು ಸ್ಥೂಲಕಾಲವೆಂ
ಲೂ ಸೂಕ್ಷ್ಮಕಾಲವೆಂತಲೂ ದ್ವಿಪ್ರಕಾರಮಹುದದರಲ್ಲಿ ಲೌಕಿಕಕಾಲ
ಸ್ಥೂಲಮಕ್ಕುಂ । ಮಾಧ್ಯಾತ್ಮಿಕಕಾಲವೇ ಸೂಕ್ಷ್ಮಕಾಲಮಕ್ಕುಂ । ಮತ್ತಮ
ಕಾಲವೇ, ಮನುಷ್ಯರ, ಪಿತೃದೇವತೆಗಳ, ಬ್ರಹ್ಮಾದಿಗಳ, ಸಂಬಂಧದಿಂ ಬಹ
ವಿಧಮಾಗಿ ಸಕಲಾತ್ಮರ್ಗೆ ನಾನಾವ್ಯವಹಾರಂಗಳನೆಣಿಸಿ ಕೊಡುತ್ತಿಹುದ
ಸ್ಥೂಲಮಾದ ಲೌಕಿಕಕಾಲದ ಲಕ್ಷಣವೆಂತೆನಲೀ ಪದ್ಮ ಕಣಿವೆಯುಸಿಕ್ಕಿ
ತರನಾಲ್ಕು ಭಾಗದೊಳಗೊಂದು ಭಾಗವು ತ್ರುಟಿಯೆನಿಸುವದು । ಮತ್ತೆರಡ
ಲೊಂದು ಲವವೆನಿಸುವದು । ಮತ್ತೆರಡಾಗಲೊಂದು ನಿಮೇಷವೆನಿಸುವದು ॥
ತ್ತ ಹದಿನೈದಾಗಲೊಂದು ಕಾಷ್ಟೆಯೆನಿಸುವದು । ಮತ್ತೆ ಮೂವತ್ತಾಗಲೊ
ದುಕಲೆಯೆನಿಸುವದು । ಮತ್ತೆ ಹದಿನೈದಾಗಲೊಂದು ಕ್ಷಣವೆನಿಸುವದು
ಮತ್ತೆರಡಾಗಲೊಂದು ಮುಹೂರ್ತವೆನಿಸುವದು । ಮತ್ತೆ ನಾಲ್ಕಾಗಲೊಂ

ಘಳಿಗೆಯುಕ್ಕುಂ। ಮತ್ತಮಾಸಳಿಗೆಯೆಂಟುಂಗಳೊಂದುರಘಾವಮಪ್ಪುದಾ
ರಘಾವಮೊಂದಿಕ್ಕೆಜ್ಯೋತಿಷದಲ್ಲಿ ಯೇಳುವರೆಘಳಿಗೆ ಸಲ್ಪುದಾರಘಾವಮೆಂ
ಟುಂಗೆಪಗಲಿರಳಂವರವತ್ತು ಘಳಿಗೆಯೊಂದುದಿನಮಪ್ಪುದಾದಿನಮೇಆದಿತ್ಯವಾ
ರಂ ಸೋಮವಾರ।ಮಂಗಳವಾರ। ಬುಧವಾರ।ಗುರುವಾರ।ಶುಕ್ರವಾರ। ಶನಿ
ವಾರಮೆಂದೇಳುತೆರನಾಗಿಪ್ಪುದುಃವಾರಪದಿನೈದಾಗಲೊಂದು ಪಕ್ಷಮೆನಿಸುವ
ದು॥ಶುಕ್ಲಕೃಷ್ಣಭೇದದಿಂದಿತ್ತೆರನಾಗಿರ್ಪುದಾ ಪಕ್ಷಂಗಳೊಳಗೆ।ಅಗ್ನಿಯೇ
ದೇವತೆಯಾಗುಳ್ಳಪಾಡ್ಯ।ಸೂರ್ಯದೇವತಾಕಮಾದಬಿದಿಗೆ। ಕುಬೇರನೇದೇವತೆ
ಯಾಗುಳ್ಳತದಿಗೆ।ವಿನಾಯಕನಧಿದೇವತೆಯಾಗುಳ್ಳಚವುತಿ। ಲಕ್ಷ್ಮಿಅಧಿದೇವ
ತೆಯಾಗಿಪ್ಪಪಂಚಮಿ॥ಷಣ್ಮುಖನಧಿದೇವತೆಯಾದಷಷ್ಠಿ।ರವಿಯಧಿದೇವತೆ
ಯಾದಸಪ್ತಮಿ।ರುದ್ರನಧಿದೇವತೆಯಾದಅಷ್ಟಮಿ।ದುರ್ಗಿಯಧಿದೇವತೆಯಾ
ದನವಮಿ।ಯಮನಧಿದೇವತೆಯಾದದಶಮಿ।ಇಂದ್ರನಧಿದೇವತೆಯಾದೇಕಾದ
ಶಿ।ವಿಷ್ಣುವಧಿದೇವತೆಯಾದದ್ವಾದಶಿ।ಕಾಮನಧಿದೇವತೆಯಾದತ್ರಯೋದಶಿ।
ಈಶ್ವರನಧಿದೇವತೆಯಾದಚತುರ್ದಶಿ।ಚಂದ್ರನಧಿದೇವತೆಯಾದಪೌರ್ಣಮಿ।
ಯೆನಿಪಶುಭಾಶುಭರೂಪಮಾದಪದಿನೈದುತಿಥಿಗಳುಳ್ಳುದೇಶುಕ್ಲಪಕ್ಷಮಕ್ರ
ಮದಿಂದಲೇಮರಳಪಾಡ್ಯಮೊದಲಾಗಿಪಿತ್ರಧಿದೇವತಾಂಶಮಾದ ಮಾವಾಸ್ಯೆ
ಪರ್ಯಂತಮಪ್ಪ ಪದಿನೈದುತಿಥಿಗಳುಳ್ಳುದೇ ಬಹುಳಮೆನಿಪ ಕೃಷ್ಣಪಕ್ಷಮ
ಕ್ಕುಂ॥ಮತ್ತಮಾಪಕ್ಷದಲ್ಲಿಯೇಮೇಷಾದಿದ್ವಾದಶರಾಶಿಗಳುಂಅಶ್ವಿನಿಮೊದ
ಲಾಗಿಪ್ಪತ್ತೇಳುನಕ್ಷತ್ರಂಗಳುಂ॥ ವಿಷ್ಕಂಭ।ಪ್ರೀತಿ।ಆಯುಷ್ಮಾನ್।ಸೌ
ಭಾಗ್ಯ।ಶೋಭನ।ಅತಿಗಂಡ।ಸುಕರ್ಮ।ಧೃತಿ।ಶೂಲ।ಗಂಡ।ವೃದ್ಧಿ।ಧೃವ। ವ್ಯಾ
ಘಾತ।ಹರ್ಷಣ।ವಜ್ರ।ಸಿದ್ಧಿ।ವ್ಯತೀಪಾತ।ವರೀಯಾನ್।ಪರಿಘ।ಶಿವ।ಸಿದ್ಧ।ಸಾ
ಧ್ಯ।ಶುಭ।।ಶುಕ್ಲ।ಬ್ರಹ್ಮ।ಐಂದ್ರ। ವೈಧೃತಿಗಳೆಂಬಿಪ್ಪತ್ತೇಳು ಯೋಗಂಗ
ಳುಂ॥ಶಕುನಿ।ಚತುಷ್ಪಾತ್।ನಾಗವ।ಕಿಂಸ್ತುಘ್ನವೆಂಬನಾಲ್ಕುಸ್ಥಿರಕರಣಂ
ಗಳುಂ॥ಬವ।ಬಾಲವ।ಕೌಲವ।ತೈತುಲ।ಗರಜ।ವಣಿಜ।ಭದ್ರಗಳೆಂಬೇಳುಚರ
ಕರಣಂಗಳುಂತಮ್ಮತಮ್ಮಕ್ರಮದಿಂದರವತ್ತರವತ್ತು ಘಳಿಗೆಗೊಂದೊಂದೆ
ನಿಪಕ್ಷಯಗಾಮಿವೃದ್ಧಿಗಾಮಿಗಳಾಗಿಶುಭಾಶುಭರೂಪದಿಂವರ್ತಿಸುತ್ತಿಹವಲ್ಲಿ
ಸ್ಥಿರಕರಣಂಗಳೇಚತುರ್ದಶಿಅಮಾವಾಸ್ಯೆಗಳಲ್ಲಿಯೇವರ್ತಿಸುತ್ತಿಹವು।ಚರ
ಕರಣಂಗಳೇಳುಮೂವತ್ತು ಘಳಿಗೆಗೊಂದೊಂದೆನಿಸಿದಿನಕ್ಕೆರಡೆರಡು ವರ್ತಿಸುತ್ತಿ
ರ್ಪುವಿಂತಪ್ಪತಿಥಿವಾರನಕ್ಷತ್ರಯೋಗಕರಣ।ಪಂಚಾಂಗದಿಂಯುಕ್ತಮಾದಪ
ಕ್ಷದ್ವಯದಿಂದೊಂದು।ಮಾಸಮಪ್ಪುದಾಮಾಸಮೇ।ಚೈತ್ರ। ವೈಶಾಖ।ಜ್ಯೇಷ್ಠ।

ಆಷಾಢ।ಶ್ರಾವಣ।ಭಾದ್ರಪದ।ಆಶ್ವಯುಜ।ಕಾರ್ತಿಕ।ಮಾರ್ಗಶಿರ।ಪುಷ್ಯ। ಮಾಘ।ಫಾಲ್ಗುಣವೆಂದುಹನ್ನೆರಡುತೆರನಾಗಿಹುದಾಮಾಸವೆರಡಕ್ಕೊಂದು ಋತುವಹುದಾಋತುವೇ।ಹಿಮ।ಶಿಶಿರ।ವಸಂತ।ಗ್ರೀಷ್ಮ।ವರ್ಷ। ಶರದೃತುಗ ಳೆಂಬಾರುತೆರನಾಗಿ।ಮಾರ್ಗಶಿರಂಮೊದಲಾದೆರಡೆರಡುತಿಂಗಳಗೊಂದೊಂದು ಋತುಸಮಾಖ್ಯಮಕ್ಕು।ಮೂರಾಗಲೊಂದುಅಯನವೆನಿಸುಗುದಾಅಯನವೇ ದ ಕ್ಷಿಣೋತ್ತರ ಭೇದದಿಂವೆರಡಾಬಗೆಯಾಗಹುದಾ ಅಯನಂಗಳೆರಡಾಗಲೊಂ ದುವರುಷಮಕ್ಕು॥ ಅರವತ್ತು ವರುಷಗಳು.

ಮತ್ತಮಾವರುಷವೇ।ಪ್ರಭವ-ವಿಭವ-ಶುಕ್ಲ-ಪ್ರಮೋದೂತ-ಪ್ರಜೋ ತ್ಪತ್ತಿ-ಆಂಗೀರಸ-ಶ್ರೀಮುಖ-ಭಾವ-ಯುವ-ಧಾತು-ಈಶ್ವರ-ಬಹುಧಾನ್ಯ- ಪ್ರಮಾದಿ-ವಿಕ್ರಮ-ವಿಷು-ಚಿತ್ರಭಾನು-ಸ್ವಭಾನು-ತಾರಣ-ಪಾರ್ಥಿವ - ವ್ಯಯ-ಸರ್ವಜಿತು-ಸರ್ವಧಾರಿ-ವಿರೋಧಿ-ವಿಕೃತಿ-ಖರ- ನಂದನ ವಿಜಯ- ಜಯ-ಮನ್ಮಥ-ದುರ್ಮುಖಿ-ಹೇವಿಳಂಬಿ-ವಿಳಂಬಿ-ವಿಕಾರಿ-ಶಾರ್ವರಿ-ಪ್ಲವ- ಶುಭಕೃತು-ಶೋಭಕೃತು-ಕ್ರೋಧಿ-ವಿಶ್ವಾವಸು-ಪರಾಭವ-ಪ್ಲವಂಗ -ಕೀ ಲಕ ಸೌಮ್ಯ-ಸಾಧಾರಣ-ವಿರೋಧಿಕೃತು-ಪರೀಧಾವಿ-ಪ್ರಮಾದೀಚ- ಆ ನಂದ-ರಾಕ್ಷಸ-ನಳ-ಪಿಂಗಳ-ಕಾಳಯುಕ್ತಿ-ಸಿದ್ಧಾರ್ಥಿ-ರೌದ್ರಿ-ದುರ್ಮತಿ- ದುಂದುಭಿ-ರುಧಿರೋದ್ಗಾರಿ-ರಕ್ತಾಕ್ಷಿ-ಕ್ರೋಧನ-ಅಕ್ಷಯವೆಂದರವತ್ತು ತೆರನಾಗಿಹುದಾದೊಡಂ ಬೇರೆಬೇರೆಶುಭಾಶುಭಫಲಂಗಳುಳ್ಳದಾಗಿ । ಕ್ರ ಮದಿಂದುತ್ತಮಂಬೆಸಿಗೆ । ಮಧ್ಯಮಂಬೆಸಿಗೆ । ಕನಿಷ್ಠಂಬೆಸಿಗೆಗಳೆನಿಸಿ ಇ ಪ್ಪತ್ತಿಪ್ಪತ್ತುವರುಷಗಳಂದೊಪ್ಪುತ್ತನುಭೂತಫಲವಾಗಿರ್ಕುಂ ॥

ಸಂವತ್ಸರ ಭೇದಗಳು.

ಮತ್ತಮಾವರುಷವೇಶರದ್ವತ್ಸರಹಾಯನ।ಸಮಾಬ್ದಾಭಿಧೇಯವೆನಿಸಿ ಸಿದ್ಧಾಂತಕ್ರಮದಿಂ ಕಲ್ಪೋಕ್ತ ಯುಕ್ತಮಾಗಿರ್ಪ್ಪ ಪರಮಾಂತರ ಭೇದದಿಂ ದಿವ್ಯತ್ಸರ ವಿಮಾವತ್ಸರ ಪರಿವತ್ಸರಾ ಧಿವತ್ಸರ ಕ್ಷಯವತ್ಸರಾದ್ಯನೇಕ ಪ ರ್ಯಾಯಮಾಗಿರ್ಪ್ಪುದಾ ಸಂವತ್ಸರವೇ । ಸೌರ। ಚಾಂದ್ರ।ಬಾರ್ಹಸ್ಪತ್ಯ।ನಾ ಕ್ಷತ್ರ।ಸಾವನಭೇದದಿಂದೈದು ತೆರನಾಗಿರ್ಪ್ಪದಲ್ಲಿ ಸೌರವೇ ಸೂರ್ಯನಮೇ ಷಸಂಕ್ರಮಣದಿಂ ಮರಳಿಮೇಷ ಸಂಕ್ರಮಣಾಂತವಾಗಿ ಮುನ್ನೂರರವ ತ್ತೈದುವಾರಂಗಳುಂ । ಹದಿನೈದುಘಳಿಗೆಗಳುಂ ಮೂವತ್ತೊಂದುವಿಘ ಳಿಗೆಗಳುಂ ಮೂವತ್ತೊಂದುಪರೆಗಳು ಮಿಪ್ಪತ್ನಾಲ್ಕು ಪರಾತ್ಪರೆಗಳಿಂ ಪರಿಮಿತವಾಗಿಜ್ಯೋತಿರ್ಗತಿಯುಂದ್ರಾವಿಡಾಚಾರಕ್ಕುಂ ಶ್ರಾದ್ಧಾದಿಕರ್ಮ

ಗಳ್ಗೆ ಗುಂ ಋತುವ್ಯವಸ್ಥೆಗಳ್ಗುಂ ಸಹಕಾರಿಯಾಗಿರ್ಕುಂ। ಬಳಿಕ ಚಾಂದ್ರವೇ ಚಂದ್ರಕಲಾವಸ್ಥಾನಿಯುತವಾದ ಚೈತ್ರಶುಕ್ಲಾದಿ ಪುನಶ್ಚೈತ್ರಶುಕ್ಲಾಂತವು ನಿಪಮುನ್ನೂರೈವತ್ತಾಲ್ಕು ದಿನಂಗಳಿಂದಳವಟ್ಟುಳಿದ ದಿನಂಗಳಂ ಸೌರಾಧಿಕವಾದ ಮಲಮಾಸದಿಂ ನೋಡಿಕೊಂಡು ಮೂವನ್ನೂರಯೆಂಭತ್ತೆಲ್ಕದಿನಂಗಳಂ ಕಲ್ಪಮನಿಸಿ ಕ್ಷಯಮಾಸಬಂದಾಗಲೆರಡಧಿಮಾಸಂಗಳಿಂ ತುಲ್ಯವಾಗಿ ಸ್ವಕರ್ಮೋಪಯುಕ್ತವಾಗಿರ್ಕುಮಾ ಸೌರಚಾಂದ್ರಮಾನಂಗಳೆರಡೇ ವ್ಯಾವಹಾರಿಕವಾಗಿ ದಕ್ಷಿಣಕರ್ಮಭೂಮಿಯೊಳು ಪ್ರಸಿದ್ಧವಪ್ಪುದಾಬಾರ್ಹಸ್ಪತ್ಯವೇ ಗುರೂದಯದಿಂ ನಿಯುತವಾಗಿ ವಿಂಧ್ಯೋತ್ತರದೊಳು ವ್ಯಾವಹಾರಿಕಮಪ್ಪು ದಾನಕ್ಷತ್ರವೇ ನಕ್ಷತ್ರಗತಿ ಸಮನಿಯುತವಾಗಿ ಶಾಂತ್ಯಾದಿ ಕರ್ಮೋಪಯುಕ್ತಮಪ್ಪು ದಾಸಾವನವೇ ಮಧ್ಯಮಾನವೆನಿಸಿ ಮುನ್ನೂರರವತ್ತು ದಿನಂಗಳಂ ಕೂಡಿ ವಾಣಿಜ್ಯಗಣನಾದ್ಯುಪಯುಕ್ತಮಕ್ಕುಂ ಮತ್ತಮಾ ಸಂವತ್ಸರವೇ ಕೂಶ್ಮಾಂಡಾದಿದೀಕ್ಷಿತರ್ಗೆ ದ್ವಾದಶಮಾಸಾತ್ಮಕತ್ವದಿಂ ಇಪ್ಪತ್ನಾಲ್ಕು ಪಕ್ಷಂಗಳಹತನದಿಂ ದಾರುಋತುಗಪ್ಪುದರಿಂದಹೋರಾತ್ರೋಪವಾಸಗಳಿಂ ಪಾಪಮೋಚಕವಾಗಿರ್ಪುದು। ಬಳಿಕಾ ಸಂವತ್ಸರವೇ ತನ್ನೊಳುದಿಸಿದ ಮಾನವರ್ಗೆ ಕರ್ಮಬಂಧದಿಂದರವತ್ತಾಗೆ ಷಷ್ಟಿಪೂರ್ತಿಶಾಂತಿಯೆಂತಲುಂ ಬಳಿಕ ಹನ್ನೆರಡರಿಂ ದ್ವಿತ್ರಿಗುಣಾಧಿಕವಾಗಿ ಭೀಮರಥಶಾಂತ್ಯುಗ್ರಶಾಂತಿ ಸಹಸ್ರಚಂದ್ರದರ್ಶನಶಾಂತಿ ಮಹಾವ್ರತಶಾಂತಿಪೂರ್ಣಾಯುಷ್ಕಾದ್ರಶಾಂತಿಗಳಂ ಮಾಡಿಸಿ ಪಾಪನಿವರ್ತಕವಾಗಿಹುವೇ ಸಂವತ್ಸರವೇ ಸೂರ್ಯದೇವತಾಕವಾಗಿರವಿಸ್ಪಂದಗಣ್ಯನೆಂದು ತಿಳಿಯಲ್ಪೇಳ್ಕುಂ॥

## ಮಾನಾಂತರದಿಂ ಕಾಲಭೇದ.

ಮತ್ತಮಾದಿನಪಕ್ಷಮಾಸರ್ತ್ವಯನವತ್ಸರಂಗಳೆಲ್ಲಂ ಮನುಷ್ಯರ್ಗೆ ಪೂರ್ವೋಕ್ತಮಾದ ಸೂರ್ಯನೆಡೆಯಾಟದಿಂದಲೇ ಪ್ರಮಾಣಿಸಿಕೊಳ್ಳುತ್ತಿಹುದು। ದೇವತೆಗಳಿಗವರ ಇಡೆಪಿಂಡಗಳೆಂಬ ಚಂದ್ರಸೂರ್ಯರ ರೇಚಕಪೂರಕಮೆಂಬೆಡೆಯಾಟದಿಂದಲೇ ಲಕ್ಷಿಸಿಕೊಳ್ಳುತ್ತಿರ್ಕುಂ। ಮತ್ತಮಾ ಲೌಕಿಕರಾದ ಮನುಷ್ಯರ ಮಾಸವೊಂದಕೆ ಪಿತೃಗಳಿಗೊಂದು ದಿನವಹುದಾ ದಿನ ಮುನ್ನೂರರವತ್ತಾಗೆ ವರುಷವಹುದಾ ಕ್ರಮವರ್ಗೆ ಶತಾಯುಷ್ಯವೆಂದರಿಯಲ್ಪೇಳ್ಕುಂ। ಮತ್ತಮಾ ಸೂರ್ಯನ ದಕ್ಷಿಣಾಯನವೇ ದೇವತೆಗಳ ರಾತ್ರಿ। ಉತ್ತರಾಯಣವೇ ದಿನಮಂತಪ್ಪ ದಿರಾತ್ರಿಗಳ್ಕೂಡಲೊಂದು ದಿನ ಮಾದಿನ ಮುನ್ನೂರರವತ್ತಾಗಲೊಂದು ವರುಷ ಮಂತಪ್ಪ ನೂರು ದಿವ್ಯವರುಷಂಗಳ ಪ

ರ್ಯಂತಮಾದೀವರ್ಕಳಸ್ಥಿತಿಯುಕ್ಕುಂ॥ಬಳಿಕಾಮನುಷ್ಯರವರುಷಾನುಕ್ರಮದಿಂದಿಲ್ಲಿಕೃತಾಯುಗಂಗಳುವರ್ತಿಸುತ್ತಿರ್ಪವಂತೆನೆ ॥

## ಯುಗ ಪರಿಮಾಣಭೇದ.

ಬಳಿಕಕೃತಯುಗವೇ ಹದಿನೇಳುಲಕ್ಷದಮೇಲೆ ಯಿಪ್ಪತ್ತೆಂಟುಸಾವಿರ ವರುಷವರ್ತಿಸುತ್ತಿಹುದು । ತ್ರೇತಾಯುಗವೇ ಹನ್ನೆರಡುಲಕ್ಷದಮೇಲೆ ತೊಂಭತ್ತಾರುಸಾವಿರವರುಷ ವರ್ತಿಸುತ್ತಿಹದು । ದ್ವಾಪರಯುಗವೇ ಎಂಟುಲಕ್ಷದಮೇಲೆಅರವತ್ತುನಾಲ್ಕುಸಾವಿರವರುಷವರ್ತಿಸುತ್ತಿಹುದು । ಕಲಿಯುಗವೇನಾಲ್ಕುಲಕ್ಷದಮೇಲೆ ಮೂವತ್ತೆರಡುಸಾವಿರವರುಷ ವರ್ತಿಸುತ್ತಿಹುದು । ಕ್ರಮದಿಂದೀ ನಾಲ್ಕುಯುಗಂಗಳಲ್ಲಿನಾಲ್ಕುಪಾದ।ಮೂರುಪಾದ। ವೆರಡುಪಾದ। ವೊಂದುಪಾದವಾಗಿಧರ್ಮವುವರ್ತಿಸುತ್ತಿಹುದು । ಬಳಿಕ ಕೃತಯುಗದಲ್ಲಿಯೆ ಯೋಗ।ತ್ರೇತಾಯುಗದಲ್ಲಿಯಜ್ಞ।ದ್ವಾಪರಯುಗದಲ್ಲಿಪೂಜೆ। ಕಲಿಯುಗದಲ್ಲಿನಾಮಸ್ಮರಣ। ಮತ್ತಮಿದುಪ್ರಕಾರಾಂತರದೊಳು। ಕೃತಾದಿಗಳಲ್ಲಿ ಕ್ರಮದಿಂಯೋಗ ಜ್ಞಾನಯಜನ ದಾನಗಳು ಮುಖ್ಯಮಾದರುಂ ಸಾರ್ವಕಾಲದಲ್ಲಿಯುಂಜ್ಞಾನವೇಭೋಗಮೋಕ್ಷಸಾಧಕವಾಗಿರ್ಕುಂ ॥

## ಯುಗಭೇದದಿಂ ಕರ್ಮಸಿದ್ಧಿಭೇದ.

ಮತ್ತಮಾ ಯುಗಂಗಳಲ್ಲಿ ತಪಸ್ಸಿದ್ಧಿ ತಾರತಮ್ಯ ಮೆಂತೆನೆ। ಕೃತಯುಗದೊಳು ಹತ್ತುವರುಷಕ್ಕೆ ಸಿದ್ಧಿಸುವ ಸತ್ಕರ್ಮವು ಮೊದಲಾದ ತಪಸ್ಸುತ್ರೇತಾಯುಗದೊಳ ಗೊಂದುವರುಷಕ್ಕೆ ಸಿದ್ಧಿಸುವದು । ಮತ್ತಮಾತ್ರೇತಾಯುಗದೊ ಳೊಂದುವರುಷಕ್ಕೆ ಸಿದ್ಧಿಸುವ ತಪಸ್ಸು ದ್ವಾಪರಯುಗದಲ್ಲಿ ಯೊಂದು ತಿಂಗಳಿಗೆ ಸಿದ್ಧಿಸುವದಾ ತಪಸ್ಸೇ ಕಲಿಯುಗ ದೊಳಗೊಂದು ದಿನಕ್ಕೆ ಸಿದ್ಧಿಸುವದು । ಅಂತಾದರುಮೀ ಕಲಿಯುಗದಲ್ಲಿ ಮುಂದೆ ಪಾಪಾಧಿಕ್ಯದಿಂ ಕೇವಲ ನಾಸ್ತಿಕ್ಯಮುಂ । ಅನ್ಯಥಾಜ್ಞಾನಮುಂ । ಮಹಾಲೌಕಿಕಶಿಲ್ಪಚಾತುರ್ಯಮುಂ । ಪಂಚನಾದಿ ಕುಯುಕ್ತಿಗಳುಂ।ಲೋಕಗ್ರಷ್ಟಾಂಶದಿಂವೇದದೂಷಣಮುಂ।ನೀಚಪ್ರಾಬಲ್ಯಮುಂ ಸ್ವೇಚ್ಛಾನ್ಯಾಯಮುಮುಂ। ಶಿವಧರ್ಮಕ್ಷಯಮುಂ। ದೈವಶಕ್ತಿತಿರೋಭಾವಮುಂ। ಅಕೃತ್ಯಂಗಳುಂ। ವರ್ಣಸಾಂಕರ್ಯಮುಂಪ್ರಚುರಮಾಗಿ। ಜನರೆಲ್ಲಮುಂಶಿಶ್ನೋದರಪರಾಯಣರಪ್ಪುದರಿಂವಿಷಯೈಕಲುಬ್ಧರಾಗಿ ಚಿತ್ತಶುದ್ಧಿಯಂಪಡೆಯುವಕ್ಷಿಪ್ರಸಿದ್ಧಿಕಮಾದಕಲಿಯುಗದಲ್ಲಿಕ್ಷಣಭಂಗುರವಾದಜೀವಿತಮುಂವ್ಯರ್ಥಮಾಗಿಕಳಕೊಂಬಳ್ನರೊಳಗುಮಪ್ಪರ ದನುಗ್ರಹದಿಂದಾಗಾವಿ

ದೋಷವಿಲ್ಲದಮನಸ್ಸು । ಅನೃತಾದಿದುಃಖವಿಲ್ಲದವಾಕ್ಕು । ಹಿಂಸಾದಿ ಕಾಲುಷ್ಯವಿಲ್ಲದ ಕಾಯಮಿಂತೆಂಬ ತ್ರಿಕರಣಂಗಳಿಂ ಶುದ್ಧರಾದ ಮಹಾಪುರುಷರ್ಗೆ ಈ ಕಲಿಯುಗದಲ್ಲಿಯೇ ಬಹುಶೀಘ್ರವಾಗಿ ಭೋಗಮೋಕ್ಷಂಗಳಕ್ಕುಂ॥

ಚತುರ್ಯುಗಪರಿಮಿತಿ.

ಮತ್ತಮಾ ಚತುರ್ಯುಗಂಗಳ ಆಯಾ ಗಣನೆಗಳಂ ಬೇರೆಬೇರಿಕ್ಕಿ ಮುನ್ನೂರರವತ್ತರಿಂ ಕಳೆದು ಗುಣಿಸಿನೋಡೆ ನಿಂದುದೇವತೆಗಳ ದಿವ್ಯವರುಷವಹುದಾಗಿ ಕೃತಯುಗಕ್ಕೆ ನಾಲ್ಕುಸಾವಿರದೆಂಟುನೂರು ದಿವ್ಯವರುಷವಹುದು॥ ತ್ರೇತಾಯುಗವೇ ಮೂರುಸಾವಿರದಾರುನೂರು ವರುಷವಹುದು॥ ದ್ವಾಪರಯುಗವೇ ಯೆರಡುಸಾವಿರದಾರುನೂರ ದಿವ್ಯವರುಷವಹುದು॥ ಕಲಿಯುಗವೇ ಸಾವಿರದಿನ್ನೂರು ದಿವ್ಯವರುಷವಹುದು॥ ಇಂತೀಹನ್ನೆರಡು ಸಾವಿರದಿವ್ಯವರುಷಗಳಾದ ಕೃತಾದಿನಾಲ್ಕುಯುಗಂಗಳಂಕೂಡಿದೊಂದುಮಹಾಯುಗವೇ ದಿವ್ಯಯುಗಂಗಳೆಪ್ಪತ್ತೊಂದಾಗಲೊಂದು ಮನ್ವಂತರವೆನಿಸುವವಾಮನ್ವಂತರಂಗಳು ಹದಿನಾಲ್ಕಾಗಲೊಂದು ಸೃಷ್ಟಿಕಲ್ಪವೆನಿಸುವದಾ ಸೃಷ್ಟಿಕಲ್ಪವೇ ಸಹಸ್ರದಿವ್ಯಯುಗವಪ್ಪುದರಿಂ ಬ್ರಹ್ಮಂಗೊಂದುದಿವಸ। ವಾದಿವಸವೊಂದರೊಳಗೆ ಹದಿನಾಲ್ಕು ಮನುಗಳಿಗಧಿಕಾರಸ್ಥಾನೀಯರಾದನೇಕ ಮಹೇಂದ್ರರುಗಳಿಗಧಿಕಾರಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತ್ತಿರ್ಪರ್॥

ಬ್ರಹ್ಮಾದಿಗಳಪರಿಮಿತಿ.

ಬಳಿಕಿಂತಪ್ಪ ದಿವ್ಯಯುಗವೇ ಬ್ರಹ್ಮಂಗೊಂದು ರಾತ್ರಿಯಹುದು। ಸಂಹಾರಕಲ್ಪದಂತಪ್ಪದಿವಾರಾತ್ರಿಗಳ್ಕೂಡಿದದಿನಮುನ್ನೂರರವತ್ತಾಗಲೊಂದುವರುಷವಂತಪ್ಪನೂರುವರುಷಗಳ ಪರ್ಯಂತವಾ ಬ್ರಹ್ಮನಸ್ಥಿತಿಯದರೊಳಗನೇಕಮನುಶಕ್ರಾದಿಗಳಿಗಧಿಕಾರಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತಿರ್ಪರ್॥ ಬಳಿಕ ಬ್ರಹ್ಮನಸ್ಥಿತಿಯೆಂಬುದೇ ವಿಷ್ಣುವಿಗೊಂದುಮಾಸವಹುದದರೊಳಗೆ ಬ್ರಹ್ಮಂಗಧಿಕಾರಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತ್ತಿರ್ಪನಿಂತಪ್ಪ ದ್ವಾದಶಮಾಸಾತ್ಮಕಶತವರುಷಪರ್ಯಂತಮಾ ವಿಷ್ಣುವಿನಧಿಕಾರಸ್ಥಿತಿಯದರೊಳಗನಂತ ಬ್ರಹ್ಮರಿಗಧಿಕಾರಸಮಾಪ್ತಿಯಾಗಿ ಬೇರಧಿಕಾರಿಗಳುದಿಸುತಿರ್ಕ್ಕುಂ॥

ಬಳಿಕಾವಿಷ್ಣುವಿನ ಸ್ಥಿತಿಯೆಂಬುವದೇ ರುದ್ರಂಗೊಂದುಮಾಸ ವದರಲ್ಲಿ ವಿಷ್ಣುವಿಗಧಿಕಾರಸಮಾಪ್ತಿಯಾಗಿ ಬೇರೊಬ್ಬಧಿಕಾರಿಯುದಿಸುತ್ತಿರ್ಪನಂತಪ್ಪ ಮಾಸಹನ್ನೆರಡಾಗಲೊಂದುವರುಷ॥ ಹೀಸರಿನೂರುವರುಷಪರ್ಯಂತ

ಮಾರುದ್ರಸ್ಥಿತಿಯೆಂದರೊಳಗನಂತನಾರಾಯಣರ್ಗಧಿಕಾರ ಸಮಾಪ್ತಿಯಾ ಬೇರಧಿಕಾರಿಗಳುದಿಸುತಿರ್ಕು॥ ಬಳಿಕಾರುದ್ರನಸ್ಥಿತಿಯೆಂಬುದೇಈಶ್ವರ ಗೊಂದುದಿನವಾದಿನವೊಂದರೊಳಗೆರುದ್ರಂಗಧಿಕಾರಸಮಾಪ್ತಿಯಾಗಿ ಬೇ ರೊಬ್ಬಧಿಕಾರಿಯುದಿಸುತ್ತಿರ್ಪನಂತಪ್ಪದಿನಮುನ್ನೂರರವತ್ತಾಗಲೊಂದು ವರುಷ ।ನಂತಪ್ಪವರುಷನೂರರಪರ್ಯಂತವೀಶ್ವರನಸ್ಥಿತಿಯೊಳಗಸಂಖ್ಯಾ ತರುದ್ರರಿಗಧಿಕಾರಸಮಾಪ್ತಿಯಾಗಿಬೇರಧಿಕಾರಿಗಳುದಿಸುತಿರ್ಕುಂ॥ಬಳಿಕಾ ಈಶ್ವರನಸ್ಥಿತಿಯೆಂಬುದೇಸದಾಶಿವಂಗೊಂದುನಿಮೇಷ।ವಾನಿಮೇಷದೊಳ ಗೀಶ್ವರಂಗಧಿಕಾರಪರಿಸಮಾಪ್ತಿಯಾಗಿಬೇರೊಬ್ಬಧಿಕಾರಿಯುದಿಸುತ್ತಿರ್ಪ ನಾಕ್ರಮದಿಂಪೇರ್ಚಿದ ಘಳಿಗೆರಥಾವದಿನಪಕ್ಷಮಾಸವರುಷಕ್ರಮದಿಂ ಶತ ಮಾನಜೀವಿಯಾದಸದಾಶಿವನ ಸ್ಥಿತಿಯೊಳಗಪಾರಮಹೇಶ್ವರರ್ಗಧಿಕಾರಸಮಾ ಪ್ತಿಯಾಗಿಬೇರಧಿಕಾರಿಗಳುದಿಸುತ್ತಿರ್ಕು॥ಬಳಿಕಾಸದಾಶಿವನಸ್ಥಿತಿಯೆಂಬು ದೇಬಿಂದೂಪಾಧಿಯಿಂ । ಮಂತ್ರಮೂರ್ತ್ತಿತ್ವಮುಂ ಮುಮುಕ್ಷುಗಳಧ್ಯಾನ ಪೂಜಾರ್ಥವಾಗಿತಳೆದುಸಕಲನಿಷ್ಕಳವೆನಿಸಿಕೊಳ್ತಿರ್ದಮಹೇಶ್ವರಸದಾ ಶಿವರುದ್ರಸಾಕ್ಷಿಸ್ವರೂಪಮಾದಪರಶಿವಂಗೊಂದು ತೃಟಿಕಾಲವಂತಾರೋಪಿ ಸಲಪ್ಪರೊಳಂತಾಸದಾಶಿವರ್ಗಧಿಕಾರಸಮಾಪ್ತಿಯಾಗಿ ಬೇರಧಿಕಾರಿಗಳುದಿ ಸುತಿರ್ಕುಮೀಪರಶಿವನೇನಿತ್ಯನಿರಂಜನಾಖಂಡಸಚ್ಚಿದಾನಂದಪೂರ್ಣದ್ವಿತೀ ಯಸ್ವಸ್ವರೂಪಕಾಲಾದ್ಯಬಾಧಿತಸಿದ್ಧಾಂತ ಸದ್ಗುರುಶಂಭುಲಿಂಗಮಾಗಿರ್ದ ಲ್ಲಿಪರಿಮಾಣಕಾಲಕಲ್ಪನೆಗಸದಳಮಾಗಿರ್ಕುಂ ॥

### ಮಹಾಸಂಹಾರಕ್ರಮಂ.

ಬಳಿಕಿಂತಾಗಲಾಸಂಹಾರಕ್ರಮದಲ್ಲಿಸ್ವರ್ಗಮರ್ತ್ಯಪಾತಾಳಮೆಂಬಲೋ ಕತ್ರಯಸಂಹಾರವೇಅಧಃಪ್ರಳಯಮೆನಿಸುವದದರಲ್ಲಿಮೇಲಣ ಮಹರ್ಲೋ ಕಾದಿಗಳಸ್ಥಿತಿಯುಂಟಾಗಿಹುದು।ಮತ್ತಮಾಪೃಥಿವ್ಯಾದಿಪ್ರಕೃತ್ಯಂತವಾದ ತತ್ವಂಗಳಸಂಹಾರವೇಮಧ್ಯಪ್ರಳಯಮೆನಿಸುವದಲ್ಲಿಮೇಲಣ ರಾಗಾದಿತತ್ವ ಭುವನಸ್ಥಿತಿಯುಂಟಾಗಿಹುದು।ಬಳಿಕಾಪೃಥಿವ್ಯಾದಿಶಿವತತ್ವಾಂತವಾದಸಕ ಲತತ್ವಾದಿಷಡಧ್ವವನೊಳಕೊಂಡುಬಿಂದುಸಿಂದವಸ್ಥೆಯೇ ಮಹಾಪ್ರಳಯ ಮಕ್ಕುಂ।ಮತ್ತಮಾಮಹಾಪ್ರಳಯದಲ್ಲಿಯುಂಪರಶಿವನುಮಲವಿಶಿಷ್ಟಪರಿ ಪಾಕತಾರತಮ್ಯಾಪೇಕ್ಷೆಯಿಂಬೋಧಿಸಲು ಯೋಗ್ಯರಾದವರುಗಳನನುಗ್ರ ಹೈಕಶಕ್ತಿಮಾತ್ರದಿಂಬೋಧಕಪಯೋಗ್ಯರನಾಗಿಸಂಸರಿಸುತ್ತ। ಬಿಡ ತರಮಲಪರಿಪಾಕದಿಂಬೋಧಿಸಲುಯೋಗ್ಯರಾದವರುಗಳ್ಗೆಬೋಧಶಕ್ತಿವಾ

ತ್ರದಿಂರೋಧಿಸುತ್ತಂ ಕರ್ಮಗಳನ್ನುಂದತರ ಮುಲಪರಿಪಾಕದೊಡಗೂಡಿದ ಕರ್ಮವನುತ್ತರಸ್ಥಿತಿಕಾಲಭಾವಿಯಾದ ಭೋಗನಿಮಿತ್ತವಾಗಿ ಕ್ರಿಯಾಶಕ್ತಿಯಿಂವಂಚನಂಗೈಯುವ್ವತ್ತಾ । ಶಾಂತವಾದಶುದ್ಧಾಶುದ್ಧಮಾಯಾಶಕ್ತಿಗಳಿಂಸೃಷ್ಟಿವಿಷಯವಾದಅಭಿವ್ಯಕ್ತಿಗೆಯೋಗ್ಯಂಗಳಾಗಿಮಾಡುತ್ತ ಮಿಂತಖಿಳಕಾರ್ಯಂಗಳ ಪ್ರಕಾರಾಂತರವಾಗಿ ನಡೆಸುತ್ತಿರ್ಪ॥ಮತ್ತಮಾಬಿಂದುವನತಿಕ್ರಮಿಸಿರ್ದ । ಪೂರ್ವೋಕ್ತಶುದ್ಧನಿಷ್ಕಳಚಿಚ್ಛಕ್ತ್ಯಗ್ರದಲ್ಲಿಬೆರಗುತ್ತಿರ್ಪಶ್ರೀಗುರುಶಂಭುಲಿಂಗವೇ ನಿತ್ಯನಿರ್ಮಲನಿರಾವರಣನಿರ್ಮಾಯನಿರ್ಗುಣನಿಷ್ಕರ್ಮನಿರ್ವಿಶೇಷನಿಷ್ಕಳನಿಷ್ಪ್ರಪಂಚನಿರ್ಭೇದನಿರಘನಿರ್ಲೇಪನಿರಾಮಯನಿರವದ್ಯನಿಸ್ಸಂಗನಿರಾಕುಲನಿರಂತನಿಷ್ಕಂಪನಿರಾಶ್ರಯನಿರವಶೇಷನಿರವಧಿನಿರುಪಮನಿರತಿಶಯನಿತ್ಯಮುಕ್ತಸತ್ಯಾನಂದಸ್ವರೂಪದಿಂಸರ್ವೋತ್ತಮೋತ್ತಮಶುದ್ಧಸ್ವತಂತ್ರವಾಗಿವಿರಾಜಿಸುತಿರ್ಕುಂ ॥

ಶಾಸ್ತ್ರಪ್ರಯೋಜನ.

ಬಳಿಕಿಂತರುಪ್ಪನ ಸಚ್ಛಾಸ್ತ್ರಾಭ್ಯಾಸಸಂಪಾದಿತ ವಿವೇಕಜಿಂದಾಸ್ತಿಕರಾಗಿ ಶಿವಪ್ರಸಾದಮಂಪಡೆದವರ್ಗೆ ಆಯುಷ್ಯ । ವಾರೋಗ್ಯ। ವೈಶ್ವರ್ಯ। ವಿವೇಕ। ವಿದ್ಯೆ। ಕೀರ್ತಿ। ರೂಪ। ಯೌವನ। ಲಾವಣ್ಯ। ಸಲ್ಲಕ್ಷಣ। ಸತ್ಕುಲ। ಸಾಹಸ। ವನಿತಾವಿಲಾಸ। ಪುತ್ರ। ಪೌತ್ರ। ಬಂಧು। ಧನ । ಧಾನ್ಯ। ಬಲ । ಪರಾಕ್ರಮ । ವಿಜಯ। ವೈಭವ। ನಯ। ವಿನಯ। ಧೈರ್ಯ। ಸ್ಥೈರ್ಯ। ವೀರ್ಯ। ಶೌರ್ಯ। ಗಾಂಭೀರ್ಯ। ಔದಾರ್ಯ। ಮಾಹಾತ್ಮ್ಯ। ಪ್ರಾಗಲ್ಭ್ಯ। ಸಕಲಸೌಭಾಗ್ಯ। ಸುಖಭೋಗ। ಸಂಪತ್ಸಮಗ್ರತೆಯಿಂದೊಡಗೂಡಿ ಸಪ್ತಸಮುದ್ರವಸುಧಾದಿಪತ್ಯಸಾಮ್ರಾಜ್ಯಾನುಭವಸಮೇಧಮಾನಯೋಗಕ್ಷೇಮಾಭ್ಯುದಯಪರಂಪರೆಗಳನಿಹದೊಳನುಭವಿಸಿ । ಮೇಲೆ ಸರ್ವೋತ್ಕರ್ಷವಾದಶ್ರೀಗುರುಶಂಭುಲಿಂಗದೊಡಗೂಡಿ। ಸರ್ವಜ್ಞತ್ವ। ಸರ್ವಕರ್ತೃತ್ವದಿಂಸತ್ಯಾನಂದಸ್ವರೂಪರಾಗಿರ್ಪರೆಂಬೀಭೋಗಮೋಕ್ಷಕ್ರಮವನೇಕಾಗ್ರಚಿತ್ತದಿಂಕೇಳತಿಳಿದನುಷ್ಠಿಸುವಗರ್ಗಲೆಂದಾಶೀರ್ವಾದಲಕ್ಷಣಮಂಗಳಾಚರಣದಿಂವಿವೇಕಚಿಂತಾಮಣಿಯೆಂಬಶಾಸ್ತ್ರವು

ಪರಿಪೂರ್ಣಮಕ್ಕುಂ.

ಇಂತೆಂಬಲ್ಲಿಗೆ ನಿಜಗುಣಶಿವಯೋಗೀಂದ್ರವಿರಚಿತವಾದ ವಿವೇಕ
ಚಿಂತಾಮಣಿಗ್ರಂಥದೊಳು ಕಾಲಕ್ರಮವರ್ಣನವೆಂಬ
ದಶಮಪ್ರಕರಣಪರಿಸಮಾಪ್ತಿಗೆ
ಮಂಗಳಮಸ್ತು.

## ಗ್ರಂಥರಚನನಿಬಂಧನ.



ಕಂದ॥ ಸಂತತವಿವೇಕದಾನಕೆ ।ಚಿಂತಾಮಣಿಯೊಳ್ವಿವೇಕಚಿಂತಾಮಣಿ
ಯೆಂ।ದಿಂತೀಗ್ರಂಥಕೆಪೆಸರಹು।ದೆಂತುಂಪರಿಚಿಂತಕರ್ಗೆ।ಹಿತಕರಮಕ್ಕುಂ
॥೧॥ಗುರುಶಂಭುಲಿಂಗದಿಚ್ಛೆಯ ।ಪರಿಯಿಂಗ್ರಂಥಮಸುದರ್ನಲ್ಲದಾನೇಂಪೇಳ
ರ್ । ಪರಿಕಿಸೆನಿಗಮಾಗಮಗಳ । ಪರಮಾರ್ಥಪ್ರಸರ್ವಶಾಸ್ತ್ರಸಂಗ್ರಹ
ರೂಪಂ ॥ ೨ ॥ ಗಣಿಸಲ್ವಿವೇಕಚಿಂತಾ । ಮಣಿಯೊಳ್ಗ್ರಂಥಗಳಾರುಸಾ
ವಿರಮಕ್ಕುಂ । ಗುಣಋತುಗಿರಿವಿಷಯಪ್ರಕ । ರಣದಶಕವಿಂಪಾಗಿ ನಿಜಗು
ಣಾಹ್ವಯರಚಿತಂ ॥ ೩ ॥

ವೃತ್ತ॥ ಶ್ರೀಮದನಂತಸೂರಿಜನಸಂಮತಿಯಿಂದೆಸೆವೀ ವಿವೇಕಚಿಂತಾ
ಮಣಿಯೆಂಬಸತ್ಕೃತಿಯನಾಲಿಸಿದರ್ಗೆಡೆಗೊಂಡಸಂಶಯ । ಸ್ತೋಮಮಪಾಂ
ಗಿಚೇರಬಹುಶಾಸ್ತ್ರಮನೋದುವಬಾಧೆಯಿಂಗಿಸಿ । ಪ್ರೇಮಪೊಳೆಕ್ಕುಮಿ
ಷ್ಟಫಲಸಿದ್ಧಿ ಸಮುನ್ನತಿಶಂಭುಲಿಂಗದಿಂ ॥

ಗದ್ಯ॥ ಸ್ವಸ್ತಿ ಶ್ರೀಮತ್ಸಮಸ್ತಸುರವಿಸರಮುಕುಟ । ಮಣಿಗಣಕಿರಣ
ಪ್ರಚುರಪ್ರವಾಹತರಂಗಿಣೀತಟವಿರಾಜಿತಪದರಾಜೀವಯುಗಳಶ್ರೀಶಂಭು
ಲಿಂಗಸತ್ಕೃಪಾಕಟಾಕ್ಷಸಾಂದ್ರಚಂದ್ರಿಕಾಸಂಕ್ರಾಂತಿನಿರಸ್ತನಿಖಿಳಸಂಸಾ
ರಶ್ರಮವಿಸ್ಫುರಿತನಿಜಾನಂದಾಸ್ವಾದನಾಸಕ್ತಚಿತ್ತೋಪೇತ ನಿಜಗುಣಾಹ್ವ
ಯಶಿವಯೋಗಿವಿರಚಿತಮಾದವಿವೇಕಚಿಂತಾಮಣಿನಾಮಕಸಚ್ಛಾಸ್ತ್ರಂಸಕ
ಲತತ್ವರಹಸ್ಯಸಿದ್ಧಾಂತಸಂಗ್ರಹಮೆನಿಸಿ ಸಂಪೂರ್ಣಮಾಗಿಬೆಳದುದು ॥

ಮಂಗಳಮಸ್ತು - ಶ್ರೀಶಿವಾಭ್ಯಾಂನಮಃ

# ಸಂಪೂರ್ಣವು.



